**ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಪ್ರಕಟಣೆ - ೫೭**
**ಸಾಹಿತ್ಯಮಾಲೆ - ೫೪**

ಪ್ರಧಾನ ಸಂಪಾದಕರು
**ಡಾ. ಪ್ರಧಾನ್ ಗುರುದತ್ತ**

ಸಂಪಾದಕರು
**ಡಾ. ಪಿ. ಎಸ್. ರಾಮಾನುಜಂ**

# ಕಥಾಸರಿತ್ಸಾಗರ

**(ಸಂಪುಟ ೭)**

**(ಲಂಬಕ: ಅಲಂಕಾರವತೀ)**

# ಕಥಾಸರಿತ್ಸಾಗರ

(ಸಂಪುಟ ೭)

(ಲಂಬಕ: ಅಲಂಕಾರವತೀ)

ಸಂಸ್ಕೃತ ಮೂಲ

**ಸೋಮದೇವ ಭಟ್ಟ**

ಕನ್ನಡ ಅನುವಾದ

**ಶೇಷಾಚಲ ಶರ್ಮ**

**ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ**

ಕನ್ನಡ ಭವನ, ಜೆ.ಸಿ. ರಸ್ತೆ ಬೆಂಗಳೂರು – ೫೬೦ ೦೦೨

**Kathā Sarit-sāgara (Vol. 7)** by **Somadeva Bhatta**, consisting of Book 9 - Alankaravati; Kannada translation by **Seshachala Sharma**; Editor-in-Chief: **Dr. Pradhan Gurudatta**; General Editor of the series: **Dr. P. S. Ramanujam;** Published by **P. Narayanaswamy, Registrar**, **Karnataka Anuvada Sahitya Academy**, Kannada Bhavana, J.C. Road, Bangalore - 560 002. 2007; Pp. xxxii + 290; Price: Rs. 120/-.

©: ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ, ಬೆಂಗಳೂರು

ಮುದ್ರಣ : ೨೦೦೮
ಪುಟಗಳು : xxxii + ೨೯೦
ಬೆಲೆ : ರೂ. ೧೨೦/–

ಪ್ರಕಾಶಕರು :
**ಪಿ. ನಾರಾಯಣಸ್ವಾಮಿ**
ರಿಜಿಸ್ಟ್ರಾರ್
ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ
ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು
ದೂ : ೨೨೧೦೭೭೭೦

ಮುಖಪುಟ ವಿನ್ಯಾಸ ಮತ್ತು ಚಿತ್ರ : **ವಿಶ್ವನಾಥ್**

**ISBN : 978-81-905692-1-7**

ಮುದ್ರಕರು :
**ಮೆ॥ ಮಯೂರ ಪ್ರಿಂಟ್ ಆಡ್ಸ್**
ನಂ. ೬೯, ಸುಬೇದಾರ್‌ಛತ್ರಂ ರೋಡ್
ಬೆಂಗಳೂರು – ೫೬೦೦೨೦ ದೂ : ೨೩೩೪೨೭೨೪

**ಬಿ.ಎಸ್.ಯಡಿಯೂರಪ್ಪ**
ಮುಖ್ಯಮಂತ್ರಿ

ಕರ್ನಾಟಕ ಸರ್ಕಾರ

ವಿಧಾನಸೌಧ
ಬೆಂಗಳೂರು – ೫೬೦ ೦೦೧

ಸಂ. ಸಿ.ಎಂ. ೧೭೧. ಪಿ.ಎಸ್.ಎಸ್. ೦೮

ದಿನಾಂಕ : ೦೪–೧೦–೨೦೦೮

# ಮುನ್ನುಡಿ

ರಾಷ್ಟ್ರಕವಿ ಕುವೆಂಪು ಅವರ ಹೆಸರಿನಲ್ಲಿ ಸ್ಥಾಪಿತವಾಗಿರುವ 'ಶ್ರೀ ಕುವೆಂಪು ಭಾಷಾಭಾರತಿ'ಯ ಅಂಗವಾಗಿ ಕರ್ನಾಟಕ ಸರ್ಕಾರ ೨೦೦೫ರಲ್ಲಿ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿಯನ್ನು ಸ್ಥಾಪಿಸಿತು. ಅನುವಾದ ಕಾರ್ಯಚಟುವಟಿಕೆಗಳಿಗಾಗಿ ಅಕಾಡೆಮಿಯೊಂದನ್ನು ಸ್ಥಾಪಿಸಿದ ಮೊದಲ ರಾಜ್ಯ ಕರ್ನಾಟಕ ಎಂಬುದು ಹೆಮ್ಮೆಯ ಸಂಗತಿ.

ಭಾರತೀಯ ಭಾಷೆಗಳ ನಡುವೆ ಪಾರಸ್ಪರಿಕ ಅರಿವನ್ನು ಹೆಚ್ಚಿಸುವುದು, ನಮ್ಮ ನಾಡು–ನುಡಿಗಳ ಹಿರಿಮೆ ವೈಶಿಷ್ಟ್ಯವನ್ನು ಇತರ ಭಾಷಾ–ಬಾಂಧವರಿಗೆ ಪರಿಚಯಿಸಿಕೊಡುವುದು ಜಾಗತಿಕ ಮಹತ್ವದ ಕೃತಿಗಳನ್ನು ಜಾಗತಿಕ ಮಹತ್ವದ ಇತರ ಭಾಷೆಗಳಿಗೆ ಅನುವಾದಿಸಿಕೊಡುವುದು ಅಕಾಡೆಮಿಯ ಸ್ಥಾಪನೆಯ ಮುಖ್ಯ ಉದ್ದೇಶ.

'ಶ್ರೀ ಕುವೆಂಪು ಭಾಷಾಭಾರತಿ'ಯ ಬಹುಮುಖ್ಯವಾದ ಚಟುವಟಿಕೆಗಳು ಸದ್ಯದಲ್ಲಿಯೇ ಆರಂಭಗೊಂಡು ಕರ್ನಾಟಕದ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಹೊಸ ದಿಕ್ಕು–ದೆಸೆಗಳನ್ನು ತೆರೆದು ತೋರಲಿ ಎಂದು ಆಶಿಸುತ್ತೇನೆ.

ಅನುವಾದ ಸಾಹಿತ್ಯ ಅಕಾಡೆಮಿ ಮುಂಬರುವ ವರ್ಷಗಳಲ್ಲಿ ಮತ್ತಷ್ಟು ಅರ್ಥಪೂರ್ಣವಾದ ಚಟುವಟಿಕೆಗಳನ್ನು ಹಮ್ಮಿಕೊಂಡು ವಿಶ್ವದ ಶ್ರೇಷ್ಠ ಕೃತಿಗಳನ್ನು ಕನ್ನಡದಲ್ಲಿ ಒದಗಿಸಿಕೊಡುವ ಕೆಲಸವನ್ನು, ಜ್ಞಾನ–ವಿಜ್ಞಾನ–ತಂತ್ರಜ್ಞಾನಗಳ ಕ್ಷೇತ್ರಗಳಲ್ಲಿನ ಬೆಳವಣಿಗೆಯನ್ನು ಕನ್ನಡಿಗರಿಗೆ ಪರಿಚಯಿಸಿಕೊಡುವ ಕೆಲಸಗಳನ್ನು ಮಾಡಲಿ ಎಂದು ಹಾರೈಸುತ್ತೇನೆ.

ಬಿ.ಎಸ್. ಯಡಿಯೂರಪ್ಪ

**(ಬಿ.ಎಸ್.ಯಡಿಯೂರಪ್ಪ)**

ಕರ್ನಾಟಕ ಸರ್ಕಾರ

**ಶ್ರೀ ಸುಬೀರ್ ಹರಿಸಿಂಗ್**, ಭಾ.ಆ.ಸೇ.
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ
ಹಾಗೂ ಪ್ರವಾಸೋದ್ಯಮ ಇಲಾಖೆ

ವಿಕಾಸಸೌಧ
ಬೆಂಗಳೂರು – ೫೬೦ ೦೦೧

ದಿನಾಂಕ : ೦೪–೧೦–೨೦೦೮

## ಶುಭಾಕಾಂಕ್ಷೆ

ಶ್ರೀ ಕುವೆಂಪು ಭಾಷಾಭಾರತಿಯ ಅಂಗವಾಗಿ ಕರ್ನಾಟಕ ಸರ್ಕಾರ ಅಸ್ತಿತ್ವಕ್ಕೆ ತಂದ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಕೆಲವೇ ವರ್ಷಗಳ ಅವಧಿಯಲ್ಲಿ ಗಮನಾರ್ಹವಾದ ಕೆಲಸವನ್ನು ಮಾಡಿದೆ ಎಂಬುದನ್ನು ಕರ್ನಾಟಕದ ಜನತೆ ಈಗಾಗಲೇ ಗಮನಿಸಿ ತನ್ನ ಮೆಚ್ಚುಗೆಯನ್ನು ಸೂಚಿಸುತ್ತಾ ಬಂದಿದೆ ಎಂಬುದು ಸಂತೋಷಕರ ಸಂಗತಿಯೇ ಆಗಿದೆ. ಇತ್ತ ಕೇಂದ್ರ ಸರ್ಕಾರ "ರಾಷ್ಟ್ರೀಯ ಜ್ಞಾನ ಆಯೋಗ'ವನ್ನು ಸ್ಥಾಪಿಸಿದ್ದು, ಅದರ ಅಂಗವಾಗಿ "ರಾಷ್ಟ್ರೀಯ ಅನುವಾದ ಮಿಷನ್'ನ ಕಾರ್ಯಚಟುವಟಿಕೆಗಳು ಆರಂಭವಾಗಲಿರುವುದು ನಮ್ಮ ನಾಡಿನ ಇತಿಹಾಸದಲ್ಲಿ ಹೊಸ ಶಕೆಯನ್ನು ಪ್ರಾರಂಭಿಸಲಿದೆ ಎಂದು ನಾನು ನಂಬಿದ್ದೇನೆ. ಈ ದಿಕ್ಕಿನಲ್ಲಿ ಮೊದಲ ಹೆಜ್ಜೆಯನ್ನಿರಿಸಿದ ಗೌರವ ಕರ್ನಾಟಕದ್ದಾಗಿದೆ ಎಂಬುದು ನಮಗೆ ಸಂತೋಷದ ಹಾಗೂ ಗೌರವದ ವಿಚಾರವೇ ಆಗಿದೆ.

ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಈಗಾಗಲೇ ಹಲವಾರು ಮಹತ್ವದ ಯೋಜನೆಗಳನ್ನು ಕೈಗೊಂಡಿದೆ. ಅವುಗಳಲ್ಲಿ ಮುಖ್ಯವಾಗಿರುವುದೆಂದರೆ ವಿಲ್ ಡ್ಯೂರಾಂಟ್ ಅವರ "ನಾಗರಿಕತೆಯ ಕಥೆ' ಸಂಪುಟಗಳ ಕನ್ನಡ ಆವೃತ್ತಿಯನ್ನು ಹೊರತರುತ್ತಿರುವುದು. ಭಾರತೀಯ ಭಾಷೆಗಳಲ್ಲಿಯೇ ಮೊದಲ ಬಾರಿಗೆ ಇಂಥ ಯೋಜನೆಯನ್ನು ಹಮ್ಮಿಕೊಂಡಿರುವ ಹಿರಿಮೆಯೂ ಕರ್ನಾಟಕದ್ದಾಗಿದೆ. ವಿವಿಧ ಭಾಷಾ ಸಾಹಿತ್ಯಗಳ ಶ್ರೇಷ್ಠ ಕೃತಿಗಳನ್ನು ಕನ್ನಡದಲ್ಲಿ ಹೊರತರುವುದರ ಜೊತೆಗೆ, ಕನ್ನಡದ ಮಹತ್ವದ ಕೃತಿಗಳನ್ನು ರಾಷ್ಟ್ರೀಯ ಮತ್ತು ಜಾಗತಿಕ ಸ್ತರದಲ್ಲಿ ಪರಿಚಯಿಸಿಕೊಡುವ ವಿಶಿಷ್ಟ ಕಾರ್ಯಕ್ರಮಗಳನ್ನೂ ಈ ಸಂಸ್ಥೆ ಕೈಗೊಳ್ಳಬೇಕಾಗಿದೆ. ಇದರ ಜೊತೆಗೆ ಜ್ಞಾನ–ವಿಜ್ಞಾನ–ತಂತ್ರಜ್ಞಾನಗಳ ಕ್ಷೇತ್ರಕ್ಕೂ ಮಹತ್ವದ ಕೊಡುಗೆಯನ್ನು ನೀಡುವ ಉದ್ದೇಶದಿಂದ ಜೆ.ಡಿ.ಬರ್ನಾಲ್ ಅವರ "ವಿಜ್ಞಾನದ ಇತಿಹಾಸ' (Science in History)ದ ನಾಲ್ಕು ಸಂಪುಟಗಳನ್ನು, ಜ್ಞಾನ–ವಿಜ್ಞಾನ–ತಂತ್ರಜ್ಞಾನ ಕ್ಷೇತ್ರದ ನೂರಾರು ಮಹತ್ವದ ಕೃತಿಗಳನ್ನು ತರುವ ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ ಎಂಬುದು ವೈಯಕ್ತಿಕವಾಗಿಯೂ ನನಗೆ ವಿಶೇಷ ಸಂತೋಷದ ಸಂಗತಿಯೇ ಆಗಿದೆ. ಇಂಥ ಮಹತ್ವದ ಯೋಜನೆಗಳ ಮೂಲಕ ಶ್ರೀ ಕುವೆಂಪು ಭಾಷಾಭಾರತಿ ಮತ್ತು ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಕರ್ನಾಟಕದ ಜನತೆಗೆ ಸ್ಮರಣೀಯ ಸೇವೆಯನ್ನು ಸಲ್ಲಿಸುವಂತಾಗಲಿ ಎಂದು ಹಾರೈಸುತ್ತೇನೆ. ಈ ಬಗೆಯ ಬಹುಮುಖವಾದ ಕಾರ್ಯಚಟುವಟಿಕೆಗಳನ್ನು ಕರ್ನಾಟಕದ ಜನತೆ ಮುಕ್ತ ಹೃದಯದಿಂದ ಸ್ವಾಗತಿಸುತ್ತಾರೆಂದು ನಂಬಿದ್ದೇನೆ.

(ಶ್ರೀ ಸುಬೀರ್ ಹರಿಸಿಂಗ್, ಭಾ.ಆ.ಸೇ.,)

ಕರ್ನಾಟಕ ಸರ್ಕಾರ

ಶ್ರೀ ಮನು ಬಳಿಗಾರ್
ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು – ೫೬೦ ೦೦೨

ದಿನಾಂಕ : ೦೪–೧೦–೨೦೦೮

# ಪ್ರಾಸ್ತಾವಿಕ ನುಡಿ

ಕರ್ನಾಟಕ ಸರ್ಕಾರ ೨೦೦೫ರಲ್ಲಿ ಸ್ಥಾಪಿಸಿದ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಕಳೆದ ಮೂರು ವರ್ಷಗಳ ಅಲ್ಪಾವಧಿಯಲ್ಲಿ ಮಾಡಿರುವ ಕಾರ್ಯವನ್ನು ನಾನು ಗಮನಿಸುತ್ತ ಬಂದಿದ್ದೇನೆ. ಅನುವಾದ ಸಂಬಂಧವಾದ ಕಮ್ಮಟಗಳು ಮತ್ತು ತರಬೇತಿ ಕಾರ್ಯಕ್ರಮಗಳ ಜೊತೆಗೆ, ಈಗ್ಗೆ ಕೆಲವು ತಿಂಗಳುಗಳ ಹಿಂದಷ್ಟೇ ಈ ಅಕಾಡೆಮಿ ವಿವಿಧ ವಿಷಯಗಳಿಗೆ ಸಂಬಂಧಿಸಿದಂತೆ, ಒಮ್ಮೆಲೇ ಐವತ್ತಮೂರು ಗ್ರಂಥಗಳನ್ನು ಬಿಡುಗಡೆ ಮಾಡಿದ್ದು, ನನಗೆ ಆಶ್ಚರ್ಯ–ಆನಂದಗಳನ್ನುಂಟುಮಾಡಿದೆ. ವಿವಿಧ ಭಾಷೆಗಳಲ್ಲಿನ ಉತ್ಕೃಷ್ಟ ಸಾಹಿತ್ಯ ಕೃತಿಗಳನ್ನಲ್ಲದೆ, ವೈದ್ಯಕೀಯ, ಕಾನೂನುಶಾಸ್ತ್ರ ಮೊದಲಾದ ವಿವಿಧ ವಿಷಯಗಳಿಗೆ ಸಂಬಂಧಿಸಿದ ಗ್ರಂಥಗಳನ್ನೂ ಹೊರತರುತ್ತಿರುವುದು ಈ ಅಕಾಡೆಮಿಯ ಕಾರ್ಯವ್ಯಾಪ್ತಿಯ ವೈವಿಧ್ಯ ಮತ್ತು ಹೊಸ ಆಯಾಮಗಳ ಪ್ರತೀಕವೇ ಆಗಿದೆ ಎಂದು ನಂಬಿದ್ದೇನೆ. ವಿಜ್ಞಾನ–ತಂತ್ರಜ್ಞಾನಗಳ ಕ್ಷೇತ್ರದ ೧೦೦ಕ್ಕೂ ಹೆಚ್ಚು ಮೇರು ಕೃತಿಗಳನ್ನು ಹೊರತರುವ ಕಾರ್ಯವನ್ನು ಅದು ಹಮ್ಮಿಕೊಂಡಿದೆ ಎಂಬುದು ನನಗೆ ವಿಶೇಷ ಸಂತೋಷವನ್ನುಂಟುಮಾಡಿದೆ. ಇವೆಲ್ಲಕ್ಕೂ ತಲೆವಣಿಯಾಗಿ ವಿಲ್ ಡ್ಯೂರಾಂಟ್ ಅವರ 'ನಾಗರಿಕತೆಯ ಕಥೆ'ಯ ಸಂಪುಟಗಳನ್ನು ಹೊರತರುವ ಯೋಜನೆಯನ್ನು ಹಾಕಿಕೊಂಡಿದ್ದು, ಈಗಾಗಲೇ ಆದರ್ಶಪ್ರಾಯವಾದ ರೀತಿಯಲ್ಲಿ ಅದರ ಮೊದಲ ಸಂಪುಟವನ್ನು ಹೊರತಂದಿರುವುದು ನಮ್ಮ ನಾಡಿಗೇ ಗೌರವಪ್ರಾಯವಾದ ಸಂಗತಿ ಎಂದು ನಾನು ಭಾವಿಸಿ, ಇದರ ಮುಂದಿನ ಸಂಪುಟಗಳೂ ಶೀಘ್ರವಾಗಿ ಹೊರಬರಲಿ ಎಂದು ಹಾರೈಸುತ್ತೇನೆ. ಹಾಗೆಯೇ ಇದಕ್ಕಾಗಿ ಅನುವಾದ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದ ಡಾ. ಪ್ರಧಾನ್ ಗುರುದತ್ತ ಅವರನ್ನು ಹಾಗೂ ಅವರ ಸಿಬ್ಬಂದಿಯನ್ನು ಹೃದಯಾರೆ ಅಭಿನಂದಿಸುತ್ತೇನೆ.

ಅಕಾಡೆಮಿ ಚರಿತ್ರಾರ್ಹವಾದ ಇನ್ನೂ ಕೆಲವು ಯೋಜನೆಗಳನ್ನು ಹಮ್ಮಿಕೊಳ್ಳಲಿದೆ – ಉದಾ : ಜೆ.ಡಿ.ಬರ್ನಾಲ್ ಅವರ 'ಸೈನ್ ಇನ್ ಹಿಸ್ಟರಿ'ಯ ಸಂಪುಟಗಳ ಅನುವಾದ – ಎಂದು ನನಗೆ ತಿಳಿದು ಬಂದಿದೆ. ಅಕಾಡೆಮಿಯ ಇಂಥ ಕೆಲಸ–ಕಾರ್ಯಗಳು ಕನ್ನಡಿಗರಿಗೆ ಪ್ರಿಯವಾಗುತ್ತವೆಂದೂ ನಂಬಿದ್ದೇನೆ. ಇಂಥ ಕಾರ್ಯಗಳಿಗೆ ಜನತೆ ಮತ್ತು ಸರ್ಕಾರ ಖಂಡಿತವಾಗಿಯೂ ಬೆಂಬಲವಾಗಿ ನಿಲ್ಲುತ್ತವೆಂಬುದರಲ್ಲಿಯೂ ಅನುಮಾನವಿಲ್ಲ. ಭಾಷಾಂತರಕ್ಕೆ ಉಜ್ವಲ ಭವಿಷ್ಯವಿರುವ ಲಕ್ಷಣಗಳು ಗೋಚರಿಸುತ್ತಿರುವ ಹಿನ್ನಲೆಯಲ್ಲಿ ಅಕಾಡೆಮಿಯ ಕೆಲಸ–ಕಾರ್ಯಗಳು ಇನ್ನೂ ಅತಿಶಯವಾಗಿ, ನಾಡು–ನುಡಿಗಳಿಗೆ ಪ್ರೇರಕವೂ, ಪೋಷಕವೂ ಆಗುವಂತೆ ಮುಂದುವರಿಯಲಿ ಎಂದು ಹಾರೈಸುತ್ತೇನೆ.

ಮನು ಬಳಿಗಾರ್

(ಶ್ರೀ ಮನು ಬಳಿಗಾರ್)

# ಪರಿಚಯ

ಭಾರತದಲ್ಲಿ ಯಾವುದೇ ರಾಜ್ಯವೊಂದರಲ್ಲಿ ಅನುವಾದ ಸಾಹಿತ್ಯ ಅಕಾಡೆಮಿಯನ್ನು ಮೊಟ್ಟಮೊದಲ ಬಾರಿಗೆ ಸ್ಥಾಪಿಸಿದ ಹಿರಿಮೆ ಕರ್ನಾಟಕ ಸರ್ಕಾರದ್ದಾಗಿದೆ. ಜನವರಿ ೬, ೨೦೦೬ರಂದು ಅಂದಿನ ಮಾನ್ಯ ಮುಖ್ಯಮಂತ್ರಿಗಳಾಗಿದ್ದ ಶ್ರೀ ಧರ್ಮಸಿಂಗ್ ಅವರು ವಿಧ್ಯುಕ್ತವಾಗಿ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿಯನ್ನು ಉದ್ಘಾಟಿಸಿದರು. ಮೈಸೂರು ವಿಶ್ವವಿದ್ಯಾನಿಲಯದ ಮಾಜಿ ಕುಲಪತಿಗಳೂ ಹಾಗೂ ಭಾಷಾಂತರವನ್ನು ವಿಶ್ವವಿದ್ಯಾಲಯದ ಹಂತದಲ್ಲಿ ಶಿಕ್ಷಣ ವಿಷಯವಾಗಿ ಅಳವಡಿಸಿದ ಭಾಷಾಂತರ ಕ್ಷೇತ್ರದ ಭೀಷ್ಮಾಚಾರ್ಯರೂ ಆದ ಪ್ರೊ॥ ದೇ. ಜವರೇಗೌಡ ಅವರೂ, ಹಿರಿಯ ವಿದ್ವಾಂಸರಾದ ಪ್ರೊ॥ ಎಲ್.ಎಸ್. ಶೇಷಗಿರಿರಾವ್ ಅವರೂ ಅಕಾಡೆಮಿಯ ಕಾರ್ಯಚಟುವಟಿಕೆಗಳ ದಿಕ್ಕು-ದೆಸೆಗಳನ್ನು ನಿರ್ದೇಶಿಸಿದರು.

ನಮ್ಮ ನಾಡಿನಲ್ಲಿರುವ ವಿಚಿತ್ರ ಪರಿಸ್ಥಿತಿ ಎಂದರೆ ವಿದೇಶೀಯ ಭಾಷಾಸಾಹಿತ್ಯಗಳ ಅಷ್ಟಿಷ್ಟು ಪರಿಚಯವಾದರೂ ಇರುವ ನಮಗೆ ನಮ್ಮ ನಾಡಿನ ನೆರೆಹೊರೆಯ ಭಾಷೆಗಳಲ್ಲಿನ ಶ್ರೇಷ್ಠ ಸಾಹಿತ್ಯದ, ಶ್ರೇಷ್ಠ ಸಾಹಿತಿಗಳ ಪರಿಚಯ ಬಹುಮಂದಿಗೆ ಇಲ್ಲವೇ ಇಲ್ಲದಂತಾಗಿದೆ. ಕೇಂದ್ರ ಸಾಹಿತ್ಯ ಅಕಾಡೆಮಿ ಮತ್ತು ಇತರ ಕೆಲವು ರಾಷ್ಟ್ರೀಯ ಸಂಸ್ಥೆಗಳು ತಮ್ಮ ಕಾರ್ಯಚಟುವಟಿಕೆಗಳಲ್ಲಿ ಅನುವಾದಗಳನ್ನು ಹೊರತರುವ ಕೆಲವು ಯೋಜನೆಗಳನ್ನು ಕೈಗೊಳ್ಳುತ್ತಿರುವುದುಂಟು. ಆದರೆ, ಈ ಕಾರ್ಯಗಳು ಅಪೇಕ್ಷಣೀಯ ಪ್ರಮಾಣದಲ್ಲಿ ಹಾಗೂ ಪರಸ್ಪರ ಪೂರಕವಾಗುವ ರೀತಿಯಲ್ಲಿ ಆಗುತ್ತಿಲ್ಲ. ಮೇಲಾಗಿ ಈ ಕಾರ್ಯಕ್ರಮಗಳು ಬಹುಮಟ್ಟಿಗೆ ಸಾಹಿತ್ಯ ಕ್ಷೇತ್ರಕ್ಕೆ ಮಾತ್ರವೇ ಸೀಮಿತವಾಗಿವೆ. ಹೀಗಾಗಿ, ಪರಸ್ಪರ ಕೊಳು-ಕೊಡೆಯ ಕಾರ್ಯಕ್ರಮಗಳು ಹೆಚ್ಚು-ಹೆಚ್ಚಾಗಿ ಹಾಗೂ ವೈವಿಧ್ಯಮಯವಾಗಿ ಆಗಬೇಕಾದ ಅಗತ್ಯವೂ ಇದೆ.

ಭಾರತೀಯ ಭಾಷಾಸಾಹಿತ್ಯಗಳು ಸಮೃದ್ಧವಾಗಿ ಬೆಳೆಯಬೇಕಾದರೆ, ಎರಡು ಮುಖಗಳಲ್ಲಿ ಕಾರ್ಯಗಳು ಆಗಬೇಕಾಗಿದೆ: (೧) ರಾಷ್ಟ್ರೀಯ ಮಟ್ಟದಲ್ಲಿ; (೨) ಅಂತಾರಾಷ್ಟ್ರೀಯ ಮಟ್ಟದಲ್ಲಿ. ರಾಷ್ಟ್ರೀಯ ಸ್ತರದಲ್ಲಿ ನಮ್ಮ ಭಾಷಾ ಸಾಹಿತ್ಯವನ್ನು ಬಿಂಬಿಸುವ ಕೆಲಸ ಎಷ್ಟು ಮುಖ್ಯವೋ, ಇತರ ಭಾಷೆಗಳಲ್ಲಿನ ಶ್ರೇಷ್ಠ ಸಾಹಿತ್ಯವನ್ನು ಕನ್ನಡಕ್ಕೆ ತಂದುಕೊಳ್ಳುವುದು ಅಷ್ಟೇ ಮುಖ್ಯ. ರಾಷ್ಟ್ರೀಯ-ಅಂತಾರಾಷ್ಟ್ರೀಯ ಮಹತ್ವದ ಸಾಹಿತ್ಯವನ್ನು ಕನ್ನಡಕ್ಕೆ ತಂದುಕೊಳ್ಳುವುದು ಹಾಗೂ ಕನ್ನಡ ಸಾಹಿತ್ಯವನ್ನು ಅಂತಾರಾಷ್ಟ್ರೀಯ ಮಟ್ಟದಲ್ಲಿ ಬಿಂಬಿಸುವುದೂ ಅಷ್ಟೇ ಮುಖ್ಯ. ಈ ದೃಷ್ಟಿಯಿಂದ ನೊಬೆಲ್ ಪ್ರಶಸ್ತಿ, ಬೂಕರ್ ಪ್ರಶಸ್ತಿ, ಜ್ಞಾನಪೀಠ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಪಂಪ ಪ್ರಶಸ್ತಿ ಮೊದಲಾದ ಪ್ರಶಸ್ತಿ ಪುರಸ್ಕಾರಗಳನ್ನು ಪಡೆದುಕೊಂಡಿರುವ ಲೇಖಕರ ಮಹತ್ವದ ಕೃತಿಗಳನ್ನು ಇತರ ಭಾಷೆಗಳಲ್ಲಿ ಹೊರತರುವ ಯೋಜನೆಗಳನ್ನು ಅನುವಾದ ಸಾಹಿತ್ಯ ಅಕಾಡೆಮಿ ತನ್ನ ಮುಂದಿರಿಸಿಕೊಂಡಿದೆ. ಅಷ್ಟೇ ಅಲ್ಲದೆ, ವಿಜ್ಞಾನ-ತಂತ್ರಜ್ಞಾನ, ವೈದ್ಯಕೀಯ, ಮಾನವಿಕ ಮೊದಲಾದ ಕ್ಷೇತ್ರಗಳಲ್ಲಿನ ಶ್ರೇಷ್ಠ ಕೃತಿಗಳನ್ನು ಕನ್ನಡದಲ್ಲಿ ತರುವ ಯೋಜನೆಗಳೂ

ಅಕಾಡೆಮಿಯ ಮುಂದಿವೆ. ಇತರ ರಾಜ್ಯ ಸರ್ಕಾರಗಳೊಂದಿಗೆ ಸಮಾಲೋಚಿಸಿ, ಅಂತೆಯೇ, ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ವಿಭಾಗ, ಕೇಂದ್ರೀಯ ಹಿಂದೀ ನಿರ್ದೇಶನಾಲಯ, ವೈಜ್ಞಾನಿಕ ಮತ್ತು ತಾಂತ್ರಿಕ ಪಾರಿಭಾಷಿಕ ಪದಾವಲೀ ಆಯೋಗ ಇತ್ಯಾದಿ ಸಂಸ್ಥೆಗಳೊಂದಿಗೆ ಸಂಪರ್ಕಿಸಿ ಈ ದಿಕ್ಕಿನಲ್ಲಿ ಸಹಕಾರವನ್ನು ಪಡೆದುಕೊಳ್ಳುವ ಆಲೋಚನೆಯನ್ನೂ ಅಕಾಡೆಮಿ ಇರಿಸಿಕೊಂಡಿದೆ.

ಅಕಾಡೆಮಿಯ ಕಾರ್ಯಚಟುವಟಿಕೆಗಳ ಅಂಗವಾಗಿ ಕಾರ್ಯಶಿಬಿರಗಳನ್ನು ಆಯೋಜಿಸಿ, ಅನುವಾದದ ಸಮಸ್ಯೆಗಳ ಬಗ್ಗೆ ಚರ್ಚೆ ನಡೆಸುವ, ಸಮರ್ಥ ಭಾಷಾಂತರಕಾರರನ್ನು ಗುರುತಿಸುವ ಪ್ರಯತ್ನಗಳನ್ನು ಅಕಾಡೆಮಿ ಮಾಡುತ್ತಿದೆ. ಈಗಾಗಲೇ ಕನ್ನಡ–ತೆಲುಗು, ಕನ್ನಡ–ಹಿಂದೀ, ಯಂತ್ರಾನುವಾದ, ವಿಜ್ಞಾನ ಸಾಹಿತ್ಯ ಅನುವಾದ ಇವುಗಳಿಗೆ ಸಂಬಂಧಿಸಿದಂತೆ ರಾಜ್ಯದ ಬೇರೆ–ಬೇರೆ ಕೇಂದ್ರಗಳಲ್ಲಿ ಹಾಗೂ ಹೊರ ರಾಜ್ಯಗಳಲ್ಲಿ ಕಾರ್ಯಶಿಬಿರಗಳನ್ನೂ, ವಿಚಾರಗೋಷ್ಠಿಗಳನ್ನೂ ನಡೆಸಲಾಗಿದೆ. ಉರ್ದು ಮತ್ತು ತಮಿಳು ಭಾಷೆಗಳ ಕಾರ್ಯಶಿಬಿರಗಳನ್ನು ಆಯೋಜಿಸಲಾಗುತ್ತಿದೆ.

ಭಾಷಾಂತರ ಕ್ಷೇತ್ರದಲ್ಲಿನ ಇತ್ತೀಚಿನ ಬೆಳವಣಿಗೆಗಳನ್ನು ಗಮನಕ್ಕೆ ತೆಗೆದುಕೊಂಡು ಆ ದಿಕ್ಕಿನಲ್ಲಿ ಅಗತ್ಯವಾದ ಕ್ರಮಗಳನ್ನು ಕೈಗೊಳ್ಳುವ ಆಲೋಚನೆಯೂ ಇದೆ. ಇತ್ತೀಚೆಗೆ ಸ್ಯಾಮ್ ಪಿಟ್ರೋಡಾ ಅವರು 'ರಾಷ್ಟ್ರೀಯ ಅನುವಾದ ಮಿಷನ್' (National Translation Mission) ಅನ್ನು ಸ್ಥಾಪಿಸುವ ಬಗ್ಗೆ ಕೇಂದ್ರ ಸರ್ಕಾರಕ್ಕೆ ಯೋಜನೆಯೊಂದನ್ನು ಸಲ್ಲಿಸಿದ್ದು, ಕೇಂದ್ರ ಸರ್ಕಾರ ಆ ಯೋಜನೆಯನ್ನು ಒಪ್ಪಿಕೊಂಡಿರುವ ವಿಚಾರ ಪತ್ರಿಕೆಗಳಲ್ಲಿ ವರದಿಯಾಗಿದೆ. ಈ ಯೋಜನೆ ಕಾರ್ಯರೂಪಕ್ಕೆ ಬಂದಲ್ಲಿ, ಜ್ಞಾನ–ವಿಜ್ಞಾನ–ತಂತ್ರಜ್ಞಾನಗಳು ಜನಸಾಮಾನ್ಯರ ವರೆಗೂ ಯಶಸ್ವಿಯಾಗಿ ಮುಟ್ಟುವುದು ಸಾಧ್ಯವಾಗುತ್ತದೆ ಹಾಗೂ ರಾಷ್ಟ್ರದ ಪ್ರಗತಿಯೂ ಅಭೂತಪೂರ್ವ ರೀತಿಯಲ್ಲಿ ಆಗುತ್ತದೆ ಎಂದು ಆಶಿಸಲಾಗಿದೆ. ಈ ಯೋಜನೆ ಉದ್ಯೋಗಸೃಷ್ಟಿಯ ಮಹತ್ತರ ಯೋಜನೆಯೂ ಆಗಲಿದೆ. ಇಂಥ ಸಂದರ್ಭದಲ್ಲಿ ಅಗತ್ಯವಾಗುವ ಲಕ್ಷಾಂತರ ಮಂದಿ ಅನುವಾದಕರ ಪಡೆಯನ್ನು ಸಿದ್ಧಪಡಿಸುವುದು ಇಂಥ ಸಂಸ್ಥೆಗಳ ಮತ್ತು ವಿಶ್ವವಿದ್ಯಾನಿಲಯಗಳ ಹೊಣೆಯೇ ಆಗಿರುತ್ತದೆ. ರಾಜ್ಯದ ಹಾಗೂ ಹೊರಗಿನ ವಿಶ್ವವಿದ್ಯಾನಿಲಯಗಳಲ್ಲಿ ಈಗಾಗಲೇ ಭಾಷಾಂತರ ವಿಭಾಗಗಳು ಸ್ಥಾಪಿತವಾಗಿದ್ದು, ಅವು ಕಾರ್ಯಶೀಲವಾಗುತ್ತಿರುವುದು ಶುಭಸೂಚಕವಾಗಿದೆ.

ಇದುವರೆಗೆ ವಿದ್ವಾಂಸರ ವೈಯಕ್ತಿಕ ಪಾಂಡಿತ್ಯ, ವ್ಯುತ್ಪತ್ತಿ ಮತ್ತು ಒಲವನ್ನು ಆಧರಿಸಿ ಅನುವಾದ ಕಾರ್ಯಗಳು ನಡೆಯುತ್ತಾ ಬಂದಿವೆ. ಆದರೆ ಇಂಥ ಕಾರ್ಯಗಳು ವ್ಯವಸ್ಥಿತವಾಗಿ ಹಾಗೂ ಉತ್ತಮ ಗುಣಮಟ್ಟದೊಂದಿಗೆ ನಡೆಯಬೇಕಾದ್ದು ಅಪೇಕ್ಷಣೀಯವಾಗಿರುವ ಹಿನ್ನೆಲೆಯಲ್ಲಿ, ಭಾಷಾಂತರ ಸಂಬಂಧವಾದ ಶಿಕ್ಷಣ–ಕ್ರಮಗಳನ್ನು ರೂಪಿಸುವುದು ಹಾಗೂ ದ್ವಿಭಾಷಾ ಮತ್ತು ಬಹುಭಾಷಾ ನಿಘಂಟುಗಳನ್ನು, ನುಡಿಗಟ್ಟುಗಳ ಮತ್ತು ಗಾದೆಗಳ ಕೋಶಗಳು, ಸಮಾನಾರ್ಥಕ ಮತ್ತು ಭಿನ್ನಾರ್ಥಕ ಕೋಶಗಳು ಹಾಗೂ ವಾಕ್ಯರಚನಾ ಕೈಪಿಡಿಗಳನ್ನು ಹೊರತರುವುದು – ಇವೇ ಮೊದಲಾದ ಕಾರ್ಯಗಳು ಆದ್ಯತೆಯ ಮೇರೆಗೆ ನಡೆಯಬೇಕಾಗಿವೆ.

ಕರ್ನಾಟಕ ಸರ್ಕಾರ ಅನುವಾದ ಅಕಾಡೆಮಿಯ ವಿಷಯದಲ್ಲಿ ವಿಶೇಷವಾದ ಆಸಕ್ತಿಯನ್ನು

ತೋರಿ ಅಗತ್ಯವಾದ ನೆರವನ್ನು ನೀಡಲು ಮುಂದೆ ಬಂದಿರುವುದು ಅಕಾಡೆಮಿಗೆ ವಿಶೇಷ ಸಂತೋಷದ ವಿಚಾರವೇ ಆಗಿದೆ. ಅದರಲ್ಲಿಯೂ ಈ ಬಾರಿ ಸುವರ್ಣ ಕರ್ನಾಟಕ ಕಾರ್ಯಕ್ರಮಗಳ ಅಂಗವಾಗಿ ವಿಶೇಷ ಧನಸಹಾಯ ನೀಡಿರುವುದರಿಂದ ಪ್ರಸಿದ್ಧ/ಅಲಭ್ಯ ಅನುವಾದಗಳ ಮರುಪ್ರಕಟಣೆ ಕಾರ್ಯವನ್ನು ಕೈಗೊಳ್ಳುವುದು, ಮತ್ತಿತರ ಮಹತ್ವದ ಪ್ರಕಟಣೆಗಳನ್ನು ಕೈಗೊಳ್ಳುವುದು ಸಾಧ್ಯವಾಗಿದೆ. ಈ ದಿಕ್ಕಿನಲ್ಲಿ ನಾಡಿನ ವಿದ್ವಾಂಸರು ವಿಶೇಷವಾದ ಸಹಾಯ–ಸಹಕಾರಗಳನ್ನು ನೀಡಲು ಮುಂದೆ ಬಂದಿರುವುದು ಅಕಾಡೆಮಿಗೆ ಗೌರವದ, ಸಂತೋಷದ ಹಾಗೂ ಹೆಮ್ಮೆಯ ವಿಚಾರವೇ ಆಗಿದೆ. ಈ ಸಂದರ್ಭದಲ್ಲಿ ವಿಲ್ ಡ್ಯೂರಾಂಟ್ ಅವರ ಜಗತ್–ಪ್ರಸಿದ್ಧವಾಗಿರುವ ಹಾಗೂ ಭಾರತದ ಬೇರಾವ ಭಾಷೆಯಲ್ಲೂ ಇನ್ನೂ ಬೆಳಕು ಕಾಣದಿರುವ 'ದಿ ಸ್ಟೋರಿ ಆಫ್ ಸಿವಿಲಿಜೇಷನ್' ಸಂಪುಟಗಳ ಕನ್ನಡ ಅನುವಾದವನ್ನು ಹೊರತರುವಲ್ಲಿ ಪ್ರೊ॥ ಎಲ್.ಎಸ್. ಶೇಷಗಿರಿರಾವ್ ಅವರೂ, ಬಹಳ ಹಿಂದೆಯೇ ಇಂಗ್ಲಿಷ್‌ನಲ್ಲಿ ೧೦ ಸಂಪುಟಗಳಲ್ಲಿ ಪ್ರಕಟಣೆಗೊಂಡಿರುವ ಸಂಸ್ಕೃತ ಸಾಹಿತ್ಯದ ವಿಶಿಷ್ಟ ಕೃತಿಯಾದ ಸೋಮದೇವನ 'ಕಥಾಸರಿತ್ಸಾಗರ'ದ ಕನ್ನಡ ಅನುವಾದವನ್ನು ನೇರವಾಗಿ ಸಂಸ್ಕೃತದಿಂದ ಅನುವಾದಿಸಿ ಹೊರತರುವಲ್ಲಿ ಡಾ॥ ಪಿ.ಎಸ್.ರಾಮಾನುಜಮ್ ಅವರೂ ನೆರವು ನೀಡುತ್ತಿರುವುದು ವಿಶೇಷವಾಗಿ ಸ್ಮರಣೀಯವಾಗಿದೆ. ಸಂಪಾದನ ಕಾರ್ಯದಲ್ಲಿ ನೆರವಾಗಿರುವುದು ಮಾತ್ರವಲ್ಲದೆ, ಕರಡು ಪರಿಶೀಲನೆಯಲ್ಲಿಯೂ ಅವರು ನಮಗೆ ಎಲ್ಲ ಸಹಕಾರವನ್ನು ನೀಡಿದ್ದಾರೆ. ಇದಕ್ಕಾಗಿ ಅಕಾಡೆಮಿ ಅವರಿಗೆ ಕೃತಜ್ಞವಾಗಿದೆ. ಕನ್ನಡ ಸಹೃದಯಲೋಕ ಅಕಾಡೆಮಿಯ ಈ ಕಾರ್ಯಚಟುವಟಿಕೆಗಳ ವಿಷಯದಲ್ಲಿ ತನ್ನ ಸಹೃದಯತೆಯನ್ನು ಮೆರೆಯುತ್ತದೆ ಎಂದು ಆಶಿಸಿದ್ದೇನೆ.

ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿಯ ಸ್ಥಾಪನೆಗೆ ಕಾರಣರಾದ ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಧರ್ಮಸಿಂಗ್ ಅವರಿಗೂ, ಅಕಾಡೆಮಿಯ ಕಾರ್ಯಚಟುವಟಿಕೆಗಳ ವಿಷಯದಲ್ಲಿ ವಿಶೇಷ ಆಸಕ್ತಿಯನ್ನು ತೋರಿ, ಎಲ್ಲ ನೆರವನ್ನು ನೀಡುತ್ತಿರುವ ಇಂದಿನ ಮಾನ್ಯ ಮುಖ್ಯಮಂತ್ರಿಗಳು ಹಾಗೂ ಕನ್ನಡ ಮತ್ತು ಸಾಹಿತ್ಯ ಇಲಾಖೆಯ ಜವಾಬ್ದಾರಿಯನ್ನು ನೋಡಿಕೊಳ್ಳುತ್ತಿರುವ ಶ್ರೀ ಬಿ.ಎಸ್.ಯಡಿಯೂರಪ್ಪ ಅವರಿಗೆ ಅಕಾಡೆಮಿ ವಿಶೇಷ ಕೃತಜ್ಞತೆಗಳನ್ನು ಸಲ್ಲಿಸಬಯಸುತ್ತದೆ. ಅಕಾಡೆಮಿಯ ಕಾರ್ಯಚಟುವಟಿಕೆಗಳಿಗೆ ಎಲ್ಲ ಬಗೆಯ ಸಹಾಯ–ಸಹಕಾರ–ಮಾರ್ಗದರ್ಶನ ನೀಡುತ್ತಿರುವ ಮಾನ್ಯ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳಾದ ಶ್ರೀ ಸುಬೀರ್ ಹರಿಸಿಂಗ್ ಅವರಿಗೂ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾಗಿರುವ ಶ್ರೀ ಮನು ಬಳಿಗಾರ್ ಅವರಿಗೂ ಅಕಾಡೆಮಿ ವಿಶೇಷ ವಂದನೆಗಳನ್ನು ಸೂಚಿಸಬಯಸುತ್ತದೆ.

ಅಕಾಡೆಮಿಯ ಕಾರ್ಯಚಟುವಟಿಕೆಗಳಿಗೆ ಎಲ್ಲ ಸಹಾಯ, ಸಹಕಾರ ಮತ್ತು ಮಾರ್ಗದರ್ಶನ ಮಾಡುತ್ತಿರುವ ಅಕಾಡೆಮಿಯ ಎಲ್ಲ ಗೌರವಾನ್ವಿತ ಸದಸ್ಯರಿಗೂ ನಮ್ಮ ವಂದನೆಗಳು ಸಲ್ಲುತ್ತವೆ.

ಮಹಾಕವಿ ಸೋಮದೇವಭಟ್ಟನ 'ಕಥಾಸರಿತ್ಸಾಗರ' ಸಂಸ್ಕೃತ ಕಥಾಸಾಹಿತ್ಯದ ಅಪೂರ್ವ ಕೃತಿಗಳಲ್ಲಿ ಒಂದು. ಭಾರತೀಯ ಧರ್ಮ, ಸಂಸ್ಕೃತಿ, ನೀತಿಶಾಸ್ತ್ರ, ರಾಜಕೀಯ ಚಿಂತನೆ, ಸಾಮಾಜಿಕ ಕಳಕಳಿ, ಸಾಹಿತ್ಯ ಪ್ರೀತಿ, ಕಥಾನಿರೂಪಣೆಯ ಕಲೆಗಾರಿಕೆ ಮತ್ತು ಸ್ವಾರಸ್ಯ – ಇವುಗಳೆಲ್ಲದರಿಂದ ಅದು

ಭಾರತೀಯ ಸಾಹಿತ್ಯದ ವಿಶಿಷ್ಟ ಕೃತಿಗಳಲ್ಲಿ ಒಂದಾಗಿದೆ. ಜೀವನದ ಬಗೆಗಿನ ಎಲ್ಲ ಭಾರತೀಯ ಆದರ್ಶಗಳು ಇಲ್ಲಿಯ ಕಥೆಗಳಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ಮೈದಳೆದಿವೆ. ನಮ್ಮ ಪ್ರಾಚೀನ ಕಥಾಪರಂಪರೆಯ ಪ್ರತೀಕವಾಗಿರುವಂತೆಯೇ, ತನ್ನ ಕಾವ್ಯಮಯ ನಿರೂಪಣೆಯಿಂದಲೂ ಅದು ಸಾಹಿತ್ಯಪ್ರಿಯರನ್ನು ತನ್ನತ್ತ ಸೆಳೆದುಕೊಂಡಿದೆ. ಇಂಥ ಕೃತಿಯ ಓದು ನಮ್ಮ ಮಕ್ಕಳಲ್ಲಿ, ಜನತೆಯಲ್ಲಿ ಸತ್–ಸಂಸ್ಕೃತಿಯನ್ನು ಮೂಡಿಸಲು ಖಂಡಿತವಾಗಿಯೂ ನೆರವಾಗುತ್ತದೆ. ಇದರ ಮಹತ್ವವನ್ನು ಅರಿತ ಸಿ.ಎಚ್. ಥಾನಿ ಎಂಬ ಪಾಶ್ಚಾತ್ಯ ವಿದ್ವಾಂಸ ಕಳೆದ ಶತಮಾನದಲ್ಲಿಯೇ (ಸು. ೧೯೨೩) ಹನ್ನೊಂದು ಸಂಪುಟಗಳಲ್ಲಿ ಇದನ್ನು ಇಂಗ್ಲಿಷಿಗೆ ಭಾಷಾಂತರಿಸಿದ್ದನೆಂಬ ಸಂಗತಿ ಇದರ ವೈಶಿಷ್ಟ್ಯ–ಮಹತ್ವಗಳಿಗೆ ಸಾಕ್ಷಿಯಾಗಿದೆ. ಟಿ. ಚಿದಂಬರ ಪಂಡಿತರು 'ಕರ್ಣಾಟಕ ಕಥಾಸರಿತ್ಸಾಗರ' (೧೯೨೨) ಎಂಬ ಹೆಸರಿನಲ್ಲಿಯೂ, ಎ. ಆರ್. ಕೃಷ್ಣಶಾಸ್ತ್ರಿಗಳು 'ಕಥಾಮೃತ' (೧೯೫೭, ೬೮) ಎಂಬ ಹೆಸರಿನಲ್ಲಿಯೂ ಇದರ ಸಂಕ್ಷಿಪ್ತ ಆವೃತ್ತಿಗಳನ್ನು ಹೊರತಂದಿದ್ದರು. ದೇವುಡು ಅವರ ವಿ. ರಾಘವನ್ ಅವರಿಂದ ಸಂಕಲಿತವಾದ ಇದರ ೧೬–ಕಥೆಗಳನ್ನು ಕನ್ನಡಕ್ಕೆ ತಂದಿರುವುದೂ (೧೯೫೮) ಗಮನಿಸಬೇಕಾದ ಸಂಗತಿಯೇ ಆಗಿದೆ. ಆದರೆ ಸಮಗ್ರವಾಗಿ ಹಾಗೂ ಸಮೂಲವಾಗಿ ಇದರ ಕನ್ನಡ ಆವೃತ್ತಿ ಹೊರಬರುತ್ತಿರುವುದು ಇದೇ ಮೊದಲು. 'ನಿರ್ಣಯ ಸಾಗರ'ದ ವತಿಯಿಂದ ಪ್ರಕಟವಾಗಿರುವ ಪಂಡಿತ ದುರ್ಗಾ ಪ್ರಸಾದ್ ಮತ್ತು ಕಾಶೀನಾಥ ಪಾಂಡುರಂಗ ಪರಬ್ ಅವರಿಂದ ಸಂಪಾದಿತವಾದ ಹಾಗೂ ವಾಸುದೇವ ಲಕ್ಷ್ಮಣಶಾಸ್ತ್ರೀ ಪಣಶೀಕರ ಅವರಿಂದ ಪರಿಶೋಧಿತವಾಗಿರುವ ೧೯೧೫ರ ಆವೃತ್ತಿಯನ್ನು ಇದಕ್ಕೆ ಆಧಾರವಾಗಿ ಇರಿಸಿಕೊಳ್ಳಲಾಗಿದೆ. ನಾಡಿನ ಅನೇಕ ಖ್ಯಾತ ಸಂಸ್ಕೃತ ವಿದ್ವಾಂಸರು ಅಕಾಡೆಮಿಯ ಈ ಯೋಜನೆಯಲ್ಲಿ ಸಹಕರಿಸಿದ್ದಾರೆ. ಡಾ. ಪಿ.ಎಸ್. ರಾಮಾನುಜಂ ಅವರಂಥ ಅಪರೂಪದ ಸಾಹಿತಿ, ವಿದ್ವಾಂಸರು ಈ ಯೋಜನೆಯ ಸಂಪಾದಕರಾಗಿ ಕಾರ್ಯನಿರ್ವಹಿಸಲು ಒಪ್ಪಿರುವುದಂತೂ ಅಕಾಡೆಮಿಗೆ ಗೌರವಪ್ರಾಯವಾದ ಸಂಗತಿಯಾಗಿದೆ ಎಂದು ನಂಬಿದ್ದೇನೆ. ಅನುವಾದಗಳಿಗೆ ಶಿಷ್ಟತೆ, ಸಾಹಿತ್ಯಸೌಷ್ಠವ ಮತ್ತು ಲಾಲಿತ್ಯಗಳನ್ನು ತಂದುಕೊಟ್ಟಿರುವುದಲ್ಲದೆ, ಕನ್ನಡ ಗದ್ಯದ ಸಹಜಗುಣಗಳು ಅಳವಡುವಂತೆ ಅವರು ನೋಡಿಕೊಂಡಿದ್ದಾರೆ. ಜೊತೆಗೆ ವಿದ್ವತ್ಪೂರ್ಣವಾಗಿರುವ ಪೀಠಿಕೆಯನ್ನು ಬರೆದುಕೊಟ್ಟು ಈ ಸಂಪುಟಗಳ ಶೋಭೆ ಮತ್ತು ಮಹತ್ವವನ್ನು ಹೆಚ್ಚಿಸಿದ್ದಾರೆ. ಇವೆಲ್ಲ ಕನ್ನಡದ ಬಗೆಗಿನ ಅವರ ಪ್ರೀತಿ–ಗೌರವಗಳಿಗೆ ನಿದರ್ಶನವಾಗಿವೆಯೆಂದು ನಂಬಿದ್ದೇನೆ. ಅವಿರತವಾಗಿ ಶ್ರಮಿಸಿ, ನಮ್ಮ ಈ ಯೋಜನೆ ಕಾಲಬದ್ಧವಾಗಿ ಕೈಗೂಡುವಂತೆ ಮಾಡುವಲ್ಲಿ ಅವರು ನೀಡಿರುವ ಸಹಾಯ–ಸಹಕಾರ–ಮಾರ್ಗದರ್ಶನಗಳು ಅವಿಸ್ಮರಣೀಯವಾಗಿರುವಂಥವು.

ಇನ್ನೊಂದು ಮಾತು : ಇದರ ಮಹತ್ವವನ್ನು ಮನಗಂಡ ಕನ್ನಡ ನಾಡಿನ ಅನೇಕ ಗಣ್ಯ ವಿದ್ವಾಂಸರು ಥಾನಿಯವರು ಸಂಪಾದಿಸಿರುವ '*The Ocean of Story*' ಆವೃತ್ತಿಯ ಕನ್ನಡ ಅವತರಣಿಕೆಯನ್ನು ಹೊರತರಬೇಕೆಂಬ ಪ್ರಸ್ತಾಪವನ್ನು ಕನ್ನಡ ಪುಸ್ತಕ ಪ್ರಾಧಿಕಾರದ ಮುಂದೆ ಇರಿಸಿದ್ದರು. ಹೀಗಾಗಿ ಇದು ಮೂಲತಃ ಕನ್ನಡ ಪುಸ್ತಕ ಪ್ರಾಧಿಕಾರದವರ ಯೋಜನೆ, ಅವರು ಈ ದಿಕ್ಕಿನಲ್ಲಿ ಕ್ರಮ ಕೈಗೊಂಡು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಅನುವಾದ ಅಕಾಡೆಮಿಯ ಸ್ಥಾಪನೆಯಾದ ಹಿನ್ನೆಲೆಯಲ್ಲಿ, ಅಂದಿನ ಪ್ರಧಾನ ಕಾರ್ಯದರ್ಶಿಗಳು ಇದನ್ನು ಅಕಾಡೆಮಿಗೆ

ವರ್ಗಾಯಿಸಿದರು. ಬೇಸರಪಟ್ಟುಕೊಳ್ಳದೆ ಇದಕ್ಕೆ ಒಪ್ಪಿಗೆ ನೀಡಿದ ಪುಸ್ತಕ ಪ್ರಾಧಿಕಾರದ ಹಿಂದಿನ ಅಧ್ಯಕ್ಷರಾದ ಪ್ರೊ॥ ಎಸ್. ಜಿ. ಸಿದ್ಧರಾಮಯ್ಯನವರಿಗೆ ಅನುವಾದ ಅಕಾಡೆಮಿ ಕೃತಜ್ಞವಾಗಿದೆ.

ಅಕಾಡೆಮಿ ಈ ಯೋಜನೆಯಲ್ಲಿ ಒಂದು ಬದಲಾವಣೆ ಮಾಡಿಕೊಂಡಿದೆ. ಮೂಲ ಸಂಸ್ಕೃತ ಗ್ರಂಥದ ಇಂಗ್ಲಿಷ್ ಆವೃತ್ತಿಯನ್ನು ಕನ್ನಡಕ್ಕೆ ತಂದುಕೊಳ್ಳುವ ಬದಲಿಗೆ ನೇರವಾಗಿ ಸಮೂಲವಾಗಿ ಸಂಸ್ಕೃತದಿಂದಲೇ ಅನುವಾದಿಸಿಕೊಂಡಿರುವುದೇ ಆ ಬದಲಾವಣೆ. ಕನ್ನಡ ಓದುಗರಿಗೆ ನೇರವಾಗಿ ಕಥೆಯನ್ನು ಓದಿಕೊಂಡು ಹೋಗಲು ಅನುಕೂಲವಾಗುವಂತೆ ಕನ್ನಡಾನುವಾದವನ್ನು ಪುಟದ ಮೇಲು ಅರ್ಧದಲ್ಲಿ ಕೊಟ್ಟು, ಮೂಲವನ್ನು ಕೆಳ ಅರ್ಧದಲ್ಲಿ ಅಳವಡಿಸಲಾಗಿದೆ. ಇದು ಕನ್ನಡ–ಸಹೃದಯರಿಗೆ ಪ್ರಿಯವಾಗುತ್ತದೆಂದು ನಂಬಿದ್ದೇವೆ.

ಈ ಲಂಬಕವನ್ನು ಅನುವಾದಿಸಿಕೊಟ್ಟಿರುವ ಶ್ರೀ ಶೇಷಾಚಲ ಶರ್ಮ ಅವರು. ತಮ್ಮ ಸಂಸ್ಕೃತ ವಿದ್ವತ್ತಿಗೆ ರಾಷ್ಟ್ರಪತಿಗಳ ಪ್ರಶಸ್ತಿಯನ್ನು ಪಡೆದಿರುವ ಶ್ರೀಯುತರು ನಮ್ಮ ಈ ಯೋಜನೆಯಲ್ಲಿ ಸಹಕರಿಸಿರುವುದು ನಮಗೆ ಹೆಮ್ಮೆಯ ವಿಚಾರವೇ ಆಗಿದೆ. ಈ ಯೋಜನೆಯಲ್ಲಿ ಅವರು ತೋರುತ್ತಿರುವ ಆಸಕ್ತಿ–ಉತ್ಸಾಹಗಳನ್ನು, ನೀಡುತ್ತಿರುವ ಸಹಾಯ–ಸಹಕಾರಗಳನ್ನು ನಾನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಮೊದಲ ಕಂತಿನಲ್ಲಿ, 'ಕಥಾಸರಿತ್ಸಾಗರ'ದ ಮೂರು ಸಂಪುಟಗಳನ್ನೂ – "ಕಥಾಪೀಠ', "ಕಥಾಮುಖ' ಮತ್ತು "ಲಾವಣಕ' ಹಾಗೂ "ನರವಾಹನದತ್ತ ಜನನ' ಮತ್ತು "ಚತುರ್ದಾರಿಕಾ' ಲಂಬಕಗಳನ್ನೂ, ಎರಡನೆಯ ಕಂತಿನಲ್ಲಿ "ಮದನಮಂಚುಕಾ' – ಮತ್ತು 'ರತ್ನಪ್ರಭಾ' ಲಂಬಕಗಳನ್ನೂ ಬಿಡುಗಡೆ ಮಾಡಲಾಗಿತ್ತು. ಈಗ ಮೂರನೆಯ ಕಂತಿನಲ್ಲಿ 'ಸೂರ್ಯಪ್ರಭ' ಮತ್ತು 'ಅಲಂಕಾರವತೀ' ಲಂಬಕಗಳನ್ನು ಬಿಡುಗಡೆ ಮಾಡಲಾಗುತ್ತಿದೆ. ಉಳಿದ ಸಂಪುಟಗಳನ್ನೂ ಶೀಘ್ರವಾಗಿ ಕನ್ನಡ ಜನಸಮುದಾಯಕ್ಕೆ ಒಪ್ಪಿಸಲು ಸಾಧ್ಯವಾದೀತೆಂದೂ ನಂಬಿದ್ದೇವೆ. ಇದು ಸಾಧ್ಯವಾದಾಗ ಕನ್ನಡದ ಸಾಧನೆಗೆ ಇನ್ನೊಂದು ಹೆಮ್ಮೆಯ ಗರಿ ಸೇರಿದಂತಾಗುತ್ತದೆಂದು ನಂಬಿದ್ದೇನೆ.

ಅನುವಾದ ಅಕಾಡೆಮಿಯ ಕೆಲಸ–ಕಾರ್ಯಗಳಲ್ಲಿ ಹಾಗೂ ಪ್ರಕಟಣೆಯ ವಿಚಾರದಲ್ಲಿ ಹೃತ್ಪೂರ್ವಕವಾಗಿ ತಮ್ಮನ್ನು ತೊಡಗಿಸಿಕೊಂಡಿರುವ ಅಕಾಡೆಮಿಯ ರಿಜಿಸ್ಟ್ರಾರ್ ಪಿ. ನಾರಾಯಣಸ್ವಾಮಿ ಮತ್ತು ಇತರ ಸಿಬ್ಬಂದಿವರ್ಗದವರಿಗೆ ಹಾಗೂ ಸುಂದರವಾಗಿ ಮುದ್ರಿಸುವಲ್ಲಿ ಸಹಕರಿಸಿರುವ ಮೆ॥ ಮಯೂರ ಪ್ರಿಂಟ್ ಆರ್ಡ್ಸ್‌ನ ಶ್ರೀ ಬಿ.ಎಲ್. ಶ್ರೀನಿವಾಸ ಮತ್ತು ಅವರ ಸಿಬ್ಬಂದಿವರ್ಗದವರಿಗೆ ನಮ್ಮ ವಂದನೆಗಳು.

**ಪ್ರಧಾನ್ ಗುರುದತ್ತ**

ಅಧ್ಯಕ್ಷ

# ಪ್ರಸ್ತಾವನೆ

ಒಂಬತ್ತನೆಯದಾದ ಈ ಅಲಂಕಾರವತೀ ಲಂಬಕದಲ್ಲಿ ಆರು ತರಂಗಗಳಿದ್ದು ಒಟ್ಟು ೧೭೩೮ ಶ್ಲೋಕಗಳಿವೆ. ಈ ಆರು ತರಂಗಗಳಲ್ಲಿ ಮೂರನೆಯದರಲ್ಲಿ ೧೯೭ ಶ್ಲೋಕಗಳಿದ್ದು ಅದೇ ಎಲ್ಲ ತರಂಗಗಳಿಗಿಂತ ಚಿಕ್ಕದು. ಆರನೆಯ ತರಂಗದಲ್ಲಿ ೪೨೪ ಶ್ಲೋಕಗಳಿದ್ದು ಅದು ಎಲ್ಲದಕ್ಕಿಂತ ದೀರ್ಘವಾದ ತರಂಗವಾಗಿದೆ.

ಇವುಗಳಲ್ಲಿ ಮೊದಲನೆಯ ತರಂಗವು ಪ್ರಾರಂಭವಾಗುವುದು ನರವಾಹನದತ್ತನ ಮೃಗಯಾವಿಹಾರದಿಂದ. ಇದು ಕೊನೆಗೊಳ್ಳುವುದು ನರವಾಹನದತ್ತ ಹಾಗೂ ಅಲಂಕಾರವತಿಯರ ಪರಿಣಯದಲ್ಲಿ.

ನರವಾಹನದತ್ತನು ಸ್ನೇಹಿತ ಗೋಮುಖನೊಡನೆ ಬೇಟೆಯಾಡುತ್ತಾ ದಟ್ಟವಾದ ಅಡವಿಯೊಳಕ್ಕೆ ಪ್ರವೇಶಿಸುತ್ತಾನೆ. ಆಗ ಅಲ್ಲಿ ಒಂದು ದಿವ್ಯವಾದ ವೀಣಾನಾದ ಕೇಳಿಸುತ್ತದೆ. ಅದನ್ನರಸಿ ಹೋದಾಗ ಅಲ್ಲಿದ್ದ ಒಂದು ಪುರಾತನ ಶಿವದೇವಾಲಯದ ಬಳಿ 'ಪ್ರಸರತ್ಕಾಂತಿನಿರ್ಝರೆ'ಯಾದ ದೇವಕನ್ಯೆಯು ವೀಣಾನಾದ ಮಾಡುತ್ತಿರುವುದನ್ನು ನೋಡುತ್ತಾನೆ. ಅವಳು ಇವನನ್ನು 'ಸರಸಸ್ನಿಗ್ಧಮುಗ್ಧ'ವಾದ ದೃಷ್ಟಿಯಿಂದ ನೋಡುತ್ತಾಳೆ. ಇಬ್ಬರಲ್ಲೂ ಅನುರಾಗ ಅಂಕುರಿಸುತ್ತದೆ.

ಅಷ್ಟರಲ್ಲಿ ವಿದ್ಯಾಧರಿಯೊಬ್ಬಳು ಅಂತರಿಕ್ಷದಿಂದ ಇಳಿದು ಬಂದು ಆ ಕನ್ಯೆಯ ಬಗ್ಗೆ ನರವಾಹನದತ್ತನಿಗೆ ತಿಳಿಸುತ್ತಾಳೆ. ಆ ಕನ್ಯೆಯು ಅಲಂಕಾರಶೀಲನೆಂಬ ವಿದ್ಯಾಧರರಾಜನ ಮಗಳು. ಆ ರಾಜನಿಗೆ ಧರ್ಮಶೀಲನೆಂಬ ಮಗನೂ ಇದ್ದು ಅವನು ವಿರಕ್ತ, ಇಂದ್ರಿಯ ನಿಗ್ರಹಿ. ಆ ಕನ್ಯೆಯ ಹೆಸರು ಅಲಂಕಾರವತಿ. ಅವಳು ಹುಟ್ಟಿದಾಗ ಅವಳು ನರವಾಹನದತ್ತನ ಮಡದಿಯಾಗುವಳು ಎಂದು ಅಂತರಿಕ್ಷವಾಣಿಯು ಘೋಷಿಸಿತ್ತು.

ಅಲಂಕಾರವತಿಯ ಅಣ್ಣ ತಾರುಣ್ಯದಲ್ಲೇ ವೈರಾಗ್ಯಶೀಲ. ಅವನ ವೈರಾಗ್ಯಚಿಂತನೆಯು ಗಮನಿಸಬೇಕಾದ ವಿಷಯ. ಅಂದಿನ ವೈರಾಗ್ಯಸಿದ್ಧಾಂತದ ಒಂದು ಸ್ಥೂಲಪರಿಚಯವನ್ನು ಇದು ಕೊಡುತ್ತದೆ. ಧರ್ಮಶೀಲನು ಹೇಳುವ ವೈರಾಗ್ಯದ ಮಾತುಗಳು ಇವು. 'ಕ್ಷಣಭಂಗುರವಾದ ಈ ಭೋಗಗಳು ನನ್ನನ್ನು ಸಂತೋಷ ಪಡಿಸುವುದಿಲ್ಲ. ಸಂಸಾರದಲ್ಲಿ ಎಲ್ಲವೂ ಪರ್ಯಂತವಿರಸ.'

ವ್ಯಾಸರ ವಚನವನ್ನು ಅವನು ಇಲ್ಲಿ ಉಲ್ಲೇಖಮಾಡುತ್ತಾನೆ. ಎಲ್ಲ ಐಶ್ವರ್ಯಗಳೂ ಕೊನೆಗೆ ಕ್ಷಯಿಸುತ್ತವೆ. ಉಚ್ಛ್ರಾಯವೆಲ್ಲ ಪತನದಲ್ಲಿ ಕೊನೆಗೊಳ್ಳುತ್ತದೆ. ಸಂಯೋಗಗಳು ವಿಯೋಗಗಳಾಗಿ ಕೊನೆಗೊಳ್ಳುತ್ತವೆ. ಜೀವಿತವು ಮರಣದಲ್ಲಿ ಪರ್ಯವಸಾನ ಹೊಂದುತ್ತದೆ. ತಪಸ್ವಿಯಾದವನಿಗೆ ಈ ವಿಷಯದಲ್ಲಿ ಆಸಕ್ತಿ ಹೇಗೆ ಬಂದೀತು? ಯಾವುದೂ ಪರಲೋಕದಲ್ಲಿ ಜೊತೆಗೆ ಬರುವುದಿಲ್ಲ. ಧರ್ಮವೆಂಬುದು ಮಾತ್ರ ಒಂದೇ ಬಂಧು. ಧರ್ಮವು ಮಾತ್ರ ನಮ್ಮ ಹಿಂದೆಯೇ ಬರುತ್ತದೆ.

ಹೀಗೆ ಧರ್ಮಶೀಲನು ಹೇಳಿದಾಗ ತಂದೆಯು ಅವನ ಮನಸ್ಸನ್ನು ಎಷ್ಟೇ ಬಹಿರ್ಮುಖವಾಗಿಸಲು

ನೋಡಿದರೂ ಸಾಧ್ಯವಾಗುವುದಿಲ್ಲ. ಕೊನೆಗೆ ತಂದೆಯೂ ಮಗನೊಡನೆ ವೈರಾಗ್ಯದಿಂದ ಕಾಡಿಗೆ ಹೊರಟುಬಿಡುತ್ತಾನೆ. ಅಲಂಕಾರವತಿಯನ್ನು ಅವಳ ತಾಯಿಯಾದ ಕಾಂಚನಪ್ರಭೆಯ ರಕ್ಷಣೆಯಲ್ಲಿಟ್ಟು ರಾಜನು ಹೋಗುತ್ತಾನೆ. ಅಲಂಕಾರವತಿಯು ತಾಯಿಯೊಡನೆ ತೀರ್ಥಕ್ಷೇತ್ರಾಟನ ಮಾಡುತ್ತಾ ಸಮಯ ಕಳೆಯುತ್ತಾಳೆ.

ಆ ವಿದ್ಯಾಧರಿಯೇ ಕಾಂಚನಪ್ರಭೆ. 'ಒಂದು ವರ್ಷದಲ್ಲಿ ಅಲಂಕಾರವತಿಗೆ ವಿವಾಹದ ಮುಹೂರ್ತವಿರುವುದರಿಂದ ಆ ಮುಹೂರ್ತದಂದು ಬಂದು ಅವಳನ್ನು ನರವಾಹನದತ್ತನಿಗೆ ಕನ್ಯಾದಾನ ಮಾಡಿಕೊಡುತ್ತೇನೆಂದು ಅಲಂಕಾರಶೀಲನು ಹೇಳಿ ಹೋಗಿ ಒಂದು ವರ್ಷ ಮುಗಿಯಿತು. ನಾಳೆಯೇ ಆ ಮುಹೂರ್ತ. ಆಗ ಅಲಂಕಾರಶೀಲನು ಬಂದು ಕನ್ಯಾದಾನ ಮಾಡಿಕೊಡುತ್ತಾನೆಂದು ಕಾಂಚನಪ್ರಭೆ ಹೇಳುತ್ತಾಳೆ.

ಮರುದಿನ ಮದುವೆಯೇ ? ಅಲ್ಲಿಯವರೆಗೆ ವಿರಹವನ್ನು ಹೇಗೆ ಸಹಿಸುವುದು ? ನರವಾಹನದತ್ತನಿಗೂ ಅಲಂಕಾರವತಿಗೂ ಅಸಾಧ್ಯವಾದ ವಿರಹವೇದನೆಯಾಯಿತು. ಅದನ್ನು ನೋಡಿ ಕಾಂಚನಪ್ರಭೆಯು ದೀರ್ಘಕಾಲದವರೆಗೆ ವಿಯೋಗವನ್ನು ಸಹಿಸಿದ ಶ್ರೀರಾಮ ಹಾಗೂ ಸೀತಾದೇವಿಯರ ಕಥೆಯನ್ನು ಹೇಳುತ್ತಾಳೆ.

ಈ ರಾಮಕಥೆಯಲ್ಲಿ ಹಲವು ವ್ಯತ್ಯಾಸಗಳಿವೆ. ರಾವಣನನ್ನು ಸಂಹರಿಸಲು ವಿಷ್ಣುವಿನ ಅವತಾರವಾಗಿ ಹುಟ್ಟಿದ ರಾಮನಿಗೆ ಸೀತೆಯು ಪ್ರಾಣಪ್ರಿಯೆಯಾದ ಭಾರ್ಯೆ. ತಂದೆ ದಶರಥನು ವಿಧಿಯೋಗದಿಂದ ಭರತನಿಗೆ ರಾಜ್ಯವನ್ನು ಕೊಟ್ಟು ರಾಮನನ್ನು ಸೀತಾಲಕ್ಷ್ಮಣರೊಡನೆ ಕಾಡಿಗೆ ಕಳುಹಿಸುತ್ತಾನೆ. ಅಲ್ಲಿ ಮಾಯೆಯಿಂದ ರಾವಣನು ಸೀತೆಯನ್ನು ಅಪಹರಿಸಿ ರಕ್ಷಿಸಲು ಬಂದ ಜಟಾಯುವನ್ನು ಕೊಂದು ಲಂಕೆಗೆ ಹೋದಮೇಲೆ ರಾಮನು ಅವಳನ್ನು ಹುಡುಕುತ್ತಾ ಸುಗ್ರೀವನ ರಾಜ್ಯಕ್ಕೆ ಬಂದು ವಾಲಿವಧೆ ಮಾಡಿ ಸುಗ್ರೀವನ ಸಖ್ಯದಿಂದ ಮಾರುತಿಯ ಮೂಲಕ ಸೀತೆಯು ಲಂಕೆಯಲ್ಲಿರುವುದನ್ನು ತಿಳಿದು ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ ರಾವಣನನ್ನು ಕೊಂದು ಸೀತೆಯನ್ನು ಕರೆತರುತ್ತಾನೆ. ಅನಂತರ ಸಹೋದರನಾದ ಭರತನು ಸಮರ್ಪಿಸಿದ ರಾಜ್ಯವನ್ನು ಆಳುತ್ತಾನೆ. ಮತ್ತೆ ಜನಾಸಂವಾದಕ್ಕೆ ಹೆದರಿ ಸೀತೆಯನ್ನು ತ್ಯಜಿಸುತ್ತಾನೆ. ಸೀತೆಗೆ ಕಾಡಿನಲ್ಲಿ ವಾಲ್ಮೀಕಿಋಷಿಯ ಆಶ್ರಯ ಸಿಗುತ್ತದೆ. ಅಲ್ಲಿ ಇತರ ಮುನಿಗಳು ಸೀತೆಯ ನಡತೆಯನ್ನು ಸಂದೇಹಿಸಿದಾಗ ತನ್ನನ್ನು ಹೇಗೆ ಬೇಕಾದರೂ ಪರೀಕ್ಷಿಸಲಿ ಎಂದು ಸೀತೆಯು ಹೇಳುತ್ತಾಳೆ. ಆಗ ಟೀಟಿಭ ಸರೋವರದಲ್ಲಿ ಪರಿಶುದ್ಧಿಯನ್ನು ಆಚರಿಸಲಿ ಎಂದು ಮುನಿಗಳು ಹೇಳುತ್ತಾರೆ. ನಾನು ಪತಿವ್ರತೆಯಾದರೆ ಈ ಸರೋವರವನ್ನು ದಾಟಿ ಬರುತ್ತೇನೆ ಎಂದು ಸೀತೆ ಆ ಸರಸ್ಸನ್ನು ಪ್ರವೇಶಿಸುತ್ತಾಳೆ. ಆಗ ಭೂದೇವಿಯು ಅವಳನ್ನು ಮಡಿಲಲ್ಲಿ ಎತ್ತಿಕೊಂಡು ದಡಕ್ಕೆ ತರುತ್ತಾಳೆ. ಆಗ ಮುನಿಗಳು ಸೀತೆ ಪರಿಶುದ್ಧೆಯೆಂದು ತಿಳಿದು ರಾಮನ ಮೇಲೆಯೇ ಕೋಪಗೊಂಡು ಅವನಿಗೆ ಶಾಪಕೊಡಲು ಉದ್ಯುಕ್ತರಾದಾಗ ಸೀತೆಯು ಅವರನ್ನು ತಡೆಯುತ್ತಾಳೆ.

ಒಮ್ಮೆ ಸೀತೆಯು ತನ್ನ ಮಗುವಿನೊಡನೆ ಸ್ನಾನಕ್ಕೆ ಹೋಗಿದ್ದಾಗ ವಾಲ್ಮೀಕಿಯು ಬಂದು ನೋಡಿ ಮಗುವನ್ನು ಯಾವುದೋ ಮೃಗವು ಎತ್ತಿಕೊಂಡು ಹೋಗಿರಬೇಕೆಂದು ಭಾವಿಸಿ ದರ್ಭೆಗಳಿಂದ

ಒಂದು ಶಿಶುವನ್ನು ಸೃಷ್ಟಿಸಿ ಜೀವ ತುಂಬಿ ಅದಕ್ಕೆ ಕುಶನೆಂದು ಹೆಸರಿಡುತ್ತಾನೆ. ಸೀತೆಯು ಬಂದು ಇದು ಯಾವ ಮಗುವೆಂದಾಗ "ಇದು ನಾನು ಸೃಷ್ಟಿಸಿದ್ದು. ಇದನ್ನು ಸ್ವೀಕರಿಸು' ಎಂದು ವಾಲ್ಮೀಕಿ ಹೇಳುತ್ತಾನೆ.

ಲವಕುಶರಿಬ್ಬರೂ ಶಸ್ತ್ರಶಾಸ್ತ್ರಾದಿವಿದ್ಯೆಗಳನ್ನು ಕಲಿತು ಬೆಳೆಯುತ್ತಾರೆ. ತೇಜಸ್ವಿಗಳಾದ ತರುಣರಾಗುತ್ತಾರೆ. ಆಗ ಒಮ್ಮೆ ಆಶ್ರಮದ ಜಿಂಕೆಯೊಂದನ್ನು ಕೊಂದು ಅದರ ಮಾಂಸವನ್ನು ತಂದು ವಾಲ್ಮೀಕಿಯ ಪೂಜಾಮೂರ್ತಿಯಾದ ಲಿಂಗವನ್ನು ಆಟದ ವಸ್ತುವನ್ನಾಗಿ ಮಾಡಿ ಆಟವಾಡುತ್ತಾರೆ. ವಾಲ್ಮೀಕಿಯು ಕೋಪದಿಂದ ಪ್ರಾಯಶ್ಚಿತ್ತ ಮಾಡಿಕೊಳ್ಳಲು ಹೇಳಿ, ಅವನು ಕುಬೇರ ಸರಸ್ಸಿಗೆ ಹೋಗಿ ಸುವರ್ಣಕಮಲಗಳನ್ನೂ ಮಂದಾರಪುಷ್ಪಗಳನ್ನೂ ತಂದು ಆ ಮೂರ್ತಿಯನ್ನು ಅರ್ಚಿಸಬೇಕು ಎಂದು ಆದೇಶಿಸುತ್ತಾನೆ. ಆಗ ಅದರಂತೆ ಅವನು ಹೊರಟು ಕುಬೇರಸರಸ್ಸಿಗೆ ಹೋಗಿ ಯಕ್ಷರನ್ನು ಸೋಲಿಸಿ ಸುವರ್ಣ ಪದ್ಮಗಳನ್ನೂ ಪುಷ್ಪಗಳನ್ನೂ ಕಿತ್ತು ತಂದು ಆಯಾಸದಿಂದ ಮಲಗಿರುವಾಗ ಲಕ್ಷ್ಮಣನು ರಾಮನು ನಡೆಸುವ ಪುರುಷಮೇಧಕ್ಕಾಗಿ ಅವನನ್ನು ಹಿಡಿದುಕೊಂಡು ಹೋಗಿಬಿಡುತ್ತಾನೆ. ಅವನನ್ನು ಬಿಡಿಸಿಕೊಂಡು ಬರಲು ವಾಲ್ಮೀಕಿಯು ಆದೇಶಿಸಿದಾಗ ಅದರಂತೆ ಕುಶನು ಅಯೋಧ್ಯೆಗೆ ಹೋಗಿ ಮುತ್ತಿಗೆ ಹಾಕಿ ಯಜ್ಞಶಾಲೆಯನ್ನು ಸುತ್ತುವರಿಯುತ್ತಾನೆ. ಯುದ್ಧಕ್ಕೆ ಬಂದ ಲಕ್ಷ್ಮಣನನ್ನು ಗೆದ್ದು ರಾಮನನ್ನೂ ಸೋಲಿಸುತ್ತಾನೆ. ಆಗ "ನೀನು ಯಾರು ? ನಿನ್ನ ಉದ್ದೇಶವೇನು ?' ಎಂದು ರಾಮನು ಕೇಳಿದಾಗ ಲವನನ್ನು ಬಿಡಿಸಿಕೊಳ್ಳಲು ಬಂದಿದ್ದೇನೆಂದು ಹೇಳಿ ಸೀತೆಯ ವೃತ್ತಾಂತವನ್ನು ಹೇಳುತ್ತಾನೆ. ಆಗ ಅವರಿಬ್ಬರನ್ನೂ ಪ್ರೀತಿಯಿಂದ ಸ್ವೀಕರಿಸಿ ಸೀತೆಯನ್ನು ಕರೆತರಿಸಿ ಪುತ್ರರಲ್ಲಿ ರಾಜ್ಯಭಾರವನ್ನಿಟ್ಟು ರಾಮನು ಸುಖವಾಗಿರುತ್ತಾನೆ.

ಹೀಗೆ 'ಧೀರರು ಚಿರಕಾಲ ವಿರಹವನ್ನು ಸಹಿಸುತ್ತಾರೆ. ನೀವು ಒಂದು ರಾತ್ರಿ ವಿರಹವನ್ನು ಸಹಿಸಲಾರಿರಾ ?' ಎಂದು ಕೇಳಿ ಕಾಂಚನಪ್ರಭೆಯು ಪ್ರಾತಃಕಾಲ ಬರುತ್ತೇನೆಂದು ಹೇಳಿ ಅಲಂಕಾರವತಿಯೊಡನೆ ಆಕಾಶಮಾರ್ಗವಾಗಿ ಹೋಗಿಬಿಡುತ್ತಾಳೆ.

ಆ ರಾತ್ರಿ ನಿದ್ರೆ ಬರದೆ ಚಡಪಡಿಸುತ್ತಿದ್ದ ನರವಾಹನದತ್ತನ ಮನೋವಿನೋದಕ್ಕಾಗಿ ಗೋಮುಖನು ಪೃಥ್ವೀರೂಪನ ಕಥೆಯನ್ನು ಹೇಳುತ್ತಾನೆ. ಇದರಲ್ಲಿ ಪೃಥ್ವೀರೂಪನು ಚಿತ್ರಕಾರನ ಮೂಲಕ ರೂಪಲತೆಯನ್ನು ನೋಡಿ ಅವರ ತಂದೆಗೆ ತನ್ನ ಚಿತ್ರವನ್ನು ಕಳುಹಿಸಿ ಅವರು ಒಪ್ಪಿದಾಗ ಅಲ್ಲಿಗೆ ಅನೇಕ ದಿನಗಳ ಪ್ರಯಾಣ ಮಾಡಿ ಅವಳನ್ನು ವಿಜೃಂಭಣೆಯಿಂದ ಮದುವೆಯಾಗಿ ಹಿಂದಿರುಗಿ ಜೀವಲೋಕದ ಸುಖವನ್ನೆಲ್ಲ ಅನುಭವಿಸುತ್ತಾನೆ. ಈ ಕಥೆಯನ್ನು ಹೇಳಿ ಗೋಮುಖನು "ಚಿರಕಾಲದ ವಿರಹವನ್ನು ಹೀಗೆ ಧೀರರು ಸಹಿಸುತ್ತಾರೆ. ನೀನು ಒಂದು ರಾತ್ರಿ ಕೂಡ ಸಹಿಸದಿದ್ದರೆ ಹೇಗೆ ?' ಎಂದು ನರವಾಹನದತ್ತನನ್ನು ಕೇಳುತ್ತಾನೆ. ಆಗ ಮರುಭೂತಿಯು ಅವನನ್ನು ಅಪಹಾಸ್ಯ ಮಾಡುತ್ತಾನೆ.

'ಅದೃಷ್ಟಸ್ಮರಸಂತಾಪಃ ಸ್ವಸ್ಥಸ್ತ್ವಂ ಕಿಂ ನ ಜಲ್ಪಸಿ ।
ತಾವದ್ಧತ್ತೇ ಪುಮಾನ್ ಧೈರ್ಯಂ ವಿವೇಕಂ ಶೀಲಮೇವ ಚ ॥
ಯಾವತ್ಪತತಿ ಕಾಮಸ್ಯ ಸಾಯಕಾನಾಂ ನ ಗೋಚರೇ' ।

ಮನ್ಮಥನ ಸಂತಾಪವೇನೆಂದೇ ಅರಿಯದೆ ಸ್ವಸ್ಥನಾಗಿರುವ ನೀನು ಮನಸ್ಸಿಗೆ ಬಂದಂತೆ ಹರಟಬಲ್ಲೆ. ಎಲ್ಲಿಯವರೆಗೆ ಪುರುಷನು ಮನ್ಮಥನ ಬಾಣಗಳ ದೃಷ್ಟಿಗೆ ಬೀಳುವುದಿಲ್ಲವೋ ಅಲ್ಲಿಯವರೆಗೆ ಅವನಿಗೆ ಧೈರ್ಯ, ವಿವೇಕ, ಶೀಲಗಳೆಲ್ಲ ಇರುತ್ತವೆ.

ಮತ್ತೆ ಹೀಗೆ ಹೇಳುತ್ತಾನೆ. ಜಗತ್ತಿನಲ್ಲಿ ಸರಸ್ವತಿ, ಸ್ಕಂದ ಮತ್ತು ಜಿನ ಈ ಮೂವರೇ ಧನ್ಯರು. ಅವರು ಬಟ್ಟೆಯ ತುದಿಗೆ ಅಂಟಿಕೊಂಡ ಹುಲ್ಲನ್ನು ಕೊಡವುವಹಾಗೆ, 'ಪಟಾಂತಲಗ್ನತೃಣವತ್' ಮನ್ಮಥನನ್ನು ಕೊಡವಿ ಎಸೆದವರು.

ಮುಂದೆ ನರವಾಹನದತ್ತನು ಅಲಂಕಾರವತಿಗೆ ಸಂಭ್ರಮದಿಂದ, ವಿಜೃಂಭಣೆಯಿಂದ ಮದುವೆ ನೆರವೇರಿಸುತ್ತಾರೆ. ಸದ್ವೃತ್ತೆಯೂ, ಮನೋರಮೆಯೂ, ಉದಾರಗುಣೆಯೂ ಆದ ಅಲಂಕಾರವತಿಯನ್ನು ಪಡೆದು ವಾಣಿಯನ್ನು ಪಡೆದ ಉತ್ತಮ ಕವಿಯಂತೆ ಅವಳಲ್ಲಿ ರಸಾನುಭವ ಪಡೆಯುತ್ತಿದ್ದನು ಎಂದು ಕಾವ್ಯಮಯವಾಗಿ ಈ ತರಂಗವನ್ನು ಕವಿಯು ಮುಕ್ತಾಯಗೊಳಿಸುತ್ತಾನೆ.

ಎರಡನೆಯ ತರಂಗದಲ್ಲಿ ಅತ್ತೆಯಾದ ಕಾಂಚನಪ್ರಭೆಯ ಪಟ್ಟಣಕ್ಕೆ ಹೋಗಿ ಕೆಲವು ದಿನಗಳನ್ನು ಕಳೆಯುತ್ತಾನೆ. ಅವನು ಆಕಾಶಮಾರ್ಗದಲ್ಲಿ ಹೋದಾಗ ಕೆಳಗೆ ಭೂಮಿ ಸಂಕುಚಿತಗೊಂಡು ಚಿಕ್ಕದಾಗಿ ಕಾಣುತ್ತದೆ. ಹಾಗೆಯೇ ಸಮುದ್ರವೂ ಕಂದಕದಂತೆ ಚಿಕ್ಕದಾಗಿ ಕಾಣುತ್ತದೆ ಎಂದು ವರ್ಣಿಸುತ್ತಾನೆ ಕವಿ. 'ಸ್ಥಲೀಪರಿಮಿತಾಂ ಪೃಥ್ವೀಂ ಸಮುದ್ರಾನ್ ಪರಿಖಾಲಘೂನ್.' ಅವನು ಕಂಡ ಹಿಮಾಚಲವು 'ಕಿಂನರೀಗೀತವಾದಿತ'ವೂ 'ಸ್ವರ್ವಧೂಸಂಘಸುಂದರ'ವೂ ಆಗಿರುತ್ತದೆ. ಅವನು ಕಾಂಚನಪ್ರಭೆಯ ನಗರವನ್ನು ಪ್ರವೇಶಿಸಿದಾಗ ಅಲ್ಲಿ ಸಾವಿರಾರು ಧ್ವಜಗಳು ಹಾರಾಡುತ್ತಿದ್ದು ಪ್ರಭುವಿನ ದರ್ಶನದಿಂದ ಸಂತಸಗೊಂಡು ಇಡೀ ಪುರವೇ ನರ್ತಿಸುತ್ತಿದೆಯೋ ಎಂಬಂತಿತ್ತು ಎಂದು ಕವಿಯು ವರ್ಣಿಸುತ್ತಾನೆ. 'ನೃತ್ಯದಿವಲೋಲೈಃ ಧ್ವಜಾಂಶುಕೈಃ'. ಅವನು ನೋಡಿದ ಉದ್ಯಾನವೋ ಕಾಂಚನದ ಕಾಂಡಗಳಿರುವ ಮರಗಳು, ರತ್ನಶಿಖೆಗಳಿರುವ ಮನೋಹರವಾದ ತರುಗಳು, 'ಮುಕ್ತಾಗುಚ್ಛಾಟ್ಟಕುಸುಮ'ಗಳು, ಪಲ್ಲವವಿದ್ರುಮಗಳಿಂದ ಆಕರ್ಷಕವಾಗಿದ್ದ ವೃಕ್ಷಗಳು.

ಅಲ್ಲಿಂದ ಹಿಂದಿರುಗಿದ ಮೇಲೆ ವಿವಿಧ ಘಟನೆಗಳು ಆರಂಭವಾಗುತ್ತವೆ. ವಿಲಾಸಿನಿಯೊಬ್ಬಳು ಭೀತಿಯಿಂದ ರಕ್ಷಣೆಗಾಗಿ ಅಲಂಕಾರವತಿಯ ಬಳಿ ಓಡಿ ಬರುತ್ತಾಳೆ. ಅವಳ ಕಥೆಯೇ ಬಹಳ ವಿಚಿತ್ರ ಅವಳು ಅಶೋಕಮಾಲೆ ಎಂಬ ಕ್ಷತ್ರಿಯಸ್ತ್ರೀ. ಅವಳನ್ನು ಹಠಶರ್ಮನೆಂಬ ಧನಿಕಬ್ರಾಹ್ಮಣನು ಅವಳ ತಂದೆಯನ್ನು ಹೆದರಿಸಿ ಬಲವಂತವಾಗಿ ಮದುವೆಯಾಗುತ್ತಾನೆ. ಅವನೋ ಮಹಾಕುರೂಪಿ. ಅವನ ಮುಖ ಭಯಂಕರವಾಗಿತ್ತು. ಅಶೋಕಮಾಲೆಯು ಅವನನ್ನು ಬಿಟ್ಟು ಕ್ಷತ್ರಿಯಕುಮಾರನೊಬ್ಬನನ್ನು ಸೇರಿಕೊಳ್ಳುತ್ತಾಳೆ. ಅವನ ಮನೆಯನ್ನು ಹಠಶರ್ಮನು ಸುಟ್ಟುಬಿಡುತ್ತಾನೆ. ಆಗ ಅವನನ್ನು ಬಿಟ್ಟು ಬೇರೆ ಕ್ಷತ್ರಿಯಕುಮಾರನ ಆಶ್ರಯ ಪಡೆಯುತ್ತಾಳೆ. ಅವನ ಮನೆಯನ್ನೂ ಆ ದುಷ್ಟ ಹಠಶರ್ಮ ಸುಟ್ಟುಬಿಡುತ್ತಾನೆ. ಅವನಿಂದಲೂ ತ್ಯಕ್ತಳಾಗಿ ಕೊನೆಗೆ ಅಲಂಕಾರವತಿಯ ಭೃತ್ಯನಾದ ಮಹಾಪರಾಕ್ರಮಿಯಾದ ರಾಜಪುತ್ರನ ಬಳಿ ದಾಸಿಯಾಗಿ ಸೇರಿ ಅವನ ರಕ್ಷಣೆಯಲ್ಲಿರುತ್ತಾಳೆ. ಒಂದು ದಿನ ದೈವಾತ್ ಅವಳು ಹೊರಬಂದಾಗ ಅವಳನ್ನು ಗುರುತಿಸಿ ಹಠಶರ್ಮನು ಆಯುಧಪಾಣಿಯಾಗಿ ಅವಳನ್ನು ಕ್ರೋಧದಿಂದ ಅಟ್ಟಿಸಿಕೊಂಡು ಬರುತ್ತಾನೆ. ಅವಳು ಓಡಿ ಹೋಗಿ ಅಲಂಕಾರವತಿಯ

ಬಳಿ ಹೋಗಿ ರಕ್ಷಣೆ ಕೋರುತ್ತಾಳೆ.

ಆಗ ನರವಾಹನದತ್ತನು ಅಲ್ಲೇ ಹೊರಗಡೆ ಇದ್ದ ಆ ವಿಕೃತ, ಭಯಂಕರ ಹಠಶರ್ಮನನ್ನು ಕರೆಸಿ 'ಬ್ರಾಹ್ಮಣಾಧಮನೇ, ಈ ಪಾಪಕೃತ್ಯಗಳನ್ನು ಏಕೆ ಮಾಡುತ್ತೀಯೆ ?' ಎಂದಾಗ 'ಇವಳು ನನ್ನ ಹೆಂಡತಿ. ಆದರೆ ಬೇರೆಯವರೊಡನೆ ಓಡಿ ಹೋಗಿದ್ದಾಳೆ. ಇದನ್ನು ಹೇಗೆ ಸಹಿಸಲಿ ?' ಎನ್ನುತ್ತಾನೆ. ಆಗ ಅಶೋಕಮಾಲೆಯು ಲೋಕಪಾಲರಿಗೆ ಮೊರೆಯಿಟ್ಟು 'ನಾನು ನಿನ್ನೊಡನೆ ಬರುವುದಿಲ್ಲ ಎಂದು ಮೊದಲೇ ಹೇಳಿದ್ದೆನಲ್ಲವೇ ? ನೀವೇ ಸಾಕ್ಷಿಗಳು' ಎಂದಾಗ ದೇವವಾಣಿಯು ಕೇಳಿಸುತ್ತದೆ. 'ಇವಳು ವಿದ್ಯಾಧರಿ. ಅತಿರೂಪಗರ್ವದಿಂದ ಅವಳ ತಂದೆಯೇ ಇವಳಿಗೆ ಮನುಷ್ಯಳಾಗಿ ಹುಟ್ಟಿ ಇಷ್ಟೆಲ್ಲ ಅನುಭವಿಸುವ ಶಾಪ ಕೊಟ್ಟಿದ್ದಾನೆ. ಹಠಶರ್ಮನು ಕೊಲ್ಲಲು ಅಟ್ಟಿಸಿಕೊಂಡು ಬಂದು ರಾಜಭವನವನ್ನು ಪ್ರವೇಶಿಸಿದಾಗ ಶಾಪವಿಮೋಚನೆ, ತದನುಸಾರವಾಗಿ ತನ್ನ ಶರೀರವನ್ನು ಬಿಟ್ಟು ಅಶೋಕಮಾಲೆಯು ಹೊರಟು ಹೋಗುತ್ತಾಳೆ.'

ಇತ್ತ ಹಠಶರ್ಮನೂ ಜಾತಿಸ್ಮರನಾಗುತ್ತಾನೆ. ಅವನೂ ಅತಿಸೌಂದರ್ಯಗರ್ವದಿಂದ ಮನುಷ್ಯನಾಗಿ ಹುಟ್ಟಿದವನೇ. ಅವನಿಗೂ ಈಗ ಶಾಪವಿಮೋಚನೆ. ವಿದ್ಯಾಧರನಾಗಿ ಹೋಗಿಬಿಡುತ್ತಾನೆ.

ಪ್ರಸಂಗವಶಾತ್ ಗೋಮುಖನು ಅನಂಗರತಿಯ ಕಥೆಯನ್ನು ಹೇಳುತ್ತಾನೆ. ಅವಳದ್ದೂ ಸೌಂದರ್ಯಗರ್ವದ ಕಥೆಯೇ. ವೀರನಾಗಿ, ರೂಪವಂತನಾಗಿ, ಒಂದು ವಿಜ್ಞಾನವನ್ನು ತಿಳಿದವನನ್ನು ತಾನು ವಿವಾಹನಾಗುವುದಾಗಿ ಹೇಳಿದ ಅವಳನ್ನು ವರಿಸಲು ನಾಲ್ಕು ವೀರರು ಬರುತ್ತಾರೆ. ಒಬ್ಬ ನೇಯ್ಗೆಯನ್ನು ಬಲ್ಲವನು. ಒಬ್ಬ ಖಡ್ಗಜೀವಿ, ಒಬ್ಬ ಪಶುಪಕ್ಷಿಗಳ ಭಾಷೆ ತಿಳಿದವನು. ಒಬ್ಬ ಸತ್ತವರನ್ನು ಬದುಕಿಸುವವನು. ಎಲ್ಲರೂ ಅವಲೀಲೆಯಿಂದ ಸಿಂಹಗಳನ್ನೇ ಬೇಟೆಯಲ್ಲಿ ಕೊಂದುಹಾಕುವವರು. ಆದರೆ ಜ್ಯೌತಿಷಿಗಳ ಪ್ರಕಾರ ಇವರು ಯಾರೂ ಹೊಂದುವುದಿಲ್ಲ. ಮೂರು ತಿಂಗಳು ಕಾಯಬೇಕು ಎನ್ನುತ್ತಾರೆ. ಮೂರು ತಿಂಗಳ ಅನಂತರ ಅವಳು ಅನಂಗಪ್ರಭೆಯೆಂಬ ವಿದ್ಯಾಧರಿಯೆಂಬುದು ಅಂತರಿಕ್ಷವಾಣಿಯಿಂದ ತಿಳಿದು, ಆಗ ಶಾಪವಿಮೋಚನೆಯಾದುದರಿಂದ ಅವಳು ಪ್ರಾಣತ್ಯಜಿಸಿ ಹೋಗಿಬಿಡುತ್ತಾಳೆ. ಸತ್ತವಳನ್ನು ಬದುಕಿಸುವ ಜೀವದತ್ತನ ಮಂತ್ರವೂ ನಿಷ್ಫಲವಾಗುತ್ತದೆ. ಅವನು ವಿಂಧ್ಯವಾಸಿನಿಯನ್ನು ಕುರಿತು ತಪಸ್ಸು ಮಾಡಿ ಖಡ್ಗವನ್ನು ಪಡೆಯ ಅನಂಗರತಿಯ ತಂದೆ ಸಮರನನ್ನು ಸೋಲಿಸಿ ಅವಳನ್ನು ಮದುವೆಯಾಗಿ ಮರಳುತ್ತಾನೆ.

ಮುಂದೆ ನಡೆಯುವ ಘಟನೆಗಳು ಬಹಳ ವಿಚಿತ್ರ. ಅನಂಗಪ್ರಭೆಯೂ ಅವಳ ಪತಿಯೂ ಭೂಮಿಗೆ ಬಂದು ವಿಶ್ರಾಂತಿಗಾಗಿ ದೇವಾಲಯವೊಂದರ ಬಳಿ ಹೋದಾಗ ಅವಳನ್ನು ಹಾಡಲು ಅವಳ ಪತಿ ಕೇಳುತ್ತಾನೆ. ಅವಳು ಮಧುರವಾಗಿ ಹಾಡುತ್ತಿದ್ದಾಗ ಅದನ್ನು ಕೇಳಿ ಅಲ್ಲಿಗೆ ಹರಿವರನೆಂಬ ರಾಜ ಬಂದಾಗ ಇಬ್ಬರೂ ಪ್ರೇಮಿಸುತ್ತಾರೆ. ಅವಳ ಗಂಡ ನಿದ್ರೆ ಮಾಡುತ್ತಿದ್ದಾಗ ರಾಜ ಹರಿವರನೊಡನೆ ಮದನಮೋಹಿತೆಯಾದ ಅವಳು ಹೋಗಿಬಿಡುತ್ತಾಳೆ. ಜೀವದತ್ತನು ಎದ್ದಮೇಲೆ ಅವಳ ವಂಚನೆಯನ್ನು ಅರಿತು ವೈರಾಗ್ಯಶೀಲನಾಗಿ ತಪಸ್ಸನ್ನು ಆಚರಿಸಿ ದೇವಿಯ ಅನುಗ್ರಹದಿಂದ ಶಾಪವಿಮುಕ್ತನಾಗಿ ಹಿಂದಿನ ಸ್ವರೂಪವಾದ ಗಣನಾಗುತ್ತಾನೆ.

ಇತ್ತ ಅನಂಗಪ್ರಭೆಯು ನಾಟ್ಯ ಕಲಿಸುವ ನಾಟ್ಯಾಚಾರ್ಯನೊಂದಿಗೇ ಹೋಗಿಬಿಡುತ್ತಾಳೆ.

ಹರಿವರನಿಗೆ ನಿರಾಸೆ, ದುಃಖ, ವಿರಹಗಳು. ಆದರೆ ಮಂತ್ರಿಯು ಬುದ್ಧಿ ಹೇಳುತ್ತಾನೆ. ವಿಲಾಸಿನಿಯರು ಸಂಧ್ಯೆಯಂತೆ ಕ್ಷಣರಾಗಿಣಿಯರು. ಅವರ ಅನುರಾಗ ಕ್ಷಣಿಕ. ಇದು ರಾಜನನ್ನು ಚಿಂತಿಸುವಂತೆ ಮಾಡುತ್ತದೆ. ಈ ವಿಲಾಸಿನಿಯರ ಸಂಬಂಧವು ಭುವಸ್ಥಿತಿಯಂತೆ ಅಶಾಶ್ವತ, ಪರ್ಯಂತವಿರಸವಾದದ್ದು, ಕಷ್ಟಕರ, ಪ್ರತಿಕ್ಷಣವಿವರ್ತಿನಿಯಾದದ್ದು. ಬಿದ್ದವನನ್ನು ಮುಳುಗಿಸುವ. ಉತ್ಕಂಠೆಯನ್ನು ಹೆಚ್ಚಿಸುವ, ಆಳವೇ ತಿಳಿಯದ ಸ್ತ್ರೀಯರಲ್ಲೂ ನದಿಗಳಲ್ಲೂ ಪ್ರಾಜ್ಞರಾದವರು ಬೀಳುವುದಿಲ್ಲ. ವ್ಯಸನಗಳಲ್ಲಿ ಉದ್ವೇಗರಹಿತನೂ ಐಶ್ವರ್ಯಗಳಲ್ಲಿ ಗರ್ವರಹಿತನೂ, ಕರ್ತವ್ಯಗಳಲ್ಲಿ ನಿಷ್ಠನೂ ಆಗಿರುವವನೇ ಧೀರನು. ಅವನು ಜಗತ್ತನ್ನೇ ಜಯಿಸುತ್ತಾನೆ, ಎಂದು ಹೇಳಿಕೊಂಡು ರಾಜನು ಸಮಾಧಾನಪಟ್ಟುಕೊಳ್ಳುತ್ತಾನೆ.

ಇತ್ತ ಅನಂಗಪ್ರಭೆಯು ದ್ಯೂತದಲ್ಲಿ ಎಲ್ಲವನ್ನೂ ಕಳೆದುಕೊಂಡ ಪತಿಯನ್ನು ಬಿಟ್ಟು ಅವನನ್ನು ಸೋಲಿಸಿದವನ ಬಳಿಯೇ ಹೋಗಿಬಿಡುತ್ತಾಳೆ. ಆದರೆ ಅವನ ದುರದೃಷ್ಟದಿಂದ ಅವನ ಸರ್ವಸ್ವವೂ ಕಳವಾಗುತ್ತದೆ. ಆಗ ಒಬ್ಬ ವ್ಯಾಪಾರಿಯ ಮನೆಗೆ ಹಣ ಯಾಚಿಸಲು ಅನಂಗಪ್ರಭೆಯ ಸಂಗಡ ಅವಳ ಗಂಡ ಹೋದಾಗ ವ್ಯಾಪಾರಿಯ ಕಣ್ಣು ಇವಳ ಮೇಲೆ ಬಿದ್ದು, ಇವಳೂ ಅವನಿಗೆ ಮಾರುಹೋಗಿ ಅವನೊಡನೆಯೇ ಇದ್ದುಬಿಡುತ್ತಾಳೆ. ಮುಂದೆ ಆ ವರ್ತಕರು ವಾಣಿಜ್ಯಕ್ಕಾಗಿ ಅನಂಗಪ್ರಭೆಯೊಡನೆ ಹಡಗಿನಲ್ಲಿ ಹೊರಟಾಗ ಹಡಗು ಮುಳುಗಿಹೋಗುತ್ತದೆ. ಇವಳನ್ನು ನಾವಿಕನಾಯಕನಾದ ಸಾಗರದಿಂದ ಕಾಪಾಡಿ ದಡ ಸೇರಿಸುತ್ತಾನೆ. ಆಗ ಅವನನ್ನು ವರಿಸಿ ಅವನೊಡನೆಯೇ ಇದ್ದುಬಿಡುತ್ತಾಳೆ. ಮುಂದೆ ಮಾಯವರ್ಮನೆಂಬ ಕ್ಷತ್ರಿಯ ಕುಮಾರನನ್ನು ಸೇರಿ ಕೊನೆಗೆ ಆನೆಯ ಮೇಲೆ ಬರುತ್ತಿದ್ದ ರಾಜನನ್ನು ನೋಡಿ ಆನೆಯ ಸವಾರಿಮಾಡುವ ಆಸೆಯನ್ನು ಪ್ರಕಟಪಡಿಸಿ ಆನೆಯನ್ನು ಹತ್ತಿ, ಅವನೊಡನೆ ಹೋಗಿಬಿಡುತ್ತಾಳೆ. ಅಲ್ಲಿಗೆ ಅವಳ ಕಾಮಪ್ರಯಾಣ ಮುಗಿಯುತ್ತದೆ. ಅವನೊಡನೆ ನದಿಯು ಸಾಗರವನ್ನು ಸೇರುವಂತೆ ಸೇರಿ, ನಿರಂತರವಾಗಿ ನೆಲೆ ನಿಲ್ಲುತ್ತಾಳೆ. ಅವರಿಗೆ ಸಮುದ್ರವರ್ಮನೆಂಬ ಪುತ್ರನು ಹುಟ್ಟಿ ಬೆಳೆದು ರಾಜನಾಗುತ್ತಾನೆ. ಸಾಗರವರ್ಮನು ಪ್ರಯಾಗಕ್ಕೆ ಹೋಗಿ ತಪಸ್ಸು ಮಾಡುತ್ತಾರೆ. ಶಂಕರನು ಪ್ರತ್ಯಕ್ಷನಾಗಿ ಅನಂಗಪ್ರಭೆಯು ರಾಜನೂ ಶಾಪಗ್ರಸ್ತ ವಿದ್ಯಾಧರೆಯೆಂಬ ವಿಷಯ ತಿಳಿಸುತ್ತಾನೆ. ಇಬ್ಬರಿಗೂ ಶಾಪವಿಮೋಚನೆಯಾಗಿ ವಿದ್ಯಾಧರರಾಗಿ ತಮ್ಮ ಲೋಕಕ್ಕೆ ಹೋಗಿಬಿಡುತ್ತಾಳೆ.

ಇದರ ಸಾರವೆಂದರೆ ದುರ್ನಯ ವಿವೇಕದಿಂದ ಗಗನಚರರೂ ಶಾಪಕ್ಕೆ ಒಳಗಾಗಿ ಮನುಷ್ಯಲೋಕಕ್ಕೆ ಬರುತ್ತಾರೆ. ಹಾಗೂ ತದುಚಿತವಾದ ಫಲವನ್ನು ಅನುಭವಿಸಿ ತಮ್ಮ ಗತಿಯನ್ನು ಹೊಂದುತ್ತಾರೆ.

ಮೂರನೆಯ ತರಂಗವು ಲಕ್ಷದತ್ತನೆಂಬ ರಾಜ ಹಾಗೂ ಲಬ್ಧದತ್ತನೆಂಬ ಕಪ್ಪಡಿಗನ ಕಥೆಯೊಂದಿಗೆ ಆರಂಭವಾಗುತ್ತದೆ. ನರವಾಹನದತ್ತನ ಬಳಿ ಮರುಭೂತಿಯು, ಸಿಂಹದ್ವಾರದ ಬಳಿ ಅಹರ್ನಿಶಿ ಕಾವಲುಕಾಯುತ್ತಾ ನಿಂತಿರುವ ಕಾರ್ಪಟಿಕನಿಗೆ ಯಾವ ಅನುಗ್ರಹವನ್ನೂ ಮಾಡುತ್ತಿಲ್ಲವೇಕೆ ಎಂದು ಕೇಳಿ ಸಕಾಲದಲ್ಲೂ ಕೊಟ್ಟದ್ದು ಅಲ್ಪವಾದರೂ ಅದು ಶ್ರೇಷ್ಠವಾದದ್ದು. ಅಕಾಲದಲ್ಲಿ ಕೊಟ್ಟ ಹಣ ಅಧಿಕವಾಗಿದ್ದರೂ ನಿಷ್ಪ್ರಯೋಜಕ. ಇವನು ಸಾಯುವುದರೊಳಗಾಗಿ ದಯೆ ತೋರು ಎನ್ನುತ್ತಾನೆ. 'ಕಾಲೇ ದತ್ತಂ ವರಂ ಹ್ಯಲ್ಪಮಕಾಲೇ ಬಹುನಾಪಿ ಕಿಂ? ತದ್ಯಾವನ್‌ಮ್ರಿಯತೇ ನೃಷ ತಾವದಸ್ಯ ಕೃಪಾಂ ಕುರು.' ಇದು ಎಲ್ಲ ಕಾಲಕ್ಕೂ ಅನ್ವಯಿಸುವ ಗುಣಗ್ರಾಹಿತ್ವದ ಸೂತ್ರ.

ಈ ಮಾತನ್ನು ಕೇಳಿ ಗೋಮುಖನು ಪ್ರತಿಬಂಧಕವಾದ ಪಾಪವು ಎಲ್ಲಿಯವರೆಗೆ ನಾಶವಾಗುವುದಿಲ್ಲವೋ ಅಲ್ಲಿಯವರೆಗೆ ದಾನ ಕೊಡಬೇಕೆಂಬ ಮನಸ್ಸುಳ್ಳ ಪ್ರಭುವೂ ದಾನ ಮಾಡಲು ಸಮರ್ಥನಾಗುವುದಿಲ್ಲ. ಪಾಪವು ಸಂಪೂರ್ಣವಾಗಿ ಕ್ಷೀಣವಾದಾಗ ಬೇಡವೆಂದು ತಡೆದರೂ ಪ್ರಭುವು ಕೊಡುತ್ತಾನೆ. ಇದು ಕರ್ಮಾಧೀನ, ಎಂದು ಪ್ರತಿವಾದಿಸಿ ರಾಜನ ಚರ್ಯೆಗೆ ಕರ್ಮದ ಕಾರಣವನ್ನು ಕೊಡುತ್ತಾನೆ. ಸ್ವಸಿದ್ಧಾಂತ ಸಮರ್ಥನೆಗೆ ರಾಜ ಲಕ್ಷದತ್ತ ಹಾಗೂ ಅವನ ಬಳಿ ಇದ್ದ ಕಾರ್ಪಟಿಕನ ಕಥೆಯನ್ನು ಹೇಳುತ್ತಾನೆ.

ಲಕ್ಷದತ್ತನೆಂಬ ಮಹಾದಾನಿಯಾದ ರಾಜನ ಸಿಂಹದ್ವಾರದಲ್ಲಿ ಲಬ್ಧದತ್ತನೆಂಬ ಕಪ್ಪಡಿಗ ರಾತ್ರಿ ಹಗಲು ಕಾವಲು ನಿಂತಿರುತ್ತಿದ್ದ. ಅವನು ಧರಿಸಿದ್ದ ಬಟ್ಟೆಯೆಂದರೆ ಒಂದು ಚರ್ಮದ ಚೂರು ಮಾತ್ರ ರಾಜನು ಬೇಟೆಗೆ ಹೋದಾಗ ಅವನನ್ನು ಅನುಸರಿಸಿ ಹೋಗಿ ಕೇವಲ ದೊಣ್ಣೆಯಿಂದಲೇ ವನ್ಯಮೃಗಗಳನ್ನು ಅನಾಯಾಸವಾಗಿ ಸಂಹರಿಸಿಬಿಡುತ್ತಿದ್ದ. ರಾಜನು ಗೋತ್ರಜರೊಡನೆ ಯುದ್ಧಕ್ಕೆ ಹೋದಾಗ ದಂಡಪಾಣಿಯಾಗಿಯೇ ಹೋರಾಡಿ ರಾಜನ ಗೆಲುವಿಗೆ ಕಾರಣನಾಗುತ್ತಾನೆ. ಆದರೆ ರಾಜನು ಇದಕ್ಕೆಲ್ಲ ಪ್ರತಿಯಾಗಿ ಅವನಿಗೆ ಏನನ್ನೂ ಕೊಡುವುದಿಲ್ಲ.

ಹೀಗೆ ಐದು ವರ್ಷಗಳು ಕಳೆಯುತ್ತವೆ. ಈ ನಿರ್ಭಾಗ್ಯನ ಪಾಪಕ್ಷಯವಾಗಿದೆಯೋ ಇಲ್ಲವೋ ಎಂದು ಪರೀಕ್ಷಿಸಲು ರಾಜನು ಅವನನ್ನು ಆಸ್ಥಾನಕ್ಕೆ ಕರೆಸಿ ಒಂದು ಆರ್ಯೆಯನ್ನು ಪಠಿಸಲು ಹೇಳುತ್ತಾನೆ. ಅವನು ಈ ಆರ್ಯೆಯನ್ನು ಹೇಳುತ್ತಾನೆ.

ಪೂರಯತಿ ಪೂರ್ಣಮೇಷಾ ತರಂಗಿಣೀಸಂಹತಿಃ ಸಮುದ್ರಮಿವ ।
ಲಕ್ಷ್ಮೀರಧನಸ್ಯ ಪುನರ್ಲೋಚನಮಾರ್ಗೇಽಪಿ ನಾಯಾತಿ ॥

ನದಿಗಳು ಸಮುದ್ರವನ್ನೇ ಸೇರುವಂತೆ ಲಕ್ಷ್ಮಿಯು ಶ್ರೀಮಂತನನ್ನೇ ಸೇರಿ ಅವನನ್ನು ಶ್ರೀಮಂತಗೊಳಿಸುತ್ತಾಳೆ. ಬಡವನ ಕಡೆ ಅವಳು ಕಣ್ಣೆತ್ತಿಯೂ ನೋಡುವುದಿಲ್ಲ ಎಂಬುದು ಇದರ ಅರ್ಥ.

ರಾಜನು ಅವನಿಗೊಂದು ದಾಳಿಂಬೆ ಹಣ್ಣನ್ನು ಕೊಟ್ಟು ಕಳುಹಿಸುತ್ತಾನೆ. ಎಲ್ಲರಿಗೂ ನಿರಾಸೆ. ಇವನಿಗೆ ಅದೃಷ್ಟವಿಲ್ಲ ಎಂದು ವಿಷಾದ ಪಡುತ್ತಾರೆ. ಕಾರ್ಪಟಿಕನು ಆ ಹಣ್ಣನ್ನು ಒಬ್ಬ ಭಿಕ್ಷುವಿಗೆ ಮಾರಿಬಿಡುತ್ತಾನೆ. ಅವನು ಅದೇ ಹಣ್ಣನ್ನು ರಾಜನಿಗೆ ಅರ್ಪಿಸುತ್ತಾನೆ. ರಾಜನು ಮತ್ತೆ ಸಭೆಯನ್ನು ಕರೆದು ಆರ್ಯೆಯನ್ನು ಪಠಿಸಲು ಹೇಳಿ ದಾಳಿಂಬೆ ಹಣ್ಣನ್ನು ಕೊಡುತ್ತಾನೆ. ಅವನು ಅದನ್ನು ಮಾರಿ ಅದು ರಾಜನ ಕೈಗೇ ತಲಪುತ್ತದೆ. ಹೀಗೆ ಮೂರುಬಾರಿ ನಡೆದು ನಾಲ್ಕನೆಯಬಾರಿ ಕೊಡುವಾಗ ಆ ಹಣ್ಣು ಕೈಜಾರಿ ಕೆಳಗೆ ಬೀಳುತ್ತದೆ. ಆಗ ಅದು ಒಡೆದು ಅದರೊಳಗಿನಿಂದ ಮುತ್ತುರತ್ನಗಳು ಹೊರಬೀಳುತ್ತವೆ. ಆಗ ರಾಜನ ಔದಾರ್ಯ ಎಲ್ಲರಿಗೂ ತಿಳಿಯುತ್ತದೆ. ಇವನಿಗೆ ಪಾಪಕ್ಷಯವಾಗಿದೆಯೋ ಇಲ್ಲವೋ ಎಂದು ಪರೀಕ್ಷಿಸಲು ನಾನು ಹೀಗೆ ಮಾಡಿದೆ. ಇವನಿಗೆ ಇಂದು ಪಾಪಕ್ಷಯವಾಗಿದೆ ಎಂದು ಹೇಳಿ ರಾಜನು ಆ ಕಾರ್ಪಟಿಕನಿಗೆ ಸಕಲೈಶ್ವರ್ಯವನ್ನೂ ಕೊಟ್ಟು ಸಾಮಂತನನ್ನಾಗಿ ಮಾಡುತ್ತಾನೆ.

ಗೋಮುಖನು ಹೇಳಿದ ಈ ಕಥೆಯ ಒಳಮರ್ಮವನ್ನು ಅರಿತ ರಾಜನು ಕಾರ್ಪಟಿಕನಿಗೆ ಕರುಣೆಯಿಂದ ಐಶ್ವರ್ಯವನ್ನು ಕೊಟ್ಟು ತನಗೆ ಸಮಾನನಂತೆ ಮಾಡುತ್ತಾನೆ.

ಆಗ ದಕ್ಷಿಣದಿಂದ ಪ್ರಲಂಬಬಾಹು ಎಂಬ ಬ್ರಾಹ್ಮಣ ಯುವಕ ಬಂದು ನೂರು ಸುವರ್ಣನಾಣ್ಯಗಳ ವೃತ್ತಿಯನ್ನು ಕೇಳಿ ತಾನು ಅದಕ್ಕಾಗಿ ರಾಜನನ್ನು ಜಲ, ಸ್ಥಳ, ಆಕಾಶಗಳಲ್ಲಿ ಎಲ್ಲಿದ್ದರೂ ಅನುಸರಿಸಿ ಸೇವಿಸುವಾಗಿ ಹೇಳುತ್ತಾನೆ. ನರವಾಹನದತ್ತನು ಅವನು ಕೇಳಿದ ವೃತ್ತಿಯನ್ನು ಅವನಿಗೆ ನೀಡುತ್ತಾನೆ. ಪುಣ್ಯವಂತ ರಾಜನಿಗೆ ಇಂತಹ ಸೇವಕರು ಸಿಗುತ್ತಾರೆ ಎಂದು ಗೋಮುಖನು ಹೇಳಿ ಅದಕ್ಕೆ ನಿದರ್ಶನವಾಗಿ ವೀರವರನ ಕಥೆಯನ್ನು ಹೇಳುತ್ತಾನೆ.

ವೀರವರನೆಂಬ ಮಹಾಶೂರನು ವಿಕ್ರಮತುಂಗನೆಂಬ ರಾಜನ ಬಳಿ ಬಂದು ವೃತ್ತಿಗಾಗಿ ಪ್ರಾರ್ಥಿಸಿ ಪ್ರತಿದಿನವೂ ೫೦೦ ದೀನಾರಗಳನ್ನು ಕೊಡುವಂತೆ ಪ್ರಾರ್ಥಿಸುತ್ತಾನೆ. ರಾಜನು ಅವನು ಕೇಳಿದ ವೃತ್ತಿಯನ್ನು ಕೊಡುತ್ತಾನೆ. ಅವನು ಪ್ರತಿದಿನವೂ ರಾತ್ರಿ ಹಗಲೆನ್ನದೆ ಸಿಂಹದ್ವಾರದಲ್ಲಿ ಆಯುಧಪಾಣಿಯಾಗಿ ನಿಲ್ಲುತ್ತಾನೆ. ಒಂದು ರಾತ್ರಿ ಸ್ತ್ರೀಯೊಬ್ಬಳ ಆಕ್ರಂದನವನ್ನು ಕೇಳಿ ರಾಜನು ವಿಚಾರಿಸಲೆಂದು ವೀರವರನನ್ನು ಕಳುಹಿಸುತ್ತಾನೆ. ತಾನೂ ಗುಪ್ತವಾಗಿ ಅವನನ್ನು ಹಿಂಬಾಲಿಸಿ ಹೋಗುತ್ತಾನೆ.

ವೀರವರನು ಅಲ್ಲಿಗೆ ಹೋಗಿ ನೋಡಿದಾಗ ಅಲ್ಲಿ ಭೂದೇವಿಯು ಅಳುತ್ತಿರುತ್ತಾಳೆ. ಕಾರಣ ಕೇಳಿದಾಗ ರಾಜನಾದ ವಿಕ್ರಮತುಂಗನು ಇನ್ನು ಮೂರು ದಿನಗಳಲ್ಲಿ ಮರಣ ಹೊಂದುವುದಾಗಿಯೂ, ವೀರವರನು ತನ್ನ ಪುತ್ರನನ್ನು ಬಲಿಕೊಟ್ಟರೆ ರಾಜನು ಬದುಕುವುದಾಗಿಯೂ ಹೇಳುತ್ತಾಳೆ. ವೀರವರನು ರಾಜನಿಷ್ಠೆಯಿಂದ ಪುತ್ರನನ್ನು ಬಲಿಕೊಡುತ್ತಾನೆ. ಪುತ್ರನೂ ರಾಜನಿಗಾಗಿ ಸಂತೋಷದಿಂದಲೇ ಒಪ್ಪುತ್ತಾನೆ. ವೀರವರನ ಪುತ್ರಿಗೆ ಇದರಿಂದ ಹೃದಯಾಘಾತವಾಗಿ ಮರಣ ಹೊಂದುತ್ತಾಳೆ. ಇದನ್ನು ನೋಡಿ ಅವನ ಹೆಂಡತಿ ಇನ್ನೂ ತಾನು ಬದುಕಿ ಏನು ಪ್ರಯೋಜನ ಎಂದು ಚಿತೆಯೇರುತ್ತಾಳೆ. ಆಗ ತಾನೂ ಅಂಬಿಕೆಯನ್ನು ಆತ್ಮಾರ್ಪಣೆಯಿಂದ ಅರ್ಚಿಸಲು ತೀರ್ಮಾನಿಸಿ ಚಂಡಿಕೆಯ ಮುಂದೆ ತನ್ನ ಶಿರಸ್ಸನ್ನು ಕತ್ತರಿಸಿಕೊಳ್ಳಲು ವೀರವರನು ಉದ್ಯುಕ್ತನಾದಾಗ ಅಂಬಿಕೆಯು ಪ್ರತ್ಯಕ್ಷಳಾಗಿ ಅವನನ್ನು ತಡೆದು ವರ ಕೇಳೆಂದು ಹೇಳಿದಾಗ ರಾಜಾ ವಿಕ್ರಮತುಂಗನು ಬದುಕಲಿ, ತನ್ನ ಹೆಂಡತಿ ಮಕ್ಕಳು ಜೀವಿತರಾಗಲಿ ಎಂದು ಕೇಳುತ್ತಾನೆ. ಚಂಡಿಕೆಯು ಆ ವರವನ್ನು ನೀಡುತ್ತಾಳೆ. ಅನಂತರ ಏನೂ ಆಗದವನಂತೆ ವೀರವರನು ಹಿಂದಿರುಗಿ ಬಂದು ಸಿಂಹದ್ವಾರದಲ್ಲಿ ನಿಲ್ಲುತ್ತಾನೆ. ರಾಜನು ಇದೆಲ್ಲವನ್ನೂ ನೋಡಿ ಭ್ರಮಿಸುತ್ತಾನೆ. ಅವನೂ ಗುಪ್ತವಾಗಿ ಪ್ರಾಸಾದಕ್ಕೆ ಬಂದು "ವಿಚಾರಿಸಿ ಬಂದೆಯಾ' ಎಂದು ವೀರವರನನ್ನು ಕೇಳುತ್ತಾನೆ. ಅದಕ್ಕೆ ಅವನು ಯಾರೋ ದೇವತೆಯು ಕಾಣಿಸಿಕೊಂಡು ಅದೃಶ್ಯಳಾಗಿಬಿಟ್ಟಳು ಎಂದು ಹೇಳಿಬಿಡುತ್ತಾನೆ. ಅವನು ಮಾಡಿದ ತ್ಯಾಗದ ಬಗ್ಗೆ ಹೇಳಿಕೊಳ್ಳುವುದೇ ಇಲ್ಲ. ರಾಜನು ಇವನು ಅಪೂರ್ವವಾದ ಅನಿರ್ವಚನೀಯವಾದ ಪುರುಷಶ್ರೇಷ್ಠ ಪ್ರಶಂಸನೀಯವಾದ ಕಾರ್ಯವನ್ನು ಮಾಡಿದರೂ ಅದರ ಬಗ್ಗೆ ಹೇಳಿಕೊಳ್ಳುವುದಿಲ್ಲ ಎಂದುಕೊಂಡು ಅನಂತರ ಅವನಿಗೆ ಪಟ್ಟಾಧಿಕಾರ ಕೊಟ್ಟು ರಾಜನಿಗೆ ಸಮಾನನಾಗಿ ಮಾಡುತ್ತಾನೆ.

ಗೋಮುಖನು ಈ ಕಥೆಯನ್ನು ಹೇಳಿ ರಾಜರಿಗೆ ಪುಣ್ಯಯೋಗದಿಂದ ಏಕವೀರರಾದ ಸೇವಕರು ದೊರಕುತ್ತಾರೆ. ಅವರು ಪ್ರಭುವಿಗೋಸ್ಕರ ದೇಹದ ಮೇಲೆ ಆಸೆಯನ್ನು ಬಿಟ್ಟು ಇಹಪರಗಳೆರಡನ್ನೂ ಜಯಿಸುತ್ತಾರೆ.

ಏವಂ ದೇವ ಕ್ಷ್ಮಾಭೃತಾಮೇಕವೀರಾಃ

ಭೃತ್ಯಾಃ ಕೇಚಿತ್ ಪುಣ್ಯಯೋಗಾನ್ಮಿಲಂತಿ ।
ಯೇ ಸ್ವಾಮ್ಯರ್ಥೇ ತ್ಯಕ್ತದೇಹಾದ್ಯಪೇಕ್ಷಾಃ
ಸಮ್ಯಗ್ಲೋಕೌ ದ್ವೌ ಸುಸತ್ತ್ವಾ ಜಯಂತಿ ॥ ಎಂದು ಹೇಳಿ ನಿಗಮನಗೊಳಿಸುತ್ತಾನೆ.

ಈ ತರಂಗದಲ್ಲಿ ಸುಭಾಷಿತಗಳೂ ಅನುಭವದ ಹೇಳಿಕೆಗಳೂ ವಿರಳವಾದ ವರ್ಣನೆಗಳೂ ನಡುನಡುವೆ ಬಂದು ತರಂಗಕ್ಕೆ ಶೋಭೆಯನ್ನು ಕೊಡುತ್ತವೆ. ಕಾರ್ಪಟಿಕನು ಹೇಳಿದ "ಲಕ್ಷ್ಮಿಯು ಶ್ರೀಮಂತರನ್ನೇ ಶ್ರೀಮಂತರಾಗಿಸುತ್ತಾಳೆ, ಬಡವನ ಮೇಲೆ ಕಣ್ಣು ಹಾಯಿಸುವುದಿಲ್ಲ' ಎಂಬ ಮಾತು ಎಲ್ಲ ಕಾಲದಲ್ಲೂ ಬಡವರೆಲ್ಲರ ನೋವಿನ ಮಾತಿನ ಪ್ರತಿನಿಧಿಯಾಗಿ ನಿಲ್ಲುತ್ತದೆ.

ರಾಜ ವಿಲಾಸಿನಿಯೊಬ್ಬಳು ಕಾರ್ಪಟಿಕನು ಕೊಟ್ಟ ದಾಳಿಂಬೆಯನ್ನು ತೆಗೆದುಕೊಂಡು ರಾಜನ ಬಳಿ ಬಂದಾಗ ಅವಳನ್ನು ಕವಿಯು ರಾಜಸಂಮಾನತರುವಲ್ಲೀವ ಜಂಗಮಾ ಎಂದು ಒಂದೇ ಸಾಲಿನಲ್ಲಿ ವರ್ಣಿಸುತ್ತಾನೆ. ಅವಳು ಸಂಚರಿಸುತ್ತಿರುವ ರಾಜಸಂಮಾನವೆಂಬ ಗಿಡದ ಬಳ್ಳಿಯೋ ಎಂಬಂತಿದ್ದಳಂತೆ.

ರಾಜಾ ವಿಕ್ರಮತುಂಗನ ವರ್ಣನೆ ಇದು. ನೀತಿವಂತನಾದ ಆ ರಾಜನಲ್ಲಿ ತೀಕ್ಷ್ಣತೆಯೆಂಬುದು ಖಡ್ಗದ ಅಲುಗಿನಲ್ಲಿತ್ತೇ ವಿನಾ ಶಿಕ್ಷೆಯ ವಿಧಾನದಲ್ಲಿರಲಿಲ್ಲ. ಸತತಾಸಕ್ತಿಯು ಧರ್ಮದಲ್ಲಿತ್ತೇ ವಿನಾ ಸ್ತ್ರೀಯರಲ್ಲೋ ಬೇಟೆಯಲ್ಲೋ ಇರಲಿಲ್ಲ. ಗುಣದ (ಹುರಿಯ) ಚ್ಯುತಿಯು ಧನುಸ್ಸಿನಲ್ಲಿ ಮಾತ್ರವಿತ್ತು. ಇಲ್ಲಿ ಗುಣವೆಂದರೆ ಬಿಲ್ಲಿನ ನಾರು ಹಾಗೂ ಗುಣಗಳು. ನಾರಿನ ರೂಪದ ಗುಣವು ಹರಿಯುತ್ತಿತ್ತೇ ವಿನಾ ಗುಣಗಳ ಚ್ಯುತಿಯಿರಲಿಲ್ಲ. ಅವಿಚಾರವು ಕೊಟ್ಟಿಗೆಯಲ್ಲಿ ಮಾತ್ರ, ಬುದ್ಧಿಯಲ್ಲಿರಲಿಲ್ಲ. ಇಲ್ಲಿ ಅವಿ–ಚಾರ ಎಂದು ಪದಚ್ಛೇದ ಮಾಡಿದಾಗ ಅವಿ ಎಂದರೆ ಕುರಿ ಎಂಬರ್ಥದಲ್ಲಿ ಕುರಿಗಳ ಸಂಚಾರ ಕೊಟ್ಟಿಗೆಯಲ್ಲಿ. ಅ–ವಿಚಾರವು ಬುದ್ಧಿಯಲ್ಲಿರಲಿಲ್ಲ. ಹೀಗೆ ಶ್ಲೇಷೆಯಿಂದ ಹಾಗೂ ವಿಭಿನ್ನ ರೀತಿಯ ಪದಚ್ಛೇದದಿಂದ ಉಂಟಾಗುವ ಸ್ವಾರಸ್ಯವೇ ಇಲ್ಲಿಯ ಸೌಂದರ್ಯ.

ವರ್ಷಾಕಾಲ ಬಂದಾಗ, ಮಹಾಶೂರನಾದ ವೀರವರನಿಗೆ ಸಂಬಂಧಪಟ್ಟಂತೆ ಅದರ ಒಂದು ಸಾಲಿನ ವರ್ಣನೆ ಇದು. ಶೂರರ ಪ್ರತಾಪವನ್ನು ಸಹಿಸದೆ ವರ್ಷಾಕಾಲವು ವೀರವರನನ್ನು ಗೆಲ್ಲಲು ಇಚ್ಛಿಸುವುದೋ ಎಂಬಂತೆ ಭಯಂಕರವಾಗಿ ಗರ್ಜಿಸುತ್ತಾ ಬಂದು ಧಾರಾರೂಪವಾದ ಬಾಣಗಳನ್ನು ವರ್ಷಿಸಿತಂತೆ.

ಈ ತರಂಗದಲ್ಲಿ ಇರುವ ದೇವೀಸ್ತುತಿಯನ್ನು ಅದರ ಆಧ್ಯಾತ್ಮಿಕ ಆಯಾಮಕ್ಕಾಗಿ ಗಮನಿಸಬೇಕು. ಅಂದಿನ ದೇವೀಸ್ವರೂಪ ಪರಿಕಲ್ಪನೆ ಇದರಿಂದ ಸ್ಪಷ್ಟವಾಗುವುದಲ್ಲದೆ ಭಾವುಕರಿಗೆ ಭಕ್ತಿಯ ಸಂಸ್ಪರ್ಶವನ್ನು ಕೊಡುತ್ತದೆ. ಇದರಲ್ಲಿ ದೇವಿಯ ಅನಂತ ಕಲ್ಯಾಣಗುಣಗಣಗಳನ್ನೂ ಶಕ್ತಿಯನ್ನೂ ವ್ಯಾಪ್ತಿಯನ್ನೂ ವರ್ಣಿಸಲಾಗಿದೆ. ಇದು ಇಲ್ಲಿಯ ಒಂದು ವಿಶಿಷ್ಟವಾದ ಭಾಗವಾಗಿ ಶೋಭಿಸುತ್ತದೆ. ವೀರವರನು ಚಂಡಿಕೆಗೆ ತನ್ನ ಶಿರಸ್ಸನ್ನು ಅರ್ಪಿಸುವ ಮೊದಲು ದೇವಿಯನ್ನು ಸ್ತುತಿಸುತ್ತಾನೆ. ಅವಳು ಪ್ರಣತಾಭಯದಾಯಿನೀ, ಪ್ರಾಣಶಕ್ತಿ. ಅವಳಿಂದಲೇ ಈ ಜಗತ್ತು ಚಲಿಸುವುದು. ಸೃಷ್ಟಿಯ ಆದಿಯಲ್ಲಿ ಸ್ವಯಂಭೂತಳಾದ ಇವಳನ್ನು ಶಂಭುವು ಸ್ವಯಂ ನೋಡಿದನು. ಅವಳ ತೇಜಸ್ಸು ನೋಡಲಸಾಧ್ಯವಾದುದು. ಅವಳು ಅದರಿಂದ ಎಲ್ಲವನ್ನೂ ಬೆಳಗಿಸುತ್ತಾಳೆ. ಅವಳು ಉಚ್ಚಂಡಾಕಾಂಡ ಬಾಲಾರ್ಕ ಕೋಟಿಪಂಕ್ತಿಯಂತೆ ಉದಯಿಸಿದಳು. ಅವಳ ಬಾಹುಗಳಲ್ಲಿ ಖಡ್ಗ, ಖೇಟಕ, ಕೋದಂಡ,

ಶರ, ಶೂಲ ಮುಂತಾದ ಆಯುಧಗಳಿವೆ. ಅವಳು ವಿಭು. ದಿಗಂತಗಳನ್ನು ವ್ಯಾಪಿಸಿರುವವಳು. ಅವಳು ಚಂಡಿ, ಚಾಮುಂಡಾ, ಮಂಗಳೆ, ತ್ರಿಪುರೆ, ಜಯೆ, ಅದ್ವಿತೀಯಳಾಗಿ ಅಂಶರಹಿತಳು. ಶಿವೆ, ದುರ್ಗೆ, ನಾರಾಯಣಿ, ಸರಸ್ವತಿ, ಭದ್ರಕಾಳಿ, ಮಹಾಲಕ್ಷ್ಮಿ, ಸಿದ್ಧೆ, ಗಾಯತ್ರಿ, ಮಹಾರಾಜ್ಞೀ, ರೇವತೀ, ವಿಂಧ್ಯವಾಸಿನೀ, ಕಾತ್ಯಾಯನೀ, ಶರ್ವಪರ್ವತವಾಸಿನೀ, ಈ ನಾಮಗಳಿಂದ ಶಿವನೇ ಅವಳನ್ನು ಸ್ತುತಿಸಿದ್ದಾನೆ. ಅದನ್ನು ಕೇಳಿ ಸ್ಕಂದ, ವಸಿಷ್ಠ ಬ್ರಹ್ಮಾದಿಗಳು ಅವಳನ್ನು ಸ್ತುತಿಸಿದರು. ಅವಳನ್ನು ಸ್ತುತಿಸಿದ ದೇವತೆಗಳೂ, ಋಷಿಗಳೂ, ಮನುಷ್ಯರೂ ತಮ್ಮ ಇಷ್ಟಾರ್ಥಕ್ಕಿಂತ ಅಧಿಕವಾಗಿಯೇ ಸಿದ್ಧಿ ಹೊಂದಿದರು ಮತ್ತು ಈಗಲೂ ಹೊಂದುತ್ತಿದ್ದಾರೆ.

ಹೀಗೆ ದುರ್ಗೆಯ ವಿರಾಡ್ರೂಪವನ್ನು ತೋರಿಸಿ ಭಕ್ತಿಗೂ ಈ ತರಂಗವು ಒಂದು ಸ್ಥಳವನ್ನು ಕೊಟ್ಟಿದೆ. ಈ ಸ್ತುತಿ ಸನ್ನಿವೇಶವು ಈ ತರಂಗಕ್ಕೆ ಒಂದು ದೈವೀ ಮುಕ್ತಾಯವನ್ನು ಕೊಟ್ಟಿದೆ.

ನಾಲ್ಕನೆಯ ತರಂಗದಲ್ಲಿ ಸಮುದ್ರಶೂರನ ಕಥೆ ಹಾಗೂ ಚಮರವಾಲನ ಕಥೆಗಳು ಬರುತ್ತವೆ. ಪ್ರಾರಂಭದಲ್ಲೇ ನರವಾಹನದತ್ತನಿಗೆ ಶ್ರೀಹರಿಯ ದರ್ಶನದ ಭಾಗ್ಯ ಲಭಿಸುವ ಸನ್ನಿವೇಶವಿದೆ. ಈ ಸಂದರ್ಭದಲ್ಲಿ ಬರುವ ಸ್ತುತಿಯೆ ಈ ತರಂಗಕ್ಕೆ ಒಂದು ದೈವೀಪ್ರಾರಂಭವನ್ನು ಕೊಡುತ್ತದೆ. ನರವಾಹನದತ್ತನ ಸ್ತುತಿಯಲ್ಲಿ ಶ್ರೀಹರಿಯು, ಭಕ್ತಿಕಲ್ಪಮಹೀರುಹ, ಲಕ್ಷ್ಮೀಕಲ್ಪಲತಾಶ್ಲಿಷ್ಟಶರೀರವುಳ್ಳವನು. ಅಭೀಷ್ಟದಾಯಿ, ಸನ್ಮಾನಸನಿವಾಸಿಯಾದ ದಿವ್ಯಹಂಸ, ಸತತೋದಿತನಾದ, ಪೂರ್ಣಷಾಡ್ಗುಣ್ಯಮೂರ್ತಿ, ಅವನ ನಾಭಿಕಮಲದಲ್ಲಿ ಬ್ರಹ್ಮನ ಸ್ವಾಧ್ಯಾಯದ ಮೃದುಧ್ವನಿ ಕೇಳಿಸುತ್ತದೆ. ಅವನಿಗೆ ಭೂಮಿಯೇ ಪಾದ, ಆಕಾಶವೇ ತಲೆ, ದಿಕ್ಕೇ ಕಿವಿ, ಸೂರ್ಯಚಂದ್ರರೇ ಕಣ್ಣುಗಳು, ಬ್ರಹ್ಮಾಂಡವೇ ಜಠರ. ಈ ಭೂತಗ್ರಾಮವು ಅವನಿಂದ ಹೊರಬರುತ್ತದೆ. ಪ್ರಳಯದಲ್ಲಿ ಇದೆಲ್ಲ ಅವನೊಳಗೇ ಪ್ರವೇಶಿಸುತ್ತದೆ. ವಿಶ್ವರೂಪನಾದರೂ ಅವನು ಅರೂಪ, ವಿಶ್ವಕರ್ಮನಾದರೂ ಅಕ್ರಿಯ, ವಿಶ್ವಾಧಾರನಾದರೂ ಅನಾಧಾರ.

ಶ್ರೀಹರಿಯ ದರ್ಶನ ಮಾಡಿಸಿದ ದೇವಪುರುಷರೊಡನೆ ಹರಿಯ ಆಜ್ಞೆಯಂತೆ ನಾರಿಕೇಳದ್ವೀಪಕ್ಕೆ ಬಂದು ಕೆಲವು ದಿನಗಳ ಕಾಲ ರಮಿಸಿ ಅನಂತರ ಸ್ವನಗರಕ್ಕೆ ಹಿಂದಿರುಗುತ್ತಾನೆ. ಅಲ್ಲಿ ಒಂದು ದಿನ ವಣಿಜನೊಬ್ಬನು ವ್ಯಾಪಾರಕ್ಕಾಗಿ ಹೋದಾಗ ಅವನ ಹಡಗು ಮುಳುಗಿ ಹೇಗೋ ಬದುಕಿ ಹಿಂದಿರುಗಿ ಬಂದಾಗ ಅವನ ಉದ್ಯಾನದಲ್ಲೇ ಅವನಿಗೊಂದು ಮಹಾನಿಧಿ ಸಿಗುತ್ತದೆ. ಅದನ್ನು ವತ್ಸೇಶ್ವರನಿಗೆ ಅರ್ಪಿಸಿದಾಗ 'ನೀನೇ ಅದನ್ನು ಅನುಭವಿಸು' ಎಂದು ರಾಜನು ಹೇಳಿದ ಮೇರೆಗೆ ವೈಭವದೊಡನೆ ಆ ನಿಧಿಯೊಡನೆ ವಾದ್ಯಸಮೇತ ಮನೆಗೆ ವರ್ತಕನು ಹೋಗುತ್ತಿರುವ ವಿಷಯ ತಿಳಿದು ವಿಧಿಯು ಮನುಷ್ಯರ ಅಭಿವೃದ್ಧಿ ಪತನಗಳೊಡನೆ ಆಟವಾಡುತ್ತದೆ ಎನ್ನುತ್ತಾನೆ ನರವಾಹನದತ್ತ ಆಗ ಗೋಮುಖನು ಆ ಅಭಿಪ್ರಾಯವನ್ನು ಒಪ್ಪುತ್ತಾ ಸಮುದ್ರಶೂರನ ಕಥೆಯನ್ನು ಹೇಳುತ್ತಾನೆ.

ಆ ಕಥೆಯಲ್ಲಿ ಸಮುದ್ರಶೂರನೆಂಬ ವರ್ತಕನ ಹಡಗು ಮುಳುಗಿ ಅವನ ಸಂಪತ್ತೆಲ್ಲ ಕಳೆದುಹೋಗುತ್ತದೆ. ಆ ವರ್ತಕನು ಹತ್ತಿರ ತೇಲಿ ಬಂದ ಶವವೊಂದನ್ನು ಹತ್ತಿ ದಡ ಸೇರುತ್ತಾನೆ. ಆ ಶವದ ನಡುವಿನಲ್ಲಿ ಕಟ್ಟಿದ್ದ ಒಂದು ಅಮೂಲ್ಯ ಕಂಠಹಾರವನ್ನು ತೆಗೆದುಕೊಂಡು ದೇವಾಲಯದಲ್ಲಿ

ಆಯಾಸದಿಂದ ಮಲಗಿದ್ದಾಗ ರಾಜಭಟರು ಬಂದು ನೋಡಿ ಅದು ರಾಜಪುತ್ರಿಯ ಕಳವಾದ ಹಾರ ಎಂದು ಅವನನ್ನು ಹಿಡಿದುಕೊಂಡು ಹೋಗುತ್ತಾರೆ. ರಾಜನು ಅವನಿಗೆ ಮರಣದಂಡನೆ ವಿಧಿಸಿದಾಗ ಅಶರೀರವಾಣಿಯಾಗಿ ಸತ್ಯವನ್ನು ತಿಳಿಸುತ್ತದೆ. ವ್ಯಾಪಾರಿಯು ಬಿಡುಗಡೆ ಹೊಂದಿ ಹಡಗಿನಲ್ಲಿ ಹಿಂದಿರುಗಿ ಒಂದು ಕಾಡಿನ ಮೂಲಕ ಹೋಗುತ್ತಿರುವಾಗ ಕಳ್ಳರಸೇನೆ ಆಕ್ರಮಣ ಮಾಡಿ ಲೂಟಿ ಮಾಡುತ್ತದೆ. ಅವನು ತಪ್ಪಿಸಿಕೊಂಡು ಒಂದು ಮರವನ್ನು ಹತ್ತಿ ಕುಳಿತಿದ್ದಾಗ ಅದರ ಹಿಂಭಾಗದಲ್ಲಿ ಇದ್ದ ಗೂಡಿನಲ್ಲಿ ಅನರ್ಘವಾದ ಆಭರಣಗಳು ಇರುವುದನ್ನು ನೋಡಿ ಅದನ್ನು ತೆಗೆದುಕೊಂಡು ಬಂದು ಸುಖವಾಗಿ ಬಾಳುತ್ತಾನೆ. ವಿಧಿಯ ಚೇಷ್ಟಿತ ವಿಚಿತ್ರ. ಪುಣ್ಯ ಮಾಡಿದವನೂ ದುಃಖವನ್ನು ಅನುಭವಿಸಿಯೇ ಸುಖವನ್ನು ಹೊಂದುತ್ತಾನೆ ಎಂದು ಗೋಮುಖನು ಮುಗಿಸುತ್ತಾನೆ.

ಒಮ್ಮೆ ಸಮರತುಂಗನೆಂಬ ರಾಜಪುತ್ರನು ತನ್ನ ಐದು ಮಂದಿ ಶತ್ರುಗಳನ್ನು ಜಯಿಸಿ ಬರುತ್ತೇನೆಂದು ರಾಜನಿಗೆ ಹೇಳಿ ಹೊರಡುತ್ತಾನೆ. ಅವನ ಸಹಾಯಕ್ಕೆಂದು ರಾಜನು ಕಳುಹಿಸಿದ ಸೈನ್ಯವನ್ನು ಕರೆದುಕೊಳ್ಳದೆ ತಾನೇ ಹೋಗಿ ಎಲ್ಲರನ್ನೂ ಜಯಿಸಿ ಬಂಧಿಸಿ ತಂದಾಗ ರಾಜನಿಗೆ ಪರಮಾಶ್ಚರ್ಯ. ಪಂಚೇಂದ್ರಿಯಗಳಂತೆ ವಿಷಯವನ್ನು (ರಾಜ್ಯವನ್ನು) ಆಕ್ರಮಿಸಿದ್ದ ಅವರನ್ನೆಲ್ಲ ತಾನೇ ಗೆದ್ದು ಬಂದನಲ್ಲ ಎಂದು ಪ್ರಶಂಸೆ ಮಾಡಿದಾಗ ಗೋಮುಖನು ರಾಜಾ ಚಮರವಾಲನ ಕಥೆಯನ್ನು ಹೇಳುತ್ತಾನೆ.

ಚಮರವಾಲನು ಹಸ್ತಿನಾಪುರದ ರಾಜ. ಅವನನ್ನು ಸೋಲಿಸಲು ಅವನ ಗೋತ್ರಜರೆಲ್ಲರೂ ಸೇರಿ ಯುದ್ಧ ಮಾಡಲು ನಿಶ್ಚಯಿಸಿ ದಂಡಯಾತ್ರೆಗೆ ಮುಹೂರ್ತ ನಿಶ್ಚಯಿಸಲು ಗಣಕನನ್ನು ಕೇಳುತ್ತಾರೆ. ಅವನು ನಿಮಗೆ ಭೋಗಸಂಪತ್ತು ಚಮರವಾಲನಿಗಿಂತ ಅಧಿಕವಾಗಿಯೇ ಇದೆ. ಅವನ ಐಶ್ವರ್ಯವನ್ನು ಕಂಡು ಕರುಬಬೇಡಿ. ಈಗ ಯದ್ಧಕ್ಕೆ ಮುಹೂರ್ತವೂ ಇಲ್ಲ ಎಂದು ಹೇಳಿ ಇಬ್ಬರು ವರ್ತಕರ ಕಥೆಯನ್ನು ಹೇಳುತ್ತಾನೆ.

ಕೌತುಕಪುರದ ರಾಜನ ಬಳಿ ಯಶೋವರ್ಮನೆಂಬ ಸೇವಕ ಇರುತ್ತಾನೆ. ಅವನಿಗೆ ರಾಜನು ಬಹಳ ಕಾಲವಾದರೂ ವೇತನ ಕೊಡುವುದಿಲ್ಲ. ಕೇಳಿದಾಗ 'ನನಗೆ ಕೊಡಲು ಇಷ್ಟ! ಆದರೆ ಸೂರ್ಯ ಭಗವಂತ ಒಪ್ಪುತ್ತಿಲ್ಲ' ಎನ್ನುತ್ತಾನೆ. ಆಗ ಸರಿಯಾದ ಸಮಯಕ್ಕೆ ಕಾಯುತ್ತಿದ್ದ ಸೇವಕನು ಗ್ರಹಣದ ದಿನ 'ಈಗ ಸೂರ್ಯನಿಲ್ಲವಲ್ಲ, ಈಗ ಕೊಡು' ಎನ್ನುತ್ತಾನೆ. ರಾಜ ಅವನಿಗೆ ಧನರಾಶಿಯನ್ನು ಕೊಡುತ್ತಾನೆ. ಅದನ್ನು ಅನುಭವಿಸಿ ಮುಗಿಸಿದ ಮೇಲೆ ಮತ್ತೇನನ್ನೂ ಕೊಡುವುದಿಲ್ಲ. ಆಗ ದೇವಿಯನ್ನು ಕುರಿತು ತಪಸ್ಸು ಮಾಡಿ ಅವಳ ವರವನ್ನಾದರೂ ಪಡೆಯುತ್ತೇನೆ ಅಥವಾ ಪ್ರಾಣವನ್ನಾದರೂ ಬಿಡುತ್ತೇನೆ ಎಂದು ನಿಶ್ಚಯಿಸಿ ತಪಸ್ಸು ಮಾಡಿದಾಗ ದೇವಿಯು ಸ್ವಪ್ನದಲ್ಲಿ ಪ್ರತ್ಯಕ್ಷಳಾಗಿ 'ನಿನಗೆ ಅರ್ಥಸಂಪತ್ತು ಬೇಕೋ ಭೋಗಸಂಪತ್ತು ಬೇಕೋ' ಎಂದಾಗ ಅವನು ಅವುಗಳ ವ್ಯತ್ಯಾಸ ನನಗೆ ತಿಳಿಯದು ಎನ್ನುತ್ತಾನೆ. ಆಗ ದೇವಿಯು ನಿನ್ನ ದೇಶದಲ್ಲಿ ಅರ್ಥವರ್ಮಾ ಭೋಗವರ್ಮಾ ಎಂಬಿಬ್ಬರು ಶ್ರೀಮಂತರಿದ್ದಾರೆ. ಅವರಿಬ್ಬರ ಬಳಿ ಹೋಗಿ ವ್ಯತ್ಯಾಸವನ್ನರಿತು ನಿನಗೆ ಯಾವುದು ಬೇಕೆಂಬುದನ್ನು ಹೇಳು ಎಂದು ಆದೇಶಿಸುತ್ತಾಳೆ.

ಅದರಂತೆಯೇ ಅವನು ಹೋಗಿ ಅರ್ಥವರ್ಮನಿಗೆ ಅರ್ಥವು ಯಥೇಚ್ಛವಾಗಿದ್ದರೂ ಅದನ್ನು

ಅನುಭವಿಸುವ ಆರೋಗ್ಯವಿಲ್ಲದಿರುವುದನ್ನು ಭೋಗವರ್ಮನಿಗೆ ಇರುವ ಐಶ್ವರ್ಯವನ್ನೇ ಸಂತೋಷದಿಂದ ಅನುಭವಿಸುವ ಭೋಗವಿರುವುದನ್ನು ಕಂಡು ತನಗೂ ಅನುಭವಿಸಲಾಗದ ಐಶ್ವರ್ಯಕ್ಕಿಂತ ಅಲ್ಪವಾದರೂ ಅನುಭವಿಸುವಂತಹ ಭೋಗದ ಐಶ್ವರ್ಯವನ್ನೇ ಕೊಡಲು ದೇವಿಯನ್ನು ಪ್ರಾರ್ಥಿಸುತ್ತಾನೆ.

ಈ ಕಥೆಯನ್ನು ಹೇಳಿ ಗಣಕನು, 'ನಿಮಗೆ ಭೋಗದ ಐಶ್ವರ್ಯವಿದೆ. ಅದನ್ನು ಬಿಟ್ಟು ಚಮರವಾಲನ 'ಕಾರ್ಪಣ್ಯ ಸಂಪತ್ತನ್ನು' ನೋಡಿ ಏಕೆ ಕರುಬುತ್ತೀರಿ?' ಎಂದು ಬುದ್ಧಿವಾದ ಹೇಳುತ್ತಾನೆ. ಆದರೂ ಅವರೆಲ್ಲರೂ ಯುದ್ಧಕ್ಕೆ ಹೊರಡುತ್ತಾರೆ. ಚಮರವಾಲನು ಆ ಯುದ್ಧದಲ್ಲಿ ಅವರನ್ನು ಸೋಲಿಸಿ ಬಂಧಿಸುತ್ತಾನೆ. ಹೀಗೆ ಶತ್ರುವಿನ ಬಲಾಬಲಗಳನ್ನು ತಿಳಿಯದೆ ಕೇವಲ ದ್ವೇಷವನ್ನೇ ಸಾಧಿಸುತ್ತಾ ದುಡುಕುತನದಿಂದ ಮೇಲೆರಗಿದ ಶತ್ರುಗಳನ್ನು ಅವರ ಸಂಖ್ಯೆ ಅಪಾರವಾಗಿದ್ದರೂ ಧೀರನಾದವನು ಒಬ್ಬನೇ ಅನನ್ಯಪೌರುಷದಿಂದ ಸೋಲಿಸಿ ಅವರ ದರ್ಪಜ್ವರವನ್ನು ಇಳಿಸುತ್ತಾನೆ, ಎಂಬ ರಾಜನೀತಿಯನ್ನು ಹೇಳಿ ಗೋಮುಖನು ಕಥೆಯನ್ನು ಮುಗಿಸುತ್ತಾನೆ.

ಐದನೆಯ ತರಂಗವು ಕಥೆಯನ್ನು ಹೇಳಲು ಒಂದು ಸಂದರ್ಭವನ್ನು ಸೃಷ್ಟಿಸುವ ಸನ್ನಿವೇಶದಿಂದ ಆರಂಭವಾಗುತ್ತದೆ. ಪ್ರಕೃತ ಸಂದರ್ಭವೊಂದನ್ನು ಸೃಷ್ಟಿಸಿ ತತ್ಸದೃಶವಾದ ಕಥೆಯೊಂದನ್ನು ಹೇಳುವುದು ಕವಿಯ ಕಥಾತಂತ್ರ.

ನರವಾಹನದತ್ತನ ಬಳಿ ಅವನ ಸಚಿವ ಮರುಭೂತಿಯ ಸೇವಕನೊಬ್ಬನು ಬಂದು ತಾನು ಮರುಭೂತಿಯ ಬಳಿ ಒಂದು ವರ್ಷ ಸೇವೆ ಮಾಡಿದ್ದು ಅವನು ಆಹಾರಾದಿಗಳನ್ನು ಕೊಟ್ಟರೂ ವರ್ಷಕ್ಕೆ ಕೊಡಬೇಕಾಗಿದ್ದ ೫೦ ದೀನಾರಗಳಂತೆ ನೂರು ದೀನಾರಗಳನ್ನು ಕೊಟ್ಟಿಲ್ಲವೆಂದು ದೂರು ಕೊಡುತ್ತಾನೆ. ರಾಜನು ಕೇಳಿದಾಗ ಮರುಭೂತಿಯು ತನ್ನಲ್ಲಿ ಅಷ್ಟು ದೀನಾರಗಳು ಇಲ್ಲವೆನ್ನುತ್ತಾನೆ. ಇದನ್ನು ಆಸ್ಥಾನದಲ್ಲಿ ಯಾರೂ ನಂಬದೆ ಎಲ್ಲರೂ ನಕ್ಕುಬಿಡುತ್ತಾರೆ. ರಾಜನು ನೂರು ದೀನಾರಗಳನ್ನು ಕೊಡಲು ಆದೇಶಿಸಿ ಸೇವಕನಿಗೆ ಕೊಡಿಸುತ್ತಾನೆ. ಆಗ ಗೋಮುಖನು 'ಮರುಭೂತಿಯನ್ನು ನಿಂದಿಸಬೇಕಾಗಿಲ್ಲ. ಬ್ರಹ್ಮನ ಸೃಷ್ಟಿ ವಿಚಿತ್ರವಾದ ಚಿತ್ತವೃತ್ತಿಯುಳ್ಳದ್ದು. ಯಾವುದನ್ನೂ ಕೊಡಲು ವಿಳಂಬ ಮಾಡುತ್ತಿದ್ದ ರಾಜನ ಕಥೆಯನ್ನು ಹೇಳುತ್ತೇನೆ' ಎಂದು ಹೇಳಿ ಚಿರದಾತನೆಂಬ ರಾಜನ ಕಥೆಯನ್ನು ಹೇಳುತ್ತಾನೆ.

ಚಿರದಾತನೆಂಬ ರಾಜನಲ್ಲಿ ಪ್ರಸಂಗನೆಂಬ ಸೇವಕನು ತನ್ನಿಬ್ಬರು ಸ್ನೇಹಿತರೊಡನೆ ಸೇವೆ ಮಾಡಿಕೊಂಡಿರುತ್ತಾನೆ. ಐದು ವರ್ಷಗಳಾದರೂ ರಾಜನು ಅವರಿಗೆ ಏನನ್ನೂ ಕೊಡಲಿಲ್ಲ. ಒಮ್ಮೆ ರಾಜನ ಪುತ್ರ ಮೃತನಾದಾಗ ಆ ಸೇವಕನು ಬಂದು 'ನಿನ್ನ ಮಗನಾದರೂ ನಮಗೆ ಸಂಪತ್ತನ್ನು ಕೊಡಬಹುದೆಂಬ ನಂಬಿಕೆಯಿಂದ ನಾವು ಸೇವೆ ಮಾಡುತ್ತಿದ್ದೆವು. ಈಗ ಅವನೂ ಹೋದ ಮೇಲೆ ನಮಗಿಲ್ಲೇನು ಕೆಲಸ' ಎಂದು ಹೇಳಿ ಹೊರಡುತ್ತಾರೆ. ಆಗ ಇಂತಹ ನಿಷ್ಠರನ್ನು ಬಿಡಬಾರದು ಎಂದು ರಾಜನು ಅವರನ್ನು ಕರೆಸಿ ಅವರಿಗೆ ಯಥೇಚ್ಛವಾಗಿ ದಾನಮಾಡಿ ಅವರನ್ನು ಶ್ರೀಮಂತಗೊಳಿಸುತ್ತಾನೆ. ಮನುಷ್ಯರ ಸ್ವಭಾವ ವಿಚಿತ್ರ. ಆ ರಾಜ ಯುಕ್ತವಾದ ಸಮಯದಲ್ಲಿ ಕೊಡಲಿಲ್ಲ. ಅಸಮಯದಲ್ಲಿ ಕೊಟ್ಟ.

ಇಷ್ಟು ಹೇಳಿ ಗೋಮುನು ಕನಕವರ್ಷನೆಂಬ ರಾಜನ ಕಥೆಯನ್ನು ಹೇಳುತ್ತಾನೆ. ಕನಕವರ್ಷನ ಆಸ್ಥಾನಕ್ಕೆ ಚಿತ್ರಕಾರನೊಬ್ಬ ಬಂದು ಅವನ ಚಿತ್ರವನ್ನು ತದ್ರೂಪವಾಗಿ ಬರೆದುಕೊಡುತ್ತಾನೆ. ಆಗ ಅವನಿಗೆ ಅನುರೂಪಳಾದ ಸುಂದರಿ ಇದ್ದರೆ ಅವಳ ಚಿತ್ರವನ್ನು ರಾಜನ ಚಿತ್ರದ ಪಕ್ಕದಲ್ಲಿ ಚಿತ್ರಿಸು ಎಂದು ಎಲ್ಲರೂ ಹೇಳಿದಾಗ ಕುಂಡಿನಪುರದ ರಾಜನ ಮಗಳು ಮದನ ಸುಂದರಿ ಎಂಬುವಳನ್ನು ನೋಡಲು ತಾನು ಹೋಗಿದ್ದಾಗ ಅವಳು ಸುಂದರ ತರುಣನೊಬ್ಬನ ಚಿತ್ರವನ್ನು ತನ್ನಿಂದ ಬರೆಯಿಸಿದಳೆಂದೂ ಅದು ಕನಕವರ್ಷನದ್ದೇ ಎಂದು ಕನಕವರ್ಷನನ್ನು ನೋಡಿದಾಗ ತಿಳಿಯಿತು ಎಂದು ಹೇಳಿ ಅವಳ ಚಿತ್ರವನ್ನು ತೋರಿಸುತ್ತಾನೆ. ರಾಜನು ಅದನ್ನು ನೋಡಿ ಪರವಶನಾಗಿ ವಿವಾಹಪ್ರಸ್ತಾಪವನ್ನು ಅವಳ ತಂದೆಗೆ ಕಳಿಸಿಕೊಡುತ್ತಾನೆ. ಅವಳು ಒಪ್ಪಿದಾಗ ಇಬ್ಬರಿಗೂ ವಿವಾಹವಾಗುತ್ತದೆ.

ಒಮ್ಮೆ ಕನಕವರ್ಷನಿಗೊಂದು ಸ್ವಪ್ನವಾಗುತ್ತದೆ. ಅದರಲ್ಲಿ ವಿಕಾರವಾದ ಹೆಂಗಸೊಬ್ಬಳು ಅವನ ಕತ್ತಿನಿಂದ ಮುತ್ತಿನ ಸರವನ್ನೂ ತಲೆಯಿಂದ ಚೂಡಾರತ್ನವನ್ನೂ ಅಪಹರಿಸುತ್ತಾಳೆ. ಅನಂತರ ನಾನಾ ಪ್ರಾಣಿಗಳ ಅವಯವಗಳಿರುವ ಬೇತಾಳವೊಂದು ಬರುತ್ತದೆ. ಬಾಹುಯುದ್ಧಕ್ಕೆ ಬಂದ ಅದನ್ನು ಕನಕವರ್ಷನು ಭೂಮಿಯಮೇಲೆ ಕೆಡವಿ ಅದರ ಬೆನ್ನಿನ ಮೇಲೆ ಕುಳಿತಾಗ ಅದು ಆಕಾಶಕ್ಕೆ ಹಾರಿ ಸಮುದ್ರದಲ್ಲಿ ಅವನನ್ನು ಎಸೆಯುತ್ತದೆ. ಹೇಗೋ ಅವನು ಸಮುದ್ರವನ್ನು ದಾಟಿ ಬಂದಾಗ ಅವನ ಕತ್ತಿನಲ್ಲಿ ಏಕಾವಲೀ ಸರವೂ ಶಿರಸ್ಸಿನಲ್ಲಿ ಚೂಡಾಮಣಿಯೂ ಹಿಂದಿನಂತೆಯೇ ಇರುತ್ತದೆ.

ಈ ಸ್ವಪ್ನವನ್ನು ಕ್ಷಪಣಕನೊಬ್ಬನಿಗೆ ಹೇಳಿ ಅರ್ಥವನ್ನು ಕೇಳಿದಾಗ ಅವನು ಅದರ ಅರ್ಥವನ್ನು ಈ ರೀತಿ ಹೇಳುತ್ತಾನೆ. ದೇವಿಯೊಡನೆ ಹಾಗೂ ಪುತ್ರನೊಡನೆ ರಾಜನಿಗೆ ವಿಯೋಗವುಂಟಾಗುವುದು ಹಾಗೂ ದುಃಖವು ಮುಗಿದು ಮತ್ತೆ ಅವರೊಡನೆ ಸಮಾಗಮವುಂಟಾಗುತ್ತದೆ ಎಂಬುದನ್ನು ಇದು ಸೂಚಿಸುತ್ತದೆ.

ರಾಜನಿಗೆ ಪುತ್ರ ಸಂತಾನವಾಗಲಿಲ್ಲವೆಂಬ ಚಿಂತೆ ಕಾಡುತ್ತಿರುತ್ತದೆ. ಒಮ್ಮೆ ರಾತ್ರಿ ಮಲಗಿರುವಾಗ ಮುಚ್ಚಿದ ಬಾಗಿಲಿನ ಮೂಲಕ ಸ್ತ್ರೀಯೊಬ್ಬಳು ಒಳಗೆ ಬರುತ್ತಾಳೆ. ನಾನು ನಾಗರಾಜನಾದ ವಾಸುಕಿಯ ಮಗಳು. ಅವನ ರಕ್ಷಣೆಗಾಗಿ ಸದಾ ಅದೃಶ್ಯಳಾಗಿ ಅವನ ಬಳಿಯೇ ಇರುವಳೆಂದು ಹೇಳಿ ಅವನ ವಿಮನಸ್ಕತೆಯ ಕಾರಣ ಕೇಳುತ್ತಾಳೆ. ಪುತ್ರ ಸಂತಾನದ ಚಿಂತೆ ಎಂಬುದನ್ನು ತಿಳಿದು ಕುಮಾರಸ್ವಾಮಿಯ ಆರಾಧನೆಯನ್ನು ಮಾಡಲು ಹೇಳುತ್ತಾಳೆ. ಆಗ ತಲೆಯಮೇಲೆ ಬೀಳುವ ಕುಮಾರಧಾರೆಯನ್ನೂ ಇತರ ವಿಘ್ನಗಳನ್ನೂ ಸಹಿಸಲು ಅವನೊಳಗೆ ಸೇರಿಕೊಂಡು ಶಕ್ತಿಯನ್ನು ಕೊಡುತ್ತೇನೆಂದೂ ಹೇಳುತ್ತಾಳೆ.

ಅದರಂತೆಯೇ ಎಲ್ಲವೂ ನಡೆಯುತ್ತದೆ. ಕುಮಾರಸ್ವಾಮಿಯು ಪ್ರೀತನಾಗಿ ವರಕೊಟ್ಟು ವಿಶೇಷ ಅನುಗ್ರಹಕ್ಕೆ ಗರ್ಭಗುಡಿಗೆ ರಾಜನನ್ನು ಕರೆಯುತ್ತಾನೆ. ಗರ್ಭಗುಡಿಗೆ ಬರಲು ಶಕ್ತಿಯಿಲ್ಲದ ರತ್ನಪ್ರಭೆ ರಾಜನ ಶರೀರದಿಂದ ಹೊರಬರುತ್ತಾಳೆ. ಅದರಿಂದ ತೇಜಸ್ಸನ್ನು ಕಳೆದುಕೊಂಡ ರಾಜನನ್ನು ನೋಡಿ ವಿಷಯ ತಿಳಿದು ಕುಮಾರಸ್ವಾಮಿಯು ಕ್ರುದ್ಧನಾಗಿ ನಾಗೀಬಲವ್ಯಾಜದಿಂದ ವಿಷಮವ್ರತವನ್ನು ನಿರ್ವಹಿಸಿದುದರಿಂದ ನಿನಗೆ ನಿನ್ನ ಪುತ್ರನಿಂದಲೂ, ರಾಜ್ಞಿಯಿಂದಲೂ ವಿಯೋಗವುಂಟಾಗುತ್ತದೆ

ಎಂದು ಶಪಿಸುತ್ತಾನೆ. ಪ್ರಾರ್ಥಿಸಿಕೊಂಡಾಗ ಈ ಶಾಪ ಒಂದು ವರ್ಷ ಮಾತ್ರ ಅನಂತರ ಮೂರು ಅಪಮೃತ್ಯುಗಳಿಂದ ಪಾರಾಗಿ ಅವರನ್ನು ಸೇರುತ್ತೀಯೆ ಎಂದು ಶಾಪಾಂತ್ಯವನ್ನು ಸೂಚಿಸುತ್ತಾನೆ. ಎಲ್ಲವೂ ಅದರಂತೆಯೇ ನಡೆಯುತ್ತದೆ. ಈ ಅಪಮೃತ್ಯುಗಳನ್ನು ದಾಟುವ ವಿವರಗಳೆಲ್ಲ ರೋಚಕವಾಗಿವೆ.

ಈ ತರಂಗದಲ್ಲಿ ವರ್ಣನೆಗಳಿಗೆ ವಿಪುಲವಾದ ಅವಕಾಶವಿದೆ. ಕನಕವರ್ಷನ ಕನಕಪುರದ ವರ್ಣನೆಯೇ ಮೊದಲ ವರ್ಣನೆ. ಆ ರಾಜ್ಯದಲ್ಲಿ ಬಂಧವು ಕವಿವಾಣಿಯಲ್ಲಿ ಮಾತ್ರ ಬಂಧನವಿರಲಿಲ್ಲ. ಅಂದರೆ ಬಂಧನವಾಗುವಂತಹ ಅಪರಾಧಗಳಾಗುತ್ತಿರಲಿಲ್ಲ. ಮುಂಗುರುಳುಗಳಲ್ಲಿ ಮಾತ್ರ ಭಂಗ, ಅಂದರೆ ವಕ್ರತೆಯಿತ್ತೇ ವಿನಾ ಜನರ ಸ್ವಭಾವಗಳಲ್ಲಿ ಇರಲಿಲ್ಲ. ಸಸ್ಯಸಂಗ್ರಹಣದಲ್ಲಿ ಮಾತ್ರ ಖಲ (ಧಾನ್ಯದ ಕಣ) ಇತ್ತೇ ವಿನಾ ಖಳ ಆ ರಾಜ್ಯದಲ್ಲಿ ಇರಲಿಲ್ಲ.

ಮುಂದಿನದು ರಾಜಾಕನಕವರ್ಷನ ಇದೇ ತಂತ್ರವನ್ನುಪಯೋಗಿಸಿ ಮಾಡಿದ ವರ್ಣನೆ. ಆ ರಾಜನು ಮಹಾಕೀರ್ತಿವಂತ. ಅವನಿಗೆ ಲೋಭವಿದ್ದದ್ದು ಕೀರ್ತಿಯಲ್ಲಿ ಮಾತ್ರ ಅವನು ಯಶೋಲುಬ್ಧ. ಅವನಿಗೆ ಹೆದರಿಕೆಯಿದ್ದದ್ದು ಪಾಪದಲ್ಲಿ ಮಾತ್ರ ಶತ್ರುಗಳಲ್ಲಿ ಅಲ್ಲ. ಅವನು ಪರನಿಂದೆಯಲ್ಲಿ ಮೂರ್ಖ, ಶಾಸ್ತ್ರಗಳಲ್ಲಿ ಅಲ್ಲ. ಅವನಿಗೆ ಅಲ್ಪತೆಯಿದ್ದದ್ದು ಕೋಪದಲ್ಲಿ ಮಾತ್ರ. ಬಿಗಿ ಮುಷ್ಟಿಯಿದ್ದದ್ದು ಬಿಲ್ಲಿನಲ್ಲಿ ಮಾತ್ರ, ದಾನದಲ್ಲಲ್ಲ, ಪರಮ ಸುಂದರನಾದ ಅವನು ಅಬಲೆಯರನ್ನು ಮಾರವ್ಯಥಾಕುಲೆಯರನ್ನಾಗಿ ಮಾಡುತ್ತಿದ್ದನು.

ಮುಂದಿನದು ಶರತ್ಕಾಲದ ವರ್ಣನೆ. ಅದರಲ್ಲೂ ರಾಜನ ವರ್ಣನೆಯೇ ಧ್ವನಿಸುತ್ತದೆ. ಇದರಲ್ಲಿ ಒಂದರ್ಥ ಶರತ್ಕಾಲಕ್ಕೆ ಅನ್ವಯಿಸಿದರೆ ಮತ್ತೊಂದರ್ಥ ರಾಜನಿಗೆ ಅನ್ವಯಿಸುತ್ತದೆ. ಆ ಋತುವಿನಲ್ಲಿ ಸ್ವಲ್ಪವೇ ಉಷ್ಣತೆ, ಆನೆಗಳು ಮದಿಸಿದ್ದುವು, ರಾಜಹಂಸಗಳ ಸಮೂಹಗಳು ಎಲ್ಲೆಲ್ಲೂ. ಪ್ರಜೆಗಳು ಉತ್ಸವಗಳನ್ನು ಸಂಭ್ರಮದಿಂದ ಆಚರಿಸುತ್ತಿದ್ದರು. ರಾಜನು ಹೀಗೆ ತನಗೆ ಸದೃಶವಾದ ಗುಣಗಳುಳ್ಳ ಶರತ್ಕಾಲದಲ್ಲಿ ಚಿತ್ರಪ್ರಾಸಾದದಲ್ಲಿ ವಿಹರಿಸಲು ಹೋಗುತ್ತಾನೆ. ಅದು ಆಕೃಷ್ಟಕಮಲಾಮೋದವಹನ್ ಮಾರುತಶೀತಲವಾಗಿದೆ. ಕಮಲಗಳ ಪರಿಮಳವನ್ನು ಹೊತ್ತು ಬೀಸಿದ ಗಾಳಿಯಿಂದ ಶೀತಲವಾಗಿದ್ದ ಸ್ಥಾನ.

ನಾರಿಯರ ವರ್ಣನೆಯೇ ಕಾವ್ಯಗಳಲ್ಲಿ ಅಧಿಕ. ಆದರೆ ಇಲ್ಲಿ ಕವಿಗೆ ರಾಜನ ವರ್ಣನೆಯನ್ನು ಎಷ್ಟು ಮಾಡಿದರೂ ಸಾಲದು. ಒಂದೆಡೆ ಚಿತ್ರಕಾರನು ರಾಜನನ್ನು ಬರೆದಾಗ ಅವನ ಅವಯವಗಳ ವೈಭವವನ್ನು ವರ್ಣಿಸುವ ಅವಕಾಶವನ್ನು ಕವಿ ಸೃಷ್ಟಿಸಿಕೊಂಡಿದ್ದಾನೆ. ಚಿತ್ರದಲ್ಲಿ ಕಾಣುವುದು ರಾಜನ ಶರೀರಾಕೃತಿ ಮಾತ್ರವಲ್ಲವೇ! ಎತ್ತರವಾದ ನೀಳಮೂಗು, ದೀರ್ಘವಾದ ಕೆಂಪು ಕಣ್ಣುಗಳು, ವಿಪುಲವಾದ ಲಲಾಟ, ಬಗ್ಗಿದ ಕುಂತಲಗಳು, ಬಾಣಗಳು ನೆಟ್ಟ ಗಾಯದ ಗುರುತುಗಳಿರುವ ವಿಸ್ತಾರವಾದ ವಕ್ಷಸ್ಥಲ. ದಿಗ್ಗಜಗಳ ಸೊಂಡಿಲಿನಂತಹ ತೋಳುಗಳು, ಒಂದು ಹಿಡಿಯಲ್ಲಿ ಹಿಡಿದಿಡುವಂತಹ 'ಮುಷ್ಟಿಮೇಯ'ವಾದ ನಡು, ಅವನ ಪರಾಕ್ರಮದಿಂದ ಸೋತುಹೋದ ಸಿಂಹದ ಮರಿಗಳು ಅವನಿಗೆ ಕಾಣಿಕೆಯಾಗಿ ಆ ಕೃಶವಾದ ನಡುವನ್ನು ಕೊಟ್ಟವು ಎಂಬಂತಿತ್ತಂತೆ ಆ ನಡು. ಯೌವನ ಮದವೆಂಬ ಆನೆಯನ್ನು

ಕಟ್ಟಲು ಬಳಸುವ ಆಲಾನಸ್ತಂಭದಂತಿದ್ದ ತೊಡೆಗಳು. ಅಶೋಕದ ಚಿಗುರುಗಳಂತಿದ್ದ ಕಾಲ್ಬೆರಳುಗಳು, ಹೀಗೆ ಅಂಗಾಂಗಗಳ ವರ್ಣನೆಯನ್ನು ಚಿತ್ರಪಟದ ವ್ಯಾಜದಿಂದ ಕವಿಯು ಮಾಡುತ್ತಾನೆ.

ಮುಂದೆ ವಸಂತಮಾಸದ ವರ್ಣನೆ ಬರುತ್ತದೆ. ವಸಂತಮಾಸವು ಪುಷ್ಪಬಾಣನಿಗಾಗಿ ಹೂಗೊಂಚಲುಗಳ ಬಿಲ್ಲುಗಳನ್ನು ಸಜ್ಜುಗೊಳಿಸುತ್ತಾ ಅವುಗಳಲ್ಲಿ ಸೇರಿಕೊಂಡ ಭ್ರಮರಗಳ ಸಾಲನ್ನೇ ಹುರಿಯನ್ನಾಗಿ ಮಾಡಿಕೊಂಡು ಸಿದ್ಧವಾಯಿತು. ಮಲಯಾನಿಲವು ಉಪವನಗಳಲ್ಲಿ ಕಂಪನವುಂಟುಮಾಡುವುದಲ್ಲದೆ ಪಥಿಕವಿರಹಿಣಿಯರ ಹೃದಯಗಳನ್ನೂ ನಡುಗಿಸಿತು. ಕೋಗಿಲೆಗಳ ಇಂಚರವು 'ಓ ಜನರೇ, ಅಭಿಮಾನದ ಕಲಹವನ್ನು ತೊರೆದು ಪ್ರಿಯರೊಡನೆ ಕೂಡಿ ರಮಿಸಿ' ಎಂದು ಜನರಿಗೆ ಹೇಳುತ್ತಿದೆಯೋ ಎಂಬಂತಿತ್ತು.

ವಸಂತೋದ್ಯಾನದಲ್ಲಿದ್ದ ವರನಾರಿಯರ ವರ್ಣನೆ ಇದು. ಆ ಅಂಗನೆಯರು ತಮ್ಮ ಮುಖಗಳಿಂದ ಪದ್ಮಗಳನ್ನೂ ಕಣ್ಣುಗಳಿಂದ ಕನ್ನೈದಿಲೆಗಳನ್ನೂ ನಾಚಿಸಿದರು. ಇದರಿಂದ ಕೋಪಗೊಂಡು ಕ್ಷೋಭೆಯಿಂದ ಗೋದಾವರಿಯು ಹುಬ್ಬುಗಂಟಿಕ್ಕಿದೆಯೋ ಎಂಬಂತೆ ಅದರ ಅಲೆಗಳು ತೋರುತ್ತಿದ್ದುವು.

ಆಯಾಯಾ ಸನ್ನಿವೇಶಗಳ, ಭಾವಗಳ ಒಂದೇ ಸಾಲಿನ ವರ್ಣನೆಗಳು ಚೇತೋಹಾರಿಯಾಗಿರುತ್ತವೆ. ಮೇಘವು ಆಕಾಶವನ್ನು ಆಕ್ರಮಿಸಿಕೊಂಡಾಗ ಜಾಗೃತವಾಗಿಲ್ಲದ ರಾಜನ ರಾಜ್ಯವನ್ನು ಅಲಕ್ಷಿಸಿದ ಶತ್ರುವು ಆಕ್ರಮಿಸುವಂತೆ ಬೆಳೆಯುತ್ತಾ ಬಂದ ಮೇಘವು ಕ್ರಮೇಣ ಅಂತರಿಕ್ಷವನ್ನು ಆಕ್ರಮಿಸಿತು ಎಂದು ಕವಿಯು ವರ್ಣಿಸುತ್ತಾನೆ. ಅನಂತರ ಬಿರುಗಾಳಿಯೆದ್ದು, ಮದವೇರಿದ ಆನೆಯು, ಮದಜಲದ ಪ್ರವಾಹವನ್ನು ಸುರಿಸುವಂತೆ ವೃಷ್ಟಿಯ ಧಾರಾಪ್ರವಾಹಗಳನ್ನು ಸುರಿಸುತ್ತಾ ಮರಗಳ ಬುಡಗಳನ್ನು ಕಿತ್ತು ಹಾಕುತ್ತಾ ವೇಗವಾಗಿ ಪ್ರಸರಿಸಿತು.

ಈ ತರಂಗದಲ್ಲಿ ವರ್ಣನೆಗೆ ಸ್ವಲ್ಪ ಅಧಿಕವಾದ ಸ್ಥಾನವನ್ನೇ ಕೊಡಲಾಗಿದ್ದು ಅವೆಲ್ಲ ಸಂದರ್ಭೋಚಿತವಾಗಿವೆ. ಸುಂದರವಾದ ಶಿಲ್ಪಕ್ಕೆ ಆಭರಣಗಳನ್ನು ತೊಡಿಸಿದಂತಿರುವ ಅವು ಶಿಲ್ಪದ ಸೌಂದರ್ಯವನ್ನು ಹೆಚ್ಚಿಸುತ್ತವೆ.

ಆರನೆಯದು ಸುದೀರ್ಘವಾದ ತರಂಗ. ಇದರಲ್ಲಿ ಪ್ರಸಿದ್ಧವಾದ ನಳನ ಕಥೆ, ಧರ್ಮವ್ಯಾಧನ ಕಥೆಗಳೂ ಬರುತ್ತವೆ. ಇದರಲ್ಲಿ ಅಪ್ರಸಿದ್ಧವಾದ ಕತೆಗಳೂ ಸ್ಥಾನಪಡೆದಿವೆ. ಎಲ್ಲ ಕಥೆಗಳನ್ನೂ ಸೇರಿಸಿದರೆ ಇದೊಂದು ವಿಚಿತ್ರ ಘಟನಾವಳಿಗಳ ಕಥಾಕದಂಬ. ಈ ತರಂಗ ಪ್ರಾರಂಭವಾಗುವುದು ಚಂದ್ರಸ್ವಾಮಿ ಎಂಬ ಬ್ರಾಹ್ಮಣನ ಕಥೆಯೊಂದಿಗೆ. ಅನಂತರ ಚಕ್ರನ ಕಥೆ. ತರಂಗವಾಗಿ ಧರ್ಮವ್ಯಾಧನ ಕಥೆ, ಅನಂತರ ಸಂಗಮದತ್ತನು ಮಹೀಪಾಲನ ಪತ್ನಿಗೆ ಹೇಳುವ ಆಶ್ಚರ್ಯಕರ ಅನುಭವ, ಕೊನೆಯಲ್ಲಿ ನಿಷಧರಾಜನಾದ ನಳನ ಕಥೆ, ಹೀಗೆ ಒಂದು ಕಥಾವಳಿಯೇ ಇಲ್ಲಿದೆ.

ಚಂದ್ರಸ್ವಾಮಿಯ ಕಥೆಯಲ್ಲಿ ಕ್ಷಾಮಕಾರಣದಿಂದ ಮಹೀಪಾಲನನ್ನೂ ಅವನ ತಂಗಿಯನ್ನೂ ಹೆಂಡತಿಯ ತವರಿನಲ್ಲಿ ಬಿಟ್ಟು ಬರಲು ಹೊರಟ ಚಂದ್ರಸ್ವಾಮಿಯು ಬಾಯಾರಿಕೆಗೆ ನೀರು ತರಲು ಮಕ್ಕಳನ್ನು ಅಲ್ಲೇ ಒಂದೆಡೆ ಬಿಟ್ಟು ಹೊರಟಾಗ ಕಿರಾತರು ನರಬಲಿಗಾಗಿ ಅವನನ್ನು ಕರೆದೊಯ್ಯುತ್ತಾರೆ. ಅವನು ಬೇರೆದಾರಿ ಕಾಣದೆ ಭಕ್ತಿಯಿಂದ ಸೂರ್ಯನನ್ನು ಸ್ತುತಿಸಿ ಅವನ ಅನುಗ್ರಹ ಪಡೆದು ಕಿರಾತರಿಂದ

ಬಿಡುಗಡೆ ಹೊಂದಿ ಮಕ್ಕಳಿದ್ದ ಕಡೆ ಬಂದು ನೋಡಿದಾಗ ಅವರು ಅಲ್ಲಿರುವುದಿಲ್ಲ. ಎಲ್ಲ ಕಡೆ ವಿಚಾರಿಸುತ್ತಾ ಅವರನ್ನು ಯಾರೋ ವರ್ತಕರು ಒಯ್ದರೆಂದು ತಿಳಿದು ದ್ವೀಪದಿಂದ ದ್ವೀಪಕ್ಕೆ ಅಲೆಯುತ್ತಾನೆ. ಹೀಗೆ ನಾರಿಕೇಳದ್ವೀಪ, ಕಟಾಹದ್ವೀಪ, ಕರ್ಪೂರದ್ವೀಪ, ಸುವರ್ಣದ್ವೀಪ, ಸಿಂಹಳ ಮತ್ತೆ ಚಿತ್ರಕೂಟ ಮುಂತಾದ ಸ್ಥಳಗಳಲ್ಲಿ ಅಲೆದು ಹುಡುಕುತ್ತಾ ಕೊನೆಗೆ ಒಂದು ಅರಣ್ಯದ ಮೂಲಕ ಹಾದು ಹೋಗುವಾಗ ರಾತ್ರಿಯಾದುದರಿಂದ ರಕ್ಷಣೆಗಾಗಿ ಮರವೊಂದನ್ನು ಹತ್ತಿ ಕುಳಿತುಕೊಳ್ಳುತ್ತಾನೆ. ಆಗ ಕೆಳಗೆ ನಾರಾಯಣಿಯನ್ನು ಮುಂದಿಟ್ಟುಕೊಂಡು ಭೈರವದೇವನಿಗಾಗಿ ಕಾದು ಕುಳಿತಿದ್ದ ಮಾತೃದೇವತೆಗಳ ಸಮೂಹ ಕಾಣುತ್ತದೆ. ಭೈರವನು ಒಂದು ವಿಚಿತ್ರ ಘಟನೆಯಿಂದ ಬರಲು ವಿಳಂಬವಾಗಿ ಕೊನೆಗೆ ಬಂದು ಅವರೊಡನೆ ಸಮಯ ಕಳೆದು ಹೋಗುತ್ತಾನೆ. ಏತನ್ಮಧ್ಯೆ ನಾರಾಯಣಿಯ ದಾಸಿಯೊಬ್ಬಳು ಇವನನ್ನು ನೋಡಿರುತ್ತಾಳೆ. ಇಬ್ಬರ ಮನಸ್ಸಿನಲ್ಲೂ ಕಾಮಾಂಕುರವಾಗಿರುತ್ತದೆ. ಇದನ್ನು ತಿಳಿದ ನಾರಾಯಣಿಯು ಅವನನ್ನು ಕೆಳಗೆ ಬರಹೇಳಿ ದಾಸಿಯನ್ನು ಅವನಿಗೆ ಕೊಡ ಬಯಸುತ್ತಾಳೆ. ಅದಕ್ಕೆ ಅವನು, ಮನಸ್ಸು ಚಂಚಲ, ಆದರೆ ದೈಹಿಕ ಪಾಪವನ್ನು ಮಾಡಲಾರೆನೆಂದು ಸಂಯಮವನ್ನು ತೋರಿಸುವುದರಿಂದ ನಾರಾಯಣಿಯು ಸುಪ್ರೀತಳಾಗಿ ಅವನಿಗೆ ಕಳೆದುಹೋದ ಮಕ್ಕಳು ದೊರೆಯುವರೆಂದು ವರಕೊಟ್ಟು ವಿಷಹಾರಿಯಾದ ಉತ್ಪಲವೊಂದನ್ನು ಕೊಡುತ್ತಾಳೆ.

ಅವನು ಅಲ್ಲಿಂದ ಹೊರಟು ತಾರಾಪುರವೆಂಬ ನಗರಕ್ಕೆ ಬಂದು ಅಲ್ಲಿಯ ಮಂತ್ರಿಯ ಮನೆಯಲ್ಲಿ ಭೋಜನಕ್ಕೆ ಆಮಂತ್ರಿತನಾಗಿ ಸ್ನಾನಮಾಡಿ ಬರಲು ಹೋಗಿ ಹಿಂದಿರುಗುತ್ತಿದ್ದಾಗ ಮಂತ್ರಿಯ ಮನೆಯಲ್ಲಿ ಮಹೀಪಾಲನೆಂಬ ಸದ್ಗುಣಶಾಲಿಯಾದ ಹುಡುಗನಿದ್ದ, ಅವನನ್ನು ಹಾವು ಕಚ್ಚಿ ಅವನು ಮೃತನಾದ ಎಂಬ ಕೋಲಾಹಲದ ಸುದ್ದಿ ಕೇಳಿ ಅಲ್ಲಿಗೆ ಧಾವಿಸಿ ಹೋಗಿ ನೋಡಿದಾಗ ಅವನು ತನ್ನ ಪುತ್ರ ಮಹೀಪಾಲನೇ ಆಗಿದ್ದುದು ಕಂಡು ಉತ್ಪಲದಿಂದ ಅವನನ್ನು ಬದುಕಿಸುತ್ತಾನೆ. ಮಹೀಪಾಲನ ಸದ್ಗುಣಗಳಿಂದ ಪ್ರೀತವಾಗಿದ್ದ ರಾಜ ತನ್ನ ಮಗಳನ್ನು ಅವನಿಗೆ ಕೊಟ್ಟ ಅರ್ಧರಾಜ್ಯವನ್ನೂ ಕೊಡುತ್ತಾನೆ.

ಅಲ್ಲಿ ಸುಖವಾಗಿದ್ದಾಗ ಚಂದ್ರಸ್ವಾಮಿಯು ತಾಯಿಯನ್ನು ಕರೆದು ತರೋಣ ಬಾ ಎಂದು ಮಹೀಪಾಲನಿಗೆ ಹೇಳಿ ಮಾತಾಪಿತೃಗಳ ಮನಸ್ಸನ್ನು ನೋಯಿಸಬಾರದು. ಅವರ ಶಾಪ ಬೀಳಬಾರದು ಎಂದು ಹೇಳಿ ತತ್ಸಂಬಂಧದಲ್ಲಿ ವರ್ತಕಪುತ್ರನೊಬ್ಬನ ಕಥೆಯನ್ನು ಹೇಳುತ್ತಾನೆ. ಮಾತಾಪಿತೃಗಳ ಮಾತನ್ನು ಕೇಳದೆ ನೋವನ್ನು ಅನುಭವಿಸಿದವರ ಕಥೆ ಇದು. ತದನಂತರ ಇದೇ ವಿಷಯವನ್ನು ಪ್ರತಿಪಾದಿಸುವ ಧರ್ಮವ್ಯಾಧನ ಕಥೆಯನ್ನು ಹೇಳುತ್ತಾನೆ.

ಈದೃಕ್‌ಪಾಪಫಲಂ ಪುತ್ರ ಮಾತಾಪಿತ್ರೋರ್ವಿರೋಧನಂ ।
ಕಾಮಧೇನುಸ್ತು ತದ್ಭಕ್ತಿಸ್ತತ್ರಾಪ್ಯೇತಾಂ ಕಥಾಂ ಶೃಣು ॥

ಮಾತಾಪಿತೃಗಳನ್ನು ವಿರೋಧಿಸಿದುದರಿಂದ ಬಂದ ಪಾಪದ ಫಲ ಇದು. ಅವರ ಮೇಲೆ ಭಕ್ತಿಯಿಟ್ಟರೆ ಅದುವೇ ಕಾಮಧೇನುವಿನಂತೆ ಇಷ್ಟಾರ್ಥ ಸಿದ್ಧಿಯಾಗುತ್ತದೆ. ಹೀಗೆ ಹೇಳಿ ಧರ್ಮವ್ಯಾಧನ ಪ್ರಸಿದ್ಧವಾದ ಕಥೆ ಬರುತ್ತದೆ. ಇದರ ಪೂರ್ವಪೀಠಿಕೆಯಾಗಿ ಮುನಿಯೊಬ್ಬನ ವೃತ್ತಾಂತ ಬರುತ್ತದೆ. ಮರದ ಕೆಳಗೆ ಕುಳಿತಿದ್ದ ಮುನಿಯೊಬ್ಬನ ಮೇಲೆ ಕೊಕ್ಕರೆಯು ಪಿಕ್ಕೆಯನ್ನು ಹಾಕುತ್ತದೆ. ಅವನು ಕೋಪದಿಂದ ಅದನ್ನು ದುರುಗುಟ್ಟಿ ನೋಡಿದಕೂಡಲೇ ಅದು ಸುಟ್ಟು ಭಸ್ಮವಾಗುತ್ತದೆ. ತನ್ನ ತಪಶ್ಶಕ್ತಿಯ

ಬಗ್ಗೆ ಮುನಿಗೆ ಅಹಂಭಾವ ಮೂಡುತ್ತದೆ. ಅವನು ಭಿಕ್ಷೆ ಮಾಡಲು ಒಂದು ಮನೆಗೆ ಬಂದಾಗ, ಆ ಮನೆಯ ಗೃಹಿಣಿಯು ನನ್ನ ಪತಿಯ ಸೇವೆಯನ್ನು ಮಾಡಿ ಮುಗಿಸಿ ಬರುತ್ತೇನೆ, ಕಾದಿರು ಎಂದಾಗ ಇವನು ಕೋಪದಿಂದ ಅವಳ ಕಡೆ ನೋಡುತ್ತಾನೆ. ತಾನು ಆ ಕೊಕ್ಕರೆಯಲ್ಲ, ಸಹನೆಯಿಂದಿರು ಎನ್ನುತ್ತಾಳೆ. ಮುನಿಗೋ ಪರಮಾಶ್ಚರ್ಯ. ನಿನಗೆ ಹಾಗೆ ಇದೆಲ್ಲ ತಿಳಿಯಿತು ಎಂದಾಗ ನನಗೆ ನನ್ನ ಪತಿಭಕ್ತಿಯನ್ನೂ ಬಿಟ್ಟು ಬೇರೇನೂ ಗೊತ್ತಿಲ್ಲ. ಅದರಿಂದಲೇ ಈ ಶಕ್ತಿ ನನಗೆ ಬಂದಿರುವುದು. ಧರ್ಮವ್ಯಾಧನೆಂಬವನನ್ನು ನೋಡು. ನಿರಹಂಕಾರವಾದ ಶ್ರೇಯಸ್ಸನ್ನು ಹೊಂದುವೆ ಎನ್ನುತ್ತಾಳೆ.

ಅವನು ಮಾಂಸ ವಿಕ್ರಯಿಯಾದ ಧರ್ಮವ್ಯಾಧನ ಬಳಿ ಬರುತ್ತಾನೆ. ಆ ಪತಿವ್ರತೆಯು ನಿನ್ನನ್ನಿಲ್ಲಿಗೆ ಕಳುಹಿಸಿದಳೇ ಎಂದಾತ ಕೇಳುತ್ತಾನೆ. ನಿನಗೆ ಹೇಗೆ ತಿಳಿಯಿತು ಎಂದಾಗ ಅವನು ಹೇಳುತ್ತಾನೆ. 'ನಾನು ಮಾತಾಪಿತೃಗಳ ಭಕ್ತ. ಅವರೇ ನನಗೆ ಗತಿ. ಅವರನ್ನು ಸ್ನಾನಮಾಡಿಸಿದ ಮೇಲೆ ನಾನು ಸ್ನಾನಮಾಡುತ್ತೇನೆ. ಅವರಿಗೆ ಊಟ ಮಾಡಿಸಿ ನಾನು ಮಾಡುತ್ತೇನೆ. ಅವರನ್ನ ಮಲಗಿಸಿ ನಾನು ಮಲಗುತ್ತೇನೆ. ಅದರಿಂದ ನನಗೆ ಈ ವಿಧವಾದ ಜ್ಞಾನ. ಅಹಂಕಾರವು ಜ್ಞಾನಕ್ಕೆ ವಿಘ್ನ. ಅದನ್ನು ನಾನೂ ಆ ಪತಿವ್ರತೆಯೂ ತೊರೆದಿದ್ದೇನೆ. ಆದ್ದರಿಂದಲೇ ನಮಗೆ ನಿರ್ಬಾಧಜ್ಞಾನ ಉಂಟಾಗಿದೆ. ನೀನೂ ಅಹಂಕಾರ ಬಿಟ್ಟು ಸ್ವಧರ್ಮವನ್ನು ಆಚರಿಸು.'

ಮಹೀಪಾಲನು ಈ ಕಥೆಯನ್ನು ಕೇಳಿ ತಾಯಿಯನ್ನು ಕರೆತರಲು ಹೋಗುತ್ತಾನೆ. ಅವನ ಹೆಂಡತಿ ಈ ವಿಷಯ ತಿಳಿಯದೆ ತನ್ನ ಪತಿ ಎಲ್ಲಿಯೋ ಹೋಗಿಬಿಟ್ಟಿದ್ದಾನೆಂದು ತಿಳಿದು ವ್ಯಥಿತಳಾಗುತ್ತಾಳೆ. ಆಗ ಬ್ರಾಹ್ಮಣನೊಬ್ಬ ಪಾಶುಪತನೊಬ್ಬನ ಕಥೆ ಹೇಳಿ ಧೈರ್ಯ ತುಂಬುತ್ತಾನೆ.

ಮತ್ತೊಬ್ಬ ಬ್ರಾಹ್ಮಣ ಇವಳನ್ನು ಸಮಾಧಾನಪಡಿಸುತ್ತಾ ನಳನ ಕಥೆಯನ್ನು ಹೇಳಿ ಚಿರಕಾಲವಿಯೋಗವನ್ನು ಹೊಂದಿದವರಿಗೂ ಪುನಃ ಸಮಾಗಮ ಆಗಿಯೇ ಆಗುತ್ತದೆ ಎನ್ನುತ್ತಾನೆ. ಮಹಾಪುರುಷರು ದುಃಖವನ್ನು ಅನುಭವಿಸಿಯೇ ಸುಖವನ್ನು ಹೊಂದುತ್ತಾರೆ ಎಂದೂ ವಿವರಿಸುತ್ತಾನೆ. ಅಸ್ತಮವನ್ನು ಅನುಭವಿಸಿ ಸೂರ್ಯ ಮೊದಲಾದವರು ಉದಯವನ್ನು ಹೊಂದುತ್ತಾರಷ್ಟೆ

ಮಹೀಪಾಲನು ಮಾತಾಪಿತೃಗಳೊಡನೆ ಬಂಧುಮತಿಯ ಬಳಿ ಬಂದು ತಾರಾಪುರದಲ್ಲಿ ರಾಜನಾಗಿ ಸುಖವಾಗಿರುತ್ತಾನೆ.

ಮರುಭೂತಿಯು ಹೇಳಿದ ಕಥಾವಳಿ ಇಲ್ಲಿಗೆ ಮುಗಿಯುತ್ತದೆ. ಚಂದ್ರಸ್ವಾಮಿಯ ಕಥೆಯ ದೊಡ್ಡ ಹಂದರದೊಳಗೆ ಈ ಎಲ್ಲ ಪ್ರಸಿದ್ಧಾಪ್ರಸಿದ್ಧಕಥೆಗಳೂ ಬರುತ್ತವೆ. ಈ ಅನುಪಮವಾದ ಅನುರಾಗರಮ್ಯವಾದ ವಿಚಿತ್ರವಾದ ಕಥೆಯನ್ನು ಕೇಳಿ ನರವಾಹನದತ್ತನು ಅಲಂಕಾರವತಿಯೊಡನೆ ಸಂತೋಷವನ್ನು ಅನುಭವಿಸುತ್ತಾನೆ.

ಒಟ್ಟಿನಲ್ಲಿ ಅಲಂಕಾರವತಿಯ ಹೆಸರಿನ ಈ ಲಂಬಕವು ಚಿತ್ರವಿಚಿತ್ರವಾದ ಘಟನಾವಳಿಗಳಿಗಿರುವ ಪ್ರಸಿದ್ಧಾಪ್ರಸಿದ್ಧ ಕಥೆಗಳ ಒಂದು ಸುಂದರಗುಚ್ಛ. ಎಲ್ಲವೂ ಕವಿಯೇ ಹೇಳುವಂತೆ ಅನುರಾಗರಮ್ಯವಾದ ಕಥೆಗಳೇ. ಆದರೆ ನಡುನಡುವೆ ವೇದಾಂತವಿಷಯಗಳು, ರಾಜನೀತಿ, ಸಾಮಾನ್ಯನೀತಿ, ಅನುಭವದ ಭಾಷಿತಗಳು, ಯಕ್ಷರು, ಪಾಶುಪತರು, ದೇವತೆಗಳು, ವಿದ್ಯಾಧರರು, ಯೋಗಿನಿಯರು, ಭಕ್ತಿ,

ಸಗುಣೋಪಾಸನೆ ಹೀಗೆ. ವೀರ, ಶೃಂಗಾರ, ರೌದ್ರ, ಕರುಣ, ಅದ್ಭುತ ರಸಗಳನ್ನೂ ಭಕ್ತಿಭಾವವನ್ನೂ ಹೊಂದಿರುವ ಇದರ ಕಥೆಗಳ ವಿವಿಧ ರಸಭಾವಗಳ ಸಂಕೀರ್ಣ ಮುಗ್ಧರನ್ನೂ ಪ್ರಬುದ್ಧರನ್ನೂ ಏಕಕಾಲದಲ್ಲಿ ಸಂತೋಷಪಡಿಸುವ ಶಕ್ತಿ ಇವುಗಳಲ್ಲಿವೆ.

ಈ ಲಂಬಕವನ್ನು ಆದಷ್ಟು ಮೂಲಕ್ಕೆ ಹತ್ತಿರವಾಗಿರುವಂತೆ ಅನುವಾದ ಮಾಡಲಾಗಿದೆ. ಆದರೂ ಅನುವಾದವು ಎಂದೂ ಮೂಲವಾಗುವುದಿಲ್ಲ. ಭಾಷೆ, ಶೈಲಿಗಳ ವಿಭಿನ್ನತೆಯಿಂದ, ಹಾಗೂ ಕೆಲವು ದುರೂಹ ಪ್ರಯೋಗಗಳಿಂದ, ಇಂದು ಬೇರೆ ಅರ್ಥವನ್ನು ಕೊಡುವ ಅಂದಿನ ಪ್ರಯೋಗಗಳಿಂದ ಎಲ್ಲ ಲಂಬಕಗಳಂತೆ ಇದೂ ಸವಾಲನ್ನು ಸ್ವಲ್ಪ ಮಟ್ಟಿಗೆ ಒಡ್ಡಿದೆಯಾದರೂ ಈ ಲಂಬಕದ ಅನುವಾದಪ್ರಯತ್ನವು ಒಂದು ಆಹ್ಲಾದಕರ ಪ್ರಯತ್ನವೇ ಆಗಿದೆ. ಇದನ್ನು ಉತ್ತಮಗೊಳಿಸುವ ಸಾಧ್ಯತೆಯಂತೂ ಇದ್ದೇ ಇದೆ ಎಂಬುದನ್ನು ನಮ್ರನಾಗಿ ಒಪ್ಪಿಕೊಳ್ಳುತ್ತಾ ಈ ಸಂಪುಟವೂ ಓದುಗರ ಪ್ರೀತಿಗೆ ಪಾತ್ರವಾಗುತ್ತದೆ ಎಂದು ನಂಬುತ್ತೇನೆ.

**ಪಿ.ಎಸ್. ರಾಮಾನುಜಂ**

ಸಂಪಾದಕರು

# ಪರಿವಿಡಿ


| | |
|---|---|
| ಮುನ್ನುಡಿ | v |
| ಶುಭಾಕಾಂಕ್ಷೆ | vi |
| ಪ್ರಾಸ್ತಾವಿಕ ನುಡಿ | vii |
| ಪರಿಚಯ | viii |
| ಪ್ರಸ್ತಾವನೆ | xiii |


# ಕಥಾಸರಿತ್ಸಾಗರ


| | |
|---|---|
| **ಅಲಂಕಾರವತೀ (ಒಂಬತ್ತನೆಯ ಲಂಬಕ)** | ೧-೨೯೦ |
| ಮೊದಲನೆಯ ತರಂಗ | ೩ |
| ಎರಡನೆಯ ತರಂಗ | ೪೦ |
| ಮೂರನೆಯ ತರಂಗ | ೧೦೬ |
| ನಾಲ್ಕನೆಯ ತರಂಗ | ೧೩೭ |
| ಐದನೆಯ ತರಂಗ | ೧೮೭ |
| ಆರನೆಯ ತರಂಗ | ೨೨೦ |

ಮಹಾಕವಿ ಶ್ರೀ ಸೋಮದೇವಭಟ್ಟನಿಂದ

ವಿರಚಿತವಾದ

# ಕಥಾಸರಿತ್ಸಾಗರ

(ಸಂಪುಟ ೭)

(ಲಂಬಕ: ಅಲಂಕಾರವತೀ)

ಮಹಾಕವಿ ಶ್ರೀ ಸೋಮದೇವಭಟ್ಟನಿಂದ

ವಿರಚಿತವಾದ

# ಕಥಾಸರಿತ್ಸಾಗರ

## 'ಅಲಂಕಾರವತೀ' ಎಂಬ ಒಂಬತ್ತನೆಯ ಲಂಬಕ

ಇದು ಬಹಳ ಹಿಂದೆ ಪರಶಿವ ಹಾಗೂ ಪರ್ವತರಾಜನ ಪುತ್ರಿಯಾದ ಪಾರ್ವತಿಯ ಪ್ರಣಯವೆಂಬ ಮಂದರ ಪರ್ವತದ ಮಥನದಿಂದ ಹೊರಹೊಮ್ಮಿ ಬಂದ ಕಥಾಮೃತ. ಇದನ್ನು ಪ್ರಯತ್ನದಿಂದ ಆಸ್ವಾದಿಸುವವರು ಶಿವನ ಅನುಗ್ರಹದಿಂದಾಗಿ ಯಾವುದೇ ವಿಘ್ನವಿಲ್ಲದೆ ಸಮೃದ್ಧಿಯನ್ನು ಪಡೆದು ಭೂಲೋಕದಲ್ಲಿ ಜ್ಞಾನಮಾರ್ಗದ ಧುರಂಧರರಾಗುತ್ತಾರೆ.

## ಮೊದಲನೆಯ ತರಂಗ

೧ ನಿಶುಂಭನ ಭಾರದಿಂದ ಬಾಗಿದ ಭೂಮಿಯಿಂದ ಪರ್ವತಗಳೂ ಬಗ್ಗಿಹೋಗಿ ಯಾವನನ್ನು (ವಿನಾಯಕನನ್ನು) ನಮಸ್ಕರಿಸುತ್ತಿರುವಂತೆ ಕಾಣುತ್ತವೆಯೋ ಅಂತಹ, ನರ್ತನ ಮಾಡುತ್ತಿರುವ ವಿನಾಯಕನನ್ನು ನಮಸ್ಕರಿಸುತ್ತೇವೆ.

---

ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತ ಃ

ಕಥಾಸರಿತ್ಸಾಗರಃ

ಅಲಂಕಾರವತೀ ನಾಮ ನವಮೋ ಲಂಬಕಃ

ಇದಂ ಗುರುಗಿರೀಂದ್ರಜಾಪ್ರಣಯಮಂದರಾಂದೋಲನಾತ್
ಪುರಾ ಕಿಲ ಕಥಾಮೃತಂ ಹರಮುಖಾಂಬುಧೇರುದ್ಗತಮ್ ।
ಪ್ರಸಹ್ಯ ರಸಯಂತಿ ಯೇ ವಿಗತವಿಘ್ನಲಬ್ಧರ್ಧಯೋ
ಧುರಂ ದಧತಿ ವೈಬುಧೀಂ ಭುವಿ ಭವಪ್ರಸಾದೇನ ತೇ ॥

## ಪ್ರಥಮಸ್ತರಂಗಃ

ನಿಶುಂಭಭುಜನಮ್ರೋರ್ವೀಖರ್ವಿತಾಃ ಪರ್ವತಾ ಅಪಿ।
ಯಂ ನಮಂತೀವ ನೃತ್ಯಂತಂ ನಮಾಮಸ್ತಂ ವಿನಾಯಕಮ್ ॥ ೧

೨. ಈ ರೀತಿಯಾಗಿ ವತ್ಸೇಶ್ವರನ ಮಗನು ವಿದ್ಯಾಧರಾಧೀಶರಿಂದ ಮೊದಲೇ ನಮಸ್ಕೃತನಾಗಿ ಕೌಶಾಂಬಿಯಲ್ಲಿ ತಂದೆಯ ಮನೆಯಲ್ಲಿ ವಾಸಮಾಡುತ್ತಿದ್ದನು.

೩. ಒಂದು ಬಾರಿ ನರವಾಹನದತ್ತನು ಬೇಟೆಗಾಗಿ ಹೋದವನು ಗೋಮುಖನೆಂಬ ಸ್ನೇಹಿತನೊಡಗೂಡಿ ಸೈನ್ಯವನ್ನು ಬಿಟ್ಟು ದೊಡ್ಡ ಕಾಡನ್ನು ಪ್ರವೇಶಿಸಿದನು.

೪. ಅಲ್ಲಿ ಅವನ ಬಲಗಣ್ಣು ಅದುರಿ ಶುಭಪ್ರಾಪ್ತಿಯು ಸೂಚಿತವಾಯಿತು. ಅಲ್ಲಿ ಅವನು ದಿವ್ಯವಾದ ವೀಣಾನಾದದಿಂದ ಕೂಡಿದ ಸಂಗೀತ ಧ್ವನಿಯನ್ನು ಕೇಳಿದನು.

೫ ಅದನ್ನು ಅನುಸರಿಸಿ ಹೋದಾಗ ಸಮೀಪದಲ್ಲೇ ಶಿವದೇವಾಲಯವೊಂದು ಅವನ ಕಣ್ಣಿಗೆ ಬಿದ್ದಿತು. ಆಗ ಅವನು ಕುದುರೆಯನ್ನು ಕಟ್ಟಿಹಾಕಿ ಆ ಶಿವಾಲಯವನ್ನು ಪ್ರವೇಶಿಸಿದನು.

೬ ಅಲ್ಲಿ ದೇವತೆಗಳಿಗೊಡೆಯನಾದ ಶಿವನ ಮುಂದೆ ದೇವಕನ್ಯೆಯೊಬ್ಬಳು ವೀಣಾವಾದನವನ್ನು ಮಾಡುತ್ತಿದ್ದಳು. ಅವಳ ಸುತ್ತ ಉತ್ತಮರಾದ ಕನ್ಯೆಯರ ಒಂದು ದೊಡ್ಡ ಪರಿವಾರವಿತ್ತು.

೭ ತನ್ನ ಸುತ್ತ ಕಾಂತಿಯ ಪ್ರವಾಹವನ್ನೇ ಹರಡುತ್ತಿದ್ದ ಅವಳನ್ನು ನೋಡಿದ ಕೂಡಲೇ ಅವಳು ನರವಾಹನದತ್ತನ ಹೃದಯವನ್ನು ಚಂದ್ರಮಂಡಲವು ಸಮುದ್ರವನ್ನು ಕಲಕುವಂತೆ ಆ ಕ್ಷಣದಲ್ಲೇ ಕ್ಷೋಭೆಗೊಳಿಸಿದಳು.

---

ಏವಂ ವತ್ಸೇಶ್ವರಸುತಃ ಕೌಶಾಂಬ್ಯಾಂ ಭವನೇ ಪಿತುಃ ।
ವಸನ್ವಿದ್ಯಾಧರಾಧೀಶೈರಾದಾವೇವ ಕೃತಾನತಿಃ ॥ ೨
ನರವಾಹನದತ್ತಃ ಸ ಕದಾಚಿನ್ಮೃಗಯಾಗತಃ ।
ವಿವೇಶ ಗೋಮುಖಸಖೋ ಮುಕ್ತಸೈನ್ಯೋ ಮಹದ್ವನಮ್ ॥ ೩
ಸ ತತ್ರ ದಕ್ಷಿಣೇನಾಕ್ಷ್ಣಾ ಸ್ಫುರತೋಕ್ತಶುಭಾಗಮಃ ।
ದಿವ್ಯವೀಣಾರಣಾನ್ಮಿಶ್ರಮಶೃಣೋದ್ಗೀತನಿಃಸ್ವನಮ್ ॥ ೪
ಗತ್ವಾ ತದನುಸಾರೇಣ ನಾತಿದೂರಂ ದದರ್ಶ ಸಃ ।
ಸ್ವಯಂಭ್ವಾಯತನಂ ಶೈವಂ ಸಂಯತಾಶ್ವೋ ವಿವೇಶ ಚ ॥ ೫
ತತ್ರೋಪವೀಣಯಂತೀಂ ಚ ದೇವೇಶಂ ದೇವಕನ್ಯಕಾಮ್ ।
ಅಪಶ್ಯದ್ವರಕನ್ಯಾಭಿರ್ಬಹ್ವೀಭಿಃ ಪರಿವಾರಿತಾಮ್ ॥ ೬
ಸಾ ದೃಷ್ಟ್ವಾ ತಸ್ಯ ಹೃದಯಂ ಪ್ರಸರತ್ಕಾಂತಿನಿರ್ಝರಾ ।
ಇಂದುಮೂರ್ತಿರಿವಾಂಭೋಧೇಃ ಕ್ಷೋಭಯಾಮಾಸ ತತ್ಕ್ಷಣಮ್ ॥ ೭

೮. ಅವಳೂ ಸರಸವೂ ಸ್ನೇಹಯುಕ್ತವೂ ಸುಂದರವೂ ಆದ ನೋಟದಿಂದ ಅವನನ್ನು ನೋಡಿ ಸ್ವರಸಾರಣೆಯನ್ನೇ ಮರೆತಳು. ಅವಳ ಮನಸ್ಸು ಅವನಲ್ಲಿಯೇ ಲಯಿಸಿತು.

೯–೧೦. ನರವಾಹನದತ್ತನ ಮನಸ್ಸನ್ನು ಅರಿತ ಗೋಮುಖನು ಅವಳ ಸಖಿಯನ್ನು "ಯಾರಿವಳು ? ಯಾರ ಮಗಳು ?' ಎಂದು ಕೇಳುವಷ್ಟರಲ್ಲಿ ಆಕಾಶದಿಂದ ಕೆಳಗಿಳಿಯುತ್ತಿದ್ದ ಚಿನ್ನದ ಕೆಂಪಾದ ಕಾಂತಿಯಂತೆ ಕಂಡ ಪ್ರೌಢವಿದ್ಯಾಧರಿಯೊಬ್ಬಳು ಇಳಿದು ಬಂದಳು. ಅವಳು ಆ ಕನ್ಯೆಗೆ ಸಮಾನಳಾಗಿದ್ದಳು.

೧೧. ಕೆಳಗೆ ಇಳಿದ ಅವಳು ಆ ಕನ್ಯೆಯ ಪಾರ್ಶ್ವದಲ್ಲಿ ಬಂದು ಕುಳಿತುಕೊಂಡಳು. ಆಗ ಆ ಕನ್ಯೆಯು ಮೇಲೆದ್ದು ಅವಳ ಪಾದಗಳಲ್ಲಿ ಎರಗಿದಳು.

೧೨. '"ನಿರ್ವಿಘ್ನವಾಗಿ ಸಮಸ್ತವಿದ್ಯಾಧರರ ಅಧಿಪತಿಯಾದ ಪತಿಯನ್ನು ಪಡೆ" ಎಂದು ಆ ಪ್ರೌಢೆಯು ಆ ಕನ್ಯೆಗೆ ಆಶೀರ್ವಾದವನ್ನು ಮಾಡಿದಳು.

೧೩. ಅನಂತರ ನರವಾಹನದತ್ತನು ಆ ಪ್ರೌಢೆಯ ಬಳಿಗೆ ಹೋಗಿ ನಮಸ್ಕಾರ ಮಾಡಿದಾಗ ಸೌಮ್ಯಳಾದ ವಿದ್ಯಾಧರಿಯು ಅವನಿಗೆ ಆಶೀರ್ವಾದವನ್ನು ಮಾಡಿದಳು. ಆಗ ಅವನು ಅವಳನ್ನು ಮೆಲ್ಲನೆ ಕೇಳಿದನು.

---

ಸಾಪಿ ತಂ ಸರಸಸ್ನಿಗ್ಧಮುಗ್ಧೇನಾಲೋಕ್ಯ ಚಕ್ಷುಷಾ ।
ತದೇಕಗತಚಿತ್ತಾಭೂದ್ವಿಸ್ಮೃತಸ್ವರಸಾರಣಾ ॥ ೮
ನರವಾಹನದತ್ತಸ್ಯ ಚಿತ್ತಜ್ಞೋ ಗೋಮುಖಸ್ತತಃ ।
ಕೇಯಂ ಕಸ್ಯ ಸುತಾ ಚೇತಿ ಯಾವತ್ಪೃಚ್ಛತಿ ತತ್ಸಖೀಃ ॥ ೯
ತಾವಚ್ಚ ಸದೃಶೀ ತಸ್ಯಾಃ ಪೂರ್ವಂ ಹೇಮಾರುಣಪ್ರಭಾ ।
ಪಶ್ಚಾದವತತಾರೈಕಾ ಪ್ರೌಢಾ ವಿದ್ಯಾಧರೀ ದಿವಃ ॥ ೧೦
ಸಾ ಚಾವತೀರ್ಯ ಕನ್ಯಾಯಾಸ್ತಸ್ಯಾಃ ಪಾರ್ಶ್ವ ಉಪಾವಿಶತ್ ।
ಕನ್ಯಾಪ್ಯುತ್ಥಾಯ ಸಾ ತಸ್ಯಾಃ ಪಾದಯೋರಪತತ್ತದಾ ॥ ೧೧
ಸರ್ವವಿದ್ಯಾಧರಾಧೀಶಂ ನಿರ್ವಿಘ್ನಂ ಪತಿಮಾಪ್ನುಹಿ ।
ಇತಿ ಪ್ರೌಢಾಪಿ ಸಾ ತಸ್ಯಾಃ ಕನ್ಯಾಯಾ ಆಶಿಷಂ ದದೌ ॥ ೧೨
ನರವಾಹನದತ್ತೋಽಥ ತಾಮುಪೇತ್ಯ ಪ್ರಣಮ್ಯ ಚ ।
ದತ್ತಾಶಿಷಂ ಪರ್ಯಪೃಚ್ಛತ್ಸೌಮ್ಯಾಂ ವಿದ್ಯಾಧರೀಂ ಶನೈಃ ॥ ೧೩

೧೪. ""ಅಮ್ಮ ! ಈ ಕನ್ಯೆಯು ಯಾರು ? ನಿನಗೆ ಇವಳು ಏನು ಸಂಬಂಧವೆಂದು ಹೇಳು”. ಆಗ ಆ ವಿದ್ಯಾಧರಿಯು ಅವನನ್ನು ಕುರಿತು ""ಕೇಳು. ಹೇಳುತ್ತೇನೆ” ಎಂದು ಹೇಳಿದಳು.

೧೫. ಗೌರಿಯ ಪತಿಯಾದ ಶಿವನ ಪರ್ವತದಲ್ಲಿ ಶ್ರೀಸುಂದರಪುರವೆಂಬ ಪಟ್ಟಣವಿದೆ. ಅಲ್ಲಿ ವಿದ್ಯಾಧರರ ಒಡೆಯನಾದ ಅಲಂಕಾರಶೀಲನೆಂಬುವನು ಇದ್ದಾನೆ.

೧೬. ಉದಾರವಾದ ಗುಣವುಳ್ಳ ಅವನಿಗೆ ಕಾಂಚನಪ್ರಭಾ ಎಂಬ ಪಟ್ಟಮಹಿಷಿಯಿದ್ದಾಳೆ. ಅವಳಲ್ಲಿ ಆ ರಾಜನಿಗೆ ಕಾಲಕ್ರಮದಲ್ಲಿ ಮಗನೊಬ್ಬನು ಹುಟ್ಟಿದನು.

೧೭. ಆಗ ಉಮೆಯು ಸ್ವಪ್ನದಲ್ಲಿ ಬಂದು ""ಇವನು ಧರ್ಮಪರನಾಗುವನು” ಎಂದು ಆದೇಶಿಸಿದುದರಿಂದ ತಂದೆಯು ಆ ಮಗನಿಗೆ ಧರ್ಮಶೀಲನೆಂಬ ಹೆಸರಿಟ್ಟನು.

೧೮. ಕ್ರಮೇಣ ತಾರುಣ್ಯವನ್ನು ಹೊಂದಿದ ಪುತ್ರ ಧರ್ಮಶೀಲನನ್ನು ವಿದ್ಯಾವಂತನನ್ನಾಗಿ ಮಾಡಿ ಯೌವರಾಜ್ಯದಲ್ಲಿ ಅಭಿಷೇಕ ಮಾಡಿದನು.

೧೯. ಅನಂತರ ಯುವರಾಜ ಪದವಿಯಲ್ಲಿದ್ದ ಆ ಧರ್ಮಶೀಲನು ಇಂದ್ರಿಯ ನಿಗ್ರಹವುಳ್ಳವನೂ ಧರ್ಮದಲ್ಲಿಯೇ ತತ್ಪರನೂ ಆಗಿ ತಂದೆಗಿಂತಲೂ ಅಧಿಕವಾಗಿ ಪ್ರಜೆಗಳನ್ನು ರಂಜಿಸಿದನು.

೨೦. ಅನಂತರ ಅಲಂಕಾರಶೀಲನ ಪತ್ನಿ ಕಾಂಚನಪ್ರಭೆಯು ಪುನಃ ಗರ್ಭಿಣಿಯಾಗಿ ಒಬ್ಬ ಹೆಣ್ಣುಮಗುವನ್ನು ಪ್ರಸವಿಸಿದಳು.

---

ಕೇಯಂ ಕನ್ಯಾ ಭವತ್ಯಂಬ ತವ ಕಾ ಕಥ್ಯತಾಮಿತಿ ।
ತತೋ ವಿದ್ಯಾಧರೀ ಸಾ ತಮುವಾಚ ಶೃಣು ವಚ್ಮ್ಯದಃ ॥ ೧೪
ಅಸ್ತಿ ಗೌರೀಗುರೋಃ ಶೈಲೇ ಶ್ರೀಸುಂದರಪುರಂ ಪುರಮ್ ।
ಆಸ್ತೇಽಲಂಕಾರಶೀಲಾಖ್ಯಸ್ತತ್ರ ವಿದ್ಯಾಧರೇಶ್ವರಃ ॥ ೧೫
ತಸ್ಯೋದಾರಗುಣಸ್ಯಾಸ್ತಿ ಮಹಿಷೀ ಕಾಂಚನಪ್ರಭಾ ।
ತಸ್ಯಾಂ ತಸ್ಯ ಚ ಕಾಲೇನ ರಾಜ್ಞಃ ಸೂನುರಜಾಯತ ॥ ೧೬
ಏಷ ಧರ್ಮಪರೋ ಭಾವೀತ್ಯಾದಿಷ್ಟಮುಮಯಾ ಯದಾ ।
ಸ್ವಪ್ನೇ ತದಾ ಧರ್ಮಶೀಲಂ ನಾಮ್ನಾ ತಮಕರೋತ್ಪಿತಾ ॥ ೧೭
ಕ್ರಮೇಣ ಯೌವನಪ್ರಾಪ್ತಂ ಧರ್ಮಶೀಲಂ ಸ ತಂ ಸುತಮ್ ।
ರಾಜಾ ಸಂಯೋಜ್ಯ ವಿದ್ಯಾಭಿರ್ಯೌವರಾಜ್ಯೇಽಭಿಷಿಕ್ತವಾನ್ ॥ ೧೮
ತತಃ ಸ ಯೌವರಾಜ್ಯಸ್ಥೋ ಧರ್ಮೈಕಪರಮೋ ವಶೀ ।
ಅರಂಜಯದ್ಧರ್ಮಶೀಲಃ ಪಿತುರಭ್ಯಧಿಕಂ ಪ್ರಜಾಃ ॥ ೧೯
ತತೋಽಲಂಕಾರಶೀಲಸ್ಯ ರಾಜ್ಞಃ ಸಾ ಕಾಂಚನಪ್ರಭಾ ।
ಅಂತರ್ವತ್ನೀ ಸತೀ ರಾಜ್ಞೀ ತಸ್ಯ ಸೂತೇ ಸ್ಮ ಕನ್ಯಕಾಮ್ ॥ ೨೦

೨೧. ಆಗ ದಿವ್ಯವಾಣಿಯೊಂದು ""ಈ ಕನ್ಯೆಯು ಚಕ್ರವರ್ತಿಯಾದ ನರವಾಹನದತ್ತನ ಭಾರ್ಯೆಯಾಗುವಳು" ಎಂದು ಘೋಷಿಸಿತು.

೨೨. ಅನಂತರ ಅಲಂಕಾರವತೀ ಎಂದು ಅವಳ ತಂದೆಯು ಅವಳಿಗೆ ಹೆಸರಿಟ್ಟನು: ಆ ಬಾಲೆಯು ಚಂದ್ರಕಲೆಯಂತೆ ಕ್ರಮವಾಗಿ ಬೆಳೆದಳು.

೨೩. ಕಾಲಕ್ರಮದಿಂದ ತಾರುಣ್ಯವನ್ನು ತಲುಪಿದ ಅವಳು ತನ್ನ ತಂದೆಯಿಂದ ವಿದ್ಯೆಯನ್ನು ಪಡೆದು ಭಕ್ತಿಯಿಂದ ಈಶ್ವರನ ಆಲಯಗಳನ್ನು ದರ್ಶಿಸಲು ಸಂಚರಿಸತೊಡಗಿದಳು.

೨೪. ಅಷ್ಟರಲ್ಲಿ ಶಾಂತಸ್ವಭಾವದವನೂ ಯುವಕನೂ ಆಗಿದ್ದ ಇವಳ ಸೋದರನಾದ ಧರ್ಮಶೀಲನು ತನ್ನ ತಂದೆಯನ್ನು ಕುರಿತು ಏಕಾಂತದಲ್ಲಿ ಹೀಗೆ ವಿಜ್ಞಾಪನೆ ಮಾಡಿದನು.

೨೫. "'ತಂದೆಯೇ ! ಕ್ಷಣಭಂಗುರವಾದ ಈ ಭೋಗಗಳು ನನ್ನನ್ನು ಸಂತೋಷಪಡಿಸುವುದಿಲ್ಲ. ಸಂಸಾರದಲ್ಲಿ ಕೊನೆಯಲ್ಲಿ ದುಃಖಮಯವಾಗದಿರುವ ಯಾವುದಾದರೂ ಇದೆಯೇನು ?

೨೬ ವ್ಯಾಸಮುನಿಯ ಈ ವಚನವನ್ನು ನೀನು ಕೇಳಿಲ್ಲವೇನು ? 'ಧನರಾಶಿಗಳೆಲ್ಲ ಕೊನೆಗೆ ನಾಶವಾಗುತ್ತವೆ. ಸಮುನ್ನತಿಗಳೆಲ್ಲ ಕೊನೆಗೆ ಪತನಕ್ಕೆ ಈಡಾಗುತ್ತವೆ.'

೨೭ ಸಂಯೋಗಗಳು ಕೊನೆಗೆ ವಿಯೋಗಗಳಾಗುತ್ತವೆ. ಜೀವಿತವು ಮರಣದಲ್ಲಿ ಕೊನೆಯಾಗುವುದಷ್ಟೆ ತಂದೆಯೇ ! ಆದುದರಿಂದ ನಶ್ವರವಾದ ಇವುಗಳಲ್ಲಿ ಉತ್ತಮ ಮನಸ್ಸುಳ್ಳವರಿಗೆ ಆಸಕ್ತಿಯೆಂತಹುದು ?

---

ನರವಾಹನದತ್ತಸ್ಯ ಭಾರ್ಯೈಷಾ ಚಕ್ರವರ್ತಿನಃ ।
ಕನ್ಯಾ ಭವಿತ್ರೀತಿ ತದಾ ದಿವ್ಯಾ ವಾಗುದಘೋಷಯತ್ ॥ ೨೧
ತತೋಽತ್ರ ತೇನಾಲಂಕಾರವತೀತಿ ಕೃತನಾಮಿಕಾ ।
ಪಿತ್ರಾ ಕ್ರಮೇಣಾವರ್ಧಿಷ್ಟ ಬಾಲಾ ಶಶಿಕಲೇವ ಸಾ ॥ ೨೨
ಕಾಲೇನ ಯೌವನಸ್ಥಾ ಚ ಪ್ರಾಪ್ತವಿದ್ಯಾ ನಿಜಾತ್ಪಿತುಃ ।
ತತ್ತದಾಯತನಂ ಶಂಭೋರ್ಭಕ್ತ್ಯಾ ಭ್ರಮಿತುಮುದ್ಯತಾ ॥ ೨೩
ತಾವಚ್ಚ ಧರ್ಮಶೀಲೋಽಸ್ಯಾ ಭ್ರಾತಾ ಶಾಂತೋ ಯುವಾಪಿ ಸನ್ ।
ರಹೋಽಲಂಕಾರಶೀಲಂ ತಂ ಪಿತರಂ ಸ್ವಂ ವ್ಯಜಿಜ್ಞಪತ್ ॥ ೨೪
ನ ಮಾಂ ಭೋಗಾ ಇಮೇ ತಾತ ಪ್ರೀಣಂತಿ ಕ್ಷಣಭಂಗುರಾಃ ।
ಕಿಂ ತದಸ್ತಿ ಹಿ ಸಂಸಾರೇ ಪರ್ಯಂತವಿರಸಂ ನ ಯತ್ ॥ ೨೫
ತಥಾ ಚೈತತ್ತ್ವಯಾ ಕಿಂ ನ ಶ್ರುತಂ ವ್ಯಾಸಮುನೇರ್ವಚಃ ।
ಸರ್ವೇ ಕ್ಷಯಾಂತಾ ನಿಚಯಾಃ ಪತನಾಂತಾಃ ಸಮುಚ್ಛ್ರಯಾಃ ॥ ೨೬
ಸಂಯೋಗಾ ವಿಪ್ರಯೋಗಾಂತಾ ಮರಣಾಂತಂ ಹಿ ಜೀವಿತಮ್ ।
ತದೇಷು ಕಾ ರತಿಸ್ತಾತ ನಶ್ವರೇಷು ಮನಸ್ವಿನಾಮ್ ॥ ೨೭

೨೮. ಪರಲೋಕದಲ್ಲಿ ಭೋಗಗಳು ಜೊತೆಗೆ ಬರುವುದಿಲ್ಲ. ಹಾಗೆಯೇ ಕೂಡಿಟ್ಟ ಹಣವೂ (ಬರುವುದಿಲ್ಲ). ಒಬ್ಬನೇ ಬಂಧುವಾದ ಧರ್ಮವು ಮಾತ್ರ ಒಂದು ಹೆಜ್ಜೆಯನ್ನೂ ಬಿಡುವುದಿಲ್ಲ.

೨೯. ಆದುದರಿಂದ ವನಕ್ಕೆ ಹೋಗಿ ನಾನು ಉತ್ತಮವಾದ ತಪಸ್ಸನ್ನು ಸಾಧಿಸುತ್ತೇನೆ. ಯಾವುದರಿಂದ ಶಾಶ್ವತವಾದ ಪರಮಪದವು ಲಭಿಸುತ್ತದೆಯೋ ಅದನ್ನು ನಾನು ಹೊಂದಬೇಕು."

೩೦. ಹೀಗೆ ಹೇಳಿದ ಧರ್ಮಶೀಲನನ್ನು ಕುರಿತು ವ್ಯಾಕುಲಚಿತ್ತನಾದ ರಾಜಾ ಅಲಂಕಾರಶೀಲನು ಕಣ್ಣೀರು ತುಂಬಿಕೊಂಡು ಹೀಗೆ ಹೇಳಿದನು.

೩೧. "ಪುತ್ರನೇ ! ನೀನಿನ್ನೂ ಬಾಲಕ. ನಿನಗೆ ಅಸಮಯದಲ್ಲಿ ಈ ಬುದ್ಧಿಭ್ರಮವು ಎಂತಹುದು ? ತಾರುಣ್ಯವನ್ನು ಅನುಭವಿಸಿದ ಮೇಲೆಯಷ್ಟೆ ಸಜ್ಜನರು ವೈರಾಗ್ಯವನ್ನು ಬಯಸುತ್ತಾರೆ.

೩೨. ಗೃಹಸ್ಥನಾಗಿ ಧರ್ಮದಿಂದ ರಾಜ್ಯವನ್ನು ಪಾಲಿಸುವ ನಿನಗೆ ಇದು ಭೋಗಗಳನ್ನು ಅನುಭವಿಸುವ ಕಾಲ. ವೈರಾಗ್ಯವು ಯುಕ್ತವಲ್ಲ.'

೩೩. ತಂದೆಯ ಮಾತನ್ನು ಕೇಳಿ ಧರ್ಮಶೀಲನು ಮತ್ತೆ ಹೇಳಿದನು. "ಈ ಲೋಕದಲ್ಲಿ ಶಮ ಮತ್ತು ಅಶಮಗಳಿಗೆ ವಯಸ್ಸಿನ ನಿಯಮವಿಲ್ಲ.

---

ಪರತ್ರ ಚ ಸಹಾಯಾಂತಿ ನ ಭೋಗಾ ನಾರ್ಥಸಂಚಯಾಃ ।
ಏಕಸ್ತು ಬಾಂಧವೋ ಧರ್ಮೋ ನ ಜಹಾತಿ ಪದಾತ್ಪದಮ್ ॥ ೨೮
ತಸ್ಮಾದ್ವನಾಯ ಗತ್ವಾಹಂ ಸಾಧಯಾಮ್ಯುತ್ತಮಂ ತಪಃ ।
ಆಸಾದಯೇಯಂ ತದ್ಯೇನ ಶಾಶ್ವತಂ ಪರಮಂ ಪದಮ್ ॥ ೨೯
ಇತ್ಯುಕ್ತವಂತಂ ತಂ ಪುತ್ರಂ ಧರ್ಮಶೀಲಂ ಸಮಾಕುಲಃ ।
ರಾಜಾಲಂಕಾರಶೀಲೋಽಥ ವಕ್ತಿ ಸ್ಮೋದಶ್ರುಲೋಚನಃ ॥ ೩೦
ಬಾಲಸ್ಯೈವ ತವಾಕಾಂಡೇ ಕೋಽಯಂ ಪುತ್ರ ಮತಿಭ್ರಮಃ।
ಉಪಯುಕ್ತೇ ಹಿ ತಾರುಣ್ಯೇ ಪ್ರಶಮಃ ಸದ್ಭಿರಿಷ್ಯತೇ ॥ ೩೧
ಕೃತದಾರಸ್ಯ ಧರ್ಮೇಣ ರಾಜ್ಯಂ ಪಾಲಯತಸ್ತವ ।
ಭೋಗಾನ್ ಭೋಕ್ತುಮಯಂ ಕಾಲೋ ನ ವೈರಾಗ್ಯಸ್ಯ ಸಾಂಪ್ರತಮ್ ॥ ೩೨
ಏತತ್ಪಿತುರ್ವಚಃ ಶ್ರುತ್ವಾ ಧರ್ಮಶೀಲೋಽಭ್ಯಧಾತ್ಪುನಃ ।
ನ ಶಮಾಶಮಯೋರತ್ರ ನಿಯಮೋಽಸ್ತಿ ವಯಃಕೃತಃ ॥ ೩೩

೩೪. ಈಶ್ವರನಿಂದ ಅನುಗ್ರಹೀತನಾದ ಒಬ್ಬ ಬಾಲಕನೂ ಶಮವನ್ನು ಹೊಂದುತ್ತಾನೆಯಷ್ಟೆ ಮುದುಕನಾದರೂ ನಿಂದಿತನಾದ ವ್ಯಕ್ತಿಯು ಶಮವನ್ನು ಹೊಂದುವುದಿಲ್ಲ.

೩೫ ನನಗೆ ರಾಜ್ಯದಲ್ಲೂ ಆಸಕ್ತಿ ಇಲ್ಲ. ಮದುವೆಯಲ್ಲೂ ಇಲ್ಲ. ಶಿವನ ಆರಾಧನ ರೂಪವಾದ ತಪಸ್ಸೇ ನನ್ನ ಬದುಕಿನ ಫಲ.'

೩೬ ಹೀಗೆ ಹೇಳುವವನನ್ನು ಎಷ್ಟೇ ಪ್ರಯತ್ನಪಟ್ಟರೂ ನಿವಾರಿಸಲು ಸಾಧ್ಯವಿಲ್ಲವೆಂದರಿತು ತಂದೆಯಾದ ಅಲಂಕಾರ ಶೀಲನು ಕಣ್ಣೀರು ಸುರಿಸಿ ಹೇಳಿದನು.

೩೭ 'ಮಗನೇ ! ತರುಣನಾಗಿರುವವನಾಗಿದ್ದರೂ ನಿನಗೆ ಈ ರೀತಿಯಾದ ಈ ವೈರಾಗ್ಯವು ಒಂದು ವೇಳೆ ಇರುವುದಾದರೆ ವೃದ್ಧನಾದ ನನಗೆ ಇಲ್ಲವೇನು? ನಾನೂ ವನವನ್ನು ಆಶ್ರಯಿಸುತ್ತೇನೆ.'

೩೮. ಹೀಗೆ ಹೇಳಿ (ಅಲಂಕಾರಶೀಲನು) ಮರ್ತ್ಯಲೋಕಕ್ಕೆ ಹೋಗಿ ರತ್ನಗಳ ಮತ್ತು ಸುವರ್ಣದ ಹತ್ತು ಸಾವಿರ ತೂಕದ ಭಾರವನ್ನು ದರಿದ್ರರಾದ ಬ್ರಾಹ್ಮಣರಿಗೆ ದಾನ ಮಾಡಿದನು.

೩೯. ಮತ್ತು ತನ್ನ ಪಟ್ಟಣಕ್ಕೆ ಬಂದು ಭಾರ್ಯೆಯಾದ ಕಾಂಚನ ಪ್ರಭೆಯನ್ನು ಕುರಿತು ಹೇಳಿದನು. "ನೀನು ನಿನ್ನ ನಗರದಲ್ಲಿಯೇ ಇರಬೇಕು. ಇದು ನನ್ನ ಆಜ್ಞೆ.'

---

ಈಶ್ವರಾನುಗೃಹೀತೋ ಹಿ ಕಶ್ಚಿದ್ಬಾಲೋಽಪಿ ಶಾಮ್ಯತಿ ।
ವೃದ್ಧೋಽಪಿ ನ ಶಮಂ ಯಾತಿ ಕಶ್ಚಿತ್ಕಾಪುರುಷಃ ಪುನಃ ॥ ೩೪
ನ ಚ ರಾಜ್ಯೇ ಮತಿರ್ಮೇಽಸ್ತಿ ನ ವಾ ದಾರಪರಿಗ್ರಹೇ ।
ಮಮೈತಜ್ಜೀವಿತಫಲಂ ಯಚ್ಛಿವಾರಾಧನಂ ತಪಃ ॥ ೩೫
ಇತಿ ಬ್ರುವಾಣಂ ಯತ್ನೇನಾಪ್ಯನಿವಾರ್ಯಮವೇಕ್ಷ್ಯ ತಮ್ ।
ಪಿತಾಽಲಂಕಾರಶೀಲೋಽಸೌ ವಿಮುಚ್ಯಾಶ್ರೂಣ್ಯಭಾಷತ ॥ ೩೬
ಯದಿ ಯೂನೋಽಪಿ ತೇ ಪುತ್ರ ವೈರಾಗ್ಯಮಿದಮೀದೃಶಮ್ ।
ನಾಸ್ತಿ ವೃದ್ಧಸ್ಯ ಮೇ ತತ್ಕಿಮಹಮಪ್ಯಾಶ್ರಯೇ ವನಮ್ ॥ ೩೭
ಇತ್ಯುಕ್ತ್ವಾ ಮರ್ತ್ಯಲೋಕಂ ಚ ಗತ್ವಾ ಭಾರಾಯುತಂ ದದೌ ।
ಬ್ರಾಹ್ಮಣೇಭ್ಯೋ ದರಿದ್ರೇಭ್ಯೋ ರತ್ನಾನಾಂ ಕಾಂಚನಸ್ಯ ಚ ॥ ೩೮
ಏತ್ಯ ಚ ಸ್ವಪುರಂ ಭಾರ್ಯಾಮವೋಚತ್ಕಾಂಚನಪ್ರಭಾಮ್ ।
ತ್ವಯಾ ಮದಾಜ್ಞಯೇಹೈವ ಸ್ಥಾತವ್ಯಂ ನಗರೇ ನಿಜೇ ॥ ೩೯

೩೦. ಇಲ್ಲಿ ಅಲಂಕಾರವತಿಯನ್ನು ರಕ್ಷಣೆಮಾಡಿಕೊಂಡಿರು. ವರ್ಷವು ಪೂರ್ಣವಾದಾಗ ಈ ಕನ್ಯೆಯಾದ ಅಲಂಕಾರವತಿಗೆ ಇಂದಿನ ತಿಥಿಯಲ್ಲಿ ಶುಭವಾದ ವಿವಾಹ ಲಗ್ನವಿರುತ್ತದೆ.

೩೧. ಇವಳನ್ನು ನಾನು ಆಗ ನರವಾಹನದತ್ತನಿಗೆ (ಕನ್ಯಾ) ದಾನವಾಗಿ ಕೊಡುವೆನು ಮತ್ತು ಚಕ್ರವರ್ತಿಯಾದ ಆ ಅಳಿಯನು ನಮ್ಮ ಪಟ್ಟಣವನ್ನು ರಕ್ಷಿಸುವನು.

೩೨. ಹಾಗೆ ಹೇಳಿ ರಾಜನು ತನ್ನ ಪತ್ನಿಯಿಂದ ಮಾತು ಪಡೆದುಕೊಂಡು, ಮಗಳೊಡನೆ ಗೋಳಾಡುತ್ತಿದ್ದ ಅವಳನ್ನು ಹಿಂದಕ್ಕೆ ಕಳುಹಿಸಿ ಪುತ್ರನೊಡನೆ ಕಾಡನ್ನು ಸೇರಿದನು.

೩೩. ರಾಜನ ಹೆಂಡತಿಯಾದ ಕಾಂಚನಪ್ರಭೆಯು ಮಗಳೊಡನೆ ಆ ಪಟ್ಟಣದಲ್ಲೇ ತಂಗಿದಳು. ಸಾಧ್ವಿಯಾದ ಯಾವ ಪತ್ನಿಯು ತಾನೆ ಪತಿಯ ಆಜ್ಞೆಯನ್ನು ಮೀರಿಯಾಳು !

೩೪. ಅನಂತರ ರಾಜನ ಮಗಳಾದ ಅಲಂಕಾರವತಿಯು ಸಂಚಾರಮಾಡುತ್ತಾ ಅನೇಕ ದೇವಾಲಯಗಳನ್ನು ದರ್ಶಿಸಿದಳು. ಅವಳನ್ನು ಅವಳ ತಾಯಿಯು ಪ್ರೀತಿಯಿಂದ ಹಿಂಬಾಲಿಸಿದಳು.

೩೫. ಪ್ರಜ್ಞಪ್ತಿಯೆಂಬ ವಿದ್ಯೆಯು ಒಂದು ಬಾರಿ ಅಲಂಕಾರವತಿಗೆ ಹೀಗೆ ಹೇಳಿದಳು. "ಕಶ್ಮೀರದೇಶಕ್ಕೆ ಹೋಗಿ ಸ್ವಯಂಭು ಕ್ಷೇತ್ರಗಳನ್ನು ಪೂಜಿಸು.

೩೬. ಅನಂತರ ಸಮಸ್ತ ವಿದ್ಯಾಧರೇಂದ್ರರಿಗೆ ಮುಖ್ಯ ಚಕ್ರವರ್ತಿಯಾದ ನರವಾಹನದತ್ತನನ್ನು ಯಾವ ತೊಂದರೆಯೂ ಇಲ್ಲದೆ ಪತಿಯಾಗಿ ಪಡೆಯುವೆ.'

---

ರಕ್ಷಾಲಂಕಾರವತ್ಯೇಷಾ ಕನ್ಯಾ ಪೂರ್ಣೇ ಚ ವತ್ಸರೇ ।
ಅಸ್ತಿ ವೈವಾಹಲಗ್ನೋಽಸ್ಯಾಸ್ತಿಥಾವದ್ಯತನೇ ಶುಭಃ ॥ ೩೦
ನರವಾಹನದತ್ತಾಯ ದಾಸ್ಯಾಮ್ಯೇತಾಮಹಂ ತದಾ ।
ಸ ಚಕ್ರವರ್ತೀ ಜಾಮಾತಾ ಪಾಸ್ಯತೀದಂ ಪುರಂ ಚ ನಃ ॥ ೩೧
ಇತ್ಯುಕ್ತ್ವಾ ದತ್ತಶಪಥಾಂ ಭಾರ್ಯಾಂ ರಾಜಾ ನಿವರ್ತ್ಯ ಸಃ ।
ಸಸುತಾಂ ವಿಲಪಂತೀಂ ತಾಂ ಸಪುತ್ರಃ ಶಿಶ್ರಿಯೇ ವನಮ್ ॥ ೩೨
ಸಾ ತು ಸ್ವಪುರಮಧ್ಯಾಸ್ತ ತದ್ಭಾರ್ಯಾ ಕಾಂಚನಪ್ರಭಾ ।
ದುಹಿತ್ರಾ ಸಹ ಸಾಧ್ವೀ ಸ್ತ್ರೀ ಭರ್ತ್ರಾಜ್ಞಾಂ ಕಾ ಹಿ ಲಂಘಯೇತ್ ॥ ೩೩
ತತ್ಸುತಾಥ ತಯಾ ಮಾತ್ರಾ ಸಹ ಸ್ನೇಹಾನುಯಾತಯಾ ।
ಅಲಂಕಾರವತೀ ಭ್ರಾಂತಾ ಬಹೂನ್ಯಾಯತನಾನಿ ಚ ॥ ೩೪
ಏಕದಾ ಕಾಂ ಚ ವಕ್ತಿ ಸ್ಮ ವಿದ್ಯಾ ಪ್ರಜ್ಞಪ್ತಿಸಂಜ್ಞಿಕಾ ।
ಕಶ್ಮೀರೇಷು ಸ್ವಯಂಭೂನಿ ಗತ್ವಾ ಕ್ಷೇತ್ರಾಣಿ ಪೂಜಯ ॥ ೩೫
ನರವಾಹನದತ್ತಂ ಹಿ ನಿರ್ವಿಘ್ನಂ ತಂ ಪತಿಂ ತತಃ ।
ಸರ್ವವಿದ್ಯಾಧರೇಂದ್ರೈಕಚಕ್ರವರ್ತಿನಮಾಪ್ಸ್ಯಸಿ ॥ ೩೬

೪೭. ವಿದ್ಯೆಯು ಹೀಗೆ ಹೇಳಿದಮೇಲೆ ಅಲಂಕಾರವತಿಯು ತಾಯಿಯೊಡನೆ ಕಶ್ಮೀರದೇಶಕ್ಕೆ ಹೋಗಿ ಅಲ್ಲಿಯ ಪುಣ್ಯಕ್ಷೇತ್ರಗಳಲ್ಲಿ ಶಂಭುವನ್ನು ಪೂಜಿಸಿದಳು.

೪೮–೪೯. ನಂದಿಕ್ಷೇತ್ರ ಮಹಾದೇವಪರ್ವತ, ಅಮರಪರ್ವತ, ಸುರೇಶ್ವರಿಯ ಪರ್ವತಗಳು, ಅಂತೆಯೇ ವಿಜಯಕ್ಷೇತ್ರ, ಕಪಟೇಶ್ವರ ಮೊದಲಾದ ಕ್ಷೇತ್ರಗಳಲ್ಲಿ ಗಿರಿಜಾಪತಿಯನ್ನು ಚೆನ್ನಾಗಿ ಪೂಜಿಸಿ ಆ ವಿದ್ಯಾಧರೇಂದ್ರ ಕನ್ಯೆಯೂ ಅವಳ ತಾಯಿಯೂ ಮನೆಗೆ ಹಿಂದಿರುಗಿದರು.

೫೦. "ಸುಂದರನೇ, ಇವಳೇ ಆ ಅಲಂಕಾರವತಿ. ನಾನೇ ಅವಳ ತಾಯಿಯಾದ ಕಾಂಚನಪ್ರಭೆ

೫೧. ಈ ದಿವಸ ಇವಳು ನನಗೆ ಹೇಳದೆಯೇ ಈ ಶಿವಾಲಯಕ್ಕೆ ಬಂದಿದ್ದಾಳೆ. ಅದನ್ನು ಪ್ರಜ್ಞಪ್ತಿಯೆಂಬ ವಿದ್ಯೆಯಿಂದ ತಿಳಿದು ನಾನು ಇಲ್ಲಿಗೆ ಬಂದೆ.

೫೨. ನೀನೂ ಇಲ್ಲಿಗೆ ಬಂದಿರುವುದು ಅವಳಿಂದಲೇ ನನಗೆ ತಿಳಿಯಿತು. ಆದುದರಿಂದ ದೇವತೆಯಿಂದ ಆದಿಷ್ಟಳಾದ ನನ್ನ ಈ ಮಗಳನ್ನು ವಿವಾಹ ಮಾಡಿಕೋ.

೫೩. ನಾಳೆಯೇ ಇವಳ ತಂದೆ ನಿರ್ಧರಿಸಿದ ವಿವಾಹದ ದಿವಸ. ಆದುದರಿಂದ ಪುತ್ರನೇ ! ಇಂದು ನಿನ್ನೂರಾದ ಕೌಶಾಂಬೀ ನಗರಕ್ಕೆ ನೀನು ಹೊರಡು.

---

ಇತ್ಯುಕ್ತ್ವಾ ವಿದ್ಯಯಾ ಗತ್ವಾ ಕಾಶ್ಮೀರಾನ್ ಸಾ ಸಮಾತೃಕಾ ।
ಅಲಂಕಾರವತೀ ಶಂಭುಂ ಪುಣ್ಯಕ್ಷೇತ್ರೇಷ್ವಪೂಜಯತ್ ॥ ೪೭

ನಂದಿಕ್ಷೇತ್ರೇ ಮಹಾದೇವಗಿರಾವಮರಪರ್ವತೇ ।
ಸುರೇಶ್ವರ್ಯಾದ್ರಿಷು ತಥಾ ವಿಜಯೇ ಕಪಟೇಶ್ವರೇ ॥ ೪೮

ಏವಮಾದಿಷು ಸಂಪೂಜ್ಯ ಕ್ಷೇತ್ರೇಷು ಗಿರಿಜಾಪತಿಂ ।
ವಿದ್ಯಾಧರೇಂದ್ರಕನ್ಯಾ ಸಾ ತನ್ಮಾತಾ ಚಾಗತೇ ಗೃಹಾನ್ ॥ ೪೯

ತಾಮೇತಾಂ ವಿದ್ಧ್ಯಲಂಕಾರವತೀಂ ಸುಭಗ ಕನ್ಯಕಾಂ ।
ತಾಂ ಚ ಮಾತರಮೇತಸ್ಯಾ ವಿದ್ಧಿ ಮಾಂ ಕಾಂಚನಪ್ರಭಾಮ್ ॥ ೫೦

ಅದ್ಯ ಚೈಷಾ ಮಮಾನುಕ್ತ್ವೈವಾಗತೇಮಂ ಶಿವಾಲಯಮ್ ।
ತತಃ ಪ್ರಜ್ಞಪ್ತಿವಿದ್ಯಾತೋ ವಿಜ್ಞಾಯಾಹಮಿಹಾಗತಾ ॥ ೫೧

ತನ್ಮುಖಾದೇವ ಚ ಜ್ಞಾತಸ್ತ್ವಮಪೀಹಾಗತೋ ಮಯಾ ।
ತದೇತಾಂ ದೇವತಾದಿಷ್ಟಾಮುಪಯಚ್ಛಸ್ವ ಮೇ ಸುತಾಂ ॥ ೫೨

ಪ್ರಾತಶ್ಚ ಸೋಽಸ್ಯಾಃ ಪಿತ್ರೋಕ್ತಃ ಪ್ರಾಪ್ತೋ ವೈವಾಹವಾಸರಃ ।
ತದದ್ಯ ಪುತ್ರ ಕೌಶಾಂಬೀಂ ಸ್ವಾಮೇವ ನಗರೀಂ ವ್ರಜ ॥ ೫೩

೨೪. ನಾವಿಬ್ಬರೂ ಈ ತಪೋವನದಿಂದ ಬೆಳಿಗ್ಗೆ ಹೊರಟು ಬರುತ್ತೇವೆ. ರಾಜನಾದ ಅಲಂಕಾರಶೀಲನು ಸ್ವತಃ ಮಗಳನ್ನು ನಿನಗೆ (ಕನ್ಯಾ) ದಾನ ಮಾಡಿಕೊಡುವನು.'

೨೫. ಈ ರೀತಿಯಾಗಿ ಆ ಕಾಂಚನ ಪ್ರಭೆಯು ಹೇಳಲು ಅಲಂಕಾರವತಿಗೂ ನರವಾಹನದತ್ತನಿಗೂ ವಿವರಿಸಲು ಸಾಧ್ಯವಿಲ್ಲದ ಒಂದು ಅವಸ್ಥೆಯು ಉಂಟಾಯಿತು.

೨೬. ದಿನದ ಕೊನೆಯು ಸಮೀಪಿಸಲು ಅವರಿಬ್ಬರ ಕಣ್ಣುಗಳೂ ಕಣ್ಣೀರಿನಿಂದ ತುಂಬಿಕೊಂಡು ಒಂದು ರಾತ್ರಿಯ ವಿರಹವನ್ನು ಸಹಿಸಲಾರದ ಚಕ್ರವಾಕಪಕ್ಷಿಗಳ ಜೋಡಿಗೆ ಉಂಟಾಗುವ ಅವಸ್ಥೆಯೇ ಅವರಿಬ್ಬರಿಗೂ ಉಂಟಾಯಿತು.

೨೭. ಆ ಸ್ಥಿತಿಯಲ್ಲಿದ್ದ ಅವರಿಬ್ಬರನ್ನೂ ನೋಡಿ ಕಾಂಚನಪ್ರಭೆಯು ಹೇಳಿದಳು. "ಒಂದು ರಾತ್ರಿಯ ವಿಯೋಗದಲ್ಲೇ ನಿಮ್ಮಿಬ್ಬರಿಗೂ ಈ ಅಧೈರ್ಯವೇನು ?

೨೮. ಅನಿಶ್ಚಿತವಾದ ಅವಧಿಯವರೆಗೂ ಧೀರರಾದವರು ಚಿರಕಾಲ ವಿರಹವನ್ನು ಸಹಿಸುತ್ತಾರೆ. ರಾಮಭದ್ರನ ಹಾಗೂ ಸೀತಾದೇವಿಯ ಕಥೆಯನ್ನು ಕೇಳಿ.

೨೯. ಹಿಂದೆ ಅಯೋಧ್ಯೆಯ ಅಧಿಪತಿಯಾದ ರಾಜನಾದ ದಶರಥನಿಗೆ ರಾಮನೆಂಬ ಮಗನಿದ್ದನು. ಅವನು ಭರತ, ಶತ್ರುಘ್ನ, ಲಕ್ಷ್ಮಣರಿಗೆ ಅಣ್ಣನಾಗಿದ್ದನು.

---

ಆವಾಮಿತಶ್ಚ ಗಚ್ಛಾವಃ ಪ್ರಾತರೇತ್ಯ ತಪೋವನಾತ್ ।
ರಾಜಾಲಂಕಾರಶೀಲಸ್ತೇ ದಾಸ್ಯತ್ಯೇತಾಂ ಸುತಾಂ ಸ್ವಯಮ್ ॥ ೨೪

ಏವಂ ತಯೋಕ್ತೇಽಲಂಕಾರವತ್ಯಾಸ್ತಸ್ಯಾಶ್ಚ ತಸ್ಯ ಚ ।
ನರವಾಹನದತ್ತಸ್ಯ ಕಾಪ್ಯವಸ್ಥಾ ದ್ವಯೋರಭೂತ್ ॥ ೨೫

ಅನ್ಯೋನ್ಯರಜನೀಮಾತ್ರವಿಶ್ಲೇಷಾಸಹನಾತ್ಮನೋಃ ।
ಚಕ್ರಾಹ್ವಯೋರಿವಾಸನ್ನೇ ದಿನಾಂತೇ ಸಾಶ್ರುನೇತ್ರಯೋಃ ॥ ೨೬

ದೃಷ್ಟ್ವಾ ತೌ ತಾದೃಶೌ ದ್ವಾವಪ್ಯವಾದೀತ್ಕಾಂಚನಪ್ರಭಾ ।
ಕಿಮೇಕರಾತ್ರಿವಿಶ್ಲೇಷೇ ಹ್ಯಧೈರ್ಯಂ ಯುವಯೋರಿದಮ್ ॥ ೨೭

ಅನಿಶ್ಚಿತಾವಧಿಂ ಧೀರಾಃ ಸಹಂತೇ ವಿರಹಂ ಚಿರಮ್ ।
ಶ್ರೂಯತಾಂ ರಾಮಭದ್ರಸ್ಯ ಸೀತಾದೇವ್ಯಾಸ್ತಥಾ ಕಥಾ ॥ ೨೮

ರಾಜ್ಞೋ ದಶರಥಸ್ಯಾಸೀದಯೋಧ್ಯಾಧಿಪತೇಃ ಸುತಃ ।
ರಾಮೋ ಭರತಶತ್ರುಘ್ನಲಕ್ಷ್ಮಣಾನಾಂ ಪುರಾಗ್ರಜಃ ॥ ೨೯

೬೦. ಅವನು ರಾವಣನನ್ನು ಸಂಹಾರಮಾಡುವುದಕ್ಕಾಗಿ ವಿಷ್ಣುವಿನ ಅಂಶವಾಗಿ ಅವತರಿಸಿದನು. ಜನಕಪುತ್ರಿಯಾದ ಸೀತೆಯು ಅವನಿಗೆ ಪ್ರಾಣಪ್ರಿಯಳಾದ ಭಾರ್ಯೆಯಾಗಿದ್ದಳು.

೬೧. ವಿಧಿಯೋಗದಿಂದ ಅವನ ತಂದೆಯು ಭರತನಲ್ಲಿ ರಾಜ್ಯವನ್ನು ಕೊಟ್ಟು ರಾಮನನ್ನು ಸೀತೆ ಹಾಗೂ ಲಕ್ಷ್ಮಣನೊಡನೆ ಕಾಡಿಗೆ ಕಳುಹಿಸಿದನು.

೬೨. ಅಲ್ಲಿ ಅವನ ಪ್ರಿಯೆಯಾದ ಸೀತೆಯನ್ನು ರಾವಣನು ಮಾಯೆಯಿಂದ ಅಪಹರಿಸಿದನು. ದಾರಿಯಲ್ಲಿ ಜಟಾಯುವನ್ನು ಕೊಂದು ಅವನು ಸೀತೆಯನ್ನು ಲಂಕಾಪಟ್ಟಣಕ್ಕೆ ಒಯ್ದನು.

೬೩. ಅನಂತರ ವಿರಹಿಯಾದ ರಾಮನು ವಾಲಿಯ ವಧೆಯನ್ನು ಮಾಡಿ ಸುಗ್ರೀವನನ್ನು (ಮಿತ್ರನನ್ನಾಗಿ) ಸ್ವೀಕರಿಸಿ ಮಾರುತಿಯನ್ನು ಕಳಿಸಿ ಸೀತೆಯ ವೃತ್ತಾಂತವನ್ನು ತಿಳಿದನು.

೬೪. ರಾಮನು (ಅಲ್ಲಿಂದ) ಹೊರಟು ಸಮುದ್ರದಲ್ಲಿ ಸೇತುವೆಯನ್ನು ಕಟ್ಟಿ ರಾವಣನನ್ನು ಕೊಂದು ಲಂಕೆಯನ್ನು ವಿಭೀಷಣನಿಗೆ ಕೊಟ್ಟು ಸೀತೆಯನ್ನು ಮತ್ತೆ ಕರೆತಂದನು.

೬೫. ನಂತರ ಕಾಡಿನಿಂದ ಹಿಂದಿರುಗಿ ಬಂದು ಭರತನು ಹಿಂದಿರುಗಿಸಿದ ರಾಜ್ಯವನ್ನು ಅಯೋಧ್ಯೆಯಲ್ಲಿ ಆಳುತ್ತಿರುವಾಗ ಅವನ ಪತ್ನಿ ಸೀತೆಯು ಗರ್ಭವನ್ನು ಧರಿಸಿದಳು.

---

ವಿಷ್ಣೋರವತತಾರಾಂಶೋ ರಾವಣೋಚ್ಛೇದನಾಯ ಯಃ ।
ಸೀತಾ ತಸ್ಯಾಭವದ್ಭಾರ್ಯಾ ಪ್ರಾಣೇಶಾ ಜನಕಾತ್ಮಜಾ ॥ ೬೦
ಸ ಪಿತ್ರಾ ಭರತನ್ಯಸ್ತರಾಜ್ಯೇನ ವಿಧಿಯೋಗತಃ ।
ಪ್ರೇಷಿತೋಽಭೂದ್ವನಂ ಸಾಕಂ ಸೀತಯಾ ಲಕ್ಷ್ಮಣೇನ ಚ ॥ ೬೧
ತತ್ರ ತಸ್ಯಾಹರತ್ಸೀತಾಂ ಮಾಯಯಾ ರಾವಣಃ ಪ್ರಿಯಮ್ ।
ನಿನಾಯ ಚ ಪುರೀಂ ಲಂಕಾಂ ಪಥಿ ಹತ್ವಾ ಜಟಾಯುಷಮ್ ॥ ೬೨
ತತಃ ಸ ರಾಮೋ ವಿರಹೀ ಸುಗ್ರೀವಂ ವಾಲಿನೋ ವಧಾತ್ ।
ಸ್ವೀಕೃತ್ಯ ಮಾರುತಿಂ ಪ್ರೇಷ್ಯ ತತ್ಪ್ರವೃತ್ತಿಮಬುಧ್ಯತ ॥ ೬೩
ಗತ್ವಾ ಚ ಸಾಗರೇ ಸೇತುಂ ಬದ್ಧ್ವಾ ಹತ್ವಾ ಚ ರಾವಣಮ್ ।
ಲಂಕಾಂ ವಿಭೀಷಣೇ ನ್ಯಸ್ಯ ಸೀತಾಂ ಪ್ರತ್ಯಾಜಹಾರ ಸಃ ॥ ೬೪
ಅಥಾವೃತ್ತ್ಯ ವನತಃ ಶಾಸತೋ ಭರತಾರ್ಪಿತಮ್ ।
ತಸ್ಯ ರಾಜ್ಯಮಯೋಧ್ಯಾಯಾಂ ಸೀತಾ ಗರ್ಭಮಧತ್ತ ಸಾ ॥ ೬೫

೬೬. ಅಷ್ಟರಲ್ಲಿ ಅಯೋಧ್ಯೆಯಲ್ಲಿ ಪ್ರಜೆಗಳ ವರ್ತನೆಯನ್ನು ತಿಳಿಯುವುದಕ್ಕಾಗಿ ಕೆಲವೇ ಜನರೊಡನೆ ಸಾಧಾರಣವಾದ ವೇಷ ಧರಿಸಿ ಪ್ರಭುವಾದ ರಾಮನು ಯಥೇಚ್ಛವಾಗಿ ಸಂಚರಿಸುತ್ತಿದ್ದಾಗ ಒಬ್ಬ ಪುರುಷನನ್ನು ಕಂಡನು.

೬೭. (ಅವನು ತನ್ನ) ಹೆಂಡತಿಯನ್ನು ಹಿಡಿದುಕೊಂಡು. "ಇವಳು ಬೇರೆಯವನ ಮನೆಗೆ ಹೋಗಿದ್ದಳು' ಎಂದು ಅಪವಾದವನ್ನು ಮಾಡುತ್ತಾ ಅವಳನ್ನು ಮನೆಯಿಂದ ಹೊರದೂಡುತ್ತಿದ್ದನು.

೬೮. "ರಾಕ್ಷಸನ ಮನೆಯಲ್ಲಿ ವಾಸಮಾಡಿದ ಸೀತೆಯನ್ನು ರಾಮದೇವನು ಬಿಟ್ಟುಬಿಡಲಿಲ್ಲ. ಈ ಪತಿಯು ಅವನಿಗಿಂತಲೂ ಹೆಚ್ಚಾದವನು. ಇವನು ಜ್ಞಾತಿಯ ಮನೆಗೆ ಹೋಗಿದ್ದ ನನ್ನನ್ನು ತ್ಯಜಿಸುತ್ತಾನೆ.'

೬೯. ಎಂದು ಅವನ ಗೃಹಿಣಿಯು ತನ್ನ ಪತಿಯನ್ನು ಕುರಿತು ಹೇಳುತ್ತಿರುವುದನ್ನು ರಾಜನಾದ ರಾಮನು ಕೇಳಿಸಿಕೊಂಡು ಖೇದಗೊಂಡು (ರಾಜಗೃಹದ) ಒಳಗೆ ಹೋದನು.

೭೦. ಮತ್ತು ಲೋಕದ ಅಪವಾದದ ದೆಸೆಯಿಂದ ಭಯಗೊಂಡು ಸೀತೆಯನ್ನು ಕಾಡಿನಲ್ಲಿ ತ್ಯಾಗಮಾಡಿದನು. ಯಶೋವಂತನಾದವನು ವಿರಹದ ಕಷ್ಟವನ್ನು ಸಹಿಸುತ್ತಾನೆ. ಅಪಕೀರ್ತಿಯನ್ನು ಮಾತ್ರ ಸಹಿಸುವುದಿಲ್ಲ.

೭೧. ಸೀತೆಯು ಗರ್ಭದಿಂದ ದಣಿದಿದ್ದು ದೈವವಶಾತ್ ವಾಲ್ಮೀಕಿಯ ಆಶ್ರಮವನ್ನು ಸೇರಿದಳು. ಆ ಮಹರ್ಷಿಯು ಅವಳನ್ನು ಸಮಾಧಾನಪಡಿಸಿ ಆ ಆಶ್ರಮದಲ್ಲಿಯೇ ಇರಿಸಿದನು.

---

ತಾವಚ್ಚಾತ್ರ ಪ್ರಜಾಚೇಷ್ಟಾಂ ಜ್ಞಾತುಮಲ್ಪಪರಿಚ್ಛದಃ ।
ಸ್ವೈರಂ ಪರಿಭ್ರಮನ್ನೇಕಂ ಸೋಽಪಶ್ಯತ್ ಪುರುಷಂ ಪ್ರಭುಃ ॥ ೬೬
ಹಸ್ತೇ ಗೃಹೀತ್ವಾ ಗೃಹಿಣೀಂ ನಿರಸ್ಯಂತಂ ನಿಜಾದ್ಗೃಹಾತ್ ।
ಪರಸ್ಯೇಯಂ ಗೃಹಮಗಾದಿತಿ ದೋಷಾನುಕೀರ್ತನಾತ್ ॥ ೬೭
ರಕ್ಷೋಗೃಹೋಷಿತಾ ಸೀತಾ ರಾಮದೇವೇನ ನೋಽಜ್ಝಿತಾ ।
ಅಯಮಭ್ಯಧಿಕೋ ಯೋ ಮಾಮುಜ್ಝತಿ ಜ್ಞಾತಿವೇಶ್ಮಗಾಮ್ ॥ ೬೮
ಇತಿ ತದ್ಗೃಹಿಣೀಂ ತಾಂ ಚ ಬ್ರುವತೀಂ ತಂ ನಿಜಂ ಪತಿಮ್ ।
ರಾಮೋ ರಾಜಾ ಸ ಶುಶ್ರಾವ ಖಿನ್ನಶ್ಚಾಭ್ಯಂತರಂ ಯಯೌ ॥ ೬೯
ಲೋಕಾಪವಾದಭೀತಶ್ಚ ಸೀತಾಂ ತತ್ಯಾಜ ತಾಂ ವನೇ ।
ಸಹತೇ ವಿರಹಕ್ಲೇಶಂ ಯಶಸ್ವೀ ನಾಯಶಃ ಪುನಃ ॥ ೭೦
ಸಾ ಚ ಗರ್ಭಾಲಸಾ ದೈವಾದ್ವಾಲ್ಮೀಕೇಃ ಪ್ರಾಪದಾಶ್ರಮಮ್ ।
ತೇನರ್ಷಿಣಾ ಸಮಾಶ್ವಾಸ್ಯ ತತ್ರೈವ ಗ್ರಾಹಿತಾ ಸ್ಥಿತಿಮ್ ॥ ೭೧

೭೧. "ನಿಜವಾಗಿ ಈ ಸೀತೆಯು ತಪ್ಪಿತಸ್ಥಳು ಅಲ್ಲದಿದ್ದರೆ ಪತಿಯು ಇವಳನ್ನು ಏಕೆ ಬಿಡಬೇಕು ? ಇವಳನ್ನು ನೋಡಿದರೆ ಈ ಲೋಕದಲ್ಲಿ ನಿತ್ಯವೂ ನಮಗೆ ಪಾಪವು ಬರುತ್ತದೆ.

೭೨. ವಾಲ್ಮೀಕಿಯು ದಯೆಯಿಂದ ಈ ಸೀತೆಯನ್ನು ಆಶ್ರಮದಿಂದ ಹೊರಗೆ ಹಾಕಲಿಲ್ಲ. ಇವಳನ್ನು ನೋಡುವುದರಿಂದ ಉಂಟಾಗುವ ಪಾಪವು ತಪಸ್ಸಿನಿಂದ ದೂರ ವಾಗುತ್ತದೆ.

೭೩. ಆದುದರಿಂದ ಬನ್ನಿ. ಯಾವುದಾದರೂ ಬೇರೆ ಆಶ್ರಮಕ್ಕೆ ಹೋಗೋಣ' ಎಂದು ಅಲ್ಲಿದ್ದ ಇತರ ಮುನಿಗಳು ಪರಸ್ಪರ ಸಮಾಲೋಚನೆ ಮಾಡಿದರು.

೭೪. ಈ ವಿಷಯವನ್ನು ತಿಳಿದು ವಾಲ್ಮೀಕಿಯು ಅವರನ್ನು ಕುರಿತು ""ದ್ವಿಜರೇ ! ಈ ವಿಷಯದಲ್ಲಿ ಸಂಶಯವಿಲ್ಲ. ಇವಳು ಶುದ್ಧಳು ಎಂದು ನಾನು ಧ್ಯಾನದಿಂದ ಕಂಡೆನು" ಎಂದು ಹೇಳಿದನು.

೭೫. ಹಾಗಾದರೂ ಕೂಡ ಅವರಿಗೆ ವಿಶ್ವಾಸವುಂಟಾಗಲಿಲ್ಲವಾದ್ದರಿಂದ ಸೀತೆಯು ಹೇಳಿದಳು. ""ನಿಮಗೆ ತಿಳಿದಂತೆ ಇಲ್ಲಿ ನನ್ನನ್ನು ಪರೀಕ್ಷಿಸಿ.

೭೬. ನಾನು ಅಶುದ್ಧಳಾಗಿದ್ದರೆ ನನ್ನ ತಲೆಯನ್ನು ಕತ್ತರಿಸುವ ಶಿಕ್ಷೆಯನ್ನು ಕೊಡಿರಿ". ಆ ಮಾತನ್ನು ಕೇಳಿ ಕರುಣೆಯಿಂದ ಅಲ್ಲಿದ್ದ ಮುನಿಗಳು ಹೇಳಿದರು.

---

ನೂನಂ ಸೀತಾ ಸದೋಷೇಯಂ ತ್ಯಕ್ತಾ ಭರ್ತ್ರಾನ್ಯಥಾ ಕಥಮ್ ।
ತದೇತದ್ದರ್ಶನಾನ್ನಿತ್ಯಂ ಪಾಪಂ ಸಂಕ್ರಾಮತೀಹ ನಃ ॥ ೭೧
ವಾಲ್ಮೀಕಿಃ ಕೃಪಯಾ ಚೈನಾಂ ನಿರ್ವಾಸಯತಿ ನಾಶ್ರಮಾತ್ ।
ಏತದ್ದರ್ಶನಜಂ ಪಾಪಂ ತಪಸಾ ಚ ವ್ಯಪೋಹತಿ ॥ ೭೨
ತದೇತ ಯಾವದ್ಗಚ್ಛಾಮೋ ದ್ವಿತೀಯಂ ಕಂಚಿದಾಶ್ರಮಮ್ ।
ಇತಿ ಸಂಮಂತ್ರಯಾಮಾಸುಸ್ತತ್ರಾನ್ಯೇ ಮುನಯಸ್ತದಾ ॥ ೭೩
ತದ್ಬುದ್ಧ್ವಾ ತಾನ್ಸ ವಾಲ್ಮೀಕಿರಬ್ರವೀನ್ನಾತ್ರ ಸಂಶಯಃ ।
ಶುದ್ಧೈಷಾ ಪ್ರಣಿಧಾನೇನ ಮಯಾ ದೃಷ್ಟಾ ದ್ವಿಜಾ ಇತಿ ॥ ೭೪
ತಥಾಪ್ಯಪ್ರತ್ಯಯಸ್ತೇಷಾಂ ಯದಾ ಸೀತಾ ತದಾಬ್ರವೀತ್ ।
ಭಗವಂತೋ ಯಥಾ ವಿತ್ಥ ತಥಾ ಶೋಧಯತೇಹ ಮಾಮ್ ॥ ೭೫
ಅಶುದ್ಧಾಯಾಃ ಶಿರಚ್ಛೇದನಿಗ್ರಹಃ ಕ್ರಿಯತಾಂ ಮಮ ।
ತಚ್ಛ್ರುತ್ವಾ ಜಾತಕರುಣಾ ಜಗದುರ್ಮುನಯೋಽತ್ರ ತೇ ॥ ೭೬

೭೮–೮೦. ""ಈ ಕಾಡಿನಲ್ಲಿ ಟೀಟಿಭಸರಸ್ಸು ಎಂಬ ದೊಡ್ಡ ತೀರ್ಥವಿದೆ. ಹಿಂದೆ ಒಬ್ಬ ಟೀಟಿಭಿಯು ಬೇರೆಯವನೊಡನೆ ಸಹವಾಸವಿದೆಯೆಂದು ನಂಬಿದ (ಅವಳ) ಪತಿಯಿಂದ ಸುಳ್ಳಾಗಿ ಅಪವಾದಕ್ಕೊಳಗಾದಳು. ಆ ಸಾಧ್ವಿಯು ರಕ್ಷಕರಿಲ್ಲದವಳಾಗಿ ಭೂದೇವಿಯನ್ನೂ ಲೋಕಪಾಲಕರನ್ನೂ ಕೂಗಿದಳು. ಅವರು ಅವಳ ಶುದ್ಧಿಗಾಗಿ ಆ ಸರಸ್ಸನ್ನು ನಿರ್ಮಿಸಿದರು. ಅಲ್ಲಿಯೇ ಈ ರಾಘವನ ಪತ್ನಿಯು (ಸೀತೆಯು) ನಮಗಾಗಿ ಪರಿಶುದ್ಧಿಯನ್ನು ಆಚರಿಸಲಿ." ಹೀಗೆ ಹೇಳಿದ ಆ ಮುನಿಗಳ ಸಂಗಡ ಜಾನಕಿಯು ಆ ಸರಸ್ಸಿಗೆ ಹೋದಳು.

೮೧. ""ಅಮ್ಮ ! ವಸುಂಧರೇ ! ಒಂದು ವೇಳೆ ಆರ್ಯಪುತ್ರನನ್ನು ಬಿಟ್ಟು ಬೇರೆಯವನ ಬಳಿ ಸ್ವಪ್ನದಲ್ಲಿಯೂ ಕೂಡ ನನ್ನ ಮನಸ್ಸು ಹೋಗದಿದ್ದಲ್ಲಿ ಈ ಸರೋವರವನ್ನು ನಾನು ದಾಟಿ ಬರುವೆನು"

೮೨. ಹೀಗೆ ಹೇಳಿ ಆ ಸರಸ್ಸಿನಲ್ಲಿ ಆ ಸತಿಯು ಪ್ರವೇಶಿಸಿದಳು. ಪ್ರತ್ಯಕ್ಷಳಾದ ಭೂದೇವಿಯು (ಸೀತೆಯನ್ನು) ಮಡಿಲಿನಲ್ಲಿ ಎತ್ತಿಕೊಂಡು ದಡಕ್ಕೆ ಒಯ್ದಳು.

೮೩. ಅನಂತರ ಆ ಎಲ್ಲ ಮುನಿಗಳೂ ಆ ಮಹಾಸಾಧ್ವಿಗೆ ನಮಸ್ಕಾರ ಮಾಡಿದರು. ಮತ್ತು (ಅಂತಹ) ಸೀತೆಯನ್ನು ಪರಿತ್ಯಾಗ ಮಾಡಿದ ರಾಘವನಿಗೆ ಕೋಪದಿಂದ ಶಾಪವನ್ನು ಕೊಡಲು ಬಯಸಿದರು.

---

ಅಸ್ತ್ಯತ್ರ ಟೀಟಿಭಸರೋನಾಮ ತೀರ್ಥಂ ಮಹದ್ವನೇ ।
ಟೀಟಿಭೀ ಹಿ ಪುರಾ ಕಾಪಿ ಭರ್ತ್ರಾನ್ಯಾಸಂಗಶಂಕಿನಾ ॥ ೭೮
ಮಿಥ್ಯೈವ ದೂಷಿತಾ ಸಾಧ್ವೀ ಚಕ್ರಂದಾಶರಣಾ ಭುವಮ್ ।
ಲೋಕಪಾಲಾಂಶ್ಚ ತೈಸ್ತಸ್ಯಾಃ ಶುದ್ಧ್ಯರ್ಥಂ ತದ್ವಿನಿರ್ಮಿತಮ್ ॥ ೭೯
ತತ್ರೈಷಾ ರಾಘವವಧೂಃ ಪರಿಶುದ್ಧಿಂ ಕರೋತು ನಃ ।
ಇತ್ಯುಕ್ತವದ್ಭಿಸ್ತೈಃ ಸಾಕಂ ಜಾನಕೀ ತತ್ಸರೋ ಯಯೌ ॥ ೮೦
ಯದ್ಯಾರ್ಯಪುತ್ರಾದನ್ಯತ್ರ ನ ಸ್ವಪ್ನೇऽಪಿ ಮನೋ ಮಮ ।
ತದುತ್ತರೇಯಂ ಸರಸಃ ಪಾರಮಂಬ ವಸುಂಧರೇ ॥ ೮೧
ಇತ್ಯುಕ್ತ್ವೈವ ಪ್ರವಿಷ್ಟಾ ಚ ತಸ್ಮಿನ್ ಸರಸಿ ಸಾ ಸತೀ ।
ನೀತಾ ಚ ಪಾರಮುತ್ಸಂಗೇ ಕೃತ್ವಾವಿರ್ಭೂತಯಾ ಭುವಾ ॥ ೮೨
ತತಸ್ತಾಂ ತೇ ಮಹಾಸಾಧ್ವೀಂ ಪ್ರಣೇಮುರ್ಮುನಯೋऽಖಿಲಾಃ ।
ರಾಘವಂ ಶಪ್ತುಮೈಚ್ಛಂಶ್ಚ ತತ್ಪರಿತ್ಯಾಗಮನ್ಯುನಾ ॥ ೮೩

೬೪. '''ನೀವುಗಳು ಆರ್ಯಪುತ್ರನಿಗೆ ಅಮಂಗಳವನ್ನು ಚಿಂತಿಸಬಾರದು. ಪಾಪಿಯಾದ ನನಗೇ ಶಾಪವನ್ನು ನೀವು ಕೊಡಿರಿ. ನಿಮಗಾಗಿ ಈ ಕೈಜೋಡಿಸುತ್ತೇನೆ.''

೬೫. ಹೀಗೆ ಪತಿವ್ರತೆಯಾದ ಆ ಸೀತೆಯು ಆ ಮುನಿಗಳನ್ನು ತಡೆದುದರಿಂದ ಅವರು ಸಂತುಷ್ಟರಾಗಿ ಅವಳಿಗೆ ಪುತ್ರವತಿಯಾಗಲೆಂದು ಆಶೀರ್ವಾದವನ್ನು ಮಾಡಿದರು.

೬೬. ಅನಂತರ ಆ ಆಶ್ರಮದಲ್ಲಿಯೇ ಇದ್ದ ಸೀತೆಯು ಯುಕ್ತಸಮಯದಲ್ಲಿ ಪುತ್ರನನ್ನು ಪ್ರಸವಿಸಿದಳು. ವಾಲ್ಮೀಕಿ ಮುನಿಯು ಆ ಶಿಶುವಿಗೆ ಲವ ಎಂದು ನಾಮಕರಣವನ್ನು ಮಾಡಿದನು.

೬೭. ಒಂದು ಬಾರಿ ಆ ಬಾಲಕನನ್ನು ಎತ್ತಿಕೊಂಡು ಸೀತೆಯು ಸ್ನಾನ ಮಾಡಲು ಹೋಗಿದ್ದಾಗ ಶೂನ್ಯವಾದ ಆ ಪರ್ಣಶಾಲೆಯನ್ನು ನೋಡಿ ಆ ಮುನಿಯು ಚಿಂತಿಸಿದನು.

೬೮. 'ಮಗುವನ್ನು ಇಲ್ಲಿಟ್ಟು ಸ್ನಾನಮಾಡಲು ಸೀತೆಯು ಹೋಗಿದ್ದಾಳೆ. ಹಾಗಾದರೆ ಆ ಮಗುವು ಎಲ್ಲಿ ? ನಿಜವಾಗಿ ಒಂದು ಕ್ರೂರ ಮೃಗವು ಇಲ್ಲಿಗೆ ಬಂದು ಮಗುವನ್ನು ಎತ್ತಿಕೊಂಡು ಹೋಗಿರಬೇಕು. ಆದುದರಿಂದ ಮತ್ತೊಂದು ಶಿಶುವನ್ನು ಸೃಷ್ಟಿಸುತ್ತೇನೆ

೬೯. ಇಲ್ಲದಿದ್ದರೆ ಸ್ನಾನ ಮಾಡಿ ಬಂದ ಸೀತೆಯು ಪ್ರಾಣಗಳನ್ನು ಇಟ್ಟುಕೊಳ್ಳುವುದಿಲ್ಲ.' ಹೀಗೆ ಚಿಂತಿಸಿ ದರ್ಭೆಗಳಿಂದ ಪವಿತ್ರವನ್ನು ಮಾಡಿ ಶಿಶುವನ್ನು ಸೃಷ್ಟಿಸಿದನು.

---

ಯುಷ್ಮಾಭಿರಾರ್ಯಪುತ್ರಸ್ಯ ನ ಧ್ಯಾತವ್ಯಮಮಂಗಲಮ್ ।
ಶಪ್ತುಮರ್ಹಥ ಮಾಮೇವ ಪಾಪಾಮಂಜಲಿರೇಷ ವಃ ॥ ೬೪

ಇತಿ ಯದ್ವಾರಯಾಮಾಸ ಸೀತಾ ತಾನ್‌ಸಾ ಪತಿವ್ರತಾ ।
ತೇನ ತೇ ಮುನಯಸ್ತುಷ್ಟಾಸ್ತಸ್ಯಾಃ ಪುತ್ರಾಶಿಷಂ ದದುಃ ॥ ೬೫

ತತಃ ಸಾ ತತ್ರ ತಿಷ್ಠಂತೀ ಸಮಯೇ ಸುಷುವೇ ಸುತಮ್ ।
ತಂ ಚ ನಾಮ್ನಾ ಲವಂ ಚಕ್ರೇ ಸ ವಾಲ್ಮೀಕಿಮುನಿಃ ಶಿಶುಮ್ ॥ ೬೬

ಬಾಲಮಾದಾಯ ತಂ ತಸ್ಯಾಂ ಗತಾಯಾಂ ಸ್ನಾತುಮೇಕದಾ ।
ತೇನ ಶೂನ್ಯಂ ತದುಟಜಂ ದೃಷ್ಟ್ವಾ ಸೋಽಚಿಂತಯನ್ಮುನಿಃ ॥ ೬೭

ಸ್ಥಾಪಯಿತ್ವಾರ್ಭಕಂ ಯಾತಿ ಸ್ನಾತುಂ ಸಾ ತತ್‌ಕ್ವ ಸೋಽರ್ಭಕಃ ।
ನೀತಃ ಸ ಶ್ವಾಪದೇನೇಹ ನೂನಮನ್ಯಂ ಸೃಜಾಮಿ ತತ್ ॥ ೬೮

ಸ್ನಾತ್ವಾಗತಾನ್ಯಥಾ ಸೀತಾ ನ ಪ್ರಾಣಾನ್ ಧಾರಯೇದಿಹ ।
ಇತಿ ಧ್ಯಾತ್ವಾ ಕುಶೈಃ ಕೃತ್ವಾ ಪವಿತ್ರಂ ನಿರ್ಮಮೇಽರ್ಭಕಮ್ ॥ ೬೯

೯೦. ಲವನಿಗೆ ಸದೃಶವಾದ ಆ ಮಗುವನ್ನು ಅಲ್ಲಿ ಆ ಮುನಿಯು ಇರಿಸಿದನು. ಸೀತೆಯು ಬಂದು ಆ ಶಿಶುವನ್ನು ನೋಡಿ ವಾಲ್ಮೀಕಿ ಮುನಿಯನ್ನು ಕುರಿತು ವಿಜ್ಞಾಪಿಸಿದಳು.

೯೧. "ನನ್ನ ಬಾಲಕನು (ನನ್ನೊಡನೆ) ಇದ್ದಾನೆ. ಆದುದರಿಂದ ಈ ಬೇರೆ ಬಾಲಕ ಎಲ್ಲಿಂದ ಬಂದನು, ಮುನಿಯೇ !" ಅದನ್ನು ಕೇಳಿ ಆ ಮುನಿಯು ನಡೆದ ವೃತ್ತಾಂತವನ್ನು ಹಾಗೆಯೇ ಹೇಳಿ ಸೀತೆಯನ್ನು ಕುರಿತು ಹೇಳಿದನು.

೯೨. ""ಇದು ಆಗಬೇಕಾದದ್ದು. ಪರಿಶುದ್ಧಳೇ ! ಈ ಎರಡನೆಯ ಪುತ್ರನನ್ನು ಸ್ವೀಕರಿಸು. ನಾನು ಇವನಿಗೆ ಕುಶ ಎಂದು ನಾಮಕರಣವನ್ನು ಮಾಡಿದ್ದೇನೆ. ಏಕೆಂದರೆ ನನ್ನ ಮಹಿಮೆಯಿಂದ ಇವನು ದರ್ಭೆಗಳಿಂದ ಸೃಷ್ಟನಾದನು."

೯೩. ಹೀಗೆ ಆ ಮುನಿಯು ಹೇಳಲಾಗಿ ಸೀತೆಯು ಲವಕುಶರೆಂಬ ಆ ಇಬ್ಬರು ಪುತ್ರರನ್ನು ಆ ಆಶ್ರಮದಲ್ಲಿಯೇ ಬೆಳೆಸಿದಳು. ಅವರು ಆ ಮುನಿಯಿಂದಲೇ ಸಂಸ್ಕೃತರಾಗಿ ಬೆಳೆದರು.

೯೪. ಬಾಲಕರಾಗಿರುವಾಗಲೇ ಆ ಕ್ಷತ್ರಿಯ ಕುಮಾರಿಬ್ಬರೂ ವಾಲ್ಮೀಕಿ ಮುನಿಯಿಂದಲೇ ದಿವ್ಯವಾದ ಅಸ್ತ್ರಸಮೂಹವನ್ನೂ ಸಮಸ್ತ ವಿದ್ಯೆಗಳನ್ನೂ ಪಡೆದರು.

೯೫. ಒಂದು ಬಾರಿ ಆಶ್ರಮದ ಜಿಂಕೆಯನ್ನು ಕೊಂದು ಅದರ ಮಾಂಸವನ್ನು ಅವರಿಬ್ಬರೂ ತಂದರು. ವಾಲ್ಮೀಕಿಯ ಪೂಜಾಮೂರ್ತಿಯಾದ ಲಿಂಗವನ್ನು ಆಟದ ವಸ್ತುವನ್ನಾಗಿ ಮಾಡಿದರು.

---

ಲವಸ್ಯ ಸದೃಶಂ ತಂ ಚ ಸ ತಥಾಸ್ಥಾಪಯನ್ಮುನಿಃ ।
ಆಗತಾ ತಂ ಚ ಸಾ ದೃಷ್ಟ್ವಾ ಮುನಿಂ ಸೀತಾ ವ್ಯಜಿಜ್ಞಪತ್ ॥ ೯೦
ಸ್ವಕೋಽಯಂ ಮೇ ಸ್ಥಿತೋ ಬಾಲಸ್ತದೇಷೋಽನ್ಯಃ ಕುತೋ ಮುನೇ ।
ತಚ್ಛ್ರುತ್ವಾ ಸ ಯಥಾವೃತ್ತಮುಕ್ತ್ವಾ ಮುನಿರುವಾಚ ತಾಮ್ ॥ ೯೧
ಭವಿತವ್ಯಂ ಗೃಹಾಣೈತಂ ದ್ವಿತೀಯಮನಘೇ ಸುತಮ್ ।
ಕುಶಸಂಜ್ಞಂ ಮಯಾಯಂ ಯತ್ಸ್ವಪ್ರಭಾವಾತ್ ಕುಶೈಃ ಕೃತಃ ॥ ೯೨
ಇತ್ಯುಕ್ತಾ ತೇನ ಮುನಿನಾ ಸೀತಾ ಲವಕುಶೌ ಸುತೌ ।
ತೇನೈವ ಕೃತಸಂಸ್ಕಾರೌ ವರ್ಧಯಾಮಾಸ ತತ್ರ ತೌ ॥ ೯೩
ಬಾಲಾವೇವ ಚ ತೌ ದಿವ್ಯಮಸ್ತ್ರಗ್ರಾಮಮವಾಪತುಃ ।
ವಿದ್ಯಾಶ್ಚ ಸರ್ವಾ ವಾಲ್ಮೀಕಿಮುನೇಃ ಕ್ಷತ್ರಕುಮಾರಕೌ ॥ ೯೪
ಏಕದಾ ಆಶ್ರಮಮೃಗಂ ಹತ್ವಾ ತನ್ಮಾಂಸಮಾದತುಃ ।
ಅರ್ಚಾಲಿಂಗಂ ಚ ವಾಲ್ಮೀಕೇಶ್ಚಕ್ರತುಃ ಕ್ರೀಡನೀಯಕಮ್ ॥ ೯೫

೯೭ ಅದರಿಂದ ಖಿನ್ನನಾದ ಆ ಮುನಿಯು ಸೀತಾದೇವಿಯ ಪ್ರಾರ್ಥನೆಯೊಂದಿಗೆ ಆ ಕುಮಾರರಿಬ್ಬರಿಗೂ ಪ್ರಾಯಶ್ಚಿತ್ತವನ್ನು ಆದೇಶಿಸಿದರು.

೯೭ "ಕುಬೇರಸರಸ್ಸಿಗೆ ಹೋಗಿ ಲವನು ಸುವರ್ಣಕಮಲಗಳನ್ನೂ ಮತ್ತು ಅದರ ಉದ್ಯಾನದಿಂದ ಮಂದಾರಪುಷ್ಪಗಳನ್ನೂ ಶೀಘ್ರವಾಗಿ ತೆಗೆದುಕೊಂಡು ಬರಲಿ.

೯೮. ಈ ಇಬ್ಬರು ಸೋದರರೂ ಆ ಪುಷ್ಪಗಳಿಂದ ಈ ಮೂರ್ತಿಯನ್ನು (ಲಿಂಗವನ್ನು) ಅರ್ಚಿಸಲಿ. ಅದರಿಂದ ಇವರ ಪಾಪವು ಉಪಶಾಂತಿಯನ್ನು ಹೊಂದುವುದು.'

೯೯. ಇದನ್ನು ಕೇಳಿದೊಡನೆಯೇ ಬಾಲಕನಾಗಿದ್ದರೂ ಲವನು ಕೈಲಾಸವನ್ನು ಕುರಿತು ಹೊರಟನು. ಕುಬೇರನ ಸರಸ್ಸನ್ನೂ ಆ ಉಪವನವನ್ನೂ ಸಂಪೂರ್ಣವಾಗಿ ಶೋಷಿಸಿದನು.

೧೦೦. ಯಕ್ಷರನ್ನು ಕೊಂದು ಹಾಕಿ ಪದ್ಮಗಳನ್ನೂ ಪುಷ್ಪಗಳನ್ನೂ ತೆಗೆದುಕೊಂಡು ಬರುತ್ತಾ ದಾರಿಯಲ್ಲಿ ಆಯಾಸದಿಂದ ಲವನು ಒಂದು ಮರದ ಕೆಳಗೆ ವಿಶ್ರಾಂತಿ ಪಡೆದನು.

೧೦೧. ಈ ಮಧ್ಯದಲ್ಲಿ ರಾಮನ ಪುರುಷಮೇಧಯಾಗಕ್ಕಾಗಿ ಉತ್ತಮ ಲಕ್ಷಣವುಳ್ಳ ಪುರುಷನನ್ನು ಹುಡುಕುತ್ತಾ ಲಕ್ಷ್ಮಣನು ಆ ಮಾರ್ಗದಿಂದ ಬಂದನು.

---

ತೇನ ಖಿನ್ನೋ ಮುನಿಃ ಸೋಽಥ ಸೀತಾದೇವ್ಯಾನುನಾಥಿತಃ ।
ಪ್ರಾಯಶ್ಚಿತ್ತಂ ತಯೋರೇವಮಾದಿದೇಶ ಕುಮಾರಯೋಃ ॥ ೯೬
ಗತ್ವಾ ಕುಬೇರಸರಸಃ ಸ್ವರ್ಣಪದ್ಮಾನ್ಯಯಂ ಲವಃ।
ತದುದ್ಯಾನಾಚ್ಚ ಮಂದಾರಪುಷ್ಪಾಣ್ಯಾನಯತು ದ್ರುತಮ್ ॥ ೯೭
ತೈರೇತೌ ಭ್ರಾತರಾವೇತಲ್ಲಿಂಗಮರ್ಚಯತಾಮುಭೌ ।
ತೇನೈತಯೋರಿದಂ ಪಾಪಮುಪಶಾಂತಿಂ ಗಮಿಷ್ಯತಿ ॥ ೯೮
ಏತಚ್ಛ್ರುತ್ವೈವ ಕೈಲಾಸಂ ಸ ಬಾಲೋಽಪಿ ಲವೋ ಯಯೌ ।
ಆಚಸ್ಕಂದ ಕುಬೇರಸ್ಯ ಸರಶ್ಚೋಪವನಂ ಚ ತತ್ ॥ ೯೯
ನಿಹತ್ಯ ಯಕ್ಷಾನಾದಾಯ ಪದ್ಮಾನಿ ಕುಸುಮಾನಿ ಚ ।
ಆಗಚ್ಛನ್‌ಸ ಪಥಿ ಶ್ರಾಂತೋ ವಿಶಶ್ರಾಮ ತರೋಸ್ತಲೇ ॥ ೧೦೦
ಅತ್ರಾಂತರೇ ಚ ರಾಮಸ್ಯ ನರಮೇಧೇ ಸುಲಕ್ಷಣಮ್ ।
ಚಿನ್ವನ್ ಪುರುಷಮಾಗಚ್ಛತ್ತೇನ ಮಾರ್ಗೇಣ ಲಕ್ಷ್ಮಣಃ ॥ ೧೦೧

೧೧೨. ಆಗ ಯುದ್ಧಕ್ಕಾಗಿ ಆಹ್ವಾನಿಸಿದ ಲವನನ್ನು ಲಕ್ಷ್ಮಣನು ಮೋಹನಾಸ್ತ್ರದಿಂದ ಮೋಹಿತನನ್ನಾಗಿ (ಮಾಡಿ) ಕ್ಷತ್ರಧರ್ಮಕ್ಕನುಸಾರವಾಗಿ ಅವನನ್ನು ಕಟ್ಟಿ ಅಯೋಧ್ಯಾ ಪಟ್ಟಣಕ್ಕೆ ಒಯ್ದನು.

೧೧೩. ಅಷ್ಟರಲ್ಲಿ ಲವನು ಬರದಿದ್ದುದರಿಂದ ದುಃಖಗೊಂಡಿದ್ದ ಸೀತೆಯನ್ನು ಸಮಾಧಾನಪಡಿಸಿ ಜ್ಞಾನಿಯಾದ ವಾಲ್ಮೀಕಿಯು ತನ್ನ ಆಶ್ರಮದಲ್ಲಿದ್ದ ಕುಶನಿಗೆ ಈ ರೀತಿ ಹೇಳಿದನು.

೧೧೪. 'ಪುತ್ರನಾದ ಲವನನ್ನು ಕಟ್ಟಿಹಾಕಿ ಲಕ್ಷ್ಮಣನು ಅಯೋಧ್ಯೆಗೆ ಒಯ್ದಿದ್ದಾನೆ. ಹೋಗು. ಈ ಅಸ್ತ್ರಗಳಿಂದ ಲಕ್ಷ್ಮಣನನ್ನು ಸೋಲಿಸಿ ಲವನನ್ನು ಬಿಡಿಸು.'

೧೧೫. ಹೀಗೆ ಹೇಳಿ (ವಾಲ್ಮೀಕಿಯು) ಕುಶನಿಗೆ ದಿವ್ಯಾಸ್ತ್ರಗಳನ್ನು ಕೊಟ್ಟಾಗ ಅವನು ಅಲ್ಲಿಂದ ಆ ದಿವ್ಯಾಸ್ತ್ರಗಳೊಡನೆ ಹೋಗಿ ಮೊದಲು ಅಯೋಧ್ಯೆಯನ್ನು ಆಕ್ರಮಿಸಿ ಯಜ್ಞಭೂಮಿಗೆ ಮುತ್ತಿಗೆ ಹಾಕಿದನು.

೧೧೬. ಮುತ್ತಿಗೆ ಹಾಕಿದ್ದರಿಂದ ಧಾವಿಸಿ ಬಂದ ಲಕ್ಷ್ಮಣನನ್ನು ಎದುರಿಸಿ ಗೆದ್ದನು. ಅನಂತರ ರಾಮನು ಬಂದು ದಿವ್ಯವಾದ ಮಹಾಸ್ತ್ರಗಳೊಡನೆ ಕುಶನನ್ನು ಯುದ್ಧದಲ್ಲಿ ಎದುರಿಸಿದನು.

೧೧೭. ರಾಮನೂ ವಾಲ್ಮೀಕಿಯ ಪ್ರಭಾವದಿಂದ ಕುಶನನ್ನು ಅಸ್ತ್ರಗಳಿಂದ ಗೆಲ್ಲಲು ಸಮರ್ಥನಾಗಲಿಲ್ಲ. ಅದರಿಂದ ಕುಶನನ್ನು ಕುರಿತು '"ನಿನಗೆ ಏನಾಗಬೇಕು ? ನೀನು ಯಾರು ?" ಎಂದು ಕೇಳಿದನು.

---

ಸ ಲವಂ ಸಮರಾಹೂತಂ ಮೋಹನಾಸ್ತ್ರೇಣ ಮೋಹಿತಮ್ ।
ಕ್ಷತ್ರಧರ್ಮೇಣ ಬದ್ಧ್ವಾ ತಮಯೋಧ್ಯಾಮನಯತ್ಪುರೀಮ್ ॥ ೧೧೨
ತಾವಚ್ಚ ಸೀತಾಮಾಶ್ವಾಸ್ಯ ಲವಾಗಮನದುಃಸ್ಥಿತಾಮ್ ।
ವಾಲ್ಮೀಕಿಃ ಸ್ವಾಶ್ರಮೇ ತತ್ರ ಜ್ಞಾನೀ ಕುಶಮಭಾಷತ ॥ ೧೧೩
ನೀತೋಽಯೋಧ್ಯಾಮವಷ್ಟಭ್ಯ ಲಕ್ಷ್ಮಣೇನ ಸುತೋ ಲವಃ ।
ಗಚ್ಛ ಮೋಚಯ ತಂ ತಸ್ಮಾದೇಭಿರಸ್ತ್ರೈರ್ವಿನಿರ್ಜಿತಾತ್ ॥ ೧೧೪
ಇತ್ಯುಕ್ತ್ವಾ ದತ್ತದಿವ್ಯಾಸ್ತ್ರಸ್ತೇನ ಗತ್ವಾ ಕುಶಸ್ತತಃ ।
ರೋಧ್ಯಮಾನಾಮಯೋಧ್ಯಾಯಾಂ ಯಜ್ಞಭೂಮಿಂ ರುರೋಧ ಸಃ ॥ ೧೧೫
ಜಿಗಾಯ ಲಕ್ಷ್ಮಣಂ ಚಾತ್ರ ತನ್ನಿಮಿತ್ತಂ ಪ್ರಧಾವಿತಮ್ ।
ಯುದ್ಧೇ ದಿವ್ಯೈರ್ಮಹಾಸ್ತ್ರೈಸ್ತೈಸ್ತತೋ ರಾಮಸ್ತಮಭ್ಯಗಾತ್ ॥ ೧೧೬
ಸೋಽಪಿ ಪ್ರಭಾವಾದ್ವಾಲ್ಮೀಕೇರ್ಜೇತುಂ ನಾಸ್ತ್ರೈಃ ಶಶಾಕ ತಮ್ ।
ಕುಶಂ ಯತ್ತೇನ ಪಪ್ರಚ್ಛ ಕೋಽರ್ಥಸ್ತೇ ಕೋ ಭವಾನಿತಿ ॥ ೧೧೭

೧೦೮–೧೦೯. ಆಗ ಕುಶನು ಹೇಳಿದನು. ""ಲಕ್ಷ್ಮಣನು ನನ್ನ ಅಣ್ಣನನ್ನು ಕಟ್ಟಿ ಇಲ್ಲಿಗೆ ತಂದಿದ್ದಾನೆ. ಅವನನ್ನು ಬಿಡಿಸುವುದಕ್ಕಾಗಿ ನಾನು ಇಲ್ಲಿಗೆ ಬಂದಿದ್ದೇನೆ. ನಾವಿಬ್ಬರೂ ರಾಮನ ಪುತ್ರರಾದ ಲವ–ಕುಶರು ಎಂದು ನಮ್ಮ ತಾಯಿಯಾದ ಜಾನಕಿಯು ಹೇಳುತ್ತಾಳೆ" ಎಂದೂ ಹೇಳಿ ಸೀತೆಯ ವೃತ್ತಾಂತವನ್ನು ಹೆಮ್ಮೆಯಿಂದ ಹೇಳಿದನು.

೧೧೦. (ಅದನ್ನು ಕೇಳಿ) ಕಣ್ಣೀರು ಸುರಿಸಿದ ರಾಮನು ಲವನನ್ನು ಕರೆಸಿ 'ನಾನೇ ಪಾಪಿಯಾದ ರಾಮನು' ಎಂದು ಹೇಳುತ್ತಾ ಲವ ಕುಶರಿಬ್ಬರನ್ನೂ ಕಂಠಾಲಿಂಗನ ಮಾಡಿದನು.

೧೧೧. ಅನಂತರ ಪಟ್ಟಣಿಗರು ಅಯೋಧ್ಯೆಯಲ್ಲಿ ಸೇರಿ ಸೀತೆಯನ್ನು ಪ್ರಶಂಸಿಸುತ್ತಾ ಆ ಇಬ್ಬರು ವೀರಕುಮಾರರನ್ನು ನೋಡುತ್ತಾ ಇರಲು ರಾಮನು ಆ ಇಬ್ಬರು ಪುತ್ರರನ್ನೂ ಸ್ವೀಕರಿಸಿದನು.

೧೧೨. ಅನಂತರ ಸೀತಾದೇವಿಯನ್ನು ವಾಲ್ಮೀಕಿಯ ಆಶ್ರಮದಿಂದ ಕರೆತರಿಸಿ ರಾಮನು ಆ ಪುತ್ರರಲ್ಲಿ ರಾಜ್ಯಭಾರವನ್ನು ಇಟ್ಟು ಸೀತೆಯೊಡನೆ ಸುಖವಾಗಿ ಇದ್ದನು.

೧೧೩. ಈ ರೀತಿ ಧೀರರು ಚಿರಕಾಲವಾದರೂ ಇಂತಹ ವಿರಹವನ್ನು ಸಹಿಸುತ್ತಾರೆ. ಪುತ್ರ–ಪುತ್ರಿಯರೇ! ನೀವಿಬ್ಬರೂ ಒಂದೇ ರಾತ್ರಿಯ ವಿರಹವನ್ನೂ ಹೇಗೆ ತಾನೆ ಸಹಿಸಲಾರಿರಿ ?'

---

ಕುಶಸ್ತತೋಽಬ್ರವೀದ್ಬದ್ಧ್ವಾ ಲಕ್ಷ್ಮಣೇನಾಗ್ರಜೋ ಮಮ ।<br>
ಆನೀತ ಇಹ ತಸ್ಯಾಹಂ ಮೋಚನಾರ್ಥಮಿಹಾಗತಃ ॥ ೧೦೮

ಆವಾಂ ಲವಕುಶೌ ರಾಮತನಯಾವಿತಿ ಜಾನಕೀ ।<br>
ಮಾತಾ ನೌ ವಕ್ತಿ ಚೇತ್ಯುಕ್ತ್ವಾ ತದ್ವೃತ್ತಾಂತಂ ಶಶಂಸ ಸಃ ॥ ೧೦೯

ತತಃ ಸಬಾಷ್ಪೋ ರಾಮಸ್ತಂ ಲವಮಾನಾಯ್ಯ ತಾವುಭೌ ।<br>
ಕಂಠೇ ಜಗ್ರಾಹ ಸೈಷೋಽಹಂ ಪಾಪೋ ರಾಮ ಇತಿ ಬ್ರುವನ್ ॥ ೧೧೦

ಅಥ ಸೀತಾಂ ಪ್ರಶಂಸತ್ಸು ವೀರೌ ಪಶ್ಯತ್ಸು ತೌ ಶಿಶೂ ।<br>
ಪೌರೇಷು ಮಿಲಿತೇಷ್ವತ್ರ ಸ ತೌ ರಾಮೋಽಗ್ರಹೀತ್ಸುತೌ ॥ ೧೧೧

ಆನಾಯ್ಯ ಸೀತಾದೇವೀಂ ಚ ವಾಲ್ಮೀಕೇರಾಶ್ರಮಾತ್ತತಃ ।<br>
ತಯಾ ಸಹ ಸುಖಂ ತಸ್ಥೌ ಪುತ್ರನ್ಯಸ್ತಭರೋಽಥ ಸಃ ॥ ೧೧೨

ಏವಂ ಸಹಂತೇ ವಿರಹಂ ಧೀರಾಶ್ಚಿರಮಪೀದೃಶಮ್ ।<br>
ನ ಸಹೇಥೇ ಯುವಾಂ ಪುತ್ರೌ ಕಥಮೇಕಾಮಪಿ ಕ್ಷಪಾಮ್ ॥ ೧೧೩

೧೧೪–೧೧೫. ಹೀಗೆ ವಿವಾಹದಲ್ಲಿ ಉತ್ಸುಕಳಾದ ತನ್ನ ಮಗಳು ಅಲಂಕಾರವತಿಗೂ ನರವಾಹನದತ್ತನಿಗೂ ಹೇಳಿ ಕಾಂಚನ ಪ್ರಭೆಯು ಬೆಳಿಗ್ಗೆ ಬರುವೆನೆಂದು ಹೇಳಿ ಮಗಳನ್ನು ಕರೆದುಕೊಂಡು ಅಂತರಿಕ್ಷದಲ್ಲಿ ಹೊರಟುಹೋದಳು. ನರವಾಹನದತ್ತನೂ ಖಿನ್ನನಾಗಿ ಕೌಶಾಂಬಿಗೆ ಹೋದನು.

೧೧೬. ಅಲ್ಲಿ ರಾತ್ರಿಯಲ್ಲಿ ನಿದ್ರಾರಹಿತನಾದ ನರವಾಹನದತ್ತನನ್ನು ವಿನೋದಪಡಿಸುತ್ತಾ ಗೋಮುಖನು ಹೇಳಿದನು. "'ಪ್ರಭುವೇ ! ಕೇಳು. ಪೃಥ್ವೀರೂಪನ ಈ ಕಥೆಯನ್ನು ನಿನಗೆ ಹೇಳುತ್ತೇನೆ.

೧೧೭. ದಕ್ಷಿಣಾಪಥದಲ್ಲಿ ಪ್ರತಿಷ್ಠಾನವೆಂಬ ಹೆಸರಿನ ನಗರವಿದೆ. ಅಲ್ಲಿ ಅತ್ಯಂತ ರೂಪವಂತನಾದ ಪೃಥ್ವೀರೂಪನೆಂಬ ಹೆಸರುಳ್ಳ ರಾಜನಿದ್ದನು.

೧೧೮. ಒಮ್ಮೆ ಸರ್ವಜ್ಞರಾದ ಇಬ್ಬರು ಶ್ರಮಣರು ಆ ರಾಜನ ಬಳಿಗೆ ಬಂದರು. ಅದ್ಭುತರೂಪದ ಆ ರಾಜನನ್ನು ನೋಡಿ ಅವರಿಬ್ಬರೂ ಈ ರೀತಿ ಹೇಳಿದರು.

೧೧೯. "ಪ್ರಭುವೇ ! ನಾವಿಬ್ಬರೂ ಪೃಥಿವಿಯನ್ನು ಸಂಚರಿಸಿರುವೆವು. ಆದರೆ ಸೌಂದರ್ಯದಲ್ಲಿ ನಿನಗೆ ಸಮನಾದ ಮತ್ತೊಬ್ಬ ಪುರುಷನನ್ನಾಗಲಿ ಸ್ತ್ರೀಯನ್ನಾಗಲಿ ನಾವು ಎಲ್ಲಿಯೂ ನೋಡಿಲ್ಲ.

---

ಇತ್ಯಾತ್ಮಜಾಮಲಂಕಾರವತೀಂ ಪರಿಣಯೋತ್ಸುಕಾಮ್ ।
ನರವಾಹನದತ್ತಂ ಚ ತಮುಕ್ತ್ವಾ ಕಾಂಚನಪ್ರಭಾ ॥ ೧೧೪
ನಭಸಾ ಪ್ರಾತರಾಗಂತುಮಗಾದಾದಾಯ ತಾಂ ಸುತಾಮ್ ।
ನರವಾಹನದತ್ತೋಽಪಿ ಕೌಶಾಂಬೀಂ ವಿಮನಾ ಯಯೌ ॥ ೧೧೫
ತತ್ರಾನಿದ್ರಂ ನಿಶಿ ಸ್ಮಾಹ ಗೋಮುಖಸ್ತಂ ವಿನೋದಯನ್ ।
ಪೃಥ್ವೀರೂಪಕಥಾಂ ದೇವ ಶೃಣ್ವಿಮಾಂ ಕಥಯಾಮಿ ತೇ ॥ ೧೧೬
ಅಸ್ತಿ ನಾಮ್ನಾ ಪ್ರತಿಷ್ಠಾನಂ ನಗರಂ ದಕ್ಷಿಣಾಪಥೇ ।
ಪೃಥ್ವೀರೂಪಾಭಿಧಾನೋಽಭೂದ್ರಾಜಾ ತತ್ರಾತಿರೂಪವಾನ್ ॥ ೧೧೭
ತಂ ಪರಿಜ್ಞಾನಿನೌ ಜಾತು ಶ್ರಮಣೌ ದ್ವಾವುಪೇಯತುಃ ।
ವಿಲೋಕ್ಯಾದ್ಭುತರೂಪಂ ಚ ತಾವೇವಂ ನೃಪಮೂಚತುಃ ॥ ೧೧೮
ದೇವಾವಾಂ ಪೃಥಿವೀಂ ಭ್ರಾಂತೌ ನ ಚ ರೂಪೇಣ ತೇ ಸಮಮ್ ।
ಅನ್ಯಂ ಪುಮಾಂಸಂ ನಾರೀಂ ವಾ ದೃಷ್ಟವಂತೌ ಕ್ವಚಿತ್ಪ್ರಭೋ ॥ ೧೧೯

೧೨೦–೧೨೧. ಆದರೆ ಮುಕ್ತಿಪುರದ್ವೀಪದಲ್ಲಿ ರಾಜನಾದ ರೂಪಧರನಿಗೆ ಹೇಮಲತಾದೇವಿಯಲ್ಲಿ ಹುಟ್ಟಿದ ರೂಪಲತಾ ಎಂಬ ಪುತ್ರಿಯು ಮಾತ್ರ ನಿನಗೆ ಸದೃಶಳಾದ ಕನ್ಯೆಯು. ಅವಳಿಗೂ ನೀನೊಬ್ಬನೇ ಸದೃಶನಾದವನು. ಒಂದು ವೇಳೆ ನಿಮ್ಮಿಬ್ಬರಲ್ಲಿ ಸಂಬಂಧವು ಉಂಟಾಗುವುದಾದರೆ ಅದುವೇ ಪುಣ್ಯ.'

೧೨೨. ಹೀಗೆ ಶ್ರಮಣರ ಮಾತಿನ ಜೊತೆಯಲ್ಲೇ ಮನ್ಮಥನ ಬಾಣಗಳು ಶ್ರೋತ್ರಮಾರ್ಗದಿಂದ ಪ್ರವೇಶಿಸಿ ಆ ರಾಜನ ಹೃದಯದಲ್ಲಿ ಅಂಟಿಕೊಂಡವು.

೧೨೩. ಅನಂತರ (ಪ್ರೇಮದಿಂದ) ಅತ್ಯಂತ ಉತ್ಸುಕನಾದ ಪೃಥ್ವೀರೂಪರಾಜನು ಕುಮಾರಿದತ್ತ ಎಂಬ ತನ್ನ ಉತ್ತಮ ಚಿತ್ರಗಾರನನ್ನು ಕುರಿತು ಆದೇಶಮಾಡಿದನು.

೧೨೪. "ವಸ್ತ್ರಪಟದಲ್ಲಿ ಯಥಾವತ್ತಾಗಿ ನನ್ನ ಆಕೃತಿಯನ್ನು ಬರೆದು ತೆಗೆದುಕೊಂಡು ಈ ಭಿಕ್ಷುಗಳಿಬ್ಬರೊಡನೆ ಮುಕ್ತಿಪುರ ದ್ವೀಪಕ್ಕೆ ಹೋಗು.

೧೨೫. ಅಲ್ಲಿ ರೂಪಧರನೆಂಬ ರಾಜನಿಗೂ ಹಾಗೆಯೇ ಆ ರಾಜನ ಮಗಳಾದ ರೂಪಲತೆಗೂ ನೀನು ಯುಕ್ತಿಯಿಂದ (ಉಪಾಯದಿಂದ) ನನ್ನ ಆಕೃತಿಯನ್ನು ತೋರಿಸು.

೧೨೬. ಆ ರಾಜನು ತನ್ನ ಮಗಳನ್ನು ನನಗೆ (ವಿವಾಹದಲ್ಲಿ) ಕೊಡುತ್ತಾನೆಯೋ ಇಲ್ಲವೋ ತಿಳಿದು ನೋಡು. ಹಾಗೆಯೇ ಆ ರೂಪಲತೆಯ ಚಿತ್ರವನ್ನು ಬರೆದು ನೀನು ಇಲ್ಲಿಗೆ ತೆಗೆದುಕೊಂಡು ಬಾ.'

---

ಕಿಂ ತು ಮುಕ್ತಿಪುರದ್ವೀಪೇ ರಾಜ್ಞೋ ರೂಪಧರಸ್ಯ ಯಾ ।
ಅಸ್ತಿ ಹೇಮಲತಾದೇವ್ಯಾಂ ಜಾತಾ ರೂಪಲತಾ ಸುತಾ ॥ ೧೨೦
ಸೈಕಾ ತೇ ಸದೃಶೀ ಕನ್ಯಾ ತಸ್ಯಾಶ್ಚೈಕೋ ಭವಾನಪಿ ।
ಯುವಯೋರ್ಯದಿ ಸಂಯೋಗೋ ಭವೇತ್ಸ್ಯಾತ್ ಸುಕೃತಂ ತತಃ ॥
೧೨೧
ಇತಿ ಶ್ರಮಣವಾಕ್ಯೇನ ಸಮಂ ಮದನಸಾಯಕಾಃ ।
ಪ್ರವಿಶ್ಯ ಶ್ರುತಿಮಾರ್ಗೇಣ ರಾಜ್ಞಸ್ತಸ್ಯಾಲಗನ್ಹೃದಿ ॥ ೧೨೨
ತತಃ ಸಮುತ್ಸುಕೋ ರಾಜಾ ನಿಜಂ ಚಿತ್ರಕರೋತ್ತಮಮ್ ।
ಕುಮಾರಿದತ್ತನಾಮಾನಂ ಪೃಥ್ವೀರೂಪಃ ಸಮಾದಿಶತ್ ॥ ೧೨೩
ಪಟೇ ಯಥಾವಲ್ಲಿಖಿತಾಂ ಸಮಾದಾಯ ಮದಾಕೃತಿಮ್ ।
ಏತಾಭ್ಯಾಂ ಸಹ ಭಿಕ್ಷುಭ್ಯಾಂ ದ್ವೀಪಂ ಮುಕ್ತಿಪುರಂ ವ್ರಜ ॥ ೧೨೪
ತತ್ರ ರೂಪಧರಾಖ್ಯಸ್ಯ ರಾಜ್ಞಸ್ತದ್ದುಹಿತುಸ್ತಥಾ ।
ಯುಕ್ತ್ಯಾ ರೂಪಲತಾಯಾಸ್ತ್ವಂ ಮದಾಕಾರಂ ಪ್ರದರ್ಶಯ ॥ ೧೨೫
ಪಶ್ಯ ಕಿಂ ಸ ನೃಪಸ್ತಾಂ ಮೇ ದದಾತಿ ತನಯಾಂ ನ ವಾ ।
ತಾಂ ಚ ರೂಪಲತಾಂ ಚಿತ್ರೇ ಲಿಖಿತ್ವಾ ತ್ವಮಿಹಾನಯ ॥ ೧೨೬

೧೨೭ ಹೀಗೆ ಹೇಳಿ ಆ ರಾಜನು ಚಿತ್ರಪಟದಲ್ಲಿ ತನ್ನ ಆಕೃತಿಯನ್ನು ಬರೆಸಿ ಭಿಕ್ಷುಗಳ ಸಂಗಡ ಚಿತ್ರಗಾರನನ್ನು ಆ ದ್ವೀಪಕ್ಕೆ ಕಳುಹಿಸಿದನು.

೧೨೮. ಆ ಚಿತ್ರಗಾರ ಮತ್ತು ಶ್ರಮಣರು ಅಲ್ಲಿಂದ ಹೊರಟು ಕ್ರಮೇಣ ಸಮುದ್ರದ ತೀರದಲ್ಲಿದ್ದ ಪತ್ರಪುರವೆಂಬ ಪಟ್ಟಣವನ್ನು ಸೇರಿದರು.

೧೨೯. ಅನಂತರ ದೋಣಿಯಲ್ಲಿ ಸಮುದ್ರಮಾರ್ಗದಿಂದಲೇ ಹೋಗಿ ಅವರು ಐದು ದಿನಗಳಲ್ಲಿ ಮುಕ್ತಿಪುರ ದ್ವೀಪವನ್ನು ಸೇರಿದರು.

೧೩೦. ಅಲ್ಲಿ ರಾಜಗೃಹದ್ವಾರಕ್ಕೆ ಹೋಗಿ ಆ ಚಿತ್ರಗಾರನು ಚೇರಿಕೆಯನ್ನು ಕುರಿತು "'ನನಗೆ ಸದೃಶನಾದ ಚಿತ್ರಗಾರನು ಮತ್ತೊಬ್ಬನು ಇಲ್ಲ" ಎಂದು ಹೊಗಳಿಕೊಂಡನು.

೧೩೧. ಅದನ್ನು ತಿಳಿದುಕೊಡಲೇ ರಾಜನಾದ ರೂಪಧರನು ಅವನನ್ನು ಒಳಗೆ ಕರೆಯಲು ಚಿತ್ರಗಾರನು ರಾಜಗೃಹವನ್ನು ಪ್ರವೇಶಿಸಿ ರಾಜನಿಗೆ ನಮಸ್ಕಾರಮಾಡಿ ವಿಜ್ಞಾಪಿಸಿದನು.

೧೩೨. "ಪ್ರಭುವೇ ! ಭೂಮಂಡಲವನ್ನು ಸಂಚರಿಸಿದರೂ ನಾನು ನನಗೆ ಸಮನಾದ ಚಿತ್ರಗಾರನನ್ನು ಕಾಣಲಿಲ್ಲ. ಆದುದರಿಂದ ದೇವತೆಗಳ, ರಾಕ್ಷಸರ, ಮನುಷ್ಯರ ಪೈಕಿ ಯಾರನ್ನು ಚಿತ್ರಿಸಲಿ ? ಅಪ್ಪಣೆ ಮಾಡು.'

೧೩೩. ಅದನ್ನು ಕೇಳಿ ರಾಜನು ರೂಪಲತೆಯನ್ನು ಮುಂದುಗಡೆ ಕರೆತರಿಸಿ ""ಈ ಪುತ್ರಿಯನ್ನು ಚಿತ್ರಿಸಿ ತೋರಿಸು" ಎಂದು ಆ ಚಿತ್ರಗಾರನಿಗೆ ಅಪ್ಪಣೆ ಮಾಡಿದನು.

---

ಏವಮುಕ್ತ್ವಾಭಿಲೇಖ್ಯ ಸ್ವಂ ರೂಪಂ ಚಿತ್ರಪಟೇ ಸ ತಮ್ ।
ಸಭಿಕ್ಷುಕಂ ಚಿತ್ರಕರಂ ದ್ವೀಪಂ ತಂ ಪ್ರಾಹಿಣೋನ್ನೃಪಃ ॥ ೧೨೭
ತೇ ಚ ಕ್ರಮಾಚ್ಚಿತ್ರಕರಶ್ರಮಣಾಃ ಪ್ರಸ್ಥಿತಾಸ್ತತಃ ।
ಪ್ರಾಪುಃ ಪತ್ರಪುರಂ ನಾಮ ನಗರಂ ವಾರಿಧೇಸ್ತಟೇ ॥ ೧೨೮
ತತಃ ಪ್ರವಹಣಾರೂಢಾ ಗತ್ವೈವಾಂಬುಧಿವರ್ತ್ಮನಾ ।
ತೇ ತಂ ಮುಕ್ತಿಪುರದ್ವೀಪಮವಾಪುಃ ಪಂಚಭಿರ್ದಿನೈಃ ॥ ೧೨೯
ತತ್ರ ಚಿತ್ರಕರೋ ಗತ್ವಾ ರಾಜದ್ವಾರಿ ಸ ಚೇರಿಕಾಮ್ ।
ಮಮ ಚಿತ್ರಕರಸ್ತುಲ್ಯೋ ನಾನ್ಯೋಽಸ್ತೀತ್ಯುದಲಂಬಯತ್ ॥ ೧೩೦
ತದ್ಬುದ್ಧ್ವೈವ ಸಮಾಹೂತೋ ರಾಜ್ಞಾ ರೂಪಧರೇಣ ಸಃ ।
ಪ್ರವಿಶ್ಯ ರಾಜಭವನಂ ತಂ ಪ್ರಣಮ್ಯ ವ್ಯಜಿಜ್ಞಪತ್ ॥ ೧೩೧
ಪೃಥ್ವೀಂ ಭ್ರಾಂತ್ವಾ ಮಯಾದೇವ ನ ದೃಷ್ಟಶ್ಚಿತ್ರಕೃತ್ಸಮಃ ।
ತದ್ದೇವಾಸುರಮರ್ತ್ಯಾನಾಮಾಲಿಖಾಮಿ ಕಮಾದಿಶ ॥ ೧೩೨
ತಚ್ಛ್ರುತ್ವಾನಾಯ್ಯ ನೃಪತಿಃ ಸ ತಾಂ ರೂಪಲತಾಂ ಪುರಃ ।
ಇಮಾಮಾಲಿಖ್ಯ ಮತ್ಪುತ್ರೀಂ ದರ್ಶಯೇತ್ಯಾದಿದೇಶ ತಮ್ ॥ ೧೩೩

೧೩೪. ಅನಂತರ ಚಿತ್ರಗಾರನಾದ ಕುಮಾರಿದತ್ತನು ಆ ರಾಜಕನ್ಯೆಯನ್ನು ಅವಳಂತೆಯೇ ಚಿತ್ರಪಟದಲ್ಲಿ ಚಿತ್ರಿಸಿ ತೋರಿಸಿದನು.

೧೩೫. ಆಗ ರೂಪಧರ ರಾಜನು ಸಂತುಷ್ಟನಾಗಿ ಚಿತ್ರಗಾರನನ್ನು ನಿಪುಣನೆಂದು ತಿಳಿದು ಅಳಿಯನನ್ನು ನಿರ್ಧರಿಸುವ ಅಪೇಕ್ಷೆಯಿಂದ ಪ್ರಶ್ನೆಮಾಡಿದನು.

೧೩೬. "ಭದ್ರನೇ ! ಭೂಮಂಡಲವನ್ನು ನೀನು ಸಂಚರಿಸಿದ್ದೀಯೆ. ಆದುದರಿಂದ ಹೇಳು. ಒಂದು ವೇಳೆ ಎಲ್ಲಿಯಾದರೂ ಸೌಂದರ್ಯದಲ್ಲಿ ನನ್ನ ಮಗಳಿಗೆ ಸದೃಶಳಾದ ಸ್ತ್ರೀಯಾಗಲಿ ಪುರುಷರಾಗಲಿ ನಿನಗೆ ಕಂಡುಬಂದಿದ್ದಾರೆಯೇ ?'

೧೩೭. ರಾಜನು ಹೇಳಿದುದನ್ನು ಕೇಳಿ ಚಿತ್ರಗಾರನು ಅವನಿಗೆ ಪ್ರತ್ಯುತ್ತರ ಹೇಳಿದನು. "ಇವಳಿಗೆ ಸದೃಶಳಾದ ಸ್ತ್ರೀಯಾಗಲಿ ಪುರುಷನಾಗಲಿ ನಾನು ಕಂಡಿಲ್ಲ.

೧೩೮. ಪ್ರತಿಷ್ಠಾನಪುರದ ರಾಜನಾದ ಪೃಥ್ವೀರೂಪನೆಂಬುವನು ಒಬ್ಬನು ಮಾತ್ರ ಇವಳಿಗೆ ಸದೃಶನಾಗಿದ್ದಾನೆ. ಅವನಿಗೆ ಇವಳು ಸಮನಾಗಿದ್ದಾಳೆ. ಅವನೊಂದಿಗೆ ಇವಳು ಸೇರಿದರೆ ಅದು ಯುಕ್ತವಾಗುತ್ತದೆ.

೧೩೯. ಸಮಾನವಾದ ಸೌಂದರ್ಯವುಳ್ಳ ರಾಜಕನ್ಯಕೆಯು ಅವನಿಗೆ ಸಿಗದಿದ್ದರೆ ಅವನು ನವಯೌವನದಲ್ಲೂ ಒಂಟಿಯಾಗಿಯೇ ಇರುತ್ತಾನೆ.

೧೪೦. ದೇವನೇ ! ನಾನೂ ನೋಡಲು ಪ್ರಿಯನಾದ ಆ ರಾಜನನ್ನು ಸ್ವತಃ ನೋಡಿಯೇ ಸೌಂದರ್ಯದ ಕೌತುಕದಿಂದ ಅವನನ್ನು ಚಿತ್ರಪಟದಲ್ಲಿ ಚಿತ್ರಿಸಿ ಹಿಡಿದಿದ್ದೇನೆ'

---

ತತಃ ಕುಮಾರಿದತ್ತಃ ಸ ಚಿತ್ರಕೃದ್ರಾಜಕನ್ಯಕಾಮ್ ।
ಆಲಿಖ್ಯ ದರ್ಶಯಾಮಾಸ ತದ್ರೂಪಾಮೇವ ತಾಂ ಪಟೇ ॥ ೧೩೪

ಅಥ ರೂಪಧರೋ ರಾಜಾ ತುಷ್ಟೋ ಮತ್ವಾ ವಿಚಕ್ಷಣಮ್ ।
ಪೃಚ್ಛತಿ ಸ್ಮ ಸ ತಂ ಚಿತ್ರಕರಂ ಜಾಮಾತೃಲಿಪ್ಸಯಾ ॥ ೧೩೫

ಭದ್ರ ಪೃಥ್ವೀ ತ್ವಯಾ ಭ್ರಾಂತಾ ತದ್ಬ್ರೂಹಿ ಯದಿ ಕುತ್ರಚಿತ್ ।
ರೂಪೇ ಮದ್ದುಹಿತುಸ್ತುಲ್ಯಾ ದೃಷ್ಟಾ ಸ್ತ್ರೀ ಪುರುಷೋಽಪಿ ವಾ ॥ ೧೩೬

ಇತ್ಯುಕ್ತಸ್ತೇನ ರಾಜ್ಞಾ ಸ ಚಿತ್ರಕೃತ್ ಪ್ರತ್ಯುವಾಚ ತಮ್ ।
ನೈತತ್ತುಲ್ಯಾ ಮಯಾ ದೃಷ್ಟಾ ನಾರೀ ಕಾಪ್ಯಥವಾ ಪುಮಾನ್ ॥ ೧೩೭

ಏಕಸ್ತು ಪೃಥ್ವೀರೂಪಾಖ್ಯಃ ಪ್ರತಿಷ್ಠಾನೇ ಮಹೀಪತಿಃ ।
ದೃಷ್ಟಃ ಸಮೋಽಸ್ಯಾಸ್ತೇನೈಷಾ ಯುಜ್ಯತೇ ಯದಿ ಸಾಧು ತತ್ ॥ ೧೩೮

ತುಲ್ಯರೂಪಾ ಯದಾ ತೇನ ನ ಪ್ರಾಪ್ತಾ ರಾಜಕನ್ಯಕಾ ।
ತದಾ ನವೇಽಪಿ ತಾರುಣ್ಯೇ ಸ ತಿಷ್ಠತ್ಯಪರಿಗ್ರಹಃ ॥ ೧೩೯

ಮಯಾ ಚ ದೇವ ದೃಷ್ಟ್ವೈವ ಸ ರಾಜಾ ಲೋಚನಪ್ರಿಯಃ ।
ಅಭಿಲಿಖ್ಯ ಪಟೇ ಸಮ್ಯಗ್ಗೃಹೀತೋ ರೂಪಕೌತುಕಾತ್ ॥ ೧೪೦

೧೫೧. ಅದನ್ನು ಕೇಳಿ "ಆ ಚಿತ್ರಪಟವು ಇದೆಯೇನು ?' ಎಂದು ರಾಜನು ಕೇಳಿದಾಗ "ಇದೆ' ಎಂದು ಹೇಳಿ ಚಿತ್ರಗಾರನು ಚಿತ್ರಪಟವನ್ನು ತೋರಿಸಿದನು.

೧೫೨. ಚಿತ್ರದಲ್ಲಿ ರಾಜನಾದ ಪೃಥ್ವೀರೂಪನ ರೂಪವನ್ನು ನೋಡಿ ರಾಜಾ ರೂಪಧರನು ಆಶ್ಚರ್ಯದಿಂದ ತಲೆದೂಗಿದನು.

೧೫೩. ಮತ್ತೆ ಅವನು ಹೇಳಿದನು, "ಈ ರಾಜನನ್ನು ಕೇವಲ ಚಿತ್ರಪಟದಲ್ಲೇ ಕಂಡರೂ ನಾವು ಧನ್ಯರೇ. ಸಾಕ್ಷಾತ್ತಾಗಿ ಯಾರು ಅವನನ್ನು ನೋಡುತ್ತಾರೆಯೋ ಅವರಿಗೆ ನಮಸ್ಕಾರ.'

೧೫೪. ತಂದೆಯ ಈ ಮಾತನ್ನು ಕೇಳಿ ಹಾಗೂ ಚಿತ್ರದಲ್ಲಿ ಆ ರಾಜನನ್ನು ನೋಡಿ ಉತ್ಕಂಠಿತಳಾದ ರೂಪಲತೆಯ ಕಿವಿಗೆ ಬೇರೆ ಯಾವುದೂ ಬೀಳಲಿಲ್ಲ. ಅವಳು ಬೇರಾವುದನ್ನೂ ನೋಡಲೂ ಇಲ್ಲ.

೧೫೫ ಆಗ ಮನ್ಮಥನಿಂದ ಮೋಹಿತಳಾದ ಪುತ್ರಿಯನ್ನು ನೋಡಿ ರಾಜನಾದ ರೂಪಧರನು ಚಿತ್ರಗಾರ ಕುಮಾರಿದತ್ತನನ್ನು ಕುರಿತು ಹೇಳಿದನು.

೧೫೬ "ನಿನ್ನ ಚಿತ್ರದ ಬಗೆ ಎರಡು ಮಾತಿಲ್ಲ. ಆದುದರಿಂದ ನನ್ನ ಮಗಳಿಗೆ ಸಮಾನವಾದ ರೂಪವಿರುವ ಆ ಪೃಥ್ವೀರೂಪ ರಾಜನೇ ಪತಿಯು.

೧೫೭ ಆದುದರಿಂದ ಇಂದು ಶೀಘ್ರವಾಗಿ ನನ್ನ ಮಗಳ ಚಿತ್ರಪಟವನ್ನು ತೆಗೆದುಕೊಂಡು ಹೋಗಿ ಪೃಥ್ವೀರೂಪರಾಜನಿಗೆ ತೋರಿಸು, ಹೋಗು.

---

ತಚ್ಛ್ರುತ್ವಾ ಕಿಂ ಪಟಃ ಸೋಽಸ್ತೀತ್ಯುಕ್ತಸ್ತೇನ ಸ ಭೂಭೃತಾ ।
ಅಸ್ತೀತ್ಯುಕ್ತ್ವಾ ಚ ತಂ ಚಿತ್ರಕರಃ ಪಟಮದರ್ಶಯತ್ ॥ ೧೫೧
ತತ್ರ ದೃಷ್ಟ್ವಾ ಸ ತದ್ರೂಪಂ ಪೃಥ್ವೀರೂಪಸ್ಯ ಭೂಪತೇಃ ।
ರಾಜಾ ರೂಪಧರೋ ದಧ್ರೇ ವಿಸ್ಮಯಾಘೂರ್ಣಿತಂ ಶಿರಃ ॥ ೧೫೨
ಜಗಾದ ಚ ವಯಂ ಧನ್ಯಾ ಯೈರತ್ರ ಲಿಖಿತೋಽಪ್ಯಯಮ್ ।
ದೃಷ್ಟೋ ರಾಜಾ ನಮಸ್ತೇಭ್ಯಃ ಸಾಕ್ಷಾತ್ಪಶ್ಯಂತಿ ಯೇ ತ್ವಮುಮ್ ॥ ೧೫೩
ಏತತ್ಪಿತೃವಚಃ ಶ್ರುತ್ವಾ ದೃಷ್ಟ್ವಾ ಚಿತ್ರೇ ಚ ತಂ ನೃಪಮ್ ।
ಸೋತ್ಕಾ ರೂಪಲತಾ ನಾನ್ಯಚ್ಛುಶ್ರಾವ ನ ದದರ್ಶ ಚ ॥ ೧೫೪
ತಾಂ ಮಾರಮೋಹಿತಾಂ ದೃಷ್ಟ್ವಾ ಸುತಾಂ ಸ ನೃಪತಿಸ್ತದಾ ।
ಕುಮಾರಿದತ್ತಂ ತಂ ಚಿತ್ರಕರಂ ರೂಪಧರೋಽಭ್ಯಧಾತ್ ॥ ೧೫೫
ನಾಸ್ತ್ಯಾಲೇಖ್ಯವಿಸಂವಾದಸ್ತವ ತದ್ದುಹಿತುರ್ಮಮ ।
ಏತಸ್ಯಾಃ ಪ್ರತಿರೂಪಃ ಸ ಪೃಥ್ವೀರೂಪನೃಪಃ ಪತಿಃ ॥ ೧೫೬
ತದೇತಂ ಮತ್ಸುತಾಚಿತ್ರಪಟಂ ನೀತ್ವಾದ್ಯ ಸತ್ವರಮ್ ।
ಪೃಥ್ವೀರೂಪನೃಪಾಯೈತಾಂ ಮತ್ಸುತಾಂ ಗಚ್ಛ ದರ್ಶಯ ॥ ೧೫೭

೧೪೮. ಮತ್ತು ನಡೆದ ವೃತ್ತಾಂತವನ್ನು ಯಥಾವತ್ತಾಗಿ ಹೇಳಿ ಅದು ಅವನಿಗೆ ರುಚಿಸುವುದಾದರೆ ಇಲ್ಲಿಗೆ ನನ್ನ ಮಗಳನ್ನು ವಿವಾಹಮಾಡಿಕೊಳ್ಳಲು ಶೀಘ್ರವಾಗಿ ಬರಲಿ.'

೧೪೯. ಹೀಗೆ ಹೇಳಿ ಧನಸಂಪತ್ತುಗಳಿಂದ ಸತ್ಕರಿಸಿ ರಾಜನು ಭಿಕ್ಷುಗಳ ಸಮೇತನಾದ ಆ ಚಿತ್ರಗಾರನನ್ನು ತನ್ನ ದೂತನೊಡನೆ ಕಳಿಸಿಕೊಟ್ಟನು.

೧೫೦. ಆ ಚಿತ್ರಗಾರ, ದೂತ ಮತ್ತು ಭಿಕ್ಷುಗಳು ಹೊರಟು ಸಮುದ್ರವನ್ನು ದಾಟಿ ಪ್ರತಿಷ್ಠಾನಪುರಕ್ಕೆ ಪೃಥ್ವೀರೂಪರಾಜನ ಬಳಿಗೆ ಹೋಗಿ ಸೇರಿದರು.

೧೫೧. ಅಲ್ಲಿ ಕಾಣಿಕೆಯನ್ನು ಒಪ್ಪಿಸಿ ಅವರು ಮಾಡಿದ ಕಾರ್ಯವನ್ನು ಯಥಾವತ್ತಾಗಿ ರೂಪಧರನ ಸಂದೇಶದೊಡನೆ ರಾಜನಿಗೆ ನಿವೇದಿಸಿದರು.

೧೫೨. ಮತ್ತು ಚಿತ್ರಗಾರ ಕುಮಾರಿದತ್ತನು ಆಮೇಲೆ ಚಿತ್ರದಲ್ಲಿದ್ದ ಸುಂದರಿಯಾದ ರೂಪಲತೆಯನ್ನು ರಾಜನಿಗೆ ತೋರಿಸಿದನು.

೧೫೩. ಲಾವಣ್ಯದ ಸರೋವರದಂತಿದ್ದ ರೂಪಲತೆಯ ಶರೀರವನ್ನು ನೋಡಿದ ರಾಜನ ದೃಷ್ಟಿಯು ಮೇಲೆತ್ತಲು ಸಾಧ್ಯವಾಗದಂತೆ ಅಲ್ಲೇ ನೆಟ್ಟುಹೋಯಿತು.

೧೫೪. ರಾಜನಿಗೆ ಕಾಂತಿಪ್ರವಾಹಮಯಿಯಾದ ಅವಳನ್ನು ನೋಡಿ ಎಷ್ಟು ಆಸ್ವಾದಿಸಿದರೂ ತೃಪ್ತಿಯೇ ಆಗಲಿಲ್ಲ, ಮಾತ್ರವಲ್ಲ, ಬೆಳುದಿಂಗಳನ್ನು ನೋಡಿ ಚಕೋರಪಕ್ಷಿಗೆ ಆಗುವಂತೆ ಅವನ ಉತ್ಸುಕತೆಯು ಅಧಿಕವೂ ಆಯಿತು.

---

ಆಖ್ಯಾಯ ಚ ಯಥಾವೃತ್ತಂ ತತ್ತಸ್ಮೈ ಯದಿ ರೋಚತೇ ।
ತದಿಹ ದ್ರುತಮಾಯಾತು ಪರಿಣೇತುಂ ಮದಾತ್ಮಜಾಮ್ ॥ ೧೪೮

ಇತ್ಯುಕ್ತ್ವಾ ಪೂಜಯಿತ್ವಾರ್ಥೈಃ ಸ ಸಹಸ್ಥಿತಭಿಕ್ಷುಕಮ್ ।
ರಾಜಾ ಚಿತ್ರಕರಂ ತಂ ಚ ಸ್ವದೂತಂ ಚ ವಿಸೃಷ್ಟವಾನ್ ॥ ೧೪೯

ತೇ ಗತ್ವಾಂಬುಧಿಮುತ್ತೀರ್ಯ ಚಿತ್ರಕೃದ್ದೂತಭಿಕ್ಷುಕಾಃ ।
ಸರ್ವೇ ಪ್ರಾಪುಃ ಪ್ರತಿಷ್ಠಾನಂ ಪೃಥ್ವೀರೂಪನೃಪಾಂತಿಕಮ್ ॥ ೧೫೦

ತತ್ರ ಪ್ರಾಭೃತಕಂ ದತ್ತ್ವಾ ಕಾರ್ಯಂ ತತ್ತೇ ಯಥಾಕೃತಮ್ ।
ಸರೂಪಧರಸಂದೇಶಂ ರಾಜ್ಞೇ ತಸ್ಮೈ ನ್ಯವೇದಯನ್ ॥ ೧೫೧

ಸ ಚ ಚಿತ್ರಕೃದೇತಸ್ಮೈ ಭೂಭೃತೇ ತಾಮದರ್ಶಯತ್ ।
ಕುಮಾರಿದತ್ತಶ್ಚಿತ್ರಸ್ಥಾಂ ಪ್ರಿಯಾಂ ರೂಪಲತಾಂ ತತಃ ॥ ೧೫೨

ರಾಜ್ಞಸ್ತಸ್ಯ ವಪುಷ್ಯಸ್ಯಾ ಲಾವಣ್ಯಸರಸೀಕ್ಷತಃ ।
ಮಗ್ನಾ ದೃಷ್ಟಿಸ್ತಥಾ ನೈತಾಮುದ್ಧರ್ತುಮಶಕದ್ಯಥಾ ॥ ೧೫೩

ಸ ಹಿ ಕಾಂತಿಸುಧಾಸ್ಯಂದಮಯೀಂ ತಾಂ ಚರ್ವಯನ್ನೃಪಃ ।
ನಾತೃಪ್ಯದಧಿಕೋತ್ಕಂಠಶ್ಚಕೋರಶ್ಚಂದ್ರಿಕಾಮಿವ ॥ ೧೫೪

೧೫೫. ರಾಜನು ಚಿತ್ರಗಾರನನ್ನು ಕುರಿತು ಹೇಳಿದನು. "ಸೃಷ್ಟಿಕರ್ತನು ನಮಸ್ಕಾರಕ್ಕೆ ಅರ್ಹನು. ನಿನ್ನ ಹಸ್ತವೂ ನಮಸ್ಕಾರಕ್ಕೆ ಅರ್ಹವಾದದ್ದು. ಆ ಸೃಷ್ಟಿಕರ್ತನಿಂದ ಈ ರೂಪವು ನಿರ್ಮಿತವಾಯಿತು. ಸಖನೇ ! ಈ ನಿನ್ನ ಹಸ್ತದಿಂದ ಈ ರೂಪವು ಚಿತ್ರಿತವಾಯಿತು.

೧೫೬. ಆ ರೂಪಧರರಾಜನ ಮಾತು ನನಗೆ ಒಪ್ಪಿಗೆಯಾಗಿದೆ. ನಾನು ಮುಕ್ತಿ ಪುರದ್ವೀಪಕ್ಕೆ ಹೋಗುತ್ತೇನೆ. ಅವನ ಮಗಳನ್ನು ವಿವಾಹಮಾಡಿಕೊಳ್ಳುತ್ತೇನೆ."

೧೫೭. ಹೀಗೆ ಹೇಳಿ ಚಿತ್ರಗಾರ, ದೂತ ಮತ್ತು ಭಿಕ್ಷುಗಳನ್ನು ಧನಗಳಿಂದ ಸತ್ಕರಿಸಿ ಇಲ್ಲಿ ಪೃಥ್ವೀರೂಪರಾಜನು ಚಿತ್ರಪಟವನ್ನು ನೋಡುತ್ತಲೇ ಇದ್ದನು.

೧೫೮. ಮತ್ತು ಉದ್ಯಾನ ಮೊದಲಾದೆಡೆ (ಆ ಚಿತ್ರಪಟವನ್ನು) ಒಯ್ದು ವಿರಹಾತುರನಾಗಿ ಆ ದಿನವನ್ನು ಕಳೆದು ಲಗ್ನವನ್ನು ನಿಶ್ಚಯಿಸಿ ಮಾರನೆಯ ದಿವಸ ಪ್ರಯಾಣವನ್ನು ಮಾಡಿದನು.

೧೫೯–೧೬೦. ನಾನಾವಿಧವಾದ, ಆನೆ, ಕುದುರೆಗಳಿಂದಲೂ ಸಾಮಂತರಿಂದಲೂ ರಾಜಪುತ್ರರಿಂದಲೂ, ರೂಪಧರನ ದೂತರೊಡಗೂಡಿದ್ದ ಚಿತ್ರಗಾರ ಮತ್ತು ಶ್ರಮಣರಿಂದಲೂ ಕೂಡಿ ಆ ರಾಜನು ಮಂಗಲಘಟವೆಂಬ ಗಜಶ್ರೇಷ್ಠವನ್ನು ಆರೋಹಣ ಮಾಡಿ ಪ್ರಯಾಣ ಮಾಡುತ್ತಾ ದಿನಗಳಾದ ಮೇಲೆ ವಿಂಧ್ಯಾಟವಿಯ ದ್ವಾರವನ್ನು ಸೇರಿ ಸಾಯಂಕಾಲದಲ್ಲಿ ಅಲ್ಲಿ ತಂಗಿದನು.

---

ಪ್ರಾಹ ಚಿತ್ರಕರಂ ತಂ ಚ ವಂದ್ಯೋ ವೇಧಾಃ ಕರಶ್ಚ ತೇ ।
ಯೇನೇದಂ ನಿರ್ಮಿತಂ ರೂಪಂ ಯೇನ ಚಾಲಿಖಿತಂ ಸಖೇ ॥ ೧೫೫
ತದ್ರೂಪಧರಭೂಪಸ್ಯ ಪ್ರತಿಪನ್ನಂ ವಚೋ ಮಯಾ ।
ಯಾಮಿ ಮುಕ್ತಿಪುರದ್ವೀಪಮುಪಯಚ್ಛೇ ಚ ತತ್ಸುತಾಮ್ ॥ ೧೫೬
ಇತ್ಯುಕ್ತ್ವಾ ಚಿತ್ರಕೃದ್ದೂತಭಿಕ್ಷೂನ್ ಸಂಮಾನ್ಯ ತಾನ್‌ಧನೈಃ ।
ಆಸೀಚ್ಚಿತ್ರಪಟಂ ಪಶ್ಯನ್ ಪೃಥ್ವೀರೂಪನೃಪೋಽತ್ರ ಸಃ ॥ ೧೫೭
ಉದ್ಯಾನಾದಿಷು ನೀತ್ವಾ ಚ ತದ್ದಿನಂ ವಿರಹಾತುರಃ ।
ಲಗ್ನಂ ನಿಶ್ಚಿತ್ಯ ಸೋಽನ್ಯೇದ್ಯುಶ್ಚಕ್ರೇ ರಾಜಾ ಪ್ರಯಾಣಕಮ್ ॥ ೧೫೮
ಯುಕ್ತೋ ವಿವಿಧಹಸ್ತ್ಯಶ್ವೈಃ ಸಾಮಂತೈ ರಾಜಸೂನುಭಿಃ ।
ಸರೂಪಧರದೂತೈಸ್ತೈಶ್ಚಿತ್ರಕೃಚ್ಛ್ರಮಣೈಶ್ಚ ಸಃ ॥ ೧೫೯
ಗಜೇಂದ್ರಂ ಮಂಗಲಘಟಂ ರಾಜಾರುಹ್ಯ ವ್ರಜನ್ ದಿನೈಃ ।
ಪ್ರಾಪ್ಯ ವಿಂಧ್ಯಾಟವೀದ್ವಾರಂ ಸಾಯಂ ತತ್ರ ಸ್ಥಿತೋಽಭವತ್ ॥ ೧೬೦

೯೧. ಮಾರನೆಯ ದಿವಸ ಶತ್ರುಮರ್ದನವೆಂಬ ಆನೆಯನ್ನು ಹತ್ತಿ ಪೃಥ್ವೀರೂಪ ರಾಜನು ಅರಣ್ಯವನ್ನು ಪ್ರವೇಶಿಸಿದನು.

೯೨. ಅಷ್ಟರಲ್ಲಿ ಮುಂದೆ ಹೋಗುತ್ತಿದ್ದ ತನ್ನ ಸೈನ್ಯವು ಅಕಸ್ಮಾತ್ತಾಗಿ ಹಿಂದಿರುಗಿ ಓಡಿ ಬರುತ್ತಿರುವುದನ್ನು ಅವನು ನೋಡಿದನು.

೯೩. ""ಏನಿದು ?" ಎಂದು ಸಂಭ್ರಮಗೊಂಡ ಅವನೆದುರಿಗೆ ಆ ಕ್ಷಣದಲ್ಲಿಯೇ ಆನೆಯ ಮೇಲೇರಿ ಬಂದ ನಿರ್ಭಯನೆಂಬ ಹೆಸರಿನ ರಾಜಪುತ್ರನು ವಿಜ್ಞಾಪಿಸಿದನು.

೯೪–೯೬. ""ದೇವ ! ಮುಂದೆ ಅತ್ಯಂತ ದೊಡ್ಡ ಭಿಲ್ಲಸೇನೆಯು ಎದುರಿಗೆ ಧಾವಿಸಿ ಬಂದು ಆಕ್ರಮಿಸುತ್ತಿದೆ. ಆ ಭಿಲ್ಲರಿಂದ ಯುದ್ಧದಲ್ಲಿ ನಮ್ಮ ಐವತ್ತು ಆನೆಗಳು ಹತವಾದವು. ಸಾವಿರ ಮಂದಿ ಪದಾತಿಗಳು ಹತರಾದರು. ಮುನ್ನೂರು ಕುದುರೆಗಳು ಹತವಾದವು. ನಮ್ಮವರಿಂದ ಭಿಲ್ಲರ ಪೈಕಿ ಎರಡು ಸಾವಿರ ಮಂದಿ ಸೈನಿಕರು ಹತರಾದರು. ನಮ್ಮ ಸೈನ್ಯದಲ್ಲಿ ಒಂದು ಮುಂಡವು ಕಂಡರೆ ಅವರ ಸೈನ್ಯದಲ್ಲಿ ಎರಡು ಮುಂಡಗಳು. ಅವರ ಬಾಣ, ಅಶನಿಗಳ ಹೊಡೆತದಿಂದ ನಮ್ಮ ಸೈನಿಕರಿಗೆ ಏಟು ಬಿದ್ದಿದೆ.

೯೭ ಅದನ್ನು ಕೇಳಿ ಕುಪಿತನಾದ ಪೃಥ್ವೀರೂಪರಾಜನು ಮುಂದೆ ಧಾವಿಸಿ ಅರ್ಜುನನು ಕೌರವರ ಸೇನೆಯನ್ನು ನಾಶಮಾಡಿದಂತೆ ಭಿಲ್ಲರ ಸೇನೆಯನ್ನು ಹತಮಾಡಿದನು.

---

ದ್ವಿತೀಯೇಽಹ್ನಿ ಸಮಾರುಹ್ಯ ಶತ್ರುಮರ್ದನಸಂಜ್ಞಕಮ್ ।
ಗಜಂ ತಾಮಟವೀಂ ರಾಜಾ ಪೃಥ್ವೀರೂಪೋ ವಿವೇಶ ಸಃ ॥ ೯೧
ಯಾವದ್ಯಾತಿ ಪುರಸ್ತಾವದಗ್ರಯಾಯಿ ನಿಜಂ ಬಲಮ್ ।
ಪಲಾಯಮಾನಮಾವೃತ್ತಮಕಸ್ಮಾತ್ಸ ವ್ಯಲೋಕಯತ್ ॥ ೯೨
ಕಿಮೇತದಿತಿ ಸಂಭ್ರಾಂತಂ ತಂ ಚಾಭ್ಯೇತ್ಯೈವ ತತ್ಕ್ಷಣಮ್ ।
ರಾಜಪುತ್ರೋ ಗಜಾರೂಢೋ ನಿರ್ಭಯಾಖ್ಯೋ ವ್ಯಜಿಜ್ಞಪತ್ ॥ ೯೩
ದೇವಾಗ್ರತೋಽತಿಮಹತೀ ಭಿಲ್ಲಸೇನಾಭಿಧಾವಿತಾ ।
ತೈರ್ವಾರಣಾ ನಃ ಪಂಚಾಶನ್ಮಾತ್ರಾ ಭಿಲ್ಲೈ ರಣೇ ಹತಾಃ ॥ ೯೪
ಸಹಸ್ರಂ ಚ ಪದಾತೀನಾಮಶ್ವಾನಾಂ ಚ ಶತತ್ರಯಮ್ ।
ಅಸ್ಮದೀಯೈಶ್ಚ ಭಿಲ್ಲಾನಾಂ ದ್ವೇ ಸಹಸ್ರೇ ನಿಪಾತಿತೇ ॥ ೯೫
ಏಕೋಽಪ್ಯಸ್ಮದ್ಬಲೇ ದೃಷ್ಟಃ ಕಬಂಧೋ ದ್ವೌ ಚ ತದ್ಬಲೇ ।
ತತೋಽಸ್ಮತ್ಸೈನಿಕಾ ಭಗ್ನಾಸ್ತದ್ಬಾಣಾಶನಿಪೀಡಿತಾಃ ॥ ೯೬
ತಚ್ಛ್ರುತ್ವಾ ಕುಪಿತೋ ರಾಜಾ ಪೃಥ್ವೀರೂಪಃ ಪ್ರಧಾವ್ಯ ಸಃ ।
ಜಘಾನ ಸೇನಾಂ ಭಿಲ್ಲಾನಾಂ ಕೌರವಾಣಾಮಿವಾರ್ಜುನಃ ॥ ೯೭

೧೬೮. ನಿರ್ಭಯ ಮೊದಲಾದವರಿಂದ ದಸ್ಯುಗಳು ಹತರಾದರು. ಅನಂತರ ರಾಜನು ಭಿಲ್ಲರ ಸೇನಾಪತಿಯ ಶಿರಸ್ಸನ್ನು ಒಂದು ಭಲ್ಲಾಯುಧದಿಂದ ಕತ್ತರಿಸಿದನು.

೧೬೯. ಶತ್ರುಮರ್ದನವೆಂಬ ರಾಜನ ಆನೆಗೆ ಬಾಣಗಳಿಂದ ಗಾಯಗಳಾಗಿ ರಕ್ತವು ಹರಿಯುತ್ತಿದ್ದು ಆ ಆನೆಯು ಧಾತುಗಳ ಪ್ರವಾಹ ಹರಿಯುತ್ತಿರುವ ಅಂಜನ ಪರ್ವತದಂತೆ ಕಾಣಿಸಿತು.

೧೭೦. ಅನಂತರ ಅವನ ಸಮಗ್ರ ಸೈನ್ಯವೂ, ವಿಜಯಿಯಾಗಿ ಹಿಂದಿರುಗಿ ಬಂದು ಸೇರಲಾಗಿ ಸತ್ತು ಉಳಿದ ಭಿಲ್ಲರು ಹತ್ತು ದಿಕ್ಕುಗಳಿಗೂ ಓಡಿ ಹೋದರು.

೧೭೧. ಅನಂತರ ಯುದ್ಧದಿಂದ ಹಿಂದಿರುಗಿದ ಪೃಥ್ವೀರೂಪ ಮಹೀಪತಿಯ ಪರಾಕ್ರಮವನ್ನು ರೂಪಧರನ ದೂತರು ಪ್ರಶಂಸಿದರು.

೧೭೨. ವಿಜಯಶೀಲನಾದ ಆ ರಾಜನು ವ್ರಣಗೊಂಡ ಸೈನಿಕರ ವಿಶ್ರಾಂತಿಗಾಗಿ ಆ ಅರಣ್ಯ ಭೂಮಿಯಲ್ಲೇ ಸರೋವರವೊಂದರ ತೀರದಲ್ಲಿ ಆ ದಿವಸ ಬಿಡಾರ ಹೂಡಿದನು.

೧೭೩. ಅನಂತರ ಬೆಳಿಗ್ಗೆ ಪ್ರಯಾಣವನ್ನು ತೊಡಗಿದ ರಾಜನು ಕ್ರಮವಾಗಿ ಪ್ರಯಾಣಿಸುತ್ತಾ ಸಮುದ್ರದ ದಡದಲ್ಲಿದ್ದ ಪತ್ರಪುರಪಟ್ಟಣವನ್ನು ತಲುಪಿದನು.

೧೭೪. ಅಲ್ಲಿ ಒಂದು ದಿವಸ ವಿಶ್ರಾಂತಿ ಪಡೆದನು. ಅಲ್ಲಿದ್ದ ಉದಾರಚರಿತನೆಂಬ ಹೆಸರುಳ್ಳ ರಾಜನು ಮಾಡಿದ ರಾಜೋಚಿತವಾದ ಸತ್ಕಾರವನ್ನು ಸ್ವೀಕರಿಸಿದನು.

---

ನಿರ್ಭಯಾದಿಭಿರನ್ಯೇಷು ನಿಹತೇಷ್ವಥ ದಸ್ಯುಷು ।
ಸ ಚಿಚ್ಛೇದೈಕಭಲ್ಲೇನ ಭಿಲ್ಲಸೇನಾಪತೇಃ ಶಿರಃ ॥ ೧೬೮
ಬಾಣವ್ರಣಗಲದ್ರಕ್ತಸ್ತಸ್ಯೇಭಃ ಶತ್ರುಮರ್ದನಃ ।
ಸಧಾತುನಿರ್ಝರೋದ್ಗಾರಮಂಜನಾದ್ರಿಂ ವ್ಯಡಂಬಯತ್ ॥ ೧೬೯
ತತೋ ಲಬ್ಧಜಯಾವೃತ್ತೇ ತತ್ಸೈನ್ಯೇ ಮಿಲಿತೇಽಖಿಲೇ ।
ಪಲಾಯ್ಯ ಹತಶೇಷಾಸ್ತೇ ಭಿಲ್ಲಾ ದಶ ದಿಶೋ ಯಯುಃ ॥ ೧೭೦
ತತೋ ನಿವೃತ್ತಸಂಗ್ರಾಮಃ ಪೃಥ್ವೀರೂಪೋ ಮಹೀಪತಿಃ ।
ಸ ರೂಪಧರದೂತೇನ ಸ್ತೂಯಮಾನಪರಾಕ್ರಮಃ ॥ ೧೭೧
ವ್ರಣಿತಾನೀಕವಿಶ್ರಾಂತ್ಯೈ ತಸ್ಯಾಮೇವಾಟವೀಭುವಿ ।
ವಿಜಯೀ ಸರಸೀತೀರೇ ದಿವಸಂ ವಸತಿ ಸ್ಮ ತಮ್ ॥ ೧೭೨
ಪ್ರಾತಸ್ತತಃ ಪ್ರಯಾತಶ್ಚ ಸ ರಾಜಾ ಕ್ರಮಶೋ ವ್ರಜನ್ ।
ತತ್ಪ್ರಾಪ ನಗರಂ ಪತ್ರಪುರಂ ತೀರಸ್ಥಮಂಬುಧೇಃ ॥ ೧೭೩
ತತ್ರೈಕಾಹಂ ವಿಶಶ್ರಾಮ ತತ್ರತ್ಯೇನ ಮಹೀಭೃತಾ ।
ಉದಾರಚರಿತಾಖ್ಯೇನ ರಚಿತೋಚಿತಸತ್ಕ್ರಿಯಃ ॥ ೧೭೪

೧೭೫. ಆ ರಾಜನೇ ಒದಗಿಸಿದ ಹಡಗುಗಳಿಂದ ಸಮುದ್ರವನ್ನು ದಾಟಿ ಪೃಥ್ವೀರೂಪನು ಎಂಟು ದಿವಸಗಳಲ್ಲಿ ಮುಕ್ತಿಪುರ ದ್ವೀಪವನ್ನು ತಲುಪಿದನು.

೧೭೬. ರೂಪಧರ ರಾಜನು ಅದನ್ನು ತಿಳಿದು ಅವನನ್ನು ಎದುರುಗೊಂಡನು. ಪರಸ್ಪರ ಕಂಠಾಲಿಂಗನ ಮಾಡಿ ಆ ಇಬ್ಬರು ರಾಜರೂ ಒಟ್ಟಿಗೆ ಸೇರಿದರು.

೧೭೭. ಆಮೇಲೆ ಪೃಥ್ವೀರೂಪರಾಜನು ಆ ರಾಜನೊಡನೆ, ಪೌರನಾರಿಯರು ತಮ್ಮ ದೃಷ್ಟಿಗಳಿಂದ ಕುಡಿದು ಬಿಡುತ್ತಿರುವರೋ ಎಂಬಂತೆ ನೋಡುತ್ತಿರಲು ಆ ಪಟ್ಟಣವನ್ನು ಪ್ರವೇಶಿಸಿದನು.

೧೭೮. ಅಲ್ಲಿ ರಾಣಿಯಾದ ಹೇಮಲತೆಯೂ ರಾಜನಾದ ರೂಪಧರನೂ ಮಗಳಿಗೆ ಅನುರೂಪನಾದ ಆ ಪತಿಯನ್ನು ಕಂಡು ಸಂತೋಷಪಟ್ಟರು.

೧೭೯. ಅನಂತರ ತನ್ನ ಸಂಪತ್ತಿಗೆ ಯೋಗ್ಯವಾದ ಆಚಾರಗಳಿಂದ ರಾಜನಾದ ರೂಪಧರನು ಪೃಥ್ವೀರೂಪನನ್ನು ಸತ್ಕರಿಸಿದನು.

೧೮೦. ಮಾರನೆಯ ದಿವಸ ವಿವಾಹ ವೇದಿಕೆಯನ್ನು ಆರೋಹಣ ಮಾಡಿ ಶೋಭನವಾದ ಮುಹೂರ್ತದಲ್ಲಿ ಉತ್ಸವಸಹಿತನಾಗಿ ಪೃಥ್ವೀರೂಪನು ಬಹಳ ಉತ್ಕಂಠೆಯಲ್ಲಿದ್ದ ರೂಪಲತೆಯ ಪಾಣಿಗ್ರಹಣವನ್ನು ಮಾಡಿದನು.

---

ತೇನೈವೋಪಹೃತೈರ್ಯಾನಪಾತ್ರೈಸ್ತೀರ್ತ್ವಾ ಚ ಸಾಗರಮ್ ।
ಅಷ್ಟಭಿರ್ದಿವಸೈಃ ಪ್ರಾಪ ದ್ವೀಪಂ ಮುಕ್ತಿಪುರಂ ಸ ತತ್ ॥ ೧೭೫
ಬುದ್ಧ್ವಾ ರೂಪಧರಸ್ತಚ್ಚ ರಾಜಾ ಹೃಷ್ಟಸ್ತಮಭ್ಯಗಾತ್ ।
ಮಿಲತಃ ಸ್ಮ ಚ ತೌ ಭೂಪೌ ಕೃತಕಂಠಗ್ರಹೌ ಮಿಥಃ ॥ ೧೭೬
ತತಸ್ತೇನ ಸಮಂ ಪೃಥ್ವೀರೂಪೋ ರಾಜಾ ಸ ತತ್ಪುರಮ್ ।
ವಿವೇಶ ಪೌರನಾರೀಣಾಂ ಪೀಯಮಾನ ಇವೇಕ್ಷಣೈಃ ॥ ೧೭೭
ತತ್ರ ಹೇಮಲತಾ ರಾಜ್ಞೀ ಸ ಚ ರೂಪಧರೋ ನೃಪಃ ।
ದೃಷ್ಟ್ವಾನುರೂಪಂ ದುಹಿತುರ್ಭರ್ತಾರಂ ತಂ ನನಂದತುಃ ॥ ೧೭೮
ಅಥ ಸ್ವಸಂಪದುಚಿತೈ ರಾಜ್ಞಾ ರೂಪಧರೇಣ ಸಃ ।
ಆಚಾರೈರರ್ಚಿತಸ್ತಸ್ಥೌ ಪೃಥ್ವೀರೂಪೋಽತ್ರಪಾರ್ಥಿವಃ ॥ ೧೭೯
ಅನ್ಯೇದ್ಯುಶ್ಚ ಚಿರೋತ್ಕಾಯಾ ವೇದೀಮಾರುಹ್ಯ ಶೋಭನೇ ।
ಲಗ್ನೇ ರೂಪಲತಾಯಾಃ ಸ ಸೋತ್ಸವಃ ಪಾಣಿಮಗ್ರಹೀತ್ ॥ ೧೮೦

೧೮೧. ನಿಜವಾಗಿಯೂ ನೀನು ಹಿಂದೆ ಇಂತಹುದನ್ನು ಕೇಳಿರುವೆಯೇನು, ಎಂದು ಹೇಳುವುದಕ್ಕೋ ಏನೋ ಎಂಬಂತೆ ಪರಸ್ಪರ ರೂಪಗಳನ್ನು ನೋಡಿದ ಅವರಿಬ್ಬರ ಅರಳಿದ ಕಣ್ಣುಗಳು ಕಿವಿಯನ್ನು ಸೇರಿದುವು.[1]

೧೮೨. ಬತ್ತದ ಅರಳುಗಳನ್ನು ಅವರಿಬ್ಬರೂ ಬಿಡುವಾಗ ರೂಪಧರನು ರತ್ನಾಕರನೆಂದು ಜನಗಳು ತಿಳಿಯುವಂತೆ ರತ್ನಗಳನ್ನು ಕೊಟ್ಟನು.

೧೮೩. ಮಗಳ ವಿವಾಹವು ನೆರವೇರಲಾಗಿ ರೂಪಧರನು ಚಿತ್ರಗಾರ ಮತ್ತು ಶ್ರಮಣರನ್ನು ವಸ್ತ್ರಾಭರಣಗಳಿಂದ ಸತ್ಕರಿಸಿ ಇತರ ಎಲ್ಲರನ್ನೂ ಸಂಮಾನಿಸಿದನು.

೧೮೪. ಅನಂತರ ಆ ಪುರದಲ್ಲೇ ತಂಗಿದ ಪೃಥ್ವೀರೂಪರಾಜನು ಅನುಚರರೊಡನೆ ಆ ದ್ವೀಪಕ್ಕೆ ಯೋಗ್ಯವಾದ ಆಹಾರವನ್ನೂ ಪಾನವನ್ನೂ ಸೇವಿಸಿದನು.

೧೮೫–೧೮೬. ಸಂಗೀತ, ನೃತ್ಯ ಮುಂತಾದುವುಗಳಿಂದ ಆ ಹಗಲು ಕಳೆಯಿತು. ರಾತ್ರಿಯಲ್ಲಿ ಉತ್ಕಂಠಿತನಾದ ರಾಜನು ರೂಪಲತೆಯ ವಾಸಗೃಹವನ್ನು ಪ್ರವೇಶಿಸಿದನು. ಆ ವಾಸಗೃಹದಲ್ಲಿ ರತ್ನಪರ್ಯಂಕವನ್ನು ಹಾಸಲಾಗಿತ್ತು. ರತ್ನದ ನೆಲಗಟ್ಟನ್ನು ಹಾಕಿದ್ದ ಆ ಬಿಡಾರ ರತ್ನಸ್ತಂಭಗಳಿಂದ ಶೋಭಿತವಾಗಿದ್ದು ರತ್ನದೀಪಗಳಿಂದ ಬೆಳಗುತ್ತಿತ್ತು.

---

ಸತ್ಯಂ ಶ್ರುತಂ ತ್ವಯಾ ಪೂರ್ವಮಿತಿ ವಕ್ತುಮಿವ ಶ್ರುತಿಮ್ ।
ಪ್ರಾಪೋತ್ಫುಲ್ಲಾ ತಯೋರ್ದೃಷ್ಟಿರನ್ಯೋನ್ಯರೂಪದರ್ಶಿನೋಃ ॥ ೧೮೧
ರತ್ನಾನಿ ಲಾಜಮೋಕ್ಷೇಷು ದ್ವಯೋ ರೂಪಧರಸ್ತಯೋಃ ।
ದದೌ ತಥಾ ಯಥಾ ಸೈಷ ಮೇನೇ ರತ್ನಾಕರೋ ಜನೈಃ ॥ ೧೮೨
ನಿರ್ವೃತ್ತೇ ಚ ಸುತೋದ್ವಾಹೇ ಚಿತ್ರಕೃಚ್ಛ್ರಮಣಾನ್ ಸ ತಾನ್ ।
ಸಂಪೂಜ್ಯ ವಸ್ತ್ರಾಭರಣೈಃ ಸರ್ವಾನನ್ಯಾನಪೂಜಯತ್ ॥ ೧೮೩
ತತಃ ಪುರೇ ಸ್ಥಿತಸ್ತಸ್ಮಿನ್ ಪೃಥ್ವೀರೂಪನೃಪೋಽತ್ರ ಸಃ ।
ತದ್ದ್ವೀಪೋಚಿತಮಾಹಾರಂ ಭೇಜೇ ಪಾನಂ ಚ ಸಾನುಗಃ ॥ ೧೮೪
ನೃತ್ತಗೀತಾದಿಭಿರ್ಯಾತೇ ದಿನೇ ನಕ್ತಂ ವಿವೇಶ ಚ ।
ಸೋತ್ಕೋ ರೂಪಲತಾವಾಸಭವನಂ ಸೋಽವನೀಪತಿಃ ॥ ೧೮೫
ಆಸ್ತೀರ್ಣರತ್ನಪರ್ಯಂಕಂ ರತ್ನಕುಟ್ಟಿಮಶೋಭಿತಮ್ ।
ರತ್ನಸ್ತಂಭೋಂಭಿತಾಭೋಗಂ ರತ್ನದೀಪಪ್ರಕಾಶಿತಮ್ ॥ ೧೮೬

---

1. ನೇತ್ರವು ಕರ್ಣಪರ್ಯಂತ ಹರಡಿರುವುದು ಸುಲಕ್ಷಣವೆಂದು ಸಾಮುದ್ರಿಕಶಾಸ್ತ್ರವು ತಿಳಿಸುತ್ತದೆ.

೧೭೭. ಅಲ್ಲಿ ತರುಣನಾದ ಅವನು ರೂಪಲತೆಯೊಡನೆ ಚಿರಕಾಲದ ಸಂಕಲ್ಪದಿಂದ ಆಲೋಚಿಸಿದ ಸುರತೋತ್ಸವವನ್ನು ಯಥೇಚ್ಛವಾಗಿ ಸೇವಿಸಿದನು.

೧೭೮. ಸುರತಶ್ರಮದಿಂದ ನಿದ್ರಾವಶನಾದ ಅವನು ಪಾಠಕರಾದ ವಂದಿಮಾಗಧರಿಂದ ಎಚ್ಚರಗೊಂಡು ಪ್ರಾತಃಕಾಲದಲ್ಲಿ ಎದ್ದು ಸ್ವರ್ಗದಲ್ಲಿರುವ ಇಂದ್ರನಂತೆ ಶೋಭಿಸಿದನು.

೧೭೯. ಈ ರೀತಿಯಾಗಿ ಆ ದ್ವೀಪದಲ್ಲಿ ಪೃಥ್ವೀರೂಪರಾಜನು ಮಾವನು ತಂದುಕೊಟ್ಟ ಹೊಸಹೊಸ ಭೋಗಗಳನ್ನು ಅನುಭವಿಸುತ್ತಾ ಹತ್ತು ದಿವಸಗಳು ವಾಸಮಾಡಿದನು.

೧೮೦. ಅನಂತರ ಹನ್ನೊಂದನೆಯ ದಿವಸ ಆ ರಾಜನು ರೂಪಲತೆಯೊಡಗೂಡಿ ಜ್ಯೋತಿಷಿಗಳು ಹೇಳಿದಂತೆ ಮಂಗಳಕಾರ್ಯಗಳನ್ನು ನೆರವೇರಿಸಿ ಹೊರಟನು.

೧೮೧. ಸಮುದ್ರ ತೀರದವರೆಗೆ ಮಾವನು ಪೃಥ್ವೀರೂಪನನ್ನು ಹಿಂಬಾಲಿಸಿದನು. ಪೃಥ್ವೀರಾಜನು ಅನಚರರಿಂದ ಕೂಡಿದ ವಧುವಿನ ಸಂಗಡ ಹಡಗುಗಳನ್ನು ಹತ್ತಿದನು.

೧೮೨. ಎಂಟುದಿವಸಗಳಲ್ಲಿ ರಾಜನು ಸಮುದ್ರವನ್ನು ದಾಟಿ ತೀರದಲ್ಲಿದ್ದ ಸೈನ್ಯವನ್ನು ಸೇರಿಕೊಂಡನು. ಮುಂದೆ ಉದಾರಚರಿತನನ್ನು ಸೇರಿಕೊಂಡು ಪತ್ರಪುರಕ್ಕೆ ಹೋದನು.

---

ತತ್ರ ಭೇಜೇ ತಯಾ ಸಾಕಂ ಸ ರೂಪಲತಯಾ ಯುವಾ ।
ಚಿರಸಂಕಲ್ಪಗುಣಿತಂ ಯಥೇಚ್ಛಂ ಸುರತೋತ್ಸವಮ್ ॥ ೧೭೭
ಸುರತಶ್ರಮಸುಪ್ತಶ್ಚ ಪಠದ್ಭಿರ್ವಂದಿಮಾಗಧೈಃ ।
ಬೋಧಿತಃ ಪ್ರಾತರುತ್ಥಾಯ ತಸ್ಥಾವಿಂದ್ರೋ ಯಥಾ ದಿವಿ ॥ ೧೭೮
ಏವಂ ದಶದಿನಾನ್ಯತ್ರ ಪೃಥ್ವೀರೂಪನೃಪೋಽವಸತ್ ।
ದ್ವೀಪೇ ನವನವೈರ್ಭೋಗೈರ್ವಿಲಸನ್ ಶ್ವಶುರಾಹೃತೈಃ ॥ ೧೭೯
ಏಕಾದಶೇ ದಿನೇ ಯುಕ್ತಃ ಸ ರೂಪಲತಯಾ ತತಃ ।
ಗಣಕಾನುಮತೋ ರಾಜಾ ಪ್ರತಸ್ಥೇ ಕೃತಮಂಗಲಃ ॥ ೧೮೦
ಕೃತಾನುಯಾತ್ರಃ ಶ್ವಶುರೇಣಾಸಮುದ್ರತಟಂ ಚ ಸಃ ।
ವಧ್ವಾ ಸಹ ಪ್ರವಹಣಾನ್ಯಾರುರೋಹಾನುಗಾನ್ವಿತಃ ॥ ೧೮೧
ದಿನಾಷ್ಟಕೇನ ತೀರ್ತ್ವಾಬ್ಧಿಂ ತೀರಸ್ಥೇ ಮಿಲಿತೇ ಬಲೇ ।
ಉದಾರಚರಿತೇ ಚಾಗ್ರಪ್ರಾಪ್ತೇ ಪತ್ರಪುರಂ ಯಯೌ ॥ ೧೮೨

೧೯೩. ಅಲ್ಲಿ ಆ ರಾಜನಿಂದ ಉಪಚಾರಗೊಂಡು ಕೆಲವು ದಿನಗಳು ವಿಶ್ರಾಂತಿ ಪಡೆದು ನಂತರ ಪೃಥ್ವೀರೂಪನು (ಮುಂದೆ) ಪ್ರಯಾಣ ಮಾಡಿದನು.

೧೯೪–೧೯೫. ಪ್ರಿಯೆಯಾದ ರೂಪಲತೆಯನ್ನು ಜಯಮಂಗಲವೆಂಬ ಆನೆಯ ಮೇಲೆ ಹತ್ತಿಸಿ ತಾನು ಕಲ್ಯಾಣಗಿರಿ ಎಂಬ ಆನೆಯನ್ನು ಹತ್ತಿ ಕುಳಿತು ನಿರಂತರವಾಗಿ ಪ್ರಯಾಣಮಾಡಿದ ಆ ರಾಜನು ನಂತರ ಹಾರಾಡುತ್ತಿರುವ ಧ್ವಜ ಪತಾಕೆಗಳಿಂದ ಶೋಭಿತವಾಗಿದ್ದ ಪ್ರತಿಷ್ಠಾನಪುರವನ್ನು ತಲುಪಿದನು.

೧೯೬. ಅಲ್ಲಿ ರೂಪಲತೆಯನ್ನು ಆಶ್ಚರ್ಯದಿಂದ ರೆಪ್ಪೆ ಬಡಿಯದೆ ನೋಡುತ್ತಿದ್ದ ಪುರಸ್ತ್ರೀಯರು ತಾವೇ ಸುಂದರಿಯರೆಂಬ ಗರ್ವವನ್ನು ಬಿಟ್ಟರು.

೧೯೭. ರಾಜಧಾನಿಯನ್ನು ಪ್ರವೇಶಿಸಿ ಪೃಥ್ವೀರೂಪರಾಜನು ಉತ್ಸವವನ್ನು ಆಚರಿಸಿ ಆ ಚಿತ್ರಕಾರನಿಗೆ ಗ್ರಾಮಗಳನ್ನು ಧನವನ್ನೂ ಕೊಟ್ಟನು.

೧೯೮. ಮತ್ತು ಆ ಇಬ್ಬರು ಶ್ರಮಣರನ್ನೂ ಯಥೋಚಿತವಾಗಿ ಧನಗಳಿಂದ ಸತ್ಕರಿಸಿ ಸಾಮಂತರನ್ನೂ ಸಚಿವರನ್ನೂ ರಾಜಪುತ್ರರನ್ನೂ ಸಮಾನವಾಗಿ ಸತ್ಕರಿಸಿದನು.

೧೯೯. ಅನಂತರ ನಿಪುಣನಾದ ಆ ಪೃಥ್ವೀಪತಿಯು ಪ್ರಿಯೆಯಾದ ರೂಪಲತೆಯೊಡನೆ ಆ ಪಟ್ಟಣದಲ್ಲಿ ಜೀವಲೋಕದ ಸುಖವನ್ನು ಅನುಭವಿಸಿದನು."

---

ತತ್ರೋಪಚರಿತಸ್ತೇನ ರಾಜ್ಞಾ ವಿಶ್ರಮ್ಯ ಕಾನಿಚಿತ್ ।
ದಿನಾನಿ ಸ ತತಃ ಪ್ರಾಯಾತ್ ಪೃಥ್ವೀರೂಪೋ ನರೇಶ್ವರಃ ॥ ೧೯೩
ಪ್ರಿಯಾಂ ರೂಪಲತಾಂ ಹಸ್ತಿನ್ಯಾರೋಪ್ಯ ಜಯಮಂಗಲೇ ।
ಕಲ್ಯಾಣಗಿರಿನಾಮಾನಮಾತ್ಮನಾರುಹ್ಯ ಚ ದ್ವಿಪಮ್ ॥ ೧೯೪
ಗಚ್ಛನ್ ಕ್ರಮಾದವಿರತೈಃ ಸೋಽಥ ರಾಜಾ ಪ್ರಯಾಣಕೈಃ ।
ಉತ್ಪತಾಕಧ್ವಜಂ ಪ್ರಾಪ ಪ್ರತಿಷ್ಠಾನಂ ನಿಜಂ ಪುರಮ್ ॥ ೧೯೫
ತತ್ರ ರೂಪಲತಾಂ ದೃಷ್ಟ್ವಾ ರೂಪದರ್ಪಂ ಪುರಾಂಗನಾಃ ।
ಜಹುಸ್ತತ್ಕಾಲಮಾಶ್ಚರ್ಯನಿರ್ನಿಮೇಷವಿಲೋಚನಾಃ ॥ ೧೯೬
ರಾಜಧಾನೀಂ ಪ್ರವಿಶ್ಯಾಥ ಪೃಥ್ವೀರೂಪಃ ಕೃತೋತ್ಸವಃ ।
ದದೌ ಚಿತ್ರಕೃತೇ ತಸ್ಮೈ ಗ್ರಾಮಾನ್ ರಾಜಾ ಧನಂ ಚ ಸಃ ॥ ೧೯೭
ಶ್ರಮಣೌ ಪೂಜಯಿತ್ವಾ ಚ ವಸುಭಿಸ್ತೌ ಯಥೋಚಿತಮ್ ।
ಸಾಮಂತಾನ್ಸಚಿವಾನ್ರಾಜಪುತ್ರಾಂಶ್ಚ ಸಮಮಮಾನಯತ್ ॥ ೧೯೮
ತತಃ ಸ ರೂಪಲತಯಾ ಪ್ರಿಯಯಾ ಸಹಿತಸ್ತಯಾ ।
ಜೀವಲೋಕಸುಖಂ ತತ್ರ ಭೇಜೇ ಪೃಥ್ವೀಪತಿಃ ಕೃತೀ ॥ ೧೯೯

೨೦೦. ಹೀಗೆ ಗೋಮುಖನು ಕಥೆಯನ್ನು ಹೇಳಿ ನರವಾಹನದತ್ತನು ಸುಖವನ್ನೇ ಗುರಿಯಾಗಿ ಹೊಂದಿದ್ದ ಅವನು ಉತ್ಸುಕನಾಗಿದ್ದ ಅವನಿಗೆ ಮತ್ತೆ ಹೇಳಿದನು.

೨೦೧. "ಈ ರೀತಿಯಾಗಿ ಧೀರರು ಕಷ್ಟಮಯವಾದ ಚಿರವಿರಹವನ್ನು ಸಹಿಸುತ್ತಾರೆ. ದೇವನೇ ! ನೀನಾದರೋ ಒಂದು ರಾತ್ರಿಯೂ ಹೇಗೆ (ವಿರಹವನ್ನು) ಸಹಿಸುವುದಿಲ್ಲ?

೨೦೨–೨೦೩. ಪ್ರಾತಃಕಾಲದಲ್ಲಿ ನೀನು ಅಲಂಕಾರವತಿಯನ್ನು ವಿವಾಹ ಮಾಡಿಕೊಳ್ಳುವೆಯಷ್ಟೆ !' ಹೀಗೆ ಗೋಮುಖನು ಹೇಳಲು ಆ ಸಮಯದಲ್ಲಿ ಅಲ್ಲಿಗೆ ಬಂದ ಯೌಗಂಧರಾಯಣನ ಮಗನಾದ ಮರುಭೂತಿಯು ಹೇಳಿದನು. "ಮನ್ಮಥನ ಸಂತಾಪವೇನೆಂದೇ ಗೊತ್ತಿಲ್ಲದೆ ಸ್ವಸ್ಥನಾಗಿರುವ ನೀನು ಏನು ತಾನೆ ಹರಟುವುದಿಲ್ಲ?

೨೦೪. ಎಲ್ಲಿಯವರೆಗೆ ಪುರುಷನು ಮನ್ಮಥನ ಬಾಣಗಳಿಗೆ ಗುರಿಯಾಗಿ ಬೀಳುವುದಿಲ್ಲವೋ ಅಲ್ಲಿಯವರೆಗೆ ಅವನಿಗೆ ಧೈರ್ಯ, ವಿವೇಕ, ಶೀಲಗಳೆಲ್ಲ ಇರುತ್ತವೆ.

೨೦೫. ಜಗತ್ತಿನಲ್ಲಿ ಸರಸ್ವತಿ, ಸ್ಕಂದ ಮತ್ತು ಜಿನನು, ಈ ಮೂರು ಮಂದಿ ಧನ್ಯರು. ಅವರು ಬಟ್ಟೆಯ ತುದಿಯಲ್ಲಿ ಅಂಟಿಕೊಂಡ ಹುಲ್ಲಿನ ಹಾಗೆ ಮನ್ಮಥನನ್ನು ಕೊಡವಿ ಎಸೆದವರು.'

---

ಇತ್ಯಾಖ್ಯಾಯ ಕಥಾಂ ಮಂತ್ರೀ ಗೋಮುಖಸ್ತತ್ಸುಖೋನ್ಮುಖಃ ।
ನರವಾಹನದತ್ತಾಯ ತಮುವಾಚೋತ್ಸುಕಂ ಪುನಃ ॥ ೨೦೦
ಏವಂ ವಿಷಹ್ಯತೇ ಧೀರೈಃ ಸಕ್ಲೇಶೋ ವಿರಹಶ್ಚಿರಮ್ ।
ತ್ವಂ ಪುನಃ ಸಹಸೇ ನೈಕಾಮಪಿ ದೇವ ನಿಶಾಂ ಕಥಮ್ ॥ ೨೦೧
ಪ್ರಾತರ್ಭವಾನಲಂಕಾರವತೀಂ ಹಿ ಪರಿಣೇಷ್ಯತಿ ।
ಗೋಮುಖೇನೈವಮುಕ್ತೇ ಚ ತತ್ರ ತತ್ಸಮಯಾಗತಃ ॥ ೨೦೨
ಯೌಗಂಧರಾಯಣಸುತೋ ಮರುಭೂತಿರಭಾಷತ ।
ಅದೃಷ್ಟಸ್ಮರಸಂತಾಪಃ ಸ್ವಸ್ಥಸ್ತ್ವಂ ಕಿಂ ನ ಜಲ್ಪಸಿ ॥ ೨೦೩
ತಾವದ್ಧತ್ತೇ ಪುಮಾನ್ ಧೈರ್ಯಂ ವಿವೇಕಂ ಶೀಲಮೇವ ಚ ।
ಯಾವತ್‌ಪತತಿ ಕಾಮಸ್ಯ ಸಾಯಕಾನಾಂ ನ ಗೋಚರೇ ॥ ೨೦೪
ಧನ್ಯಾಃ ಸರಸ್ವತೀ ಸ್ಕಂದೋ ಜಿನಶ್ಚ ಜಗತಿ ತ್ರಯಃ ।
ಪಟಾಂತಲಗ್ನತೃಣವತ್‌ಕ್ಷಿಪ್ತೋ ವ್ಯಾಧೂಯ ಯೈಃ ಸ್ಮರಃ ॥ ೨೦೫

೨೦೬ ಮರುಭೂತಿಯು ಹೀಗೆ ಹೇಳಲಾಗಿ ಗೋಮುಖನು ಉದ್ವಿಗ್ನನಾದುದನ್ನು ನೋಡಿ ಅವನನ್ನು ಸಮರ್ಥಿಸುವುದಕ್ಕಾಗಿ ನರವಾಹನದತ್ತನು ಹೇಳಿದನು.

೨೦೭ "ವಿನೋದಕ್ಕೋಸ್ಕರವಾಗಿ ಗೋಮುಖನು ನನಗೆ ಇದನ್ನು ಹೇಳಿದ್ದಾನೆ. ಇದು ಯುಕ್ತವಾಗಿದೆ. ಸ್ನೇಹಿತನಾದವನು ವಿರಹದ ಸಂಕಟದಲ್ಲಿ "ಇದು ಸರಿ' ಎಂದು ಹೇಳಿಬಿಡುತ್ತಾನೆಯೇನು?

೨೦೮. ವಿರಹದಿಂದ ಪೀಡಿತನಾದವನನ್ನು ಯಥಾಶಕ್ತಿ ಸ್ವಜನರು ಸಮಾಧಾನ ಮಾಡಬೇಕು. ಪ್ರಭುವು ಮನ್ಮಥನ ಬಾಣಗಳಿಂದ ಪೀಡಿತನು ಎಂಬುದನ್ನು ಆ ಗೋಮುಖನು ಚೆನ್ನಾಗಿ ತಿಳಿದಿದ್ದಾನೆ'

೨೦೯. ಇತ್ಯಾದಿ ಹರಟುತ್ತಾ ಸೇವಕಜನರಿಂದ ಆಯಾ ಕಥೆಗಳನ್ನು ಕೇಳುತ್ತಾ ನರವಾಹನದತ್ತನು ಆ ರಾತ್ರಿಯನ್ನು ಕಳೆದನು.

೨೧೦-೨೧೧. ಅನಂತರ ನರವಾಹನದತ್ತನು ಪ್ರಾತಃಕಾಲದಲ್ಲಿ ಎದ್ದು ಆವಶ್ಯಕವಾದ ಕ್ರಿಯೆಗಳನ್ನು ಮಾಡಿ ಮುಗಿಸಿದಾಗ ಪತಿಯಾದ ಅಲಂಕಾರಶೀಲನೊಡನೆಯೂ ಪುತ್ರನಾದ ಧರ್ಮಶೀಲನೊಡನೆಯೂ ಮಗಳಾದ ಅಲಂಕಾರವತಿಯೊಡನೆಯೂ ಆಕಾಶದಿಂದ ಕಾಂಚನಪ್ರಭೆ ಇಳಿದುಬರುತ್ತಿರುವುದನ್ನು ನೋಡಿದನು.

---

ಮರುಭೂತೌ ವದತ್ಯೇವಮುದ್ವಿಗ್ನಂ ವೀಕ್ಷ್ಯ ಗೋಮುಖಮ್ ।
ನರವಾಹನದತ್ತಸ್ತಂ ಸಮರ್ಥಯಿತುಮಭ್ಯಧಾತ್ ॥ ೨೦೬
ವಿನೋದನಾರ್ಥಮೇತನ್ಮೇ ಗೋಮುಖೋ ಯುಕ್ತಮುಕ್ತವಾನ್ ।
ಸ್ನಿಗ್ಧೋ ಹಿ ವಿರಹಾಯಾಸೇ ಸಾಧುವಾದಂ ದದಾತಿ ಕಿಮ್ ॥ ೨೦೭
ಸಮಾಶ್ವಾಸ್ಯೋ ಯಥಾಶಕ್ತಿ ಸ್ವಜನೈರ್ವಿರಹಾತುರಃ ।
ಅತಃ ಪರಂ ಸ ಜಾನಾತಿ ದೇವಶ್ಚಾಸಮಸಾಯಕಃ ॥ ೨೦೮
ಇತ್ಯಾದಿ ಜಲ್ಪನ್‌ಶೃಣ್ವಂಶ್ಚ ತಾಸ್ತಾಃ ಪರಿಜನಾತ್ಕಥಾಃ ।
ನರವಾಹನದತ್ತಸ್ತಾಂ ತ್ರಿಯಾಮಾಮತ್ಯವಾಹಯತ್ ॥ ೨೦೯
ಅಥ ಸ ಪ್ರಾತರುತ್ಥಾಯ ವಿಹಿತಾವಶ್ಯಕಕ್ರಿಯಃ ।
ಗಗನಾದವರೋಹಂತೀಮಪಶ್ಯತ್ ಕಾಂಚನಪ್ರಭಾಮ್ ॥ ೨೧೦
ಭರ್ತ್ರಾಲಂಕಾರಶೀಲೇನ ಧರ್ಮಶೀಲೇನ ಸೂನುನಾ ।
ತಯಾಲಂಕಾರವತ್ಯಾ ಚ ಸ್ವದುಹಿತ್ರಾ ಸಮನ್ವಿತಾಮ್ ॥ ೨೧೧

೨೧೨. ಅವರೆಲ್ಲರೂ ಇಳಿದು ನರವಾಹನದತ್ತನ ಬಳಿಗೆ ಬಂದರು. ನರವಾಹನದತ್ತನು ಅವರನ್ನು ಅಭಿನಂದಿಸಿದನು. ಅವರೂ ಯಥೋಚಿತವಾಗಿ ಅವನನ್ನು ಅಭಿನಂದಿಸಿದರು.

೨೧೩. ಅಷ್ಟರಲ್ಲಿ ಅಲ್ಲಿಗೆ ಅಂತರಿಕ್ಷದಿಂದ ಸಾವಿರಾರು ಸುವರ್ಣ, ರತ್ನಾದಿಗಳ ಹೊರೆಯನ್ನು ಹೊತ್ತವರು ಹಾಗೂ ಇತರ ವಿದ್ಯಾಧರರೂ ಇಳಿದುಬಂದರು.

೨೧೪. ಈ ವೃತ್ತಾಂತವನ್ನು ತಿಳಿದು ಪುತ್ರನ ಏಳಿಗೆಯಿಂದ ಹರ್ಷಗೊಂಡವನಾಗಿ ಪತ್ನಿಯೊಡನೆ ಹಾಗೂ ಮಂತ್ರಿಗಳೊಡನೆ ವತ್ಸರಾಜನು ಅಲ್ಲಿಗೆ ಬಂದನು.

೨೧೫. ವತ್ಸೇಶ್ವರನಿಗೆ ಯಥೋಚಿತವಾದ ಆತಿಥ್ಯ ಮಾಡಿ ನಂತರ ರಾಜಾ ಅಲಂಕಾರಶೀಲನು ವತ್ಸರಾಜನನ್ನು ಕುರಿತು ಪ್ರೀತಿನಮ್ರನಾಗಿ ಹೇಳಿದನು.

೨೧೬–೨೧೭ "ರಾಜನೇ ! ಅಲಂಕಾರವತಿಯೆಂಬ ಈ ಕನ್ಯೆಯು ನನ್ನ ಮಗಳು. ಇವಳು ಹುಟ್ಟಿದಾಗಲೇ ಆಕಾಶವಾಣಿಯೊಂದು ಮೊಳಗಿ "ಇವಳು ಸಮಸ್ತ ವಿದ್ಯಾಧರೇಂದ್ರರ ಚಕ್ರವರ್ತಿಯಾಗುವ ನಿನ್ನ ಪುತ್ರ ನರವಾಹನದತ್ತನ ಭಾರ್ಯೆ' ಎಂದು ಹೇಳಿತು.

೨೧೮. ಆದುದರಿಂದ ಈ ನರವಾಹನದತ್ತನಿಗೆ ಇವಳನ್ನು (ಕನ್ಯಾದಾನವಾಗಿ) ಕೊಡುತ್ತೇನೆ ಈ ದಿನ ಇವರಿಬ್ಬರಿಗೆ ಶುಭವಾದ ಲಗ್ನ (ಮುಹೂರ್ತ) ವಿದೆಯಷ್ಟೆ ಇದಕ್ಕೋಸ್ಕರ ನಾನು ಇವರೆಲ್ಲರೊಡನೆ ಸೇರಿ ಇಲ್ಲಿಗೆ ಬಂದಿದ್ದೇನೆ'

---

ತೇ ಚಾವತೀರ್ಯ ಸರ್ವೇಽಪಿ ತತ್ಸಮೀಪಮುಪಾಗಮನ್ ।
ಅಭ್ಯನಂದಚ್ಚ ತಾನ್ಸೋಽಪಿ ತಂ ಚ ತೇಽಪಿ ಯಥೋಚಿತಮ್ ॥ ೨೧೨
ತಾವಚ್ಚ ಹೇಮರತ್ನಾದಿಭಾರವಾಹಾಃ ಸಹಸ್ರಶಃ ।
ಅನ್ಯೇಽಪ್ಯವತರಂತಿ ಸ್ಮ ತತ್ರ ವಿದ್ಯಾಧರಾ ದಿವಃ ॥ ೨೧೩
ವಿಜ್ಞಾಯೈತಂ ಚ ವೃತ್ತಾಂತಂ ವತ್ಸರಾಜಃ ಸಮಂತ್ರಿಕಃ ।
ಸಪತ್ನೀಕಶ್ಚ ತತ್ರಾಗಾತ್ತನಯೋತ್ಕರ್ಷಹರ್ಷಿತಃ ॥ ೨೧೪
ಯಥಾರ್ಹವಿಹಿತಾತಿಥ್ಯೇ ತಸ್ಮಿನ್ವತ್ಸೇಶ್ವರೇಽಥ ಸಃ ।
ರಾಜಾಲಂಕಾರಶೀಲಸ್ತಮುವಾಚ ಪ್ರಣಯಾನತಃ ॥ ೨೧೫
ರಾಜನ್ನಲಂಕಾರವತೀ ಕನ್ಯೇಯಂ ತನಯಾ ಮಮ ।
ಜಾತೈವ ಚೈಷಾ ವ್ಯಾದಿಷ್ಟಾ ಗಗನೋದ್ಗತಯಾ ಗಿರಾ ॥ ೨೧೬
ನರವಾಹನದತ್ತಸ್ಯ ಭಾರ್ಯಾಮುಷ್ಯ ಸುತಸ್ಯ ತೇ ।
ಸರ್ವವಿದ್ಯಾಧರೇಂದ್ರಾಣಾಂ ಭಾವಿನಶ್ಚಕ್ರವರ್ತಿನಃ ॥ ೨೧೭
ತದೇತಸ್ಮೈ ದದಾಮ್ಯೇನಾಂ ಲಗ್ನೋ ಹ್ಯದ್ಯಾನಯೋಃ ಶುಭಃ ।
ಏತದರ್ಥಂ ಮಿಲಿತ್ವಾಹಮೇತೈಃ ಸರ್ವೈರಿಹಾಗತಃ ॥ ೨೧೮

೨೧೯. ಆ ವಿದ್ಯಾಧರೇಂದ್ರನ ಮಾತನ್ನು ವತ್ಸೇಶ್ವರನು "ದೊಡ್ಡ ಅನುಗ್ರಹ' ಎಂದು ಹೇಳುತ್ತಾ ಅಭಿನಂದಿಸಿದನು.

೨೨೦. ಅನಂತರ ಆ ವಿದ್ಯಾಧರಾಧೀಶನು ತನ್ನ ವಿದ್ಯೆಯ ವೈಭವದಿಂದ ಅಂಗೈಯಲ್ಲಿ ನೀರನ್ನು ಸೃಷ್ಟಿಸಿ ಅದರಿಂದ ಅಂಗಣಭೂಮಿಯನ್ನು ಪ್ರೋಕ್ಷಿಸಿದನು.

೨೨೧. ಆ ಅಂಗಣಪ್ರದೇಶದಲ್ಲಿ ದಿವ್ಯವಸ್ತ್ರದಿಂದ ಆವೃತವಾದ ಹಾಗೂ ಸುವರ್ಣಮಯವಾದ ಒಂದು ವಿವಾಹವೇದಿಕೆಯು ಸೃಷ್ಟಿಯಾಯಿತು. ಹಾಗೆಯೇ ಸಹಜವಾಗಿ ನಿರ್ಮಿಸಿದಂತಿದ್ದ ಮಂಗಳಗೃಹವೊಂದು ಅಲ್ಲಿ ಸೃಷ್ಟಿಯಾಯಿತು.

೨೨೨. ಅನಂತರ ನಿಪುಣನಾದ ಅಲಂಕಾರಶೀಲರಾಜನು ನರವಾಹನನ್ನು ಕುರಿತು "ಏಳು, ಮುಹೂರ್ತದ ಸಮಯವು ಪ್ರಾಪ್ತವಾಯಿತು. (ಮಂಗಳ) ಸ್ನಾನ ಮಾಡು' ಎಂದು ಹೇಳಿದನು.

೨೨೩. ಮಧುವಿನವೇಷ ಧರಿಸಿ ಬಂದ ಪುತ್ರಿಯಾದ ಅಲಂಕಾರವತಿಯನ್ನು ಸಂತೋಷದಿಂದ ಅಲಂಕಾರಶೀಲನು ವಿವಾಹ ವೇದಿಕೆಗೆ ಕರೆತಂದು, ಸ್ನಾನಮಾಡಿ ಮಂಗಳ ಕಂಕಣವನ್ನು ಧರಿಸಿ ಬಂದ ನರವಾಹದತ್ತನಿಗೆ ಮನಃಪೂರ್ವಕವಾಗಿ ಕನ್ಯಾದಾನ ಮಾಡಿಕೊಟ್ಟನು.

೨೨೪. ಅಗ್ನಿಯಲ್ಲಿ ಬತ್ತದ ಅರಳುಗಳನ್ನು ಹಾಕುವ ಸಂದರ್ಭಗಳಲ್ಲಿ ಪುತ್ರನೊಡಗೂಡಿ ಅಲಂಕಾರಶೀಲರಾಜನು ಮಗಳಿಗೆ ರತ್ನ, ಸುವರ್ಣ, ವಸ್ತ್ರ ಮತ್ತು ಒಡವೆಗಳ ಸಾವಿರಾರು ರಾಶಿಗಳನ್ನೂ ದಿವ್ಯನಾರಿಯರನ್ನೂ (ಬಳುವಳಿಯಾಗಿ) ಕೊಟ್ಟನು.

---

ಏತದ್ವಿದ್ಯಾಧರೇಂದ್ರಸ್ಯ ತಸ್ಯ ವತ್ಸೇಶ್ವರೋ ವಚಃ ।
ಮಹಾನನುಗ್ರಹ ಇತಿ ಬ್ರುವನ್ನಭಿನನಂದ ಸಃ ॥ ೨೧೯
ಅಥ ನಿಜವಿದ್ಯಾವಿಭವಾತ್ ಪಾಣಿತಲೋತ್ಪಾದಿತೇನ ತೋಯೇನ ।
ಅಭ್ಯುಕ್ಷತಿ ಸ್ಮ ಸೋಽಂಗನಭೂಮಿಂ ವಿದ್ಯಾಧರಾಧೀಶಃ ॥ ೨೨೦
ತತ್ರೋತ್ಪೇದೇ ವೇದೀ ಕನಕಮಯೀ ದಿವ್ಯವಸ್ತ್ರಸಂಛನ್ನಾ ।
ನಾನಾರತ್ನಮಯಂ ಚಾಪ್ಯಕೃತ್ರಿಮಂ ಕೌತುಕಾಗಾರಮ್ ॥ ೨೨೧
ಉತ್ತಿಷ್ಠ ಲಗ್ನವೇಲಾ ಪ್ರಾಪ್ತಾ ಸ್ನಾಹೀತ್ಯುವಾಚ ತದನು ಕೃತೀ ।
ತಂ ನರವಾಹನದತ್ತಂ ರಾಜಾಲಂಕಾರಶೀಲೋಽಸೌ ॥ ೨೨೨
ಸ್ನಾತಾಯ ಕೌತುಕಭೃತೇ ವೇದೀಮಾನೀಯ ಧೃತವಧೂವೇಷಾಮ್ ।
ಹೃಷ್ಟೋಽಲಂಕಾರವತೀಂ ಸದದೌ ಮನಸಾತ್ಮಜಾಂ ತಸ್ಮೈ ॥ ೨೨೩
ಮಣಿಕನಕವಸ್ತ್ರಭೂಷಣಭಾರಸಹಸ್ರಾಣಿ ದಿವ್ಯನಾರೀಶ್ಚ ।
ಅಗ್ನೌ ಲಾಜವಿಸರ್ಗೇಷ್ವದದಾಚ್ಚ ಸ ಸಾತ್ಮಜೋ ದುಹಿತುಃ ॥ ೨೨೪

೨೨೫. ವಿವಾಹವು ಸಂಪನ್ನವಾಗಲು ಎಲ್ಲರನ್ನೂ ಸತ್ಕರಿಸಿ ಬೀಳ್ಕೊಟ್ಟು ಪತ್ನಿಯೊಡನೆಯೂ ಪುತ್ರನೊಡನೆಯೂ ಅಂತರಿಕ್ಷಮಾರ್ಗದಿಂದಲೇ ಬಂದಂತೆಯೇ ಹಿಂದಿರುಗಿ ಹೋದನು.

೨೨೬. ಅನಂತರ ಗಗನಗಾಮಿಗಳಾದ ರಾಜರು ತನ್ನ ಉದಯೋನ್ಮುಖ ಪುತ್ರನಿಗೆ ನಮಸ್ಕಾರ ಮಾಡಿ ಉಪಚರಿಸುತ್ತಿದ್ದನ್ನು ನೋಡಿ ಸಂತೋಷಗೊಂಡ ವತ್ಸರಾಜನು ಚಿರಕಾಲ ಉತ್ಸವವನ್ನು ನಡೆಸಿದನು.

೨೨೭. ಉತ್ತಮವಾದ ಶೀಲವುಳ್ಳವಳೂ ಮನಸ್ಸಿಗೆ ಮುದ ತರುವವಳೂ ಮಹಾಗುಣವತಿಯೂ ಆದ ಅಲಂಕಾರವತಿಯನ್ನು ಪಡೆದ ನರವಾಹನದತ್ತನು, ವಾಣಿಯನ್ನು ಪಡೆದ ಉತ್ತಮಕವಿಯಂತೆ, ಅವಳಲ್ಲಿ ರಸಾನುಭವ ಪಡೆಯುತ್ತಿದ್ದನು.

ಇಲ್ಲಿಗೆ ಮಹಾಕವಿ ಶ್ರೀ ಸೋಮದೇವಭಟ್ಟನು ವಿರಚಿಸಿದ

ಕಥಾಸರಿತ್ಸಾಗರದ

ಅಲಂಕಾರವತೀಲಂಬಕದಲ್ಲಿ ಮೊದಲನೆಯ ತರಂಗವು ಮುಗಿಯಿತು.

---

ನಿರ್ವೃತ್ತೇ ಚ ವಿವಾಹೇ ಸರ್ವಾನ್ ಸಂಮಾನ್ಯ ತದನು ಚಾಮಂತ್ರ್ಯ ।
ಸಹ ಪತ್ನ್ಯಾ ಪುತ್ರೇಣ ಚ ನಭಸೈವ ಯಥಾಗತಂ ಸ ಯಯೌ ॥ ೨೨೫

ಅಥ ವೀಕ್ಷ್ಯ ತಥೋಪಚರ್ಯಮಾಣಂ ಪ್ರಣತೈಃ ಖೇಚರರಾಜಭಿಸ್ತನೂಜಮ್ ।
ಉದಯೋನ್ಮುಖಮತ್ರ ವತ್ಸರಾಜೋ ಮುದಿತಸ್ತಂ ಚಿರಮುತ್ಸವಂ ತತಾನ ॥ ೨೨೬

ಸ ಚ ನರವಾಹನದತ್ತಃ ಸದ್ವೃತ್ತಮನೋರಮಾಮುದಾರಗುಣಾಮ್ ।
ಪ್ರಾಪ್ಯಾಲಂಕಾರವತೀಂ ವಾಣೀಮಿವ ಸುಕವಿರಾಸ್ತ ತದ್ರಸಿಕಃ ॥ ೨೨೭

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ

ಕಥಾಸರಿತ್ಸಾಗರೇ

ಅಲಂಕಾರವತೀಲಂಬಕೇ ಪ್ರಥಮಸ್ತರಂಗಃ

## ಎರಡನೆಯ ತರಂಗ

೧–೨. ಅನಂತರ ನರವಾಹನದತ್ತನು ತಂದೆಯ ಮನೆಯಲ್ಲಿ ನವವಧುವಾದ ಅಲಂಕಾರವತಿಯ ಸಂಗಡ ಅವಳ ಚೇಟಿಯರ ದಿವ್ಯವಾದ ನೃತ್ಯಗೀತಗಳಿಂದ ಮನೋರಂಜನೆಯನ್ನು ಪಡೆಯುತ್ತಾ ಸಚಿವರ ಜೊತೆಯಲ್ಲಿ ಪಾನಗೋಷ್ಠಿಯನ್ನು ಸೇವಿಸುತ್ತಾ ತಂಗಿದನು.

೩. ಒಂದು ದಿವಸ ಅಲಂಕಾರವತಿಯ ತಾಯಿಯಾದ ಅತ್ತೆ ಕಾಂಚನಪ್ರಭೆಯು ಬಂದಳು. ನರವಾಹನದತ್ತನು ಆತಿಥ್ಯವನ್ನು ಮುಗಿಸಿದ ಮೇಲೆ ಅವನನ್ನು ಕುರಿತು ಹೇಳಿದಳು.

೪. ""ನಮ್ಮ ಮನೆಗೆ ಬಾ. ಆ ಸುಂದರಪುರವೆಂಬ ಪಟ್ಟಣವನ್ನು ನೋಡು. ಅಲ್ಲಿ ಉಪವನಗಳಲ್ಲಿ ಅಲಂಕಾರವತಿಯೊಡನೆ ಕೂಡಿ ರಮಿಸು."

---

## ದ್ವಿತೀಯಸ್ತರಂಗಃ

ತತೋಽಲಂಕಾರವತ್ಯಾ ಸ ಯುಕ್ತೋ ವತ್ಸೇಶ್ವರಾತ್ಮಜಃ ।
ನರವಾಹನದತ್ತೋಽತ್ರ ನವವಧ್ವಾ ಪಿತುರ್ಗೃಹೇ ॥ ೧
ತಚ್ಚೇಟಿಕಾನಾಂ ದಿವ್ಯೇನ ನೃತ್ಯಗೀತೇನ ರಂಜಿತಃ ।
ಆಪಾನಂ ಸೇವಮಾನಶ್ಚ ಸಚಿವೈಃ ಸಹ ತಸ್ಥಿವಾನ್ ॥ ೨
ಏಕದಾ ಚ ತಮಾಗತ್ಯ ಸಾ ಶ್ವಶ್ರೂಃ ಕಾಂಚನಪ್ರಭಾ ।
ಅಲಂಕಾರವತೀಮಾತಾ ವಿಹಿತಾತಿಥ್ಯಮಬ್ರವೀತ್ ॥ ೩
ಆಗಚ್ಛಾಸ್ಮದ್ಗೃಹಂ ಪಶ್ಯ ತತ್ಸುಂದರಪುರಂ ಪುರಮ್ ।
ರಮಸ್ವ ತತ್ರೋಪವನೇಷ್ವಲಂಕಾರವತೀಯುತಃ ॥ ೪

೫–೬ ಇದನ್ನು ಕೇಳಿ "'ಹಾಗೆಯೇ ಆಗಲಿ" ಎಂದು ಹೇಳಿ ತಂದೆಗೆ ನಿವೇದಿಸಿ ತಂದೆಯ ಮಾತಿನ ಮೇರೆಗೆ ವಸಂತಕನನ್ನು ಜೊತೆಗೆ ಕರೆದುಕೊಂಡು ಮಂತ್ರಿಯೊಡನೆ ನರವಾಹನದತ್ತನು ಅತ್ತೆಯ ವಿದ್ಯಾಪ್ರಭಾವದಿಂದಲೇ ನಿರ್ಮಿತವಾದ ಶ್ರೇಷ್ಠವಾದ ವಿಮಾನವನ್ನು ಹತ್ತಿ ಆಕಾಶಮಾರ್ಗದಿಂದ ಹೊರಟನು.

೭ ವಿಮಾನದಿಂದ ನರವಾಹನದತ್ತನು ಕೆಳಗೆ ನೋಡಿದಾಗ ಭೂಮಿಯು ಸಂಕುಚಿತಗೊಂಡು ಚಿಕ್ಕದಾಗಿಯೂ ಸಮುದ್ರವು ಕಂದಕದಂತೆ ಪುಟ್ಟದಾಗಿಯೂ ಕಂಡಿತು.

೮ ——————————————[1]

೯. ಅನಂತರ ಅವನು ಅತ್ತೆ, ಪತ್ನಿ ಮೊದಲಾದವರೊಡನೆ ಹಿಮವತ್ಪರ್ವತವನ್ನು ತಲುಪಿದನು, ಆ ಪ್ರದೇಶವು ಕಿನ್ನರಿಯರ ಸಂಗೀತದ ನಾದದಿಂದ ಧ್ವನಿತವಾಗಿದ್ದು ದೇವತಾಸ್ತ್ರೀಯರ ಸಮೂಹಗಳಿಂದ ರಮಣೀಯವಾಗಿತ್ತು.

೧೦. ಅಲ್ಲಿ ಅನೇಕ ಪರಮಾಶ್ಚರ್ಯಗಳನ್ನು ನೋಡುತ್ತಾ ತರುಣನಾದ ನರವಾಹನದತ್ತನು ಸುಂದರಪುರವನ್ನು ತಲುಪಿದನು.

೧೧. ಆ ಪುರವು ಹಿಮವತ್ ಪರ್ವತದಲ್ಲಿಯೂ ಸುಮೇರುಪರ್ವತದ ಶಿಖರಗಳ ಭ್ರಮೆಯನ್ನು ಉಂಟುಮಾಡುವಂತಹ ರತ್ನಗಳಿಂದ ಖಚಿತವಾದ ಸುವರ್ಣಮಯವಾದ ಉಪ್ಪರಿಗೆಯ ಮನೆಗಳಿಂದ ಕೂಡಿ ಕಾಂತಿಯುಕ್ತವಾಗಿತ್ತು.

---

ಏತಚ್ಛ್ರುತ್ವಾ ತಥೇತ್ಯುಕ್ತ್ವಾ ಪಿತುರಾವೇದ್ಯ ತದ್ಗಿರಾ ।
ವಸಂತಕಂ ಸಹಾದಾಯ ವಧ್ವಾ ಸಹ ಸಮಂತ್ರಿಕಃ ॥ ೫

ಶ್ವಶ್ವಾ ವಿದ್ಯಾಪ್ರಭಾವೇಣ ತಯೈವ ಸ ವಿನಿರ್ಮಿತಮ್ ।
ವಿಮಾನವರಮಾರುಹ್ಯ ಪ್ರತಸ್ಥೇ ವ್ಯೋಮವರ್ತ್ಮನಾ ॥ ೬

ವಿಮಾನಸ್ಥಶ್ಚ ಗಗನಾತ್ ಸೋಽಧಸ್ತಾತ್ ಪ್ರವಿಲೋಕಯನ್ ।
ಸ್ಥಲೀಪರಿಮಿತಾಂ ಪೃಥ್ವೀಂ ಸಮುದ್ರಾನ್ ಪರಿಖಾಲಘೂನ್ ॥ ೭

——————————————————————॥ ೮

ಶ್ವಶ್ರೂಭಾರ್ಯಾದಿಭಿಃ ಸಾಕಂ ಕ್ರಮಾತ್ ಪ್ರಾಪ ಹಿಮಾಚಲಮ್ ।
ನಾದಿತಂ ಕಿಂನರೀಗೀತೈಃ ಸ್ವರ್ವಧೂಸಂಘಸುಂದರಮ್ ॥ ೯

ತತ್ರಾಶ್ಚರ್ಯಾಣಿ ಸುಬಹೂನ್ಯೇಷ ಪಶ್ಯನ್ನವಾಪ್ತವಾನ್ ।
ನರವಾಹನದತ್ತೋಽಥ ತತ್ಸುಂದರಪುರಂ ಯುವಾ ॥ ೧೦

ಸೌವರ್ಣೈ ರತ್ನನಿಚಿತೈಃ ಪ್ರಾಸಾದೈರ್ಹಿಮವತ್ಯಪಿ ।
ಸುಮೇರುಶಿಖರಭ್ರಾಂತಿಂ ಕುರ್ವದ್ಭಿರುಪಶೋಭಿತಮ್ ॥ ೧೧

---

1 ೮ನೆಯ ಶ್ಲೋಕವು ಈ ಪ್ರತಿಯಲ್ಲಿ ಇಲ್ಲ.

೧೨. ಅಂತರಿಕ್ಷದಿಂದ ಕೆಳಗೆ ಬಂದು ವಿಮಾನದಿಂದ ಕೆಳಗಿಳಿದು ಅವರೆಲ್ಲರೂ ಸುಂದರಪುರವನ್ನು ಪ್ರವೇಶಿಸಿದರು. ಆ ಪುರದಲ್ಲಿ ಧ್ವಜಗಳು ಹಾರಾಡುತ್ತಿದ್ದು, ಪ್ರಭುವಿನ ದರ್ಶನದಿಂದ ಸಂತಸಗೊಂಡು ಇಡೀ ಪಟ್ಟಣವೇ ನರ್ತಿಸುತ್ತಿದೆಯೋ ಎಂಬಂತೆ ಕಾಣುತ್ತಿತ್ತು.

೧೩. ಅಲಂಕಾರವತಿಯೊಡನೆ ಹಾಗೂ ಸ್ನೇಹಿತನಾದ ವಸಂತಕನೊಡನೆ ಕೂಡಿದ ನರವಾಹನದತ್ತನು ಅತ್ತೆಯು ಮಾಡಿದ ಮಂಗಲಕಾರ್ಯಗಳ ನಂತರ ರಾಜಧಾನಿಯನ್ನು ಪ್ರವೇಶಿಸಿದನು.

೧೪. ಆ ಮಾವನ ಮನೆಯಲ್ಲಿ ಪುಣ್ಯವಂತನಾದ ನರವಾಹನದತ್ತನು ಅತ್ತೆಯ ಪ್ರಭಾವದಿಂದ ಉಂಟಾದ ದಿವ್ಯವಾದ ಭೋಗಗಳಿಂದ ಸ್ವರ್ಗದಲ್ಲಿದ್ದಂತೆ ವಾಸಮಾಡಿದನು.

೧೫–೧೭. ಮಾರನೆಯ ದಿವಸ ಅತ್ತೆಯಾದ ಕಾಂಚನ ಪ್ರಭೆಯು ನರವಾಹನದತ್ತನಿಗೆ ಹೇಳಿದಳು. ""ಈ ಪಟ್ಟಣದಲ್ಲಿ ಭಗವಂತನೂ ಸ್ವಯಂಭುವೂ ಆದ ಉಮಾಪತಿಯು ಇದ್ದಾನೆ. ಅವನನ್ನು ದರ್ಶಿಸಿ ಪೂಜಿಸಿದರೆ ಆ ದೇವನು ಭೋಗವನ್ನೂ ಮೋಕ್ಷವನ್ನೂ ಕೊಡುತ್ತಾನೆ. ಅಲಂಕಾರವತಿಯ ತಂದೆಯು ಅಲ್ಲಿ ಒಂದು ದೊಡ್ಡ ಉದ್ಯಾನವನ್ನು ರಚಿಸಿದ್ದಾನೆ. ಮತ್ತು ಅನ್ವರ್ಥವಾದ ಗಂಗಾಸರಸ್ಸೆಂಬ ಹೆಸರುಳ್ಳ ತೀರ್ಥವನ್ನು ಅಲ್ಲಿ ಇಳಿದು ಬರುವಂತೆ ಮಾಡಲಾಗಿದೆ. ಅಲ್ಲಿ ಆ ದೇವನನ್ನು ಪೂಜಿಸಲು ಮತ್ತು ವಿಹಾರ ಮಾಡಲು ಇಂದು ಹೋಗಿರಿ."

---

ವ್ಯೋಮಾವತೀರ್ಣಾಶ್ಚೋತ್ತೀರ್ಯ ವಿಮಾನಾತ್ ಪ್ರವಿವೇಶ ತತ್ ।
ಸನಾಥ್ಯದರ್ಶನಾನ್ನೃತ್ಯದಿವ ಲೋಲೈರ್ಧ್ವಜಾಂಶುಕೈಃ ॥ ೧೨
ಪ್ರಾವಿಶದ್ರಾಜಧಾನೀಂಚ ಸ ಶ್ವಶ್ರ್ವಾ ಕೃತಮಂಗಲಃ ।
ಅಲಂಕಾರವತೀಯುಕ್ತ ಸವಯಸ್ಯವಸಂತಕಃ ॥ ೧೩
ತತ್ರ ತಂ ದಿವಸಂ ದಿವ್ಯೈರ್ಭೋಗೈಃ ಶ್ವಶ್ರೂಪ್ರಭಾವಜೈಃ ।
ಉವಾಸ ಸುಕೃತೀ ಸ್ವರ್ಗ ಇವ ಶ್ವಶುರವೇಶ್ಮನಿ ॥ ೧೪
ಅನ್ಯೇದ್ಯುಸ್ತಂ ಚ ಸಾ ಶ್ವಶ್ರೂರವೋಚತ್ಕಾಂಚನಪ್ರಭಾ ।
ಅಸ್ತಿ ಸ್ವಯಂಭೂರ್ಭಗವಾನ್ನಗರೇಽಸ್ಮಿನ್ನುಮಾಪತಿಃ ॥ ೧೫
ಸ ದೃಷ್ಟಪೂಜಿತೋ ಭೋಗಂ ಮೋಕ್ಷಂ ಚೈವ ಪ್ರಯಚ್ಛತಿ ।
ಅಲಂಕಾರವತೀ ಪಿತ್ರಾ ತತ್ರೋದ್ಯಾನಂ ಕೃತಂ ಮಹತ್ ॥ ೧೬
ತೀರ್ಥಂ ಗಂಗಾಸರಃ ಸಂಜ್ಞಮನ್ವರ್ಥಂ ಚಾವತಾರಿತಮ್ ।
ತಂ ತತ್ರಾರ್ಚಯಿತುಂ ದೇವಂ ವಿಹರ್ತುಂ ಚಾದ್ಯ ಗಚ್ಛತ ॥ ೧೭

೧೮. ಈ ರೀತಿ ಹೇಳಿದ ಮೇಲೆ ನರವಾಹನದತ್ತನು ಅನುಚರರೊಡನೆಯೂ ಅಲಂಕಾರವತಿಯೊಡನೆಯೂ ಶಿವನ ಉದ್ಯಾನಕ್ಕೆ ಹೋದನು.

೧೯. ಆ ಉದ್ಯಾನದಲ್ಲಿ ಸುವರ್ಣಕಾಂಡಗಳಿಂದ ಮನೋಹರವಾದ ವೃಕ್ಷಗಳಿದ್ದುವು. ಅವುಗಳಿಗೆ ರತ್ನದ ಕೊಂಬೆಗಳಿದ್ದುವು. ಅವುಗಳಲ್ಲಿ ಮುತ್ತಿನ ಮಣಿಗಳ ಗೊಂಚಲುಗಳ ರೂಪದ ಹೂವುಗಳೂ ಹವಳದ ಚಿಗುರುಗಳೂ ಇದ್ದವು. ಅಂತಹ ವೃಕ್ಷಗಳಿಂದ ಆ ಉದ್ಯಾನ ಶೋಭಾಯಮಾನವಾಗಿತ್ತು.

೨೦. ಅಲ್ಲಿ ಗಂಗಾಸರಸ್ಸಿನಲ್ಲಿ ಸ್ನಾನಮಾಡಿ ಉಮಾಪತಿಯ ಪೂಜೆಯನ್ನು ನೆರವೇರಿಸಿದ ನರವಾಹನದತ್ತನು ರತ್ನಗಳ ಮೆಟ್ಟಿಲುಗಳು ಮತ್ತು ಸುವರ್ಣಕಮಲಗಳಿಂದ ಶೋಭಿಸುತ್ತಿದ್ದ ಕಲ್ಯಾಣಿಗಳನ್ನು ನೋಡುತ್ತಾ ಸಂಚರಿಸಿದನು.

೨೧. ನರವಾಹನದತ್ತನು ಆ ಕಲ್ಯಾಣಿಗಳ ರಮಣೀಯವಾದ ತೀರಗಳಲ್ಲೂ ಕಲ್ಪಲತಾಗೃಹಗಳಲ್ಲೂ ಅಲಂಕಾರವತಿಯೊಡನೆ ಹಾಗೂ ಅನುಚರರ ಸಂಗಡ ವಿಹಾರಮಾಡಿದನು.

೨೨. ನರವಾಹನದತ್ತನು ಅವುಗಳಲ್ಲಿ ದಿವ್ಯವಾದ ಪಾನಗೋಷ್ಠಿ ಸಂಗೀತಗಳಿಂದಲೂ ಋಜುಭಾವದಿಂದ ಮಾಡಿದ ಮರುಭೂತಿಯ ಸುಂದರವಾದ ಪರಿಹಾಸಗಳಿಂದಲೂ ರಮಿಸಿದನು.

೨೩. ಆ ದ್ವೀಪದಲ್ಲಿ ನರವಾಹನದತ್ತನು ಅತ್ತೆಯ ವಿದ್ಯಾವೈಭವಗಳಿಂದ ಸೃಷ್ಟವಾದ ಉದ್ಯಾನಪ್ರದೇಶಗಳಲ್ಲಿ ವಿಹರಿಸುತ್ತಾ ಒಂದು ತಿಂಗಳು ಮಾತ್ರ ವಾಸಮಾಡಿದನು.

---

ಏವಂ ಶ್ವಶ್ರ್ವಾ ತಯೋಕ್ತಸ್ತು ಶಾರ್ವೋದ್ಯಾನಂ ಸಹಾನುಗಃ ।
ನರವಾಹನದತ್ತೋಽಗಾದಲಂಕಾರವತೀಸಖಃ ॥ ೧೮
ತರುಭಿಃ ಕಾಂಚನಸ್ಕಂಧೈ ರತ್ನಶಾಖಾಮನೋರಮೈಃ ।
ಮುಕ್ತಾಗುಚ್ಛಾಚ್ಛಕುಸುಮೈಃ ಕಾಂತಂ ವಿದ್ರುಮಪಲ್ಲವೈಃ ॥ ೧೯
ತತ್ರ ಗಂಗಾಸರಃಸ್ನಾತಃ ಪೂಜಿತೋಮಾಪತಿಶ್ಚ ಸಃ ।
ಬಭ್ರಾಮ ರತ್ನಸೋಪಾನಾ ವಾಪೀಃ ಕಾಂಚನಪಂಕಜಾಃ ॥ ೨೦
ತಾಸಾಂ ತೀರೇಷು ಹೃದ್ಯೇಷು ಕಲ್ಪವಲ್ಲೀಗೃಹೇಷು ಚ ।
ಸಹಾಲಂಕಾರವತ್ಯಾ ಸ ವಿಜಹಾರಾನುಗಾನ್ವಿತಃ ॥ ೨೧
ದಿವ್ಯೈರಾಪಾನಸಂಗೀತೈಃ ಪರಿಹಾಸೈಶ್ಚ ಪೇಶಲೈಃ ।
ಮರುಭೂತ್ಯಾರ್ಜವಕೃತೈ ರಮತೇ ಸ್ಮ ಚ ತೇಷು ಸಃ ॥ ೨೨
ಮಾಸಮಾತ್ರಮುವಾಸೈವಂ ಕ್ರೀಡನ್ನುದ್ಯಾನಭೂಮಿಷು ।
ನರವಾಹನದತ್ತೋಽತ್ರ ಶ್ವಶ್ರೂವಿದ್ಯಾವಿಭೂತಿಭಿಃ ॥ ೨೩

೨೪-೨೬. ಕಾಂಚನಪ್ರಭೆಯಿಂದ ದೇವಯೋಗ್ಯವಾದ ವಸ್ತ್ರಗಳಿಂದಲೂ ಅಲಂಕಾರಗಳಿಂದಲೂ ಪೂಜಿತನಾದ ನರವಾಹನದತ್ತನು, ಕಾಂಚನಪ್ರಭೆಯನ್ನು ಕರೆದುಕೊಂಡು ವಧೂಸಮೇತನಾಗಿ, ಅಮಾತ್ಯರು ಹಾಗೂ ಅನುಚರರೊಡನೆ ಕೂಡಿ ಅದೇ ವಿಮಾನದಲ್ಲಿ ತಾಯಿತಂದೆಯರ ಕಣ್ಣುಗಳಿಗೆ ಹಬ್ಬವನ್ನುಂಟುಮಾಡುತ್ತಾ ಕೌಶಾಂಬೀ ನಗರಕ್ಕೆ ಬಂದನು. ಅಲ್ಲಿ ವಾಸವದತ್ತೆಯ ಹಾಗೂ ವತ್ಸರಾಜನ ಸಮ್ಮುಖದಲ್ಲಿ ಕಾಂಚನಪ್ರಭೆಯು ಅಲಂಕಾರವತಿಗೆ ಹೀಗೆ ಹೇಳಿದಳು.

೨೭. "ಮಗಳೇ, ಅಸೂಯೆಯಿಂದ ಕೋಪಗೊಂಡು ನೀನು ಎಂದಿಗೂ ಪತಿಯನ್ನು ನೋಯಿಸಬೇಡ ಆ ಪಾಪವು ವಿರಹಕ್ಕೆ ಕಾರಣವಾಗಿ ಅದು ಗಾಢವಾದ ಸಂಕಟವನ್ನು ಉಂಟುಮಾಡುತ್ತದೆ.

೨೮. ಹಿಂದೆ ನಾನು ಅಸೂಯೆಯಿಂದ ಪತಿಯನ್ನು ನೋಯಿಸಿದುದರಿಂದ ಅವನು ಕಾಡಿಗೆ ಹೋದ ಮೇಲೆ ನಾನು ಪಶ್ಚಾತ್ತಾಪದಿಂದ ಬೆಂದುಹೋಗುತ್ತಿದ್ದೇನೆ.'

೨೯. ಹೀಗೆ ಹೇಳಿ ಅವಳು ಅಲಂಕಾರವತಿಯನ್ನು ಆಲಿಂಗಿಸಿಕೊಂಡಳು. ಕಣ್ಣೀರಿನಿಂದ ಅವಳ ದೃಷ್ಟಿ ಮಂಕಾಯಿತು. ನಂತರ ಅವಳು ಆಕಾಶಕ್ಕೆ ಹಾರಿ ತನ್ನ ಪಟ್ಟಣವನ್ನು ಸೇರಿಕೊಂಡಳು.

೩೦. ಅನಂತರ ಆ ದಿವಸವು ಕಳೆದ ಮೇಲೆ ಇತ್ತ ಕೌಶಾಂಬಿಯಲ್ಲಿ ನರವಾಹನದತ್ತನು ಬೆಳಿಗ್ಗೆ ಉಚಿತವಾದ ಕರ್ಮಗಳನ್ನು ಆಚರಿಸಿ ತನ್ನ ಸಚಿವರ ಸಮೇತನಾಗಿ ಇದ್ದಾಗ

---

ತತೋ ದೇವೋಚಿತೈರ್ವಸ್ತ್ರೈರಲಂಕಾರೈಶ್ಚ ಪೂಜಿತಃ ।
ಸವಧೂಕಃ ಸಹಾಮಾತ್ಯಃ ಕಾಂಚನಪ್ರಭಯಾ ತಯಾ ॥ ೨೪
ಆಯಯೌ ಸ ವಿಮಾನೇನ ತೇನೈವ ಸಹ ಸಾನುಗಃ ।
ಕೌಶಾಂಬೀಂ ಸಹಿತೋ ವಧ್ವಾ ಪಿತ್ರೋರ್ದತ್ತೇಕ್ಷಣೋತ್ಸವಃ ॥ ೨೫
ತತ್ರ ವಾಸವದತ್ತಾಯಾ ವತ್ಸರಾಜಸ್ಯ ಚಾಗ್ರತಃ ।
ಅಲಂಕಾರವತೀಮಾಹ ಮಾತಾ ಸಾ ಕಾಂಚನಪ್ರಭಾ ॥ ೨೬
ದುಃಖಂ ಸ್ಥಾಪ್ಯಸ್ತ್ವಯಾ ಭರ್ತಾ ನೇರ್ಷ್ಯಾಕೋಪೇನ ಜಾತುಚಿತ್ ।
ತತ್ಪಾಪಜೋ ಹಿ ವಿರಹಃ ಪುತ್ರಿ ಗಾಢಾನುತಾಪಕೃತ್ ॥ ೨೭
ಈರ್ಷ್ಯಾವತ್ಯಾ ಮಯಾ ಪೂರ್ವಂ ದುಃಖಂ ಯತ್ಸ್ಥಾಪಿತಃ ಪತಿಃ ।
ತತೋಽದ್ಯ ಪಶ್ಚಾತ್ತಾಪೇನ ದಹ್ಯೇ ತಸ್ಮಿನ್ಗತೇ ವನಮ್ ॥ ೨೮
ಇತ್ಯುಕ್ತ್ವಾ ತಾಂ ಸಮಾಶ್ಲಿಷ್ಯ ಬಾಷ್ಪಸಂರುದ್ಧನೇತ್ರಯಾ ।
ಕಾಂಚನಪ್ರಭಯಾ ಜಗ್ಮೇ ಖಮುತ್ಪತ್ಯ ನಿಜಂ ಪುರಮ್ ॥ ೨೯
ತತಸ್ತಸ್ಮಿನ್ ದಿನೇ ಯಾತೇ ಪ್ರಾತಃ ಕೃತ್ವೋಚಿತಾಃ ಕ್ರಿಯಾಃ ।
ನರವಾಹನದತ್ತೇಽತ್ರ ಸ್ಥಿತೇ ಸ್ವಸಚಿವಾನ್ವಿತೇ ॥ ೩೦

೩೧. ಒಬ್ಬ ವಿಲಾಸಿನಿಯು ಅಲಂಕಾರವತಿಯ ಬಳಿಗೆ ಬಂದು ಭೀತಿಯಿಂದ '"ದೇವಿ! ಅಬಲೆಯಾದ ನನ್ನನ್ನು ಕಾಪಾಡು, ಕಾಪಾಡು" ಎಂದು ಹೇಳಿದಳು.

೩೨. '"ನನ್ನನ್ನು ಕೊಲ್ಲಲು ಒಬ್ಬ ಬ್ರಾಹ್ಮಣನು ಬಂದು ಹೊರಗಡೆ ಇದ್ದಾನೆ. ಅವನ ಭಯದಿಂದ ನಾನು ಓಡಿ ಬಂದು ರಕ್ಷಣೆಗಾಗಿ (ಇಲ್ಲಿಗೆ) ಪ್ರವೇಶಿಸಿದ್ದೇನೆ."

೩೩. '"ಹೆದರಬೇಡ. ನಡೆದ ಸಮಾಚಾರವನ್ನು ಹೇಳು. ಯಾರವನು ? ನಿನ್ನನ್ನು ಏಕೆ ಕೊಲ್ಲಲು ಬಯಸುತ್ತಾನೆ?" ಎಂದು ಪ್ರಶ್ನಿಸಿದಾಗ ಅವಳು ಹೇಳಲು ತೊಡಗಿದಳು.

೩೪. "ಒಡೆಯಳೇ ! ನನ್ನ ಹೆಸರು ಅಶೋಕಮಾಲೆ. ನಾನು ಇದೇ ಪಟ್ಟಣದಲ್ಲಿರುವ ಬಲಸೇನನೆಂಬ ಕ್ಷತ್ರಿಯನ ಮಗಳು.

---

ಅಲಂಕಾರವತೀಪಾರ್ಶ್ವಂ ಪ್ರವಿಶ್ಯೈವ ವಿಲಾಸಿನೀ ।
ಏಕಾಬ್ರವೀದ್ ಭೀತಭೀತಾ ದೇವಿ ಸ್ತ್ರೀಂ ರಕ್ಷ ರಕ್ಷ ಮಾಮ್ ॥ ೩೧
ಏಷ ಹಿ ಬ್ರಾಹ್ಮಣೋ ಹಂತುಮಾಗತೋ ಮಾಂ ಬಹಿಃ ಸ್ಥಿತಃ ।
ಏತದ್ಭಯಾತ್ತ್ರವಿಷ್ಟಾಹಂ ಪಲಾಯ್ಯ ಶರಣೈಷಿಣೀ ॥ ೩೨
ಮಾ ಭೈಷೀರ್ಬ್ರೂಹಿ ವೃತ್ತಾಂತಂ ಕೋಽಯಂ ಕಿಂ ತ್ವಾಂ ಜಿಘಾಂಸತಿ ।
ಇತಿ ಪೃಷ್ಟಾ ಚ ಸಾ ವಕ್ತುಂ ಭೂಯ ಏವ ಪ್ರಚಕ್ರಮೇ ॥ ೩೩
ಅಶೋಕಮಾಲಾ ನಾಮಾಹಮುಸ್ಯಾಮೇವ ಪುರಿ ಪ್ರಭೋ ।
ಬಲಸೇನಾಭಿಧಾನಸ್ಯ ಕ್ಷತ್ರಿಯಸ್ಯಾತ್ಮಸಂಭವಾ ॥ ೩೪

೩೫. ನಾನು ಕನ್ಯೆಯಾಗಿದ್ದಾಗ ನನ್ನ ಸೌಂದರ್ಯಕ್ಕೆ ಮಾರುಹೋದ ಹರಶರ್ಮನೆಂಬ ಧನಿಕ ಬ್ರಾಹ್ಮಣನು ನನಗಾಗಿ ನನ್ನ ತಂದೆಯನ್ನು ಯಾಚಿಸಿದನು.

೩೬. ಆದರೆ ಆ ಬ್ರಾಹ್ಮಣನ ರೂಪ ಕೆಟ್ಟದಾಗಿದ್ದು ಅವನ ಮುಖ ಭಯಂಕರವಾಗಿದ್ದುದರಿಂದ ಅವನನ್ನು ಮದುವೆಯಾಗಲು ನಾನು ಬಯಸುವುದಿಲ್ಲವೆಂದೂ ಅವನಿಗೆ ತನ್ನನ್ನು ಕನ್ಯಾದಾನಮಾಡಿ ಕೊಡತಕ್ಕದ್ದಲ್ಲವೆಂದೂ ನನ್ನ ತಂದೆಗೆ ಹೇಳಿದೆ.

೩೭. ಅದನ್ನು ಕೇಳಿಯೂ ನನ್ನ ತಂದೆಯನ್ನು ಕೊಲ್ಲುತ್ತೇನೆಂದು ಹೆದರಿಸಿ ಆ ಹರಶರ್ಮನು ನನ್ನನ್ನು ಕೊಡುವವರೆಗೆ ನನ್ನ ತಂದೆಯ ಮನೆಯಲ್ಲೇ ಇದ್ದು ಬಿಟ್ಟನು.

೩೮. ಅನಂತರ ನನಗೆ ಇಷ್ಟವಿಲ್ಲದಿದ್ದರೂ ನನ್ನನ್ನು ಮದುವೆಯಾಗಿ ಆ ಬ್ರಾಹ್ಮಣನು ನನ್ನನ್ನು ಕರೆದೊಯ್ದನು. ಆದರೆ ನಾನು ಅವನನ್ನು ಬಿಟ್ಟು ಬೇರೆ ಕ್ಷತ್ರಿಯಕುಮಾರನನ್ನು ಆಶ್ರಯಿಸಿದೆನು.

೩೯. ಆದರೆ ಹರಶರ್ಮನು ತನ್ನ ಧನಬಲದಿಂದ ಅವನನ್ನು ಅಪಮಾನಗೊಳಿಸಿದುದರಿಂದ ನಾನು ಅವನನ್ನು ಬಿಟ್ಟು ಮತ್ತೊಬ್ಬ ಧನಿಕನಾದ ಕ್ಷತ್ರಿಯಕುಮಾರನನ್ನು ಆಶ್ರಯಿಸಿದೆ.

೪೦. ಆದರೆ ಹರಶರ್ಮನು ರಾತ್ರಿಯ ವೇಳೆ ಬಂದು ಅವನ ಮನೆಗೆ ಬೆಂಕಿ ಹಚ್ಚಿ ಅದನ್ನು ಸುಟ್ಟುಬಿಟ್ಟನು. ಆಗ ಆ ಕ್ಷತ್ರಿಯಕುಮಾರ ನನ್ನನ್ನು ಬಿಟ್ಟದ್ದರಿಂದ ನಾನು ಮೂರನೆಯ ಕ್ಷತ್ರಿಯನನ್ನು ಆಶ್ರಯಿಸಿದೆ.

---

ಸಾಹಂ ಕನ್ಯಾ ಸತೀ ಪೂರ್ವಂ ರೂಪಲುಬ್ಧೇನ ಯಾಚಿತಾ ।
ಹರಶರ್ಮಾಭಿಧಾನೇನ ವಿಪ್ರೇಣಾರ್ಥವತಾ ಪಿತುಃ ॥ ೩೫

ನಾಹಂ ದುರಾಕೃತಿಂ ಘೋರಮುಖಮಿಚ್ಛಾಮ್ಯಮುಂ ಪತಿಮ್ ।
ದತ್ತಾ ನಾಸೇ ಗೃಹೇsಸ್ಯೇತಿ ಪಿತರಂ ಚಾಹಮಬ್ರವಮ್ ॥ ೩೬

ತಚ್ಛ್ರುತ್ವಾಪ್ಯಕರೋತ್ತಾವದ್ಧರಶರ್ಮಾ ಗೃಹೇ ಪಿತುಃ ।
ಪ್ರಾಯಂ ಯಾವದಹಂ ದತ್ತಾ ತೇನಾಸ್ಮೈ ವಧಭೀರುಣಾ ॥ ೩೭

ತತೋ ವಿವಾಹ್ಯಾನಿಚ್ಛಂತೀಮಪ್ಯನೈಷೀತ್ಸ ಮಾಂ ದ್ವಿಜಃ ।
ಅಹಂ ಗತಾ ಚ ತಂ ತ್ಯಕ್ತ್ವಾನ್ಯಂ ಕ್ಷತ್ರಿಯಪುತ್ರಕಮ್ ॥ ೩೮

ಸೋsಭಿಭೂತೋsರ್ಥಸಂದರ್ಪಾದ್ಧೃತೇನ ಹರಶರ್ಮಣಾ ।
ತದ್ದ್ವಿತೀಯೋ ಮಯಾ ಕ್ಷತ್ರಕುಮಾರೋ ಧನವಾನ್ ಶ್ರಿತಃ ॥ ೩೯

ತಸ್ಯ ತೇನಾಗ್ನಿನಾ ರಾತ್ರೌ ಗತ್ವೈವೋದ್ದೀಪಿತಂ ಗೃಹಮ್ ।
ತತಸ್ತೇನ ವಿಮುಕ್ತಾಹಂ ತೃತೀಯಂ ಕ್ಷತ್ರಿಯಂ ಗತಾ ॥ ೪೦

೪೧ ಆದರೆ ಹಠಶರ್ಮನು ಅವನ ಮನೆಯನ್ನೂ ರಾತ್ರಿಯಲ್ಲಿ ಸುಟ್ಟುಹಾಕಿದನು. ಅವನಿಂದಲೂ ಪರಿತ್ಯಕ್ತಳಾದ ನಾನು ದಿಕ್ಕುಗೆಟ್ಟವಳಾದೆನು.

೪೨–೪೩. ಕೊಲ್ಲಲು ಬರುತ್ತಿರುವ ನರಿಗೆ ಹೆದರಿ ಓಡುವ ಕುರಿಮರಿಯಂತೆ ಒಂದು ಹೆಜ್ಜೆಯನ್ನೂ ಬಿಡದೆ ಅಟ್ಟಿಸಿಕೊಂಡು ಬಂದ ಹಠಶರ್ಮನಿಂದ ತಪ್ಪಿಸಿ ಓಡಿ ನಿಮ್ಮ ಸೇವಕ ರಾಜಪುತ್ರ ವೀರಶರ್ಮನೆಂಬವನ ರಕ್ಷಣೆ ಕೋರಿ ಅವನ ದಾಸಿಯಾಗಿ ಅವನನ್ನು ಆಶ್ರಯಿಸಿದೆ.

೪೪. ಅದನ್ನು ತಿಳಿದು ಆ ವಿಧುರ, ವಿರಹಾತುರ, ದುಷ್ಟಬುದ್ಧಿ ಹಠಶರ್ಮನು ನಿರಾಸೆಯಿಂದ ಕೃಶನಾಗಿ ಅವನಲ್ಲಿ ಬರಿಯ ಚರ್ಮಮೂಳೆಗಳು ಮಾತ್ರ ಉಳಿದವು.

೪೫ ನನ್ನನ್ನು ರಕ್ಷಿಸುವುದರಲ್ಲಿ ಪ್ರವೃತ್ತನಾದ ರಾಜಪುತ್ರನು ಹಠಶರ್ಮನನ್ನು ಬಂಧಿಸಲು ಪ್ರಯತ್ನಿಸಿದಾಗ ನಾನೇ ಅವನನ್ನು ತಡೆದೆನು.

೪೬ ಇಂದು ಹೊರಗಡೆ ಬಂದ ನಾನು ದೈವವಶಾತ್ ಅವನ ಕಣ್ಣಿಗೆ ಬಿದ್ದೆ. ಅವನು ಕತ್ತಿಹಿರಿದು ನನ್ನನ್ನು ಕೊಲ್ಲಲು ಅಟ್ಟಿಸಿಕೊಂಡು ಈ ಕಡೆಗೆ ಓಡಿ ಬಂದನು.

೪೭ ನಾನು ಹೇಗೋ ಇಲ್ಲಿಗೆ ಓಡಿ ಬಂದೆ. ದಯಾರ್ದ್ರಳಾದ ಪ್ರತೀಹಾರಿಯು ಬಾಗಿಲು ತೆರೆದು ನನ್ನನ್ನು ಒಳಗೆ ಬಿಟ್ಟಳು. ಆ ಹಠಶರ್ಮ ಅಲ್ಲಿಯೇ ಹೊರಗಡೆ ಇದ್ದಾನೆ."

---

ತಸ್ಯಾಪ್ಯಾದೀಪಿತಂ ತೇನ ನಿಶಿ ವೇಶ್ಮ ದ್ವಿಜನ್ಮನಾ ।
ತತಸ್ತೇನಾಪ್ಯಹಂ ತ್ಯಕ್ತಾ ಸಂಪ್ರಾಪ್ತಾ ಕಾಂದಿಶೀಕತಾಮ್ ॥ ೪೧

ಜಂಬುಕಾದವಿಕೇವಾಥ ಬಿಭ್ಯತೀ ಹಂತುಕಾಮತಃ ।
ಹಠಶರ್ಮದ್ವಿಜಾತ್ತಸ್ಮಾತ್ತದಾತ್ಪದಮಮುಂಚತಃ ॥ ೪೨

ಇಹೈವ ಯುಷ್ಮದ್ಭೃತ್ಯಸ್ಯ ಬಲಿನೋ ವೀರಶರ್ಮಣಃ ।
ರಾಜಪುತ್ರಸ್ಯ ದಾಸೀತ್ವಂ ಶರಣ್ಯಸ್ಯಾಹಮಾಶ್ರಯಮ್ ॥ ೪೩

ತದ್ಬುದ್ಧ್ವಾ ಮಯಿ ನೈರಾಶ್ಯ ವಿಧುರೋ ವಿರಹಾತುರಃ ।
ತ್ವಗಸ್ಥಿಶೇಷಃ ಸಂವೃತ್ತೋ ಹಠಶರ್ಮಾ ಸ ದುರ್ಮತಿಃ ॥ ೪೪

ಮದ್ರಕ್ಷಾರ್ಥಂ ಪ್ರವೃತ್ತಶ್ಚ ಬಂಧನಾಯೇಹ ತಸ್ಯ ಸಃ ।
ರಾಜಪುತ್ರೋ ಮಯಾ ದೇವಿ ವೀರಶರ್ಮಾ ನಿವಾರಿತಃ ॥ ೪೫

ಅದ್ಯ ಮಾಂ ನಿರ್ಗತಾಂ ದೈವಾದ್ದೃಷ್ಟ್ವಾ ಕೃಷ್ಟಕೃಪಾಣಿಕಃ ।
ಹಠಶರ್ಮಾ ಸ ಹಂತುಂ ಮಾಮಿತೋ ಯಾವತ್ ಪ್ರಧಾವಿತಃ ॥ ೪೬

ತೇನಾಗತಾ ಪಲಾಯ್ಯೇಹ ಪ್ರತೀಹಾರ್ಯಾ ದಯಾರ್ದ್ರಯಾ ।
ಮುಕ್ತದ್ವಾರಾ ಪ್ರವಿಷ್ಟಾಹಂ ಸ ಚ ಜಾನೇ ಸ್ಥಿತೋ ಬಹಿಃ ॥ ೪೭

೪೮. ಅಶೋಕಮಾಲೆಯು ಈ ರೀತಿ ಹೇಳಲು ನರವಾಹನದತ್ತನು ಆ ಹಠಶರ್ಮ ಬ್ರಾಹ್ಮಣನನ್ನು ತನ್ನ ಮುಂದೆ ಕರೆತರಿಸಿದನು.

೪೯–೫೦. ಆ ಅಶೋಕಮಾಲೆಯನ್ನು ಉರಿಯುತ್ತಿರುವ ದೃಷ್ಟಿಯಿಂದ ನೋಡುತ್ತಾ ಕೈಯಲ್ಲಿ ಚೂರಿಯನ್ನು ಹಿಡಿದು ಕೋಪದಿಂದ ಶರೀರ ಭಾಗ–ಸಂಧಿಗಳೆಲ್ಲ ನಡುಗುತ್ತಿದ್ದ ಆ ವಿಕಾರ ರೂಪದ ಹಠಶರ್ಮನನ್ನು ನೋಡಿ ನರವಾಹನದತ್ತನು ಹೇಳಿದನು. "'ದುಷ್ಟಬ್ರಾಹ್ಮಣನೇ ! ಸ್ತ್ರೀಯನ್ನು ಕೊಲ್ಲುತ್ತೀಯೆ. ಅದಕ್ಕಾಗಿ ಬೇರೆಯವರ ಮನೆಗಳನ್ನು ಕೂಡ ಸುಡುತ್ತೀಯೆ. ಏತಕ್ಕಾಗಿ ನೀನು ಪಾಪಕಾರಿಯಾಗಿದ್ದೀಯೆ ?"

೫೧. ಅದನ್ನು ಕೇಳಿ ಆ ಬ್ರಾಹ್ಮಣನು ಹೇಳಿದನು. "'ಇವಳು ನನ್ನ ಧರ್ಮ ಪತ್ನಿ. ನನ್ನನ್ನು ತ್ಯಜಿಸಿ ಬೇರೆಯವನಲ್ಲಿಗೆ ಹೋಗಿದ್ದಾಳೆ. ಅದನ್ನು ನಾನು ಹೇಗೆ ಸಹಿಸಲಿ."

೫೨–೫೩. ಹೀಗೆ ಅವನು ಹೇಳಲು ಉದ್ವೇಗಗೊಂಡ ಅಶೋಕಮಾಲೆಯು ಹೇಳಿದಳು. "ಎಲೈ ಲೋಕಪಾಲರೇ! ನೀವೇ ಸಾಕ್ಷಿಗಳು. ನನಗೆ ಇಷ್ಟವಿಲ್ಲದಿದ್ದರೂ ಬಲಾತ್ಕಾರ ದಿಂದ ನನ್ನನ್ನು ಮದುವೆ ಮಾಡಿಕೊಂಡು ಇಲ್ಲಿಗೆ ಬರುವಂತೆ ಇವನು ಮಾಡಿಲ್ಲವೇ, ಹೇಳಿರಿ. ನಿನ್ನ ಮನೆಯಲ್ಲಿ ನಾನು ಇರುವುದಿಲ್ಲವೆಂದು ಇವನಿಗೆ ಆಗ ನಾನು ಹೇಳಲಿಲ್ಲವೇನು ?'

೫೪. ಅವಳು ಹೀಗೆ ಹೇಳಿದಾಗ ಒಂದು ದಿವ್ಯವಾಣಿಯು ಹೀಗೆ ಹೇಳಿತು. ""ಈ ಅಶೋಕಮಾಲೆಯು ಹೇಳುವುದು ಸತ್ಯ.

---

ಇತ್ಯುಕ್ತವತ್ಯಾಂ ತಸ್ಯಾಂ ಚ ಹಠಶರ್ಮಾಣಮಾತ್ಮನಃ ।
ನರವಾಹನದತ್ತಸ್ತಮಗ್ರಮಾನಾಯಯದ್ದ್ವಿಜಮ್ ॥ ೪೮
ಕ್ರೋಧಾದಶೋಕಮಾಲಾಂ ತಾಂ ಪಶ್ಯತಂ ದೀಪ್ತಯಾ ದೃಶಾ ।
ವಿಕೃತಂ ಕ್ಷುರಿಕಾಹಸ್ತಂ ಕೋಪಕಂಪ್ರಾಂಗಸಂಧಿಕಮ್ ॥ ೪೯
ಉವಾಚ ಚೈನಂ ಕುಬ್ರಹ್ಮನ್ ಸ್ತ್ರಿಯಂ ಹಂಸಿ ದಹಸ್ಯಪಿ ।
ತದರ್ಥಂ ಪರವೇಶ್ಮಾನಿ ಕಿಮರ್ಥಂ ಪಾಪಕಾರ್ಯಸಿ ॥ ೫೦
ತಚ್ಛ್ರುತ್ವಾ ಸ ದ್ವಿಜೋಽವಾದೀದ್ಧರ್ಮದಾರಾ ಇಯಂ ಮಮ ।
ತ್ಯಕ್ತ್ವಾ ಮಾಂ ಚಾನ್ಯತೋ ಯಾತಾ ಸಹೇಯ ತದಹಂ ಕಥಮ್ ॥ ೫೧
ಇತ್ಯುಕ್ತೇ ತೇನ ವಿಗ್ನಾ ಸಾಶೋಕಮಾಲಾ ತದಾಬ್ರವೀತ್ ।
ಭೋ ಲೋಕಪಾಲಾ ಬ್ರೂತೈತತ್ಕಿಂ ನ ಯುಷ್ಮಾಸು ಸಾಕ್ಷಿಷು ॥ ೫೨
ಅನಿಚ್ಛಂತೀ ಹಠಾನ್ನೀತಾ ವಿವಾಹ್ಯಾಹಮಿಹಾಮುನಾ ।
ಕಿಂ ತದಾ ಚ ಮಯಾ ನೋಕ್ತಂ ನಾಸಿಷ್ಯೇ ತೇ ಗೃಹೇಷ್ವಿತಿ ॥ ೫೩
ಏವಮುಕ್ತೇ ತಯಾ ತತ್ರ ದಿವ್ಯಾ ವಾಗೇವಮಭ್ಯಧಾತ್ ।
ಯಥೈವಾಶೋಕಮಾಲೇಯಂ ವಕ್ತಿ ಸತ್ಯಂ ತಥೈವ ತತ್ ॥ ೫೪

೫೬. ಇವಳು ಮನುಷ್ಯಸ್ತ್ರೀಯಲ್ಲ. ಇವಳ ಯಾರೆಂಬುದನ್ನು ಕೇಳಿರಿ. ಅಶೋಕಕರನೆಂಬ ವೀರನಾದ ವಿದ್ಯಾಧರೇಶ್ವರನು ಇದ್ದಾನೆ. ಪುತ್ರನಿಲ್ಲದ ಅವನಿಗೆ ದೈವವಶಾತ್ ಒಬ್ಬಳೇ ಮಗಳು ಹುಟ್ಟಿದಳು. ಅಶೋಕಮಾಲಾ ಎಂಬ ಹೆಸರಿನಿಂದ ಅವಳು ತಂದೆಯ ಮನೆಯಲ್ಲಿ ಬೆಳೆದಳು.

೫೭. ಯೌವನವತಿಯಾದ ಅವಳನ್ನು ಆ ತಂದೆಯು ವಂಶಾಭಿವೃದ್ಧಿಗಾಗಿ (ಕನ್ಯಾದಾನ ಮಾಡಿ) ಕೊಡುವವನಾದರೂ ಅವಳು ಅತ್ಯಂತ ಸೌಂದರ್ಯದ ಅಭಿಮಾನದಿಂದಾಗಿ ಯಾವ ಪುರುಷನನ್ನೂ ಮದುವೆಯಾಗಲು ಇಚ್ಛಿಸಲಿಲ್ಲ.

೫೮. ಅವಳ ನಿರ್ಬಂಧದಿಂದ ಕೋಪಗೊಂಡ ಅವಳ ತಂದೆಯು ಅವಳಿಗೆ ಶಾಪವನ್ನು ಕೊಟ್ಟನು. "ನೀನು ಮನುಷ್ಯ ಜನ್ಮವನ್ನು ಹೊಂದು. ಆ ಮನುಷ್ಯ ಜನ್ಮದಲ್ಲಿ ನಿನಗೆ ನಿನ್ನದೇ ಹೆಸರು (ಅಶೋಕಮಾಲಾ ಎಂಬ ಹೆಸರೇ) ಇರುವುದು.

೫೯. ಆ ಮನುಷ್ಯಜನ್ಮದಲ್ಲಿ ಕುರೂಪಿಯಾದ ಒಬ್ಬ ಬ್ರಾಹ್ಮಣನು ಬಲಾತ್ಕಾರದಿಂದ ನಿನ್ನನ್ನು ವಿವಾಹವಾಗುತ್ತಾನೆ. ಅವನನ್ನು ಬಿಟ್ಟು ಅವನ ಭಯದಿಂದ ಕ್ರಮವಾಗಿ ಮೂರು ಮಂದಿ ಪತಿಯರನ್ನು ಹೋಗಿ ಸೇರುವೆ.

೬೦. ಅವರಿಂದಲೂ ಓಡಿಹೋಗುವ ನೀನು ದಾಸೀಭಾವದಿಂದ ಬಲಿಷ್ಠನಾದ ರಾಜಪುತ್ರನನ್ನು ಆಶ್ರಯಿಸುವೆ. ಆದರೆ ಆ ಬ್ರಾಹ್ಮಣನು ಮಾತ್ರ ಬಿಡುವುದಿಲ್ಲ.

---

ನ ಚೈಷಾ ಮಾನುಷೀ ತತ್ತ್ವಮೇತದೀಯಂ ನಿಶಮ್ಯತಾಮ್ ।
ಅಸ್ತ್ಯಶೋಕಕರೋ ನಾಮ ವೀರೋ ವಿದ್ಯಾಧರೇಶ್ವರಃ ॥ ೫೫
ತಸ್ಯಾಪುತ್ರಸ್ಯ ಚೈಕೈವ ದೈವಾದಜನಿ ಕನ್ಯಕಾ ।
ಅಶೋಕಮಾಲಾ ನಾಮ್ನಾ ಸಾವರ್ಧತಾಸ್ಯ ಪಿತುರ್ಗೃಹೇ ॥ ೫೬
ಯೌವನಸ್ಥಾ ಚ ಸಾ ತೇನ ದೀಯಮಾನಾನ್ವಯಾರ್ಥಿನಾ ।
ನ ಕಂಚಿದೈಚ್ಛದ್ಭರ್ತಾರಮತಿರೂಪಾಭಿಮಾನತಃ ॥ ೫೭
ತೇನ ಶಾಪಮದಾತ್ಸೋಽಸ್ಯೈ ನಿರ್ಬಂಧಕುಪಿತಃ ಪಿತಾ ।
ಮಾನುಷ್ಯಂ ವ್ರಜ ನಾಮಾತ್ರ ಭವಿತಾ ಚ ಸ್ವಮೇವ ತೇ ॥ ೫೮
ಪರಿಣೇಷ್ಯತಿ ಚಾತ್ರ ತ್ವಾಂ ವಿರೂಪೋ ಬ್ರಾಹ್ಮಣೋ ಹಠಾತ್ ।
ತಂ ತ್ಯಕ್ತ್ವಾ ತದ್ಭಯಾದ್ಭರ್ತ್ಯೂನ್ ಕ್ರಮೇಣ ತ್ರೀನುಪೈಷ್ಯಸಿ ॥ ೫೯
ತತೋಽಪ್ಯುಪದ್ರುತಾ ತೇನ ದಾಸೀತ್ವೇನಾಶ್ರಯಿಷ್ಯಸಿ ।
ರಾಜಪುತ್ರಂ ಬಲೀಯಾಂಸಂ ನ ಚೈವ ಸ ನಿವರ್ತ್ಸ್ಯತಿ ॥ ೬೦

೬೧. (ನಿನ್ನನ್ನು) ಕೊಲ್ಲಲು ಬಯಸಿ ಅವನು ಓಡಿಬಂದಾಗ (ಅವನನ್ನು) ನೋಡಿ ಓಡಿ ಬಂದು ರಾಜಭವನವನ್ನು ಪ್ರವೇಶಿಸಿದಾಗ ನೀನು ಈ ಶಾಪದಿಂದ ಬಿಡುಗಡೆ ಹೊಂದುತ್ತೀಯೆ.'

೬೨. ಈ ರೀತಿ ಹಿಂದೆ ತಂದೆಯಿಂದ ಶಾಪಹೊಂದಿದ ವಿದ್ಯಾಧರಿಯಾದ ಆ ಅಶೋಕ ಮಾಲೆಯೇ ಅದೇ ಹೆಸರಿನಿಂದ ಇಂದು ಇಲ್ಲಿ ಮನುಷ್ಯ ಸ್ತ್ರೀಯಾಗಿ ಹುಟ್ಟಿದ್ದಾಳೆ.

೬೩. ಅವಳ ಶಾಪ ಕೊನೆಗೊಂಡಿದೆ. ಈಗ ತನ್ನ ವಿದ್ಯಾಧರಸ್ಥಾನವನ್ನು ಹೋಗಿ ಸೇರಿ ಅಲ್ಲಿದ್ದು ತನ್ನ ನಿಜವಾದ ಶರೀರವನ್ನು ಪ್ರವೇಶಿಸುವಳು.

೬೪. ಅನಂತರ (ತಾನು) ವರಿಸಿದ ವಿದ್ಯಾಧರರಾಜನಾದ ಅಭಿರುಚಿತ ಎಂಬ ಹೆಸರುಳ್ಳ ಪತಿಯೊಡನೆ ಶಾಪವನ್ನು ಸ್ಮರಿಸಿ ರಮಿಸುವಳು."

೬೫. ಹೀಗೆ ಹೇಳಿ ದಿವ್ಯವಾಣಿಯು ಸುಮ್ಮನಾಯಿತು. ಅಶೋಕಮಾಲೆಯೂ ತತ್‌ಕ್ಷಣದಲ್ಲಿ ಮೃತಳಾಗಿ ಭೂಮಿಯಲ್ಲಿ ಬಿದ್ದಳು.

೬೬. ಅದನ್ನು ನೋಡಿ ಕಣ್ಣೀರಿಡುತ್ತಾ ಅಲಂಕಾರವತಿ ಹಾಗೂ ನರವಾಹನದತ್ತ ಇಬ್ಬರೂ ಅವಳ ಪಾರ್ಶ್ವದಲ್ಲಿ ನಿಂತರು.

೬೭. ಅವನಿಗಿದ್ದ ಕೋಪವನ್ನು ದುಃಖವು ಗೆದ್ದು ಹಠಶರ್ಮನು ರಾಗಾಂಧನಾಗಿ ವಿಲಪಿಸುತ್ತಿದ್ದರೂ ಇದ್ದಕ್ಕಿದ್ದಂತೆ ಅವನ ಮುಖ ಸಂತೋಷದಿಂದ ಅರಳಿತು.

---

ದೃಷ್ಟ್ವಾ ಚ ಧಾವಿತೇ ತಸ್ಮಿನ್ ಹಂತುಕಾಮೇ ಪಲಾಯಿತಾ ।
ಪ್ರವಿಷ್ಟಾ ರಾಜಭವನಂ ಶಾಪಾದಸ್ಮಾದ್ವಿಮೋಕ್ಷ್ಯಸೇ ॥ ೬೧
ಏವಂ ಯಾಶೋಕಮಾಲಾ ಸಾ ಪಿತ್ರಾ ವಿದ್ಯಾಧರೀ ಪುರಾ ।
ಶಪ್ತಾ ತೇನೈವ ನಾಮ್ನಾದ್ಯ ಸೈಷಾ ಜಾತಾತ್ರ ಮಾನುಷೀ ॥ ೬೨
ಜಾತಶ್ಚ ಸೈಷ ಶಾಪಾಂತೋಽಮುಷ್ಯಾ ಗತ್ವಾಧುನಾ ಪದಮ್ ।
ವೈದ್ಯಾಧರಂ ಸ್ವಂ ತತ್ರಸ್ಥಾ ಪ್ರವೇಕ್ಷ್ಯತಿ ನಿಜಾಂ ತನುಮ್ ॥ ೬೩
ತತೋಽಭಿರುಚಿತಾಖ್ಯೇನ ವಿದ್ಯಾಧರಮಹೀಭುಜಾ ।
ವೃತೇನ ಭರ್ತ್ರಾ ಸಹಿತಾ ಶಾಪಂ ಸಂಸ್ಮೃತ್ಯ ರಂಸ್ಯತೇ ॥ ೬೪
ಇತ್ಯುಕ್ತ್ವಾ ವಿರತಂ ವಾಚಾ ದಿವ್ಯಯಾ ಸಾಪಿ ತತ್‌ಕ್ಷಣಮ್ ।
ಅಶೋಕಮಾಲಾ ಸಹಸಾ ಗತಜೀವಾಪತದ್ಭುವಿ ॥ ೬೫
ದೃಷ್ಟ್ವಾ ಚ ತದಲಂಕಾರವತೀ ಬಾಷ್ಪಾಯಿತೇಕ್ಷಣಾ ।
ನರವಾಹನದತ್ತಶ್ಚ ಸ ಪಾರ್ಶ್ವಸ್ಥೌ ಬಭೂವತುಃ ॥ ೬೬
ಸ ತು ದುಃಖಜಿತಾಮರ್ಷೋ ರಾಗಾಂಧೋ ವಿಲಪನ್ನಪಿ ।
ಅಕಸ್ಮಾದ್ಧಠಶರ್ಮಾಭೂದ್ಧರ್ಷೋತ್ಫುಲ್ಲಾನನೋ ದ್ವಿಜಃ ॥ ೬೭

೧೮. ಏನಿದು, ಎಂದು ಎಲ್ಲರೂ ಕೇಳಿದಾಗ ಆ ಬ್ರಾಹ್ಮಣನು ಹೇಳಿದನು. "ನಾನು ಹಿಂದಿನ ಜನ್ಮವನ್ನು ಸ್ಮರಿಸಿದೆನು. ಅದರ ಬಗ್ಗೆ ಹೇಳುತ್ತೇನೆ. ಕೇಳಿರಿ.

೧೯. ಹಿಮವತ್ಪರ್ವತದಲ್ಲಿ ಮದನಪುರವೆಂಬ ಉತ್ತಮವಾದ ಪಟ್ಟಣವಿದೆ. ಅಲ್ಲಿ ಪ್ರಲಂಬಭುಜನೆಂಬ ವಿದ್ಯಾಧರೇಶ್ವರನು ಇದ್ದಾನೆ.

೨೦. ಅವನಿಗೆ ಸ್ಥೂಲಭುಜನೆಂಬ ಹೆಸರುಳ್ಳ ಪುತ್ರನು ಹುಟ್ಟಿದನು. ಸುಂದರನಾದ ಆ ರಾಜಪುತ್ರನು ಕ್ರಮವಾಗಿ ಬೆಳೆದು ಯುವಕನಾದನು.

೨೧. ಅನಂತರ ಸುರಭಿವತ್ಸನೆಂಬ ವಿದ್ಯಾಧರಪತಿಯು ಕನ್ಯಾಸಹಿತನಾಗಿ ಸ್ವಯಂ ಮನೆಗೆ ಬಂದು ಪ್ರಲಂಬಭುಜನನ್ನು ಕುರಿತು ಹೇಳಿದನು.

೨೨. 'ಸುರಭಿದತ್ತಾ ಎಂಬ ಹೆಸರುಳ್ಳ (ನನ್ನ) ಮಗಳನ್ನು ನಿನ್ನ ಮಗನಾದ ಸ್ಥೂಲಭುಜನಿಗೆ (ಕನ್ಯಾದಾನವಾಗಿ) ಈಗ ಕೊಟ್ಟಿದ್ದೇನೆ. ಗುಣವಂತನಾದ ಅವನು ಇವಳನ್ನು ವಿವಾಹ ಮಾಡಿಕೊಳ್ಳಲಿ.'

೨೩. ಅದನ್ನು ಕೇಳಿ ಅಂಗೀಕಾರಮಾಡಿ ಪ್ರಲಂಬಭುಜನು ತನ್ನ ಮಗನನ್ನು ಕರೆದು ಅವನಿಗೆ ಈ ವಿಷಯವನ್ನು ತಿಳಿಸಿದನು.

೨೪. ಆದರೆ ಸ್ಥೂಲಭುಜನು ಸೌಂದರ್ಯದ ಗರ್ವದಿಂದ ತಂದೆಯನ್ನು ಕುರಿತು ಹೇಳಿದನು. 'ತಂದೆಯೇ, ಇವಳನ್ನು ನಾನು ವಿವಾಹವಾಗುವುದಿಲ್ಲ. ಇವಳು ಸೌಂದರ್ಯದ ದೃಷ್ಟಿಯಿಂದ ಸಾಧಾರಣವಾಗಿದ್ದಾಳೆಯಷ್ಟೆ'

---

ಕಿಮೇತದಿತಿ ಪೃಷ್ಟಶ್ಚ ಸರ್ವೈರ್ವಿಪ್ರೋ ಜಗಾದ ಸಃ ।
ಮಯಾ ಜನ್ಮ ಸ್ಮೃತಂ ಪೂರ್ವಂ ತಚ್ಚ ವಚ್ಮಿ ನಿಶಮ್ಯತಾಮ್ ॥ ೧೮
ಹಿಮಾದ್ರಾವಸ್ತಿ ಮದನಪುರಂ ನಾಮೋತ್ತಮಂ ಪುರಮ್ ।
ಪ್ರಲಂಬಭುಜ ಇತ್ಯಸ್ತಿ ತತ್ರ ವಿದ್ಯಾಧರೇಶ್ವರಃ ॥ ೧೯
ತಸ್ಯೋದಪದ್ಯತ ಸ್ಥೂಲಭುಜಾಖ್ಯಸ್ತನಯಃ ಪ್ರಭೋಃ ।
ಸ ಚ ರಾಜಸುತೋ ಭವ್ಯೋ ಯೌವನಸ್ಥೋಽಭವತ್ಕ್ರಮಾತ್ ॥ ೨೦
ತತಃ ಸುರಭಿವತ್ಸಾಖ್ಯೋ ವಿದ್ಯಾಧರಪತಿಃ ಸ್ವಯಮ್ ।
ಸಕನ್ಯೋ ಗೃಹಮಾಗತ್ಯ ಪ್ರಲಂಬಭುಜಮಾಹ ತಮ್ ॥ ೨೧
ಇಯಂ ಸುರಭಿದತ್ತಾಖ್ಯಾ ಸುತಾ ತ್ವತ್ಸೂನವೇ ಮಯಾ ।
ದತ್ತಾ ಸ್ಥೂಲಭುಜಾಯಾದ್ಯ ಗುಣವಾನ್ ಸ ವಹತ್ವಿಮಾಮ್ ॥ ೨೨
ತಚ್ಛ್ರುತ್ವಾ ಪ್ರತಿಪದ್ಯೈವ ಸಮಾಹೂಯ ಸ್ವಸೂನವೇ ।
ಸ ಪ್ರಲಂಭಭುಜಸ್ತಸ್ಮಾಯೇತಮರ್ಥಂ ನ್ಯವೇದಯತ್ ॥ ೨೩
ತತಃ ಸ ತಂ ಸ್ಥೂಲಭುಜೋ ರೂಪದರ್ಪಾತ್ ಸುತೋಽಬ್ರವೀತ್ ।
ಪರಿಣೇಷ್ಯೇ ನ ತಾತೈನಾಂ ರೂಪೇಣೈಷಾ ಹಿ ಮಧ್ಯಮಾ ॥ ೨೪

೭೫. "ಮಗನೇ, ಅತ್ಯಂತ ಸೌಂದರ್ಯದಿಂದ ಏನಾಗಬೇಕು? ಇವಳು ದೊಡ್ಡವಂಶದವಳು. ಆದ್ದರಿಂದ ಇವಳ ತಂದೆಯು ಇವಳನ್ನು ಕನ್ಯಾದಾನವಾಗಿ ಕೊಟ್ಟಿದ್ದಾನೆ. ನಾನು ನಿನಗಾಗಿ ಇವಳನ್ನು ಸ್ವೀಕರಿಸಿದ್ದೇನೆ. ಅನ್ಯಥಾ ಭಾವಿಸಬೇಡ.'

೭೬. ಮತ್ತೆ ಹೀಗೆ ಆ ತಂದೆ ಹೇಳಿದಾಗ ಆ ಸ್ಥೂಲಭುಜನು (ತಂದೆಯ) ಆ ಮಾತನ್ನು ನಡೆಸಲಿಲ್ಲ. ಅದರಿಂದಾಗಿ ತಂದೆಯು ಕುಪಿತನಾಗಿ ಸ್ಥೂಲಭುಜನಿಗೆ ಶಾಪಕೊಟ್ಟನು.

೭೭. "ಸೌಂದರ್ಯದ ಅಹಂಕಾರ ದೋಷದಿಂದ ನೀನು ಮನುಷ್ಯ ಜನ್ಮದಲ್ಲಿ ಅವತರಿಸು. ಅಲ್ಲಿ ನೀನು ವಿಕಾರ ರೂಪಿಯೂ ಭಯಂಕರವಾದ ಮುಖವುಳ್ಳವನೂ ಆಗುತ್ತೀಯೆ.

೭೮. ಶಾಪದಿಂದ ಚ್ಯುತಳಾದ ಅಶೋಕಮಾಲಾ ಎಂಬ ಹೆಸರಿನ ಹೆಂಡತಿಯನ್ನು ಬಲಾತ್ಕಾರದಿಂದ ಹೊಂದಿ ಇಷ್ಟವಿಲ್ಲದಿರುವ ಅವಳಿಂದ ತ್ಯಕ್ತನಾಗಿ ವಿರಹಕ್ಲೇಶವನ್ನು ಹೊಂದುವೆ.

೭೯. ಬೇರೆಯವನಲ್ಲಿ ಆಸಕ್ತಳಾದ ಅವಳಿಗಾಗಿ ದುಃಖದಿಂದ ಕೃಶನಾಗುವ ಮತ್ತು ರಾಗಮೋಹಿತನಾದ ನೀನು ಮನೆ ಸುಡುವುದು ಮುಂತಾದ ಪಾಪಕಾರ್ಯಗಳನ್ನು ಮಾಡುವೆ.'

೮೦. ಹೀಗೆ ಶಾಪಕೊಟ್ಟ ಆ ಪ್ರಲಂಬಭುಜನ ಕಾಲಿಗೆ ಬಿದ್ದು ಸಾಧ್ವಿಯಾದ ಸುರಭಿದತ್ತೆಯು ಅಳುತ್ತಾ ವಿಜ್ಞಾಪಿಸಿದಳು.

---

ಕಿಂ ಪುತ್ರಾತ್ಯಂತರೂಪೇಣ ಮಾನ್ಯಾಹ್ಯೇಷಾ ಮಹಾನ್ವಯಾ ।
ಪಿತ್ರಾ ದತ್ತಾ ಮಯಾ ಚಾತ್ತಾ ತ್ವತ್ಕೃತೇ ಮಾನ್ಯಥಾ ಕೃಥಾಃ ॥ ೭೫
ಇತ್ಯುಕ್ತಶ್ಚ ಪುನಸ್ತೇನ ಪಿತ್ರಾ ಸ್ಥೂಲಭುಜಃ ಸ ತತ್ ।
ನಾಕರೋದ್ಯತ್ತತಸ್ತಂ ಸ ಶಶಾಪ ಕುಪಿತಃ ಪಿತಾ ॥ ೭೬
ರೂಪಾಹಂಕಾರದೋಷೇಣ ಮಾನುಷ್ಯೇಽವತರಾಮುನಾ ।
ಭವಿಷ್ಯಸಿ ಚ ತತ್ರ ತ್ವಂ ವಿಕೃತೋ ವಿಕಟಾನನಃ ॥ ೭೭
ಭಾರ್ಯಾಮಶೋಕಮಾಲಾಖ್ಯಾಂ ಪ್ರಾಪ್ಯ ಶಾಪಚ್ಯುತಾಂ ಹಠಾತ್ ।
ಪ್ರಾಪ್ತಾಸಿ ವಿರಹಕ್ಲೇಶಮನಿಚ್ಛಂತ್ಯಾ ತಯೋಜ್ಝಿತಃ ॥ ೭೮
ತಸ್ಯಾಶ್ಚಾನ್ಯಪ್ರಸಕ್ತಾಯಾಃ ಕೃತೇ ದುಃಖಕೃಶೀಕೃತಃ ।
ಕರಿಷ್ಯಸ್ಯಗ್ನಿದಾಹಾದಿ ಪಾತಕಂ ರಾಗಮೋಹಿತಃ ॥ ೭೯
ಇತ್ಯುಕ್ತಶಾಪಂ ರುದತೀ ತಂ ಪ್ರಲಂಬಭುಜಂ ತದಾ ।
ಸಾಧ್ವೀ ಸುರಭಿದತ್ತಾ ಸಾ ಪಾದಲಗ್ನಾ ವ್ಯಜಿಜ್ಞಪತ್ ॥ ೮೦

೮೧. "ನನಗೂ ಇದೇ ರೀತಿ ಶಾಪವನ್ನು ಕೊಡು. ನಮ್ಮಿಬ್ಬರಿಗೂ ಸಮಾನವಾದ ಗತಿಯು ಉಂಟಾಗಲಿ. ನನ್ನ ಅಪರಾಧದಿಂದ ನನ್ನ ಪತಿಯೊಬ್ಬನಿಗೆ ಮಾತ್ರ ಕ್ಲೇಶವು ಉಂಟಾಗದಿರಲಿ."

೮೨. ಆ ಸಾಧ್ವಿಯನ್ನು ಮಾತನ್ನು ಕೇಳಿ ಸಂತುಷ್ಟನಾದ ಪ್ರಲಂಬಭುಜನು ಅವಳನ್ನು ಸಮಾಧಾನಪಡಿಸುತ್ತಾ ಈ ರೀತಿಯಾಗಿ ಮಗನ ಶಾಪದ ಕೊನೆಯನ್ನು ತಿಳಿಸಿದನು.

೮೩. "ಅಶೋಕ ಮಾಲೆಯ ಶಾಪದ ಬಿಡುಗಡೆಯ ಯಾವಾಗ ಉಂಟಾಗುವುದೋ ಆಗಲೇ ಇವನು (ಹಿಂದಿನ) ಜನ್ಮವನ್ನು ಸ್ಮರಿಸಿ ಈ ಶಾಪದಿಂದ ಬಿಡುಗಡೆ ಹೊಂದುವನು.

೮೪. ಮತ್ತು ತನ್ನ ಶರೀರವನ್ನು ಪಡೆದು ಶಾಪವನ್ನು ಸ್ಮರಿಸುತ್ತಾ ಅಹಂಕಾರರಹಿತನಾಗಿ ಶೀಘ್ರವಾಗಿ ನಿನ್ನನ್ನು ವಿವಾಹವಾಗಿ ಇಲ್ಲಿ ನಿನ್ನೊಡಗೂಡಿ ಸುಖವಾಗಿರುವನು.'

೮೫ ಹೀಗೆ ಪ್ರಲಂಬಭುಜನು ಹೇಳಿದಾಗ ಆ ಸಾಧ್ವಿಯು ಹೇಗೋ ಧೈರ್ಯವನ್ನು ತಾಳಿದಳು. ಶಾಪದಿಂದ ಇಲ್ಲಿ ಚ್ಯುತನಾಗಿರುವ ಆ ಸ್ಥೂಲಭುಜನೇ ನಾನು.

೮೬ ಅಹಂಕಾರದೋಷದಿಂದ ಉಂಟಾದ ಈ ದೊಡ್ಡ ದುಃಖವನ್ನು ನಾನು ಅನುಭವಿಸಿದೆನು. ಅಹಂಕಾರವುಳ್ಳ ಪುರುಷರಿಗೆ ಅದೃಷ್ಟವಾದ ಅಥವಾ ದೃಷ್ಟವಾದ ವಿಷಯದಲ್ಲಿ ಶ್ರೇಯಸ್ಸು ಎಲ್ಲಿ ಬರುತ್ತದೆ ?

೮೭ ನನ್ನ ಆ ಶಾಪವು ಇಂದು ನಾಶವಾಯಿತು" ಎಂದು ಹೇಳಿ ತನ್ನ ಶರೀರವನ್ನು ತ್ಯಜಿಸಿ ಹರಶರ್ಮನು ವಿದ್ಯಾಧರ ಕುಮಾರನಾಗಿ ಆದನು.

---

ದೇಹಿ ಶಾಪಂ ಮಮಾಪ್ಯೇವಂ ಸಮಾಸ್ತು ಗತಿರಾವಯೋಃ ।
ಮಾ ಭೂನ್ಮೇ ಭರ್ತುರೇತಸ್ಯ ಕ್ಲೇಶೋ ಮದಪರಾಧತಃ ॥ ೮೧
ಏವಮುಕ್ತವತೀಂ ತುಷ್ಟಃ ಸಾಧ್ವೀಂ ತಾಂ ಪರಿಸಾಂತ್ವಯನ್ ।
ಸ ಪ್ರಲಂಬಭುಜಃ ಸೂನೋರೇವಂ ಶಾಪಾಂತಮಭ್ಯಧಾತ್ ॥ ೮೨
ಯದೈವಾಶೋಕಮಾಲಾಯಾಃ ಶಾಪಮೋಕ್ಷೋ ಭವಿಷ್ಯತಿ ।
ತದೈವ ಜಾತಿಂ ಸ್ಮೃತ್ವಾಯಂ ಶಾಪಾದಸ್ಮಾದ್ವಿಮೋಕ್ಷ್ಯತೇ ॥ ೮೩
ಪ್ರಾಪ್ಯ ಚ ಸ್ವತನುಂ ಶಾಪಂ ಸಂಸ್ಮರನ್ನಿರಹಂಕೃತಿಃ ।
ಅಚಿರಾತ್ತ್ವಾಂ ವಿವಾಹ್ಯೇಹ ತ್ವದ್ಯುಕ್ತೋ ಭವಿತಾ ಸುಖೀ ॥ ೮೪
ಇತ್ಯುಕ್ತಾ ತೇನ ಸಾ ಸಾಧ್ವೀ ಕಥಂಚಿದ್ಧೃತಿಮಾದದೇ ।
ತಂ ಚ ಜಾನೀತ ಮಾಂ ಸ್ಥೂಲಭುಜಂ ಶಾಪಾದಿಹ ಚ್ಯುತಮ್ ॥ ೮೫
ದೃಷ್ಟಂ ಮಯಾ ಚಾಹಂಕಾರದೋಷಾದ್ದುಃಖಮಿದಂ ಮಹತ್ ।
ಪುಂಸಾಮದೃಷ್ಟೇ ದೃಷ್ಟೇ ವಾ ಶ್ರೇಯೋಽಹಂಕಾರಿಣಾಂ ಕುತಃ ॥ ೮೬
ಕ್ಷೀಣೋ ಮೇ ಸ ಚ ಶಾಪೋಽದ್ಯೇತ್ಯುಕ್ತ್ವಾ ಮುಕ್ತ್ವಾ ಚ ತಾಂ ತನುಮ್ ।
ಹರಶರ್ಮಾ ಸ ಸಂಪೇದೇ ವಿದ್ಯಾಧರಕುಮಾರಕಃ ॥ ೮೭

೮೮. ವಿದ್ಯಾಪ್ರಭಾವದಿಂದ ಅಶೋಕಮಾಲೆಯ ದೇಹವನ್ನು ಒಯ್ದು ನಿರ್ದಯೆಯಿಂದ ಗಂಗೆಯಲ್ಲಿ ಕಣ್ಣಿಗೆ ಕಾಣದಂತೆ ಎಸೆದನು.

೮೯. ಮತ್ತು ವಿದ್ಯೆಯ ಪ್ರಭಾವದಿಂದ ತಂದ ಗಂಗೆಯ ಜಲದಿಂದ ಅಲಂಕಾರವತಿಯ ವಾಸಗೃಹವನ್ನು ಕ್ಷಣಮಾತ್ರದಲ್ಲಿ ಸುತ್ತಲೂ ತೊಳೆದನು.

೯೦. ಅನಂತರ ಮುಂದೆ ಪ್ರಭುವಾಗಲಿರುವ ನರವಾಹನದತ್ತನನ್ನು ನಮಸ್ಕರಿಸಿ ಅವನು ಅಲ್ಲಿಂದ ತನ್ನ ಕಾರ್ಯಸಿದ್ಧಿಗಾಗಿ ಅಂತರಿಕ್ಷಕ್ಕೆ ಹಾರಿ ಹೊರಟುಹೋದನು.

೯೧. ಇಲ್ಲಿ ಎಲ್ಲರೂ ಆ ಘಟನೆಗಳಿಂದ ವಿಸ್ಮಿತರಾಗಿರಲು ಗೋಮುಖನು ಪ್ರಾಸಂಗಿಕವಾಗಿ ಅನಂಗರತಿಗೆ ಸಂಬಂಧಪಟ್ಟ ಈ ಕಥೆಯನ್ನು ಹೇಳಿದನು.

೯೨. "ಭೂಲೋಕದಲ್ಲಿ ಶೂರಪುರವೆಂಬ ಅನ್ವರ್ಥವಾದ ಪಟ್ಟಣವೊಂದಿದೆ. ಅಲ್ಲಿ ಅತ್ಯಂತ ಗರ್ವಿಷ್ಠನಾದ ಮಹಾವರಾಹನೆಂಬ ರಾಜನು ಇದ್ದನು.

೯೩. ಸಂತತಿಯಿಲ್ಲದ ಆ ರಾಜನಿಗೆ ಗೌರಿಯ ಪೂಜೆಯಿಂದ ರಾಣಿಯಾದ ಪದ್ಮರತಿಯಲ್ಲಿ ಅನಂಗರತಿಯೆಂಬ ಪುತ್ರಿಯು ಹುಟ್ಟಿದಳು.

೯೪. ಕಾಲಕ್ರಮದಲ್ಲಿ ಯೌವನಕ್ಕೆ ಕಾಲಿಟ್ಟ ಅವಳು ತನ್ನ ಸೌಂದರ್ಯದ ಗರ್ವದಿಂದ ರಾಜರುಗಳು ಬೇಡುತ್ತಿದ್ದರೂ ಯಾವನನ್ನೂ ಪತಿಯನ್ನಾಗಿ ಹೊಂದಲು ಇಚ್ಛಿಸಲಿಲ್ಲ.

---

ಅಶೋಕಮಾಲಾದೇಹಂ ಚ ನೀತ್ವಾ ವಿದ್ಯಾಪ್ರಭಾವತಃ ।
ಅದೃಶ್ಯಮೇವ ಚಿಕ್ಷೇಪ ಗಂಗಾಯಾಮಾನೃಶಂಸ್ಯತಃ ॥ ೮೮
ವಿದ್ಯಾಪ್ರಭಾವನೀತೈಶ್ಚ ತತ್ತೋಯೈರಭಿತಃ ಕ್ಷಣಾತ್ ।
ಅಕ್ಷಾಲಯದಲಂಕಾರವತೀವಾಸಗೃಹಂ ಸ ತತ್ ॥ ೮೯
ನರವಾಹನದತ್ತಂ ಚ ನತ್ವಾ ತಂ ಭಾವಿನಂ ಪ್ರಭುಮ್ ।
ಸ್ವಕಾರ್ಯಸಿದ್ಧಯೇ ಪ್ರಾಯಾದುತ್ಪತ್ಯ ಸ ನಭಸ್ತತಃ ॥ ೯೦
ವಿಸ್ಮಿತೇಷ್ವಥ ಸರ್ವೇಷು ಪ್ರಸಂಗಾದತ್ರ ಗೋಮುಖಃ ।
ಅನಂಗರತಿಸಂಬದ್ಧಾಮಿಮಾಮಕಥಯತ್ಕಥಾಮ್ ॥ ೯೧
ಅಸ್ತಿ ಶೂರಪುರಂ ನಾಮ ಯಥಾರ್ಥಂ ನಗರಂ ಭುವಿ ।
ಮಹಾವರಾಹ ಇತ್ಯಾಸೀದ್ರಾಜಾ ತತ್ರಾತಿದುರ್ಮದಃ ॥ ೯೨
ಗೌರ್ಯಾರಾಧನತಸ್ತಸ್ಯ ದೇವ್ಯಾಂ ಪದ್ಮರತೌ ಸುತಾ ।
ಜಜ್ಞೇಽನಂಗರತಿರ್ನಾಮ ಭೂಪಸ್ಯಾನನ್ಯಸಂತತೇಃ ॥ ೯೩
ಕಾಲೇನ ಯೌವನಾರೂಢಾ ಸಾ ಚ ರೂಪಾಭಿಮಾನಿನೀ ।
ನೇಚ್ಛತಿ ಸ್ಮ ಪತಿಂ ಕಂಚಿದ್ಯಾಚಮಾನೇಷು ರಾಜಸು ॥ ೯೪

೧೫. "ಯಾವನು ಶೂರನಾಗಿ ರೂಪವಂತನಾಗಿದ್ದು ಶೋಭನವಾದ ಒಂದು ವಿಜ್ಞಾನವನ್ನು ತಿಳಿದಿರುತ್ತಾನೆಯೋ ಅವನಿಗೆ ನಾನು ನನ್ನನ್ನು ಒಪ್ಪಿಸಿಕೊಳ್ಳಬೇಕು' ಎಂದು ಅವಳು ನಿಶ್ಚಿತವಾಗಿ ಹೇಳಿದಳು.

೧೬. ಅನಂತರ ಈ ವಿಷಯವನ್ನು ತಿಳಿದು ದಕ್ಷಿಣಾಪಥದಿಂದ ಅವಳನ್ನು ಪಡೆಯುವ ಇಚ್ಛೆಯಿಂದ ಅವಳಿಗೆ ಬೇಕಾದ ಗುಣಗಳಿಂದ ಕೂಡಿದ ನಾಲ್ಕು ಮಂದಿ ಪ್ರಸಿದ್ಧರಾದ ವೀರರು ಅಲ್ಲಿಗೆ ಬಂದರು.

೧೭. ದ್ವಾರಪಾಲಕರು ತಿಳಿಸಿದ ಮೇಲೆ ಒಳಗೆ ಪ್ರವೇಶಮಾಡಿದ ಅವರನ್ನು ಕುರಿತು ಅನಂಗರತಿಯ ಸನ್ನಿಧಿಯಲ್ಲಿ ಮಹಾವರಾಹರಾಜನು ಪ್ರಶ್ನಿಸಿದನು.

೧೮. ""ನಿಮ್ಮ ಹೆಸರುಗಳೇನು ? ನಿಮ್ಮ ಜಾತಿ ಯಾವುದು ? ನಿಮಗೇನು ವಿಜ್ಞಾನ ತಿಳಿದಿದೆ ?" ರಾಜನ ಈ ಮಾತನ್ನು ಕೇಳಿ ಅವರಲ್ಲಿ ಒಬ್ಬನು ರಾಜನಿಗೆ ವಿಜ್ಞಾಪಿಸಿದನು.

೧೯. ""ನಾನು ಪಂಚಪಟ್ಟಿಕ ಎಂಬ ಹೆಸರುಳ್ಳವನು. (ನಾನು) ಶೂದ್ರನು. ನನಗೊಂದು ವಿಜ್ಞಾನವಿದೆ. ಅದೆಂದರೆ ಪ್ರತಿದಿನವೂ ನಾನು ಐದು ಪಟ್ಟವಸ್ತ್ರಗಳ ಜೋಡಿಗಳನ್ನು ನೇಯುತ್ತೇನೆ.

---

ಯಃ ಶೂರೋ ರೂಪವಾನೇಕಂ ವಿಜ್ಞಾನಂ ವೇತ್ತಿ ಶೋಭನಮ್ ।
ಕಸ್ಮೈ ಮಯಾತ್ಮಾ ದಾತವ್ಯ ಇತ್ಯುವಾಚ ತು ನಿಶ್ಚಯಾತ್ ॥ ೧೫
ಅಥ ತತ್ರಾಯಯುರ್ವೀರಾಶ್ಚತ್ವಾರೋ ದಕ್ಷಿಣಾಪಥಾತ್ ।
ತತ್ಪ್ರೇಪ್ಸವಃ ಶ್ರುತೋದಂತಾಸ್ತದೀಪ್ಸಿತಗುಣಾನ್ವಿತಾಃ ॥ ೧೬
ದ್ವಾಃಸ್ಥೈರಾವೇದಿತಾಂಸ್ತಾಂಶ್ಚ ಪ್ರವಿಷ್ಟಾನ್ ಪೃಚ್ಛತಿ ಸ್ಮ ಸಃ ।
ಮಹಾವರಾಹೋ ನೃಪತಿರನಂಗರತಿಸನ್ನಿಧೌ ॥ ೧೭
ನಾಮ ಕಿಂ ಕಸ್ಯ ಯುಷ್ಮಾಕಂ ಜಾತಿರ್ವಿಜ್ಞಾನಮೇವ ಚ ।
ಏತದ್ರಾಜವಚಃ ಶ್ರುತ್ವಾ ತೇಷ್ವೇಕಸ್ತಂ ವ್ಯಜಿಜ್ಞಪತ್ ॥ ೧೮
ಪಂಚಪಟ್ಟಿಕನಾಮಾಹಂ ಶೂದ್ರೋ ವಿಜ್ಞಾನಮಸ್ತಿ ಮೇ ।
ವಯಾಮಿ ಪ್ರತ್ಯಹಂ ಪಂಚ ಪಟ್ಟಿಕಾಯುಗಲಾನಿ ಯತ್ ॥ ೧೯

೧೦೦-೧೦೧. ಅವುಗಳಿಂದ ಒಂದು ಜೋಡಿಯನ್ನು ಬ್ರಾಹ್ಮಣನಿಗೆ ದಾನವಾಗಿ ಕೊಡುತ್ತೇನೆ ಎರಡನೆಯ ಜೋಡಿಯು ಪರಮೇಶನಿಗೆ. ಮೂರನೆಯ ಜೋಡಿಯನ್ನು ನಾನು ಸ್ವತಃ ಉಡುತ್ತೇನೆ. ನನಗೆ ಹೆಂಡತಿಯೊಬ್ಬಳು ಲಭಿಸಿದರೆ ಅವಳಿಗೆ ಆ ನಾಲ್ಕನೆಯ ಜೋಡಿಯನ್ನು ಕೊಡುತ್ತೇನೆ. ಐದನೆಯ ಜೋಡಿಯನ್ನು ಮಾರಿ ನಾನು ಜೀವನ ಯಾತ್ರೆಯನ್ನು ನಿರ್ವಹಿಸುತ್ತೇನೆ."

೧೦೨. ಅನಂತರ ಎರಡನೆಯವನು ಹೇಳಿದನು. "ನಾನು ಭಾಷಾಜ್ಞನೆಂಬ ಹೆಸರುಳ್ಳವನು. (ನಾನು) ವೈಶ್ಯನು. ನಾನು ಎಲ್ಲ ಮೃಗಪಕ್ಷಿಗಳ ಕೂಗನ್ನು ವಿಶೇಷವಾಗಿ ಅರಿತಿದ್ದೇನೆ"

೧೦೩. ಮೂರನೆಯವನು ಕೂಡ ಹೇಳಿದನು. "ನಾನು ಖಡ್ಗಧರನೆಂಬ ಕ್ಷತ್ರಿಯನು. ನಾನು ಖಡ್ಗಯುದ್ಧದಿಂದ (ಮಾತ್ರ) ಜಿತನಾಗುತ್ತೇನೆ. ಬೇರೆ ಯಾವುದರಿಂದಲೂ ಅಲ್ಲ."

೧೦೪. ಮತ್ತು ನಾಲ್ಕನೆಯವನು ಹೇಳಿದನು. "ನಾನು ಜೀವದತ್ತನೆಂಬ ದ್ವಿಜನು. ಗೌರಿಯ ಅನುಗ್ರಹ ಮತ್ತು ವಿದ್ಯೆಗಳಿಂದ ನಾನು ಸತ್ತುಹೋದ ಹೆಂಗಸನ್ನು ಬದುಕಿಸಬಲ್ಲೆ"

೧೦೫. ಹೀಗೆ ಹೇಳಿದ ಅವರ ಪೈಕಿ ಶೂದ್ರ, ವೈಶ್ಯ ಮತ್ತು ಕ್ಷತ್ರಿಯರು ಮೂರು ಮಂದಿಯೂ ಪ್ರತ್ಯೇಕವಾಗಿ ತಮ್ಮ ರೂಪದ ಬಗ್ಗೆಯೂ ಶೌರ್ಯದ ಬಗ್ಗೆಯೂ ಬಲದ ಬಗ್ಗೆಯೂ ಹೇಳಿಕೊಂಡರು.

೧೦೬. ಆ ಬ್ರಾಹ್ಮಣನಾದರೋ ರೂಪವನ್ನು ಬಿಟ್ಟು ಬಲ ಮತ್ತು ಶೌರ್ಯಗಳ ಬಗ್ಗೆ ಹೇಳಿದನು. ಆಗ ಮಹಾವರಾಹರಾಜನು ತನ್ನ ದ್ವಾರಪಾಲಕನನ್ನು ಕುರಿತು ಹೇಳಿದನು.

---

ತೇಭ್ಯ ಏಕಂ ಪ್ರಯಚ್ಛಾಮಿ ಬ್ರಾಹ್ಮಣಾಯ ದದಾಮಿ ಚ ।
ದ್ವಿತೀಯಂ ಪರಮೇಶಾಯ ತೃತೀಯಂ ಚ ವಸೇ ಸ್ವಯಮ್ ॥ ೧೦೦
ಚತುರ್ಥಂ ಮೇ ಭವೇದ್ಭಾರ್ಯಾ ಯದಿ ತಸ್ಯೈ ದದಾಮಿ ತತ್ ।
ಶರೀರಯಾತ್ರಾಂ ವಿಕ್ರೀಯ ಪಂಚಮೇನ ಕರೋಮ್ಯಹಮ್ ॥ ೧೦೧
ಅಥ ದ್ವಿತೀಯೋಽಪ್ಯಾಚಖ್ಯಾವಹಂ ಭಾಷಾಜ್ಞಸಂಜ್ಞಕಃ ।
ವೈಶ್ಯೋ ರುತಂ ವಿಜಾನಾಮಿ ಸರ್ವೇಷಾಂ ಮೃಗಪಕ್ಷಿಣಾಮ್ ॥ ೧೦೨
ತತಸ್ತೃತೀಯೋಽಪ್ಯವದದಹಂ ಖಡ್ಗಧರಾಭಿಧಃ ।
ಕ್ಷತ್ರಿಯಃ ಖಡ್ಗಯುದ್ಧೇನ ಜೀಯೇ ನಾನ್ಯೇನ ಕೇನಚಿತ್ ॥ ೧೦೩
ಚತುರ್ಥಶ್ಚಾಬ್ರವೀಜ್ಜೀವದತ್ತಾಖ್ಯೋಽಹಂ ದ್ವಿಜೋತ್ತಮಃ ।
ಗೌರೀಪ್ರಸಾದವಿದ್ಯಾಭ್ಯಾಂ ಜೀವಯಾಮಿ ಮೃತಾಂ ಸ್ತ್ರಿಯಮ್ ॥ ೧೦೪
ಏವಮುಕ್ತವತಾಂ ತೇಷಾಂ ಶೂದ್ರವಿಟ್ಕ್ಷತ್ರಿಯಾಸ್ತ್ರಯಃ ।
ರೂಪಂ ಶೌರ್ಯಂ ಬಲಂ ಚೈವ ಶಶಂಸುಃ ಪೃಥಗಾತ್ಮನಃ ॥ ೧೦೫
ಬ್ರಾಹ್ಮಣೋ ರೂಪವರ್ಜಂ ತು ಬಲವೀರ್ಯಂ ಶಶಂಸ ಸಃ ।
ತತೋ ಮಹಾವರಾಹಃ ಸ್ವಂ ಕ್ಷತ್ತಾರಮವದನ್ನೃಪಃ ॥ ೧೦೬

೧೦೭. ""ಇವರೆಲ್ಲರನ್ನೂ ಕರೆದುಕೊಂಡು ಹೋಗಿ ನೀನು ನಿನ್ನ ಮನೆಯಲ್ಲಿ ಈಗ ವಿಶ್ರಾಂತಿಗೊಳಿಸು.” ಅದನ್ನು ಕೇಳಿ ಹಾಗೆಯೇ ಆಗಲೆಂದು ಹೇಳಿ ಆ ದ್ವಾರಪಾಲಕನು ಅವರನ್ನು (ತನ್ನ) ಮನೆಗೆ ಒಯ್ದನು.

೧೦೮. ಅನಂತರ ಆ ರಾಜನು ಪುತ್ರಿಯಾದ ಅನಂಗರತಿಯನ್ನು ಕೇಳಿದನು. ""ಪುತ್ರಿಯೇ ! ಈ ನಾಲ್ಕು ಮಂದಿ ವೀರರ ಪೈಕಿ ಯಾರನ್ನು ಒಪ್ಪುತ್ತೀಯೆ ?”

೧೦೯. ಇದನ್ನು ಕೇಳಿ ಅನಂಗರತಿಯು ಹೇಳಿದಳು. ""ತಂದೆಯೇ ! ಈ ನಾಲ್ಕು ಮಂದಿಯಲ್ಲಿ ಯಾವನೂ ನನಗೆ ಅಭಿಮತನಲ್ಲ.”

೧೧೦. ಒಬ್ಬ ಶೂದ್ರನು ನೇಯ್ಗೆಯವನು. ಅವನ ಗುಣಗಳಿಂದ ಏನು ಮಾಡಲು ಸಾಧ್ಯ ? ಎರಡನೆಯವನು ವೈಶ್ಯನು. ಅವನು ತಿಳಿದಿರುವ ಪಕ್ಷಿ ಮೊದಲಾದವುಗಳ ಶಬ್ದಗಳಿಂದ ಏನು ಪ್ರಯೋಜನ ?

೧೧೧. ನಾನು ಕ್ಷತ್ರಿಯಳಾಗಿದ್ದು ಅವರಿಬ್ಬರಿಗೂ ನನ್ನನ್ನು ಹೇಗೆ ಸಮರ್ಪಿಸಿಕೊಳ್ಳಲಿ ? ಮೂರನೆಯವನು ನನಗೆ ಸಮಾನವರ್ಣನು. ಅವನು ಗುಣವಂತನಾದ ಕ್ಷತ್ರಿಯನಾಗಿದ್ದಾನೆ.

೧೧೨. ಆದರೆ ಸೇವೆಯಿಂದ ಜೀವನ ಮಾಡುವ ಆ ದರಿದ್ರನು ಪ್ರಾಣವನ್ನು ಮಾರುವವನು. ಪೃಥ್ವಿಗೆ ಒಡೆಯನ ಪುತ್ರಿಯಾಗಿದ್ದು ನಾನು ಅವನ ಗೃಹಿಣಿಯಾಗಿ ಹೇಗೆ ಆಗಲಿ ?

---

ನೀತ್ವಾ ವಿಶ್ರಮಯ್ಯೈತಾಂಸ್ತ್ವಂ ಸಂಪ್ರತಿ ಸ್ವಗೃಹೇಽಖಿಲಾನ್ ।
ತಚ್ಛ್ರುತ್ವಾ ಸ ತಥೇತ್ಯುಕ್ತ್ವಾ ಕ್ಷತ್ತಾ ತಾನನಯದ್ಗೃಹಮ್ ॥ ೧೦೭
ತತೋಽಬ್ರವೀತ್ಸ ರಾಜಾ ತಾಮನಂಗರತಿಮಾತ್ಮಜಾಮ್ ।
ಏಷಾಂ ಚತುರ್ಣಾಂ ವೀರಾಣಾಂ ಪುತ್ರಿಕೋಽಭಿಮತಸ್ತವ ॥ ೧೦೮
ಶ್ರುತ್ವೈತತ್ ಪಿತರಂ ತಂ ಸಾ ಪ್ರಾಹಾನಂಗರತಿಸ್ತದಾ ।
ಚತುರ್ಣಾಮಪಿ ತಾತೈಷಾಂ ನ ಕೋಽಪ್ಯಭಿಮತೋ ಮಮ ॥ ೧೦೯
ಶೂದ್ರಶ್ಚ ವಾಯಕಶ್ಚೈಕಃ ಕ್ರಿಯತೇ ತಸ್ಯ ಕಿಂ ಗುಣೈಃ ।
ವೈಶ್ಯೋ ದ್ವಿತೀಯಃ ಪಕ್ಷ್ಯಾದಿರುತೈರ್ಜ್ಞಾತೈಶ್ಚ ತಸ್ಯ ಕಿಮ್ ॥ ೧೧೦
ತಾಭ್ಯಾಂ ಕಥಮಹಂ ದದ್ಯಾಮಾತ್ಮಾನಂ ಕ್ಷತ್ರಿಯಾ ಸತೀ ।
ತೃತೀಯಸ್ತುಲ್ಯವರ್ಣೋ ಮೇ ಭವತಿ ಕ್ಷತ್ರಿಯೋ ಗುಣೀ ॥ ೧೧೧
ಕಿಂ ತು ಸೇವೋಪಜೀವೀ ಸ ದರಿದ್ರಃ ಪ್ರಾಣವಿಕ್ರಯೀ ।
ಪೃಥ್ವೀಪತಿಸುತಾ ಭೂತ್ವಾ ಕಥಂ ಸ್ಯಾಂ ತಸ್ಯ ಗೇಹಿನೀ ॥ ೧೧೨

೧೧೩. ನಾಲ್ಕನೆಯವನು ಬ್ರಾಹ್ಮಣನು. (ಆ) ಜೀವದತ್ತನೂ ಕೂಡ ನನಗೆ ಅಭಿಮತನಲ್ಲ. ಅವನು ವಿಕೃತವಾಗಿದ್ದಾನೆ. ಅವನ ಆಚರಣೆಯೂ ವಿಕಾರ. ಅಲ್ಲದೆ ಅವನು ಪತಿತನೂ ವೇದರಹಿತನೂ ಆಗಿದ್ದಾನೆ

೧೧೪. ಅವನನ್ನು ವಾಸ್ತವವಾಗಿ ನೀನು ಶಿಕ್ಷಿಸಬೇಕು. ಅಂತಹವನಿಗೆ ನನ್ನನ್ನು ನೀನು ಸಮರ್ಪಿಸುವಿಯೇನು ? ತಂದೆಯೇ ! ನೀನು ವರ್ಣಾಶ್ರಮಗಳ ಧರ್ಮದ ರಕ್ಷಣೆ ಮಾಡುವ ರಾಜನು.

೧೧೫. ರಾಜನಾದ ಖಡ್ಗಶೂರನಿಗಿಂತಲೂ ಧರ್ಮಶೂರನು ಶ್ರೇಷ್ಠನಾಗುತ್ತಾನೆ. ಸಾವಿರಾರು ಮಂದಿ ಖಡ್ಗಶೂರ (ರಿಗೆ) ಧರ್ಮಶೂರನು ಒಡೆಯನಾಗುವನು."

೧೧೬. ಈ ಮುಂತಾಗಿ ಹೇಳಿದ ಪುತ್ರಿಯನ್ನು ಅಂತಃಪುರಕ್ಕೆ ಕಳುಹಿಸಿ ರಾಜನು ಸ್ನಾನಾದಿಗಳಿಗಾಗಿ ಎದ್ದನು.

೧೧೭. ಎರಡನೆಯ ದಿವಸ ಆ ವೀರರು ದ್ವಾರಪಾಲಕನ ಮನೆಯಿಂದ ಹೊರಗೆ ಹೊರಟು ಕೌತುಕದಿಂದ ಆ ನಗರದಲ್ಲಿ ಸಂಚರಿಸಿದರು.

೧೧೮. ಅಷ್ಟರಲ್ಲಿ ಆ ನಗರದಲ್ಲಿ ಪದ್ಮಕವಲ ಎಂಬ ದುಷ್ಟ ಆನೆಯು ಗಜಬಂಧನವನ್ನು ಮುರಿದು ಜನರನ್ನು ತುಳಿದುಹಾಕುತ್ತಾ ಮದದಿಂದ ಗಜಶಾಲೆಯ ಹೊರಗೆ ಬಂದಿತು.

---

ಚತುರ್ಥೋ ಬ್ರಾಹ್ಮಣೋ ಜೀವದತ್ತೋಽಪ್ಯಭಿಮತೋ ನ ಮೇ ।
ಸ ವಿರೂಪೋ ವಿಕರ್ಮಸ್ಥಃ ಪತಿತೋ ವೇದವರ್ಜಿತಃ ॥ ೧೧೩
ಸ ತೇ ದಂಡಯಿತುಂ ಯುಕ್ತಃ ಕಿಂ ನು ತಸ್ಮೈ ದದಾಸಿ ಮಾಮ್ ।
ವರ್ಣಾಶ್ರಮಾಣಾಂ ಧರ್ಮಸ್ಯ ರಾಜಾ ತ್ವಂ ತಾತ ರಕ್ಷಿತಾ ॥ ೧೧೪
ಖಡ್ಗಶೂರಾಚ್ಚ ನೃಪತೇರ್ಧರ್ಮಶೂರಃ ಪ್ರಶಸ್ಯತೇ ।
ಖಡ್ಗಶೂರಸಹಸ್ರಾಣಾಂ ಧರ್ಮಶೂರೋ ಭವೇತ್ಪತಿಃ ॥ ೧೧೫
ಇತ್ಯಾದ್ಯುಕ್ತವತೀಮೇತಾಂ ಸುತಾಮಂತಃಪುರಂ ನಿಜಮ್ ।
ವಿಸೃಜ್ಯ ಚ ಸಮುತ್ತಸ್ಥೌ ಸ್ನಾನಾದ್ಯರ್ಥಂ ಸ ಭೂಪತಿಃ ॥ ೧೧೬
ದ್ವಿತೀಯೇಽಹ್ನಿ ಚ ತೇ ವೀರಾ ಗೃಹಾತ್ ಕ್ಷತ್ತುರ್ವಿನಿರ್ಗತಾಃ ।
ಬಭ್ರಮುರ್ನಗರೇ ತತ್ರ ಚತ್ವಾರೋಽಪಿ ಸಕೌತುಕಾಃ ॥ ೧೧೭
ತಾವಚ್ಚ ಪದ್ಮಕವಲೋ ನಾಮಾತ್ರ ವ್ಯಾಲವಾರಣಃ ।
ಭಗ್ನಾಲಾನೋ ಜನಂ ಮಥ್ನನ್ ಶಾಲಾಯಾ ನಿರಗಾನ್ಮದಾತ್ ॥ ೧೧೮

೧೯. ಆ ಮಹಾಗಜವು ಆ ವೀರರನ್ನು ನೋಡಿ ಅವರನ್ನು ಕೊಂದು ಹಾಕಲು (ಅವರ ಕಡೆಗೆ) ಓಡಿತು. ಅವರೂ ಆಯುಧಗಳನ್ನು ಮೇಲೆತ್ತಿ ಹಿಡಿದು ಆ ಆನೆಗೆ ಅಭಿಮುಖವಾಗಿ ಓಡಿದರು.

೨೦. ಆಗ ಅವರ ಮಧ್ಯದಲ್ಲಿದ್ದ ಖಡ್ಗಧರನೆಂಬ ಕ್ಷತ್ರಿಯನು ಆ ಇತರ ಮೂರು ಮಂದಿಯನ್ನೂ ನಿವಾರಿಸಿ ಒಬ್ಬನೇ ಆ ಗಜದ ಮೇಲೆರಗಿದನು.

೨೧. ಘೀಳಿಡುತ್ತಿದ್ದ ಆ ಆನೆಯ ಚಾಚಿದ ಸೊಂಡಿಲನ್ನು ಒಂದೇ ಏಟಿನಿಂದ ಕಮಲದ ಗೆಡ್ಡೆಯಂತೆ ಅನಾಯಾಸದಿಂದ ಕತ್ತರಿಸಿದನು.

೨೨. (ಅದರ) ಕಾಲುಗಳ ಮಧ್ಯದಲ್ಲಿ ನುಗ್ಗಿ ಚಾಕಚಕ್ಯತೆಯನ್ನು ತೋರಿಸಿ ಆ ಆನೆಯ ಬೆನ್ನಿನ ಮೇಲೆ ಎರಡನೆಯ ಹೊಡೆತವನ್ನು ಕೊಟ್ಟನು.

೨೩. ಮೂರನೆಯ ಹೊಡೆತದಿಂದ ಆ ಆನೆಯ ಎರಡು ಕಾಲುಗಳನ್ನೂ ಕತ್ತರಿಸಿದನು. ಅನಂತರ ಆರ್ಭಟವನ್ನು ಬಿಟ್ಟು ಆ ಆನೆಯು ಕೆಳಗೆ ಬಿದ್ದು ಸತ್ತುಹೋಯಿತು.

೨೪. ಅವನ ಆ ಪರಾಕ್ರಮವನ್ನು ನೋಡಿ ಎಲ್ಲ ಜನರೂ ಆಶ್ಚರ್ಯಪಟ್ಟರು. ರಾಜನಾದ ಮಹಾವರಾಹನೂ ಅದನ್ನು ತಿಳಿದು ಆಶ್ಚರ್ಯಪಟ್ಟನು.

೨೫. ಮಾರನೆಯ ದಿವಸ ರಾಜನು ಗಜಾರೂಢನಾಗಿ ಬೇಟೆಗಾಗಿ ಹೊರಟನು. ಖಡ್ಗಧರ ಮೊದಲಾದ ನಾಲ್ಕುಮಂದಿ ಆ ವೀರರೂ ಅವನನ್ನು ಹಿಂಬಾಲಿಸಿದರು.

---

ಸೋಽಪ್ಯಧಾವಚ್ಚ ತಾನ್ ದೃಷ್ಟ್ವಾ ವೀರಾನ್ ಹಂತುಂ ಮಹಾಗಜಃ ।
ತೇ ಚಾಪಿ ತಸ್ಯಾಭಿಮುಖಂ ಪ್ರಾಧಾವನ್ನುದ್ಯತಾಯುಧಾಃ ॥ ೧೯
ತತಃ ಖಡ್ಗಧರಾಖ್ಯೋ ಯಸ್ತನ್ಮಧ್ಯೇ ಕ್ಷತ್ರಿಯಃ ಸ ತಾನ್ ।
ಅನ್ಯಾನ್ನಿವಾರ್ಯ ತ್ರೀನೇಕೋ ಗಜಮಭ್ಯಾಪಪಾತ ತಮ್ ॥ ೨೦
ಲುಲಾವ ಚ ಕರಂ ತಸ್ಯ ಗರ್ಜತೋಽಗ್ರಪ್ರಸಾರಿತಮ್ ।
ಏಕೇನಾಪಿ ಪ್ರಹಾರೇಣ ಬಿಸಕಂದಾವಹೇಲಯಾ ॥ ೨೧
ಪಾದಮಧ್ಯೇ ಚ ನಿರ್ಗತ್ಯ ದರ್ಶಯಿತ್ವಾ ಚ ಲಾಘವಮ್ ।
ಪ್ರಹಾರಂ ಪ್ರದದೌ ಪೃಷ್ಠೇ ದ್ವಿತೀಯಂ ತಸ್ಯ ದಂತಿನಃ ॥ ೨೨
ತೃತೀಯೇನ ಚ ಚಿಚ್ಛೇದ ತಸ್ಯ ಪಾದಾವುಭಾವಪಿ ।
ತತೋ ಮುಕ್ತಾರಟಿರ್ಹಸ್ತೀ ಪಪಾತ ಚ ಮಮಾರ ಚ ॥ ೨೩
ತಂ ದೃಷ್ಟ್ವಾ ವಿಕ್ರಮಂ ತಸ್ಯ ಜನಃ ಸರ್ವೋ ವಿಸಿಸ್ಮಿಯೇ ।
ರಾಜಾ ಮಹಾವರಾಹಸ್ತದ್ ಬುದ್ಧ್ವಾ ಚಿತ್ರೀಯತೇ ಸ್ಮ ಚ ॥ ೨೪
ಅನ್ಯೇದ್ಯುಃ ಸ ಗಜಾರೂಢೋ ಮೃಗಯಾಯೈ ನೃಪೋ ಯಯೌ ।
ವೀರಾಃ ಖಡ್ಗಧರಾದ್ಯಾಸ್ತೇ ಚತ್ವಾರೋಽಪಿ ತಮನ್ವಗುಃ ॥ ೨೫

೧೨೬. ಸೈನ್ಯಸಮೇತನಾದ ರಾಜನು ಹುಲಿ, ಜಿಂಕೆ, ಹಂದಿಗಳನ್ನು ಕೊಲ್ಲುತ್ತಿರಲು ಕೋಪಗೊಂಡ ಸಿಂಹಗಳು ಆನೆಗಳ ಗರ್ಜನೆಗಳನ್ನು ಕೇಳಿ ಓಡಿಬಂದವು.

೧೨೭. ಆಗ ಖಡ್ಗಧರನು ಮೇಲೆರಗಿ ಬೀಳುತ್ತಿರುವ ಒಂದು ಸಿಂಹವನ್ನು ತೀಕ್ಷ್ಣವಾದ ಒಂದು ಖಡ್ಗಪ್ರಹಾರದಿಂದ ಎರಡು ಪಾಲು ಮಾಡಿದನು.

೧೨೮. ಎರಡನೆಯ ಸಿಂಹದ ಕಾಲನ್ನು ಎಡಗೈಯಿಂದ ಹಿಡಿದುಕೊಂಡೇ ನೆಲಕ್ಕೆ ಬಡಿದು ಕೊಂದು ಹಾಕಿದನು.

೧೨೯. ಭಾಷಾಜ್ಞ, ಜೀವದತ್ತ ಮತ್ತು ಪಂಚಪಟ್ಟಿಕ ಕೂಡ ಒಬ್ಬೊಬ್ಬರೂ ಒಂದೊಂದು ಸಿಂಹವನ್ನು ಅದೇ ರೀತಿಯಾಗಿಯೇ ನೆಲಕ್ಕೆ ಬಡಿದರು.

೧೩೦. ಈ ರೀತಿಯಾಗಿ ರಾಜನು ನೋಡುತ್ತಿರುವಂತೆಯೇ ಪಾದಚಾರಿಗಳಾದ (ಆ) ವೀರರು ಅನಾಯಾಸವಾಗಿ ಅನೇಕ ಸಿಂಹ, ಹುಲಿ ಮುಂತಾದವುಗಳನ್ನು ಕ್ರಮವಾಗಿ ಕೊಂದುಹಾಕಿದರು.

೧೩೧. ಅನಂತರ ಸಂತೋಷಾಶ್ಚರ್ಯಗಳಿಂದ ಕೂಡಿದ ಆ ಭೂಪತಿಯು ಬೇಟೆಯನ್ನು ಮುಗಿಸಿ ತನ್ನ ಪಟ್ಟಣವನ್ನು ಪ್ರವೇಶಿಸಿದನು. ಆ ವೀರರೂ ದ್ವಾರಪಾಲಕನ ಮನೆಗೆ ಹೋದರು.

---

ತತ್ರ ವ್ಯಾಘ್ರಮೃಗಕ್ರೋಡಾನ್ ಸಸೈನ್ಯೇ ರಾಜ್ಞಿ ನಿಘ್ನತಿ ।
ಅಧಾವನ್ ಕುಪಿತಾಃ ಸಿಂಹಾಃ ಶ್ರುತವಾರಣಬೃಂದಿತಾಃ ॥ ೧೨೬

ಅಭ್ಯಾಪತಂತಮೇಕಂ ಚ ಸಿಂಹಂ ಖಡ್ಗಧರೋಽಥ ಸಃ ।
ಏಕೇನ ತೀಕ್ಷ್ಣನಿಸ್ತ್ರಿಂಶಪ್ರಹಾರೇಣ ದ್ವಿಧಾಕರೋತ್ ॥ ೧೨೭

ದ್ವಿತೀಯಂ ಚ ಗೃಹೀತ್ವೈವ ಚರಣೇ ವಾಮಪಾಣಿನಾ ।
ಆಸ್ಫೋಟ್ಯ ಭೂತಲೇ ಸಿಂಹಂ ಚಕಾರ ಗತಜೀವಿತಮ್ ॥ ೧೨೮

ಭಾಷಾಜ್ಞೋ ಜೀವದತ್ತಶ್ಚ ಪಂಚಪಟ್ಟಿಕ ಏವ ಚ ।
ಏಕೈಕಃ ಸಿಂಹಮೇಕೈಕಂ ತಥೈವಾಸ್ಫೋಟಯದ್ಭುವಿ ॥ ೧೨೯

ಏವಂ ಕ್ರಮೇಣ ತೇ ರಾಜ್ಞಃ ಪಶ್ಯತಃ ಪಾದಚಾರಿಭಿಃ ।
ಲೀಲಯಾ ಬಹವೋ ವೀರೈಃಸಿಂಹವ್ಯಾಘ್ರಾದಯೋ ಹತಾಃ ॥ ೧೩೦

ತತಃ ಸವಿಸ್ಮಯಸ್ತುಷ್ಟಃ ಕೃತಾಖೇಟಃ ಸ ಭೂಪತಿಃ ।
ವಿವೇಶ ಸ್ವಪುರಂ ತೇಽಪಿ ವೀರಾಃ ಕ್ಷತ್ತುರ್ಗೃಹಂ ಯಯುಃ ॥ ೧೩೧

೧೩೨. ರಾಜನು ಆಯಾಸಗೊಂಡಿದ್ದರೂ ಅಂತಃಪುರವನ್ನು ಪ್ರವೇಶಿಸಿ ತತ್‌ಕ್ಷಣದಲ್ಲಿ ಪುತ್ರಿಯಾದ ಅನಂಗರತಿಯನ್ನು ಅಲ್ಲಿಗೇ ಕರೆತರಿಸಿದನು.

೧೩೩. ಬೇಟೆಯಲ್ಲಿ ತಾನು ನೋಡಿದಂತೆಯೇ ಆ ವೀರರ ಪೈಕಿ ಒಬ್ಬೊಬ್ಬನ ಪರಾಕ್ರಮವನ್ನೂ ತಿಳಿಸಿದನು. ಅವಳಿಗೆ ಅತ್ಯಂತ ಆಶ್ಚರ್ಯವಾಯಿತು. ಮಹಾರಾಜನು ಅವಳನ್ನು ಕುರಿತು ಹೇಳಿದನು.

೧೩೪–೧೩೫. ಒಂದು ವೇಳೆ ಪಂಚಪಟ್ಟಿಕ ಮತ್ತು ಭಾಷಾಜ್ಞ ಇಬ್ಬರೂ ಅಸವರ್ಣರಾಗಿರುವುದಾದರೆ, ಬ್ರಾಹ್ಮಣನಾಗಿದ್ದರೂ ಜೀವದತ್ತನು ರೂಪಹೀನನೂ ದುರಾಚಾರಿಯೂ ಆಗಿರುವುದಾದರೆ, ಕ್ಷತ್ರಿಯನೂ ಉತ್ತಮ ಪ್ರಮಾಣವುಳ್ಳವನೂ (ಅಳತೆಯುಳ್ಳವನೂ) ಉತ್ತಮ ರೂಪವಂತನೂ ಬಲವಿಕ್ರಮಶಾಲಿಯೂ ಆದ ಆ ಖಡ್ಗಧರನಲ್ಲಿ ಏನು ದೋಷವು ಇದೆ. ?

೧೩೬. ಅವನು ಅಂತಹ ಆನೆಯನ್ನೂ ಕೊಂದನು. ಕಾಲುಗಳನ್ನು ಹಿಡಿದು ನೆಲದಲ್ಲಿ ಸಿಂಹಗಳನ್ನು ಬಡಿದನು ಮತ್ತು ಇತರ ಪ್ರಾಣಿಗಳನ್ನು ಖಡ್ಗದಿಂದ ಕೊಂದು ಹಾಕಿದನು.

೧೩೭. ಒಂದ ವೇಳೆ ಅವನು ದರಿದ್ರ ಹಾಗೂ ಸೇವಕ ಎಂಬುದೇ ಅವನ ದೋಷವೆನ್ನುವು ದಾದರೆ ನಾನು ಅವನನ್ನು ಇತರರಿಗೆ ಸೇವ್ಯನಾದ ಸ್ವಾಮಿಯನ್ನಾಗಿ ಒಂದು ಕ್ಷಣದಲ್ಲಿ ಮಾಡುವೆನು.

---

ಸ ಚ ರಾಜಾ ಪ್ರವಿಶ್ಯಾಂತಃಪುರಂ ಶ್ರಾಂತೋಽಪಿ ತತ್‌ಕ್ಷಣಮ್ ।
ತತ್ರೈವಾನಾಯಯಾಮಾಸ ತಾಮನಂಗರತಿಂ ಸುತಾಮ್ ॥ ೧೩೨
ಆಖ್ಯಾಯ ತೇಷಾಂ ವೀರಾಣಾಮೇಕೈಕಸ್ಯ ಪರಾಕ್ರಮಮ್ ।
ಆಖೇಟಕೇ ಯಥಾದೃಷ್ಟಂ ತಾಮುವಾಚಾತಿವಿಸ್ಮಿತಾಮ್ ॥ ೧೩೩
ಪಂಚಪಟ್ಟಿಕಭಾಷಾಜ್ಞಾವಸವರ್ಣಾವುಭೌ ಯದಿ ।
ವಿಪ್ರೋಽಪಿ ಜೀವದತ್ತಶ್ಚೇದ್ರೂಪಹೀನೋ ವಿಕರ್ಮಕೃತ್ ॥ ೧೩೪
ತತ್‌ಕ್ಷತ್ರಿಯಸ್ಯ ದೋಷೋಽಸ್ತಿ ತಸ್ಯ ಖಡ್ಗಧರಸ್ಯ ಕಃ ।
ಸುಪ್ರಮಾಣಸುರೂಪಸ್ಯ ಬಲವಿಕ್ರಮಶಾಲಿನಃ ॥ ೧೩೫
ಯೇನ ಹಸ್ತೀ ಹತಸ್ತಾದೃಗ್ಯಃ ಪಿನಷ್ಟಿ ಚ ಭೂತಲೇ ।
ಗೃಹೀತ್ವಾ ಪಾದತಃ ಸಿಂಹಾನ್ ಖಡ್ಗೇನಾನ್ಯಾನ್ನಿಹಂತಿ ಚ ॥ ೧೩೬
ದರಿದ್ರಃ ಸೇವಕಶ್ಚೇತಿ ದೋಷಸ್ತಸ್ಯೋಚ್ಯತೇ ಯದಿ ।
ಅಹಂ ತಂ ಸೇವ್ಯಮನ್ಯೇಷಾಂ ಕರಿಷ್ಯಾಮೀಶ್ವರಂ ಕ್ಷಣಾತ್ ॥ ೧೩೭

೧೩೮. ಆದುದರಿಂದ ಪುತ್ರಿಯೇ । ಒಂದು ವೇಳೆ ನಿನಗೆ ರುಚಿಸುವುದಾದರೆ ಅವನನ್ನು ಪತಿಯಾಗಿ ವರಿಸು.” ಹೀಗೆ ಆ ತಂದೆ ಹೇಳಿದಾಗ ಅನಂಗರತಿಯು ಅವನನ್ನು ಕುರಿತು ಹೇಳಿದಳು.

೧೩೯. 'ಹಾಗಿದ್ದರೆ ನೀನು ಆ ಎಲ್ಲ ವೀರರನ್ನೂ ಇಲ್ಲಿಗೆ ಕರೆತರಿಸಿ ಜ್ಯೌತಿಷಿಯನ್ನು ಕೇಳು. ಆ ಜ್ಯೌತಿಷಿಯು ಏನು ಹೇಳುತ್ತಾನೆಂಬುದನ್ನು ನೋಡೋಣ.'

೧೪೦. ಈ ರೀತಿ ಆ ಅನಂಗರತಿ ಹೇಳಿದ ಮೇಲೆ ರಾಜನು ಆ ವೀರರನ್ನು ಅಲ್ಲಿಗೆ ಕರೆತರಿಸಿ ಅವರ ಸಾನ್ನಿಧ್ಯದಲ್ಲಿ ಅನುನಯದಿಂದ ಜ್ಯೌತಿಷಿಯನ್ನು ತಾನೇ ಕೇಳಿದನು.

೧೪೧. '"ಅನಂಗರತಿಗೆ ಇವರ ಮಧ್ಯದಲ್ಲಿ ಯಾವನೊಡನೆ ಪರಸ್ಪರ ಆನುಕೂಲ್ಯವಿದೆ ? ಇವಳಿಗೆ ಶುಭವಾದ ಲಗ್ನವು ಯಾವಾಗ ಆಗುವುದು ?”

೧೪೨. ಅದನ್ನು ಕೇಳಿ ಅವನ ನಕ್ಷತ್ರವನ್ನು ತಿಳಿದು ಆ ಗಣಕಶ್ರೇಷ್ಠನು ಚಿರಕಾಲ ಲೆಕ್ಕಹಾಕಿ ಆ ರಾಜನನ್ನು ಕುರಿತು ಹೇಳಿದನು.

೧೪೩. '"ಪ್ರಭುವೇ ! ನೀನು ನನ್ನ ವಿಷಯದಲ್ಲಿ ಕೋಪಗೊಳ್ಳುವುದಿಲ್ಲವಾದರೆ ಸ್ಪಷ್ಟವಾಗಿ ವಿಜ್ಞಾಪಿಸುತ್ತೇನೆ. ನಿನ್ನ ಮಗಳಿಗೆ ಇವರ ಪೈಕಿ ಒಬ್ಬನೊಡನೆಯೂ ಅನುಕೂಲತೆಯು ಇಲ್ಲ.

---

ತತ್ತಂ ವೃಣೀಷ್ವ ಭರ್ತಾರಂ ಯದಿ ತೇ ಪುತ್ರಿ ರೋಚತೇ ।
ಇತ್ಯುಕ್ತಾ ತೇನ ಸಾನಂಗರತಿಃ ಪಿತ್ರಾ ಜಗಾದ ತಮ್ ॥ ೧೩೮
ತರ್ಹ್ಯಾನೀತೇಷು ಸರ್ವೇಷು ತೇಷು ವೀರೇಷ್ವಿಹ ತ್ವಯಾ ।
ಗಣಕಃ ಪೃಚ್ಛ್ಯತಾಂ ತಾವತ್ ಪಶ್ಯಾಮಃ ಕಂ ಬ್ರವೀತಿ ಸಃ ॥ ೧೩೯
ಏವಂ ತಯೋಕ್ತಃ ಸ ನೃಪೋ ವೀರಾನಾನಾಯ್ಯ ತತ್ರ ತಾನ್ ।
ತತ್ಸನ್ನಿಧೌ ಸಾನುರೋಧಃ ಪಪ್ರಚ್ಛ ಗಣಕಂ ಸ್ವಯಮ್ ॥ ೧೪೦
ಪಶ್ಯಾನಂಗರತೇರೇಷಾಂ ಮಧ್ಯಾತ್ಕೇನ ಸಮಂ ಮಿಥಃ ।
ಅಸ್ತ್ಯಾನುಕೂಲ್ಯಂ ಲಗ್ನಶ್ಚ ಭವೇತ್ತಸ್ಯಾಃ ಕದಾ ಶುಭಃ ॥ ೧೪೧
ತಚ್ಛ್ರುತ್ವಾ ಪೃಷ್ಟನಕ್ಷತ್ರಸ್ತೇಷಾಂ ಸಗಣಕೋತ್ತಮಃ ।
ಗಣಯಿತ್ವಾ ಚಿರಂ ಕಾಲಂ ರಾಜಾನಂ ತಮಭಾಷತ ॥ ೧೪೨
ನ ಚೇತ್ಕುಪ್ಯಸಿ ಮೇ ದೇವ ಸ್ಫುಟಂ ವಿಜ್ಞಾಪಯಾಮಿ ತತ್ ।
ಅಸ್ತಿ ತ್ವದ್ದುಹಿತುರ್ನೈಷಾಮೇಕೇನಾಪ್ಯನುಕೂಲತಾ ॥ ೧೪೩

೧೫೪. ಇವಳು ಇಲ್ಲಿ ಶಾಪಚ್ಯುತಳಾಗಿರುವ ವಿದ್ಯಾಧರಿಯಾದುದರಿಂದ ಇವಳಿಗೆ ಇಲ್ಲಿ ವಿವಾಹವಾಗುವುದಿಲ್ಲ. ಆ ಶಾಪವು ಇವಳಿಗೆ ಇನ್ನು ಮೂರು ತಿಂಗಳುಗಳಲ್ಲಿ ಕೊನೆಯಾಗುವುದು.

೧೫೫ ಆದುದರಿಂದ ಮೂರು ತಿಂಗಳುಗಳವರೆಗೆ ಇವರು ಇಲ್ಲಿ ಪ್ರತೀಕ್ಷೆ ಮಾಡಲಿ. ಇವಳು ತನ್ನ ಲೋಕಕ್ಕೆ ಹೋಗದಿದ್ದರೆ ಅನಂತರ ಇದು ಆಗುವುದು."

೧೫೬ ಮುಹೂರ್ತಜ್ಞನ ಈ ಮಾತನ್ನು ಅಲ್ಲಿದ್ದವರೆಲ್ಲರೂ ನಂಬಿದರು. ಮತ್ತು ವೀರರು ಅಲ್ಲಿಯೇ ಮೂರು ತಿಂಗಳುಗಳ ಕಾಲ ಇದ್ದರು.

೧೫೭ ಮೂರು ತಿಂಗಳು ಕಳೆದ ಮೇಲೆ ರಾಜನು ಆ ವೀರರನ್ನೂ ಗಣಕನನ್ನೂ ಅನಂಗರತಿಯನ್ನೂ ತನ್ನೆದುರಿಗೆ ಕರೆತರಿಸಿದನು.

೧೫೮. ಆಗ ಇದ್ದಕ್ಕಿದ್ದಂತೆ ಮಗಳು ಹೆಚ್ಚು ಸುಂದರಿಯಾಗಿ ಕಾಣುತ್ತಿದ್ದುದನ್ನು ನೋಡಿ ರಾಜನು ಹರ್ಷಗೊಂಡನು. ಗಣಕನಾದರೋ ಅವಳಿಗೆ ಸಮಯವು (ಮೃತ್ಯುವು) ಪ್ರಾಪ್ತವಾಯಿತೆಂದು ತಿಳಿದನು.

೧೫೯. '"ಈಗ ಯುಕ್ತವಾದುದನ್ನು ಹೇಳು. ಆ ಮೂರು ಮಾಸಗಳು ಕಳೆದುಹೋದವಷ್ಟೆ" ಹೀಗೆ ಆ ಗಣಕನನ್ನು ಆ ರಾಜನು ಕೇಳುವಷ್ಟರಲ್ಲಿಯೇ,

೧೬೦ ಅನಂಗರತಿಯು (ತನ್ನ) ಹಿಂದಿನ ಜನ್ಮವನ್ನು ಸ್ಮರಿಸಿ ತನ್ನ ಉತ್ತರೀಯದಿಂದ ಮುಖವನ್ನು ಮುಚ್ಚಿಕೊಂಡು ತನ್ನ ಮನುಷ್ಯಶರೀರವನ್ನು ತ್ಯಜಿಸಿದಳು.

---

ನ ಚೇಹಾಸ್ತಿ ವಿವಾಹೋऽಸ್ಯಾ ಏಷಾ ಶಾಪಚ್ಯುತಾ ಕ್ರಮಾತ್ ।
ವಿದ್ಯಾಧರೀ ಸಶಾಪೋऽಸ್ಯಾಸ್ತ್ರಿಭಿರ್ಮಾಸೈರ್ನಿವರ್ತ್ಸ್ಯತಿ ॥ ೧೫೪

ತಸ್ಮಾನ್ಮಾಸತ್ರಯಂ ತಾವತ್ ಪ್ರತೀಕ್ಷಂತಾಮಮೀ ಇಹ ।
ನೈಷಾ ಸ್ವಲೋಕಂ ಯಾತಾ ಚೇತ್ತತ ಏತದ್ಭವಿಷ್ಯತಿ ॥ ೧೫೫

ಏತನ್ಮೌಹೂರ್ತಿಕಸ್ಯಾಸ್ಯ ವಚಃ ಸರ್ವೇऽಪಿ ತತ್ರ ತೇ ।
ಶ್ರದ್ದಧುಸ್ತತ್ರ ಚೈವಾಸನ್ ವೀರಾ ಮಾಸತ್ರಯಾವಧಿ ॥ ೧೫೬

ಗತೇ ಮಾಸತ್ರಯೇ ರಾಜಾ ತಾನ್‌ವೀರಾನ್ ಗಣಕಂ ಚ ತಮ್ ।
ಸ್ವಾಗ್ರಮಾನಾಯಯಾಮಾಸ ತಾಮನಂಗರತಿಂ ಚ ಸಃ ॥ ೧೫೭

ದೃಷ್ಟ್ವಾ ಚಾಧಿಕಸೌಂದರ್ಯಾಮಕಸ್ಮಾತ್ತಾಂ ಸುತಾಂ ನೃಪಃ ।
ಜಹರ್ಷ ಗಣಕಸ್ತಾಂ ತು ಪ್ರಾಪ್ತಕಾಲಾಮಮನ್ಯತ ॥ ೧೫೮

ಇದಾನೀಂ ಬ್ರೂಹಿ ಯದ್ಯುಕ್ತಂ ತೇ ಹಿ ಮಾಸಾಸ್ತ್ರಯೋ ಗತಾಃ ।
ಇತಿ ಯಾವಚ್ಚ ತಂ ರಾಜಾ ಗಣಕಂ ಪೃಚ್ಛತಿ ಸ್ಮ ಸಃ ॥ ೧೫೯

ತಾವಜ್ಜಾತಿಂ ನಿಜಾಂ ಸ್ಮೃತ್ವಾ ಸಾನಂಗರತಿರಾನನಮ್ ।
ಆಚ್ಛಾದ್ಯ ಸ್ವೋತ್ತರೀಯೇಣ ಮಾನುಷೀಂ ತಾಂ ತನುಂ ಜಹೌ ॥ ೧೬೦

೧೫೧. ಏಕೆ ಇವಳು ಈ ಸ್ಥಿತಿಯಲ್ಲಿದ್ದಾಳೆ ಎಂದು ರಾಜನು ತಾನಾಗಿಯೇ (ಅವಳ) ಮುಖವನ್ನು ತೆರೆಯುವಷ್ಟರಲ್ಲಿಯೇ ಅವಳು ಮೃತಳಾಗಿರುವುದು ತಿಳಿಯಿತು.

೧೫೨. ಆಗ ದುಂಬಿಗಳಂತಿದ್ದ ಅವಳ ಕಣ್ಣುಗಳು ಹಿಂದಕ್ಕೆ ತಿರುಗಿದ್ದುವು. ಮುಖಕಮಲವು ಕಾಂತಿಹೀನವಾಗಿದ್ದು ಹಂಸಗಳ ಮಧುರವಾದ ಧ್ವನಿಗಳಿಲ್ಲದ, ಹಿಮದ ಹೊಡೆತಕ್ಕೆ ಸಿಲುಕಿದ ಪದ್ಮಲತೆಯಂತೆ ಅವಳು ಕಂಡಳು.

೧೫೩. ಆಗ ತಕ್ಷಣವೇ ಶೋಕವೆಂಬ ಸಿಡಿಲಿನ ಆಘಾತದಿಂದ (ವಜ್ರಾಯುಧದಿಂದ ಏಟುತಿಂದ) ರಾಜನು (ಪರ್ವತವು)* ತನ್ನ ಆತ್ಮೀಯ ವ್ಯಕ್ತಿಗೆ ಆದ ಹಾನಿಯಿಂದ (ತನ್ನ ರೆಕ್ಕೆಗಳನ್ನು ಕತ್ತರಿಸಿದುದರಿಂದ) ಮೂರ್ಛೆಗೊಂಡು (ಚಲನೆಯಿಲ್ಲದೆ) ಭೂಮಿಯಮೇಲೆ ಬಿದ್ದನು. (ಬಿದ್ದಿತು).

೧೫೪. ರಾಣಿಯಾದ ಪದ್ಮರತಿಯೂ ಆನೆಯು ಮುರಿದು ಹಾಕಿದ ಲತೆಯಂತೆ ಮೂರ್ಛೆಹೋಗಿ ನೆಲದ ಮೇಲೆ ಬಿದ್ದಳು. ಅವಳ ಆಭರಣಗಳು ಪುಷ್ಪಗಳೂ ಚದುರಿ ಬಿದ್ದುವು.

೧೫೫. (ಇದನ್ನು ನೋಡಿ) ಸಾರ್ವಜನಿಕರೆಲ್ಲರೂ ಗೋಳಾಡಿದರು. ಆ ವೀರರೂ ದುಃಖಿತರಾದರು. ಆಗ ಕ್ಷಣಮಾತ್ರದಲ್ಲಿ ಚೇತರಿಸಿಕೊಂಡ ರಾಜನು ಜೀವದತ್ತನನ್ನು ಕೇಳಿದನು.

---

ಏವಮೇಷಾ ಸ್ಥಿತಾ ಕಿಂಸ್ವಿದಿತಿ ರಾಜ್ಞಾ ಸ್ವಯಂ ಮುಖಮ್ ।
ಯಾವದುದ್ಘಾಟ್ಯತೇ ತಸ್ಯಾಸ್ತಾವತ್ಸಾ ದದೃಶೇ ಮೃತಾ ॥ ೧೫೧
ವ್ಯಾವೃತ್ತನೇತ್ರಭ್ರಮರಾ ವಿವರ್ಣವದನಾಂಬುಜಾ ।
ಹಂಸಮಂಜುಸ್ವನೋನ್ಮುಕ್ತಾ ಪದ್ಮಿನೀವ ಹಿಮಾಹತಾ ॥ ೧೫೨
ತತಃ ಸ ಸದ್ಯಸ್ತಚ್ಛೋಕವಜ್ರಪಾತಾಹತೋ ಭುವಿ ।
ಭೂಭೃತ್ ಪಪಾತ ನಿಶ್ಚೇಷ್ಟಃ ಸ್ವಪಕ್ಷಚ್ಛೇದಮೂರ್ಛಿತಃ ॥ ೧೫೩
ರಾಜ್ಞೀ ಪದ್ಮರತಿಃ ಸಾಪಿ ವ್ಯಾಮೋಹಪತಿತಾ ಯಯೌ ।
ಭ್ರಷ್ಟಾಭರಣಪುಷ್ಪಾ ಕ್ಷ್ಮಾಮಿಭಭಗ್ನೇವ ಮಂಜರೀ ॥ ೧೫೪
ಮುಕ್ತಾಕ್ರಂದೇ ಪರಿಜನೇ ತೇಷು ವೀರೇಷು ದುಃಖಿಷು ।
ಲಬ್ಧಸಂಜ್ಞಃ ಕ್ಷಣಾದ್ರಾಜಾ ಜೀವದತ್ತಮುವಾಚ ತಮ್ ॥ ೧೫೫

---

* ಟಿಪ್ಪಣಿ : (ಪರ್ವತದ ಪರವಾದ ಅರ್ಥ) ವಜ್ರಾಯುಧದ ಹೊಡೆತದಿಂದ ಪರ್ವತದ ರೆಕ್ಕೆಗಳು ಕತ್ತರಿಸಿಹೋಗಿ ಪರ್ವತವು ನಿಶ್ಚಲವಾಗಿ ಭೂಮಿಯ ಮೇಲೆ ಬಿದ್ದಿತು.
ರಾಜನ ಪರವಾದ ಅರ್ಥ– ವಜ್ರಾಯುಧದ ಹೊಡೆತದಂತೆ ಶಾಪದ ಆಘಾತದಿಂದ ರಾಜನು ತನ್ನ ಪ್ರೀತಿಪಾತ್ರ ವ್ಯಕ್ತಿಗಾದ ಹಾನಿಯಿಂದ ಮೂರ್ಛೆಗೊಂಡು ಭೂಮಿಯ ಮೇಲೆ ಬಿದ್ದನು.

೧೪೬ "'ಇಲ್ಲಿ ಬೇರೆಯವರಿಗೆ ಶಕ್ತಿಯಿಲ್ಲ. ಈಗ ಇದು ನಿನಗೊಂದು ಅವಕಾಶ. ಮೃತಳಾದ ಸ್ತ್ರೀಯನ್ನು ಬದುಕಿಸುತ್ತೇನೆ ಎಂದು ನೀನು ಪ್ರತಿಜ್ಞೆ ಮಾಡಿದ್ದೆ.

೧೪೭ ಒಂದು ವೇಳೆ ನಿನಗೆ ವಿದ್ಯಾಬಲ ಇರುವುದಾದರೆ ನನ್ನ ಮಗಳನ್ನು ಬದುಕಿಸು. ಇವಳು ಬದುಕಿದರೆ ಇವಳನ್ನು ಬ್ರಾಹ್ಮಣನಾದ ನಿನಗೇ (ಕನ್ಯಾದಾನ ಮಾಡಿ) ಕೊಡುತ್ತೇನೆ."

೧೪೮. ರಾಜನ ಮಾತನ್ನು ಕೇಳಿ ಜೀವದತ್ತನು ಅಭಿಮಂತ್ರಿತವಾದ ನೀರಿನಿಂದ ಪ್ರೋಕ್ಷಿಸಿ ಆ ರಾಜಪುತ್ರಿಯನ್ನು ಉದ್ದೇಶಿಸಿ ಈ ಆರ್ಯಾಛಂದಸ್ಸಿನ ಪದ್ಯವನ್ನು ಪಠಿಸಿದನು.

೧೪೯. ಅಟ್ಟಹಾಸದಿ ನಗುವವಳೇ,
          ಮುಂಡಮಾಲೆಗಳ ಧರಿಸಿ ಮೆರೆವವಳೇ,
ವಿಕರಾಳ ಚಾಮುಂಡಿಕೆಯೇ,
          ನೀಡೆನಗೆ ನೆರವ ಶೀಘ್ರದಲಿ ತಾಯೇ.

("ಅಟ್ಟಾಟ್ಟಹಾಸನಗುವುಳ್ಳವಳೇ ! ಮುಂಡಮಾಲೆಯಿಂದ ವ್ಯಾಪ್ತಳಾದವಳೇ ! ನೋಡಲು ಸಾಧ್ಯವಿಲ್ಲದವಳೇ ! ಭಯಂಕರಳೇ ! ಚಾಮುಂಡಿಯೇ ! ನನಗೆ ಶೀಘ್ರವಾಗಿ ಸಹಾಯವನ್ನು ಮಾಡು.")

೧೫೦. ಈ ರೀತಿಯಾಗಿ ಜೀವದತ್ತನು ಪ್ರಯತ್ನವನ್ನು ಮಾಡಿದಾಗ ಆ ಬಾಲೆಯು ಬದುಕಿ ಏಳಲೇ ಇಲ್ಲ. ಅವನು ವಿಷಾದದಿಂದ ಹೇಳಿದನು.

೧೫೧. "'ವಿಂಧ್ಯವಾಸಿನಿಯೇ ಕೊಟ್ಟಿದ್ದ ನನ್ನ ವಿದ್ಯೆಯು ನಿಷ್ಫಲವಾಗಿ ಹೋಯಿತು. ಆದುದರಿಂದ ಈ ಉಪಹಾಸ್ಯದಿಂದ ನಾನು ಬದುಕಿ ಏನಾಗಬೇಕು."

---

ನಾತ್ರೈಷಾಂ ಶಕ್ತಿರನ್ಯೇಷಾಮಧುನಾವಸರೋऽಸ್ತು ತೇ ।
ಪ್ರತಿಜ್ಞಾತಂ ತ್ವಯಾ ನಾರೀಂ ಜೀವಯಾಮಿ ಮೃತಾಮಿತಿ ॥ ೧೪೬
ಯದಿ ವಿದ್ಯಾಬಲಂ ತೇऽಸ್ತಿ ತಜ್ಜೀವಯ ಸುತಾಂ ಮಮ ।
ದಾಸ್ಯಾಮಿ ತುಭ್ಯಮೇವೈತಾಂ ವಿಪ್ರಾಯ ಪ್ರಾಪ್ತಜೀವಿತಾಮ್ ॥ ೧೪೭
ಇತಿ ರಾಜ್ಞೋ ವಚಃ ಶ್ರುತ್ವಾ ಜೀವದತ್ತೋऽಭಿಮಂತ್ರಿತೈಃ ।
ಅಭ್ಯುಕ್ಷ್ಯ ತೋಯೈಸ್ತಾಂ ರಾಜಪುತ್ರೀಮಾರ್ಯಾಮಿಮಾಂ ಜಗೌ ॥ ೧೪೮
ಅಟ್ಟಾಟ್ಟಹಾಸಹಸಿತೇ ಕರಂಕಮಾಲಾಕುಲೇ ದುರಾಲೋಕೇ ।
ಚಾಮುಂಡೇ ವಿಕರಾಲೇ ಸಾಹಾಯ್ಯಂ ಮೇ ಕುರು ತ್ವರಿತಮ್ ॥ ೧೪೯
ಏವಂ ತೇನ ಕೃತೇ ಯತ್ನೇ ಜೀವದತ್ತೇನ ಸಾ ಯದಾ ।
ಬಾಲಾ ನ ಜೀವಿತಂ ಪ್ರಾಪ ವಿಷಣ್ಣಃ ಸೋऽವದತ್ತದಾ ॥ ೧೫೦
ದತ್ತಾಪಿ ವಿಂಧ್ಯವಾಸಿನ್ಯಾ ವಿದ್ಯಾ ಮೇ ನಿಷ್ಫಲಾ ಗತಾ ।
ತದೇತೇನೋಪಹಾಸ್ಯೇನ ಕಿಂ ಕಾರ್ಯಂ ಜೀವಿತೇನ ಮೇ ॥ ೧೫೧

೧೬೨. ಹೀಗೆ ಹೇಳಿ ಜೀವದತ್ತನು ತನ್ನ ತಲೆಯನ್ನು ತನ್ನ ದೊಡ್ಡ ಕತ್ತಿಯಿಂದ ಕತ್ತರಿಸಲು ತೊಡಗುವಷ್ಟರಲ್ಲಿ ಅಂತರಿಕ್ಷದಿಂದ ವಾಣಿಯು ಕೇಳಿಸಿತು.

೧೬೩. ""ಎಲೈ ! ಜೀವದತ್ತನೇ ! ಸಾಹಸವನ್ನು ಮಾಡಬೇಡ. ಈಗ ಕೇಳು. ಇವಳು ಅನಂಗಪ್ರಭೆಯೆಂಬ ಉತ್ತಮವಿದ್ಯಾಧರನ ಕನ್ಯೆಯು.

೧೬೪. ತಾಯಿತಂದೆಯರ ಶಾಪದಿಂದ ಇಷ್ಟುಕಾಲ ಮನುಷ್ಯಜನ್ಮವನ್ನು (ಮನುಷ್ಯಭಾವವನ್ನು) ಹೊಂದಿದ್ದಾಳೆ. ಇಂದು ಈ ಶರೀರವನ್ನು ತ್ಯಜಿಸಿ ತನ್ನ (ನಿಜವಾದ) ಶರೀರವನ್ನು ಹೊಂದಿ ತನ್ನ ಲೋಕಕ್ಕೆ ಹೋಗಿದ್ದಾಳೆ.

೧೬೫. ಆದುದರಿಂದ ವಿಂಧ್ಯವಾಸಿನಿಯ ಬಳಿಗೆ ಹೋಗಿ ಅವಳನ್ನು ಪುನಃ ಪೂಜಿಸು. ಅವಳ ಅನುಗ್ರಹದಿಂದ ಈ ವಿದ್ಯಾಧರಿಯನ್ನು ಸತಿಯನ್ನಾಗಿ ಪಡೆಯುವೆ.

೧೬೬ ದಿವ್ಯಭೋಗದಲ್ಲಿ ಇರುವ ಇವಳ ಬಗ್ಗೆ ರಾಜನು ಶೋಕಿಸಬೇಕಾಗಿಲ್ಲ. ನೀನೂ ಶೋಕಿಸಬೇಕಾಗಿಲ್ಲ." ಹೀಗೆ ವಾಸ್ತವವನ್ನು ಹೇಳಿ ಆ ದಿವ್ಯವಾಣಿಯು ಸುಮ್ಮನಾಯಿತು.

೧೬೭ ಅನಂತರ ಮಗಳ ಸಂಸ್ಕಾರವನ್ನು ಮಾಡಿ ರಾಜನೂ ಅವನ ಪತ್ನಿಯೂ ಶೋಕವನ್ನು ನಿಯಂತ್ರಿಸಿಕೊಂಡರು. ಆ ಇತರ ಮೂರು ಮಂದಿ ವೀರರು ಬಂದಂತೆಯೇ ಹೊರಟುಹೋದರು.

೧೬೮. ರಾಜದತ್ತನು ಆಸ್ಥೆಯಿಂದ ಹೊರಟು ವಿಂಧ್ಯವಾಸಿನಿಯನ್ನು ತಪಸ್ಸಿನಿಂದ ಆರಾಧಿಸಿದನು. ಆ ವಿಂಧ್ಯವಾಸಿನಿಯೂ ಸ್ವಪ್ನದಲ್ಲಿ ಬಂದು ಅವನಿಗೆ (ಈ ರೀತಿ) ಆದೇಶಮಾಡಿದಳು.

---

ಇತ್ಯುಕ್ತ್ವಾ ಜೀವದತ್ತಃ ಸ್ವಂ ಶಿರಶ್ಛೇತ್ತುಂ ಮಹಾಸಿನಾ ।
ಯಾವತ್ಪ್ರವರ್ತತೇ ತಾವದುದಗಾದ್ಭಾರತೀ ದಿವಃ ॥ ೧೬೨

ಭೋ ಜೀವದತ್ತ ಮಾಕಾರ್ಷೀಃ ಸಾಹಸಂ ಶೃಣು ಸಂಪ್ರತಿ ।
ಏಷಾನಂಗಪ್ರಭಾ ನಾಮ ಸದ್ವಿದ್ಯಾಧರಕನ್ಯಕಾ ॥ ೧೬೩

ಪಿತ್ರೋಃ ಶಾಪೇನ ಮಾನುಷ್ಯಮಿಯಂತಂ ಕಾಲಮಾಗತಾ ।
ತ್ಯಕ್ತ್ವಾದ್ಯೈತಾಂ ತನುಂ ಯಾತಾ ಸ್ವಲೋಕಂ ಸ್ವತನುಂ ಶ್ರಿತಾ ॥ ೧೬೪

ತದ್ವಿಂಧ್ಯವಾಸಿನೀಮೇವ ಗತ್ವಾರಾಧಯ ತಾಂ ಪುನಃ ।
ತತ್ಪ್ರಸಾದಾದಿಮಾಂ ಪ್ರಾಪ್ಸ್ಯಸಿ ವಿದ್ಯಾಧರೀಂ ಸತೀಮ್ ॥ ೧೬೫

ನ ಚೈಷಾ ದಿವ್ಯಭೋಗಸ್ಥಾ ಶೋಚ್ಯಾ ರಾಜ್ಞೋ ನ ಚಾಪಿ ತೇ ।
ಇತ್ಯುದೀರ್ಯ ಯಥಾತತ್ತ್ವಂ ದಿವ್ಯಾ ವಾಗ್ವಿರರಾಮ ಸಾ ॥ ೧೬೬

ತತಃ ಸುತಾಯಾಃ ಸಂಸ್ಕಾರಂ ಕೃತ್ವಾ ರಾಜಾ ಜಹೌ ಶುಚಮ್ ।
ಸದಾರೋಽಪಿ ಯಯುಸ್ತೇಽನ್ಯೇ ತ್ರಯೋ ವೀರಾ ಯಥಾಗತಮ್ ॥ ೧೬೭

ಜೀವದತ್ತಸ್ತು ಜಾತಾಸ್ಥೋ ಗತ್ವಾ ತಾಂ ವಿಂಧ್ಯವಾಸಿನೀಮ್ ।
ತಪಸಾರಾಧಯಾಮಾಸ ಸ್ವಪ್ನೇ ಸಾಪ್ಯಾದಿದೇಶ ತಮ್ ॥ ೧೬೮

೧೯. '"ನಿನ್ನ ವಿಷಯದಲ್ಲಿ ನಾನು ಸಂತುಷ್ಟಳಾಗಿದ್ದೇನೆ. ಏಳು. ನಾನು ಹೇಳುವುದನ್ನು ಕೇಳು. ಹಿಮಗಿರಿಯಲ್ಲಿ ವೀರಪುರ ಎಂಬ ಪಟ್ಟಣವಿದೆ.

೨೦. ಅಲ್ಲಿ ಸಮರನೆಂಬ ವಿದ್ಯಾಧರರ ಅಧಿರಾಜನು ಇದ್ದಾನೆ. ಅವನಿಗೆ ಅನಂಗವತೀದೇವಿಯಲ್ಲಿ ಅನಂಗಪ್ರಭೆಯೆಂಬ ಮಗಳು ಹುಟ್ಟಿದಳು.

೨೧. ಅವಳು ಸೌಂದರ್ಯ ಮತ್ತು ತಾರುಣ್ಯದ ಗರ್ವದಿಂದ ಯಾವನನ್ನೂ ಪತಿಯನ್ನಾಗಿ ಇಚ್ಛಿಸಲಿಲ್ಲವಾದಾಗ ಕೋಪವನ್ನು ತಡೆಯಲಾರದೆ ಅವಳ ತಾಯಿತಂದೆಯರು ಅವಳನ್ನು ಶಪಿಸಿದರು.

೨೨. "(ನೀನು) ಮನುಷ್ಯ ಜನ್ಮವನ್ನು ಹೊಂದು. ಅಲ್ಲಿಯೂ ನೀನು ಪತಿಸುಖವನ್ನು ಹೊಂದುವುದಿಲ್ಲ. ಹದಿನಾರು ವರ್ಷದ ಕನ್ಯೆಯಾಗಿರುವಾಗಲೇ ಆ ಶರೀರವನ್ನು ತ್ಯಜಿಸಿ ಇಲ್ಲಿಗೆ ಬರುವೆ.

೨೩. ಮುನಿಕನ್ಯೆಯನ್ನು ಬಯಸಿ ಶಾಪದಿಂದ ಮನುಷ್ಯನಾಗಿ ಹುಟ್ಟಿದ ವಿಕಾರವಾದ ಖಡ್ಗಜೀವಿಯೊಬ್ಬನನ್ನು ಪತಿಯಾಗಿ ಪಡೆಯುವೆ.

೨೪. ಮತ್ತು ನಿನಗೆ ಇಷ್ಟವಿಲ್ಲದಿದ್ದರೂ ಅವನು ನಿನ್ನನ್ನು ಮರ್ತ್ಯಲೋಕಕ್ಕೆ ಒಯ್ಯುವನು. ಅಲ್ಲಿ ಬೇರೆಯವರು ನಿನ್ನನ್ನು ಒಯ್ದು ನಿನ್ನಿಂದ ಅವನಿಗೆ ವಿಯೋಗವುಂಟಾಗುವುದು.

---

ತುಷ್ಟಾ ತವಾಹಮುತ್ತಿಷ್ಠ ಶೃಣು ಚೇದಂ ಬ್ರವೀಮಿ ತೇ ।
ಅಸ್ತಿ ವೀರಪುರಂ ನಾಮ ನಗರಂ ತು ಹಿಮಾಚಲೇ ॥ ೧೯
ವಿದ್ಯಾಧರಾಧಿರಾಜೋಽಸ್ತಿ ಸಮರೋ ನಾಮ ತತ್ರ ಚ ।
ತಸ್ಯಾನಂಗವತೀದೇವ್ಯಾಂ ಸುತಾನಂಗಪ್ರಭಾಜನಿ ॥ ೨೦
ಸಾರೂಪಯೌವನೋತ್ಸೇಕಾ ನೈಚ್ಛತ್‌ಕಂಚಿತ್‌ಪತಿಂ ಯದಾ ।
ತದಾತಿದುರ್ಗ್ರಹಕ್ರುದ್ಧೌ ಪಿತರೌ ಶಪತಃ ಸ್ಮ ತಾಮ್ ॥ ೨೧
ಮಾನುಷ್ಯಂ ವ್ರಜ ತತ್ರಾಪಿ ನ ಭರ್ತೃಸುಖಮಾಪ್ಸ್ಯಸಿ ।
ಕನ್ಯೇವ ಷೋಡಶಾಬ್ದಾ ತಾಂ ತ್ಯಕ್ತ್ವಾ ತನುಮಿಹೈಷ್ಯಸಿ ॥ ೨೨
ಮರ್ತ್ಯೋ ವಿರೂಪೋ ಭಾವೀ ಚ ಖಡ್ಗಸಿದ್ಧೋಽಥ ತೇ ಪತಿಃ ।
ಮುನಿಕನ್ಯಾಭಿಲಾಷೇಣ ಶಾಪಾನ್ಮರ್ತ್ಯತ್ವಮಾಗತಃ ॥ ೨೩
ಅನಿಚ್ಛಂತೀಮಪಿ ತ್ವಾಂ ಚ ಮರ್ತ್ಯಲೋಕಂ ಸ ನೇಷ್ಯತಿ।
ತ್ವಯಾ ತಸ್ಯ ವಿಯೋಗೋಽತ್ರ ಭವಿಷ್ಯತ್ಯನ್ಯನೀತಯಾ ॥ ೨೪

೧೭೫. ಹಿಂದಿನ ಜನ್ಮದಲ್ಲಿ ಅವನು ಎಂಟು ಮಂದಿ ಪರಸ್ತ್ರೀಯರನ್ನು ಅಪಹರಿಸಿದ್ದನಷ್ಟೆ ಅದರಿಂದ ಅವನು ಎಂಟುಜನ್ಮಗಳಲ್ಲಿ ಅನುಭವಿಸಬೇಕಾದ ದುಃಖವನ್ನು ಅನುಭವಿಸುವನು.

೧೭೬. ನೀನೂ ಈ ಒಂದೇ ಜನ್ಮದಲ್ಲಿ ಎಂಟು ಜನ್ಮಗಳಿಗೆ ಆಗುವ ಅಂತಹ ದುಃಖವನ್ನು ವಿದ್ಯೆಗಳ ಚ್ಯುತಿಯಿಂದ ಮನುಷ್ಯಳಾಗಿ ಮಾರ್ಪಟ್ಟು ಅನುಭವಿಸುವೆ.

೧೭೭. ಸಮಸ್ತರಿಗೂ ಪಾಪಿಷ್ಠರ ಸಂಪರ್ಕವು ಪಾಪದ ಭಾಗವನ್ನು ಹಂಚುತ್ತದೆ. ಸ್ತ್ರೀಯರಿಗಾದರೋ ಪಾಪಕಾರಿಯಾದ ಪತಿಯೊಡನೆ ಸಾಹಚರ್ಯವು ಸಮಾನವಾದ ಪಾಪವುಳ್ಳದ್ದು.

೧೭೮. ನೀನು ಸ್ಮರಣೆಯನ್ನು ಕಳೆದುಕೊಂಡು, ಯೋಗ್ಯನಾದ ವರರನ್ನೆಲ್ಲ ದ್ವೇಷಿಸುವುದರಿಂದ ಬಹಳ ಮಂದಿ ಮಾನವ ಪತಿಗಳನ್ನು ಪಡೆಯುವೆ.

೧೭೯. ನಿನ್ನನ್ನು ಯಾಚಿಸಿದ ಅಂತರಿಕ್ಷಚರನಾದ ಮದನಪ್ರಭನು ಮನುಷ್ಯರಾಜನಾಗಿ ಕೊನೆಯಲ್ಲಿ ನಿನ್ನ ಪತಿಯಾಗುವನು.

೧೮೦. ಅನಂತರ ನೀನು ಶಾಪದಿಂದ ಬಿಡುಗಡೆಹೊಂದಿ ಪುನಃ ನಿನ್ನ ಲೋಕಕ್ಕೆ ಬಂದವಳಾಗಿ ಆಕಾಶಚರನಾದ ಅವನನ್ನೇ ಯೋಗ್ಯನಾದ ಪತಿಯನ್ನಾಗಿ ಪಡೆಯುವೆ.’

---

ಪೂರ್ವಜನ್ಮನಿ ತೇನಾಷ್ಟೌ ಹೃತಾ ಹಿ ಪರಯೋಷಿತಃ ।
ತೇನಾಷ್ಟಜನ್ಮಭೋಗಾರ್ಹಂ ದುಃಖಂ ಸೋಽನುಭವಿಷ್ಯತಿ ॥ ೧೭೫

ತ್ವಂ ಚಾತ್ರ ಜನ್ಮನ್ಯೇಕಸ್ಮಿನ್ನಷ್ಟಾನಾಮಿವ ಜನ್ಮನಾಮ್ ।
ದುಃಖಂ ಪ್ರಾಪ್ಸ್ಯಸಿ ವಿದ್ಯಾನಾಂ ಭ್ರಂಶೇನ ಮನುಜೀಕೃತಾ ॥ ೧೭೬

ಸರ್ವಸ್ಯೈವ ಹಿ ಪಾಪಿಷ್ಠಸಂಪರ್ಕಃ ಪಾಪಭಾಗದಃ ।
ಸಮಪಾಪಃ ಪುನಃ ಸ್ತ್ರೀಣಾಂ ಭರ್ತ್ರಾ ಪಾಪೇನ ಸಂಗಮಃ ॥ ೧೭೭

ನಷ್ಟಸ್ಮೃತಿಃ ಪತೀಂಶ್ಚಾತ್ರ ಬಹೂನ್ ಪ್ರಾಪ್ಸ್ಯಸಿ ಮಾನುಷಾನ್ ।
ತ್ವಯೋಚಿತವರದ್ವೇಷದುರ್ಗ್ರಹೋ ವಿಹಿತೋ ಯತಃ ॥ ೧೭೮

ಯೋಽಯಾಚತ ಸಮಾನಸ್ತ್ವಾಂ ದ್ಯುಚರೋ ಮದನಪ್ರಭಃ ।
ಭೂತ್ವಾ ಸಮಾನುಷೋ ಭೂಭೃದಂತೇಭಾವೀ ಪತಿಸ್ತವ ॥ ೧೭೯

ತತಸ್ತ್ವಂ ಶಾಪನಿರ್ಮುಕ್ತಾ ಸ್ವಲೋಕಂ ಪುನರಾಗತಾ ।
ತಮೇವ ದ್ಯುಚರೀಭೂತಂ ಸಂಪ್ರಾಪ್ಸ್ಯಸ್ಯುಚಿತಂ ಪತಿಮ್ ॥ ೧೮೦

೧೮೧. ಈ ರೀತಿ ತಾಯಿತಂದೆಯರಿಂದ ಶಾಪಹೊಂದಿ ಅನಂಗರತಿಯು ಭೂಮಿಯಲ್ಲಿದ್ದು ಇಂದು ಮತ್ತೆ ತಾಯಿತಂದೆಯರನ್ನು ಸೇರಿ ಅನಂಗಪ್ರಭೆಯಾಗಿ ಆಗಿದ್ದಾಳೆ.

೧೮೨. ಆದಕಾರಣ ವೀರಪುರಕ್ಕೆ ಹೋಗಿ ತಿಳಿದವನಾಗಿದ್ದರೂ ಕುಲದ ಶ್ರೇಷ್ಠತೆಯಿಂದ ರಕ್ಷಿತನಾಗಿರುವ ಅವಳ ತಂದೆಯನ್ನು ಯುದ್ಧದಲ್ಲಿ ಗೆದ್ದು ಅವಳನ್ನು ಹೊಂದು.

೧೮೩. ಮತ್ತು ಈ ಖಡ್ಗವನ್ನೂ ತೆಗೆದುಕೊ. ಈ ಖಡ್ಗ ನಿನ್ನ ಕಾಯುತ್ತದೆ. ನೀನು ಆಕಾಶದಲ್ಲಿ ಹಾರಬಹುದು. ಮತ್ತು ನೀನು ಅಜೇಯನಾಗಿ ಆಗುವೆ."

೧೮೪. ಹೀಗೆ ಹೇಳಿ ಅವನಿಗೆ ಖಡ್ಗವನ್ನು ಕೊಟ್ಟು ದೇವಿಯು ಅಂತರ್ಧಾನವಾದಳು. ಜೀವದತ್ತನೂ ಎಚ್ಚರಗೊಂಡನು ಮತ್ತು (ತನ್ನ) ಕೈಯಲ್ಲಿ ದಿವ್ಯವಾದ ಖಡ್ಗವಿರುವುದನ್ನು ಕಂಡನು.

೧೮೫–೧೮೬. ಅನಂತರ ಸಂತೋಷದಿಂದ ಜೀವದತ್ತನು ಮೇಲೆದ್ದು ಅಂಬಿಕೆಗೆ ನಮಸ್ಕಾರ ಮಾಡಿದಾಗ ದೇವಿಯ ಅನುಗ್ರಹ ರೂಪವಾದ ಅಮೃತಸೇಕದಿಂದ ಅವನ ಸಮಸ್ತ ತಪಃಕ್ಲೇಶವೂ ಶಾಂತವಾಗಿತ್ತು. ಅನಂತರ ಅವನು ಖಡ್ಗವನ್ನು ಹಿಡಿದು ಆಕಾಶಕ್ಕೆ ಜಿಗಿದು ಹಿಮಾಲಯವನ್ನು ಸುತ್ತಾಡಿ ವೀರಪುರದಲ್ಲಿದ್ದ ಸಮರನೆಂಬ ಗಗನಚರಪತಿಯ ಬಳಿ ಹೋದನು.

---

ತದೇವಂ ಪಿತೃಶಪ್ತಾ ಸಾ ಭೂತ್ವಾನಂಗರತಿಃ ಕ್ಷಿತೌ ।
ಪ್ರಾಪ್ತಾದ್ಯ ಪಿತ್ರೋರ್ನಿಕಟಂ ಜಾತಾನಂಗಪ್ರಭಾ ಪುನಃ ॥ ೧೮೧
ಅತೋ ವೀರಪುರಂ ಗತ್ವಾ ಜಿತ್ವಾ ತತ್ಪಿತರಂ ರಣೇ ।
ಜಾನಂತಮಪಿ ಕೌಲೀನರಕ್ಷಿತಂ ತಾಮವಾಪ್ನುಹಿ ॥ ೧೮೨
ಇಮಂ ಗೃಹಾಣ ಖಡ್ಗಂ ಚ ಯೇನ ಹಸ್ತಗತೇನ ತೇ ।
ಗತಿರ್ಭವಿಷ್ಯತ್ಯಾಕಾಶೇ ಕಿಂಚಾಜೇಯೋ ಭವಿಷ್ಯಸಿ ॥ ೧೮೩
ಇತ್ಯುಕ್ತ್ವಾರ್ಪಿತಖಡ್ಗಾ ಸಾ ತಸ್ಯ ದೇವೀ ತಿರೋದಧೇ ।
ಸ ಚ ಪ್ರಬುಬುಧೇ ದಿವ್ಯಂ ಖಡ್ಗಂ ಹಸ್ತೇ ದದರ್ಶ ಚ ॥ ೧೮೪
ಅಥೋತ್ಥಾಯ ಪ್ರಹೃಷ್ಟಾತ್ಮಾ ಜೀವದತ್ತೋ ನತಾಂಬಿಕಃ ।
ತತ್ಪ್ರಸಾದಾಮೃತಾಪ್ಯಾಯಶಾಂತಾಶೇಷತಪಃಕ್ಲಮಃ ॥ ೧೮೫
ಖಡ್ಗಹಸ್ತಃ ಖಮುತ್ಪತ್ಯ ಪರಿಭ್ರಮ್ಯ ಹಿಮಾಲಯಮ್ ।
ಪ್ರಾಪ ವೀರಪುರಸ್ಥಂ ತಂ ಸಮರಂ ದ್ಯುಚರೇಶ್ವರಮ್ ॥ ೧೮೬

೧೭೭. ಯುದ್ಧದಲ್ಲಿ ಸೋತ ಅವನು (ಕನ್ಯಾದಾನವಾಗಿ) ಕೊಟ್ಟ ಅನಂಗಪ್ರಭೆಯನ್ನು ವಿವಾಹಮಾಡಿಕೊಂಡು ಜೀವದತ್ತನು ದಿವ್ಯವಾದ ಸಂಭೋಗ ಸಂಪತ್ತನ್ನು ಸೇವಿಸಿದನು.

೧೭೮. ಅಲ್ಲಿ ಕೆಲವು ಕಾಲ ಇದ್ದು ಜೀವದತ್ತನು ಮಾವನಾದ ಸಮರನನ್ನೂ ಪ್ರಿಯೆಯಾದ ಅನಂಗಪ್ರಭೆಯನ್ನೂ ಕುರಿತು ಹೀಗೆ ಹೇಳಿದನು.

೧೭೯. 'ಮನುಷ್ಯ ಲೋಕಕ್ಕೆ ಹೋಗಬೇಕೆಂದು ನಾನು ಉತ್ಕಂಠಿತನಾಗಿರುವುದರಿಂದ ನಾನು ಅಲ್ಲಿಗೆ ಹೊರಡುತ್ತೇನೆ. ನಿಕೃಷ್ಟವಾದುದಾದರೂ ಜನ್ಮಭೂಮಿಯು ಪ್ರಾಣಿಗಳಿಗೆ ಅತ್ಯಂತ ಪ್ರಿಯವಾದುದಷ್ಟೆ'

೧೮೦. ಅವನ ಈ ಮಾತನ್ನು ಮಾವನು ಅನುಮೋದಿಸಿದನು. ಅನಂಗಪ್ರಭೆಯ (ವಿಷಯವನ್ನು) ತಿಳಿದು ಬಹಳ ಕಷ್ಟದಿಂದ ಅನುಮೋದಿಸಿದಳು.

೧೮೧. ಅನಂತರ ಅನಂಗಪ್ರಭೆಯನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಜೀವದತ್ತನು ಅಂತರಿಕ್ಷದಿಂದ ಮರ್ತ್ಯಲೋಕಕ್ಕೆ ಇಳಿದನು.

೧೮೨. ಆಯಾಸಗೊಂಡಿದ್ದ ಅನಂಗಪ್ರಭೆಯು ರಮಣೀಯವಾಗಿದ್ದ ಒಂದು ಪರ್ವತವನ್ನು ನೋಡಿ ಜೀವದತ್ತನನ್ನು ಕುರಿತು ""ಶೀಘ್ರವಾಗಿ ಇಲ್ಲಿ ವಿಶ್ರಮಿಸಿಕೊಳ್ಳಬೇಕು" ಎಂದು ಹೇಳಿದಳು.

---

ತೇನ ಯುದ್ಧಜಿತೇನಾತ್ರ ಪ್ರದತ್ತಾಂ ಪರಿಣೀಯ ಸಃ ।
ತಾಮನಂಗಪ್ರಭಾಂ ಭೇಜೇ ದಿವ್ಯಾಂ ಸಂಭೋಗಸಂಪದಮ್ ॥ ೧೭೭
ಕಂಚಿತ್ ಕಾಲಂ ಸ್ಥಿತಶ್ಚಾತ್ರ ಶ್ವಶುರಂ ಸಮರಂ ಸ ತಮ್ ।
ಜೀವದತ್ತೋ ಜಗಾದೈವಂ ತಾಂ ಚಾನಂಗಪ್ರಭಾಂ ಪ್ರಿಯಮ್ ॥ ೧೭೮
ಮನುಷ್ಯಲೋಕಂ ಗಚ್ಛಾವಸ್ತಂ ಪ್ರತ್ಯುತ್ಕಂಠಿತೋಽಸ್ಮಿ ಯತ್ ।
ಪ್ರಾಣಿನಾಂ ಹಿ ನಿಕೃಷ್ಟಾಪಿ ಜನ್ಮಭೂಮಿಃ ಪರಾ ಪ್ರಿಯಾ ॥ ೧೭೯
ಏತಚ್ಛ್ರುತ್ವಾ ವಚಸ್ತಸ್ಯ ಶ್ವಶುರಃ ಸೋಽನ್ವಮನ್ಯತ ।
ಸಾ ತ್ವನಂಗಪ್ರಭಾಕೃಚ್ಛ್ರಾದನುಮೇನೇ ವಿಜಾನತೀ ॥ ೧೮೦
ಅಥಾಂಕೋಪಾತ್ತಯಾ ಸಾಕಮನಂಗಪ್ರಭಯಾ ತಯಾ ।
ಜೀವದತ್ತಃ ಸ ನಭಸಾ ಮರ್ತ್ಯಲೋಕಮವಾತರತ್ ॥ ೧೮೧
ದೃಷ್ಟ್ವಾತ್ರ ರಮ್ಯಮೇಕಂ ಚ ಪರ್ವತಂ ಸಾ ಜಗಾದ ತಮ್ ।
ಶ್ರಾಂತಾನಂಗಪ್ರಭಾ ಕ್ಷಿಪ್ರಮಿಹ ವಿಶ್ರಮ್ಯತಾಮಿತಿ ॥ ೧೮೨

೧೯೩. ಹಾಗೆಯೇ ಆಗಲೆಂದು ಅಲ್ಲಿಯೇ ಅನಂಗಪ್ರಭೆಯೊಡನೆ ಇಳಿದು ಜೀವದತ್ತನು ಆಯಾ ವಿದ್ಯಾಪ್ರಭಾವದಿಂದ ಭೋಜನ ಪಾನ ಮುಂತಾದುದನ್ನೂ ಮಾಡಿದನು.

೧೯೪. ಅನಂತರ ವಿಧಿಯಿಂದ ಪ್ರೇರಿತನಾದ ಜೀವದತ್ತನು ಅನಂಗಪ್ರಭೆಯನ್ನು ಕುರಿತು ಹೇಳಿದನು. ""ಪ್ರಿಯೆಯೇ ! ನೀನು ಮಧುರವಾದುದನ್ನೇನಾದರೂ ಹಾಡು."

೧೯೫. ಅದನ್ನು ಕೇಳಿ ಅನಂಗಪ್ರಭೆಯು ಭಕ್ತಿಯಿಂದ ಈಶ್ವರನ ಸ್ತುತಿಯನ್ನು ಹಾಡಲು ಆರಂಭಿಸಿದಳು. ಅವಳು ಹಾಡಿದ ಆ ಗೀತಧ್ವನಿಯಿಂದ ಆ ಬ್ರಾಹ್ಮಣನು ನಿದ್ದೆಹೋದನು.

೧೯೬. ಅಷ್ಟರಲ್ಲಿ ಬೇಟೆಯಿಂದ ಆಯಾಸಗೊಂಡು ಗಿರಿನದಿಯ ನೀರನ್ನು ಅರಸಿ ಹರಿವರನೆಂಬ ರಾಜನು ಅದೇ ಮಾರ್ಗದಿಂದ ಬಂದನು.

೧೯೭. ಆ ಗೀತಶಬ್ದವನ್ನು ಕೇಳಿದ ಹರಿವರನು ಜಿಂಕೆಯಂತೆ ಆಕೃಷ್ಟನಾಗಿ ರಥವನ್ನು ಬಿಟ್ಟು ಒಂಟಿಯಾಗಿ ಧ್ವನಿ ಬಂದ ಕಡೆಗೆ ಬಂದನು.

೧೯೮. ಆಗ ಶಕುನಗಳು ಶುಭವನ್ನು ಸೂಚಿಸಿದುವು. ಅಲ್ಲಿ ನಿಜವಾಗಿಯೂ ಮನ್ಮಥನ ಕಾಂತಿಯಂತಿದ್ದ ಅನಂಗಪ್ರಭೆಯು ಅವನ ಕಣ್ಣಿಗೆ ಬಿದ್ದಳು.

೧೯೯. ಆಗ ಅವಳ ಗಾನ ಮತ್ತು ಸೌಂದರ್ಯಗಳಿಂದ ವಿಹ್ವಲವಾದ ಅವನ ಹೃದಯವನ್ನು ಮನ್ಮಥನು ಯಥೇಚ್ಛವಾಗಿ ಬಾಣಗಳಿಂದ ಭೇದಿಸಿದನು.

---

ತತಸ್ತಥೇತಿ ತತ್ರೈವ ಸೋಽವತೀರ್ಯ ತಯಾ ಸಹ ।
ಚಕಾರಾಹಾರಪಾನಾದಿ ತತ್ತದ್ವಿದ್ಯಾಪ್ರಭಾವತಃ ॥ ೧೯೩
ತತೋಽನಂಗಪ್ರಭಾಂ ಜೀವದತ್ತೋಽಸೌ ವಿಧಿಚೋದಿತಃ ।
ತಾಮುವಾಚ ಪ್ರಿಯೇ ಕಿಂಚಿನ್ಮಧುರಂ ಗೀಯತಾಂ ತ್ವಯಾ ॥ ೧೯೪
ತಚ್ಛ್ರುತ್ವಾ ಗಾತುಮಾರೇಭೇ ಸಾ ಭಕ್ತ್ಯಾ ಧೂರ್ಜಟೇಃ ಸ್ತುತಿಮ್ ।
ತೇನ ತದ್ಗೀತಶಬ್ದೇನ ಸೋಽಥ ನಿದ್ರಾಮಗಾದ್ದ್ವಿಜಃ ॥ ೧೯೫
ತಾವದಾಖೇಟಕಶ್ರಾಂತೋ ನಿರ್ಝರಾಂಭೋಭಿಲಾಷುಕಃ ।
ರಾಜಾ ಹರಿವರೋ ನಾಮ ಪಥಾ ತೇನ ಕಿಲಾಯಯೌ ॥ ೧೯೬
ಸ ತೇನ ಗೀತಶಬ್ದೇನ ಶ್ರುತೇನ ಹರಿಣೋ ಯಥಾ ।
ಆಕೃಷ್ಟೋಽಭ್ಯಾಪತತ್ತತ್ರ ರಥಮುನ್ಮುಚ್ಯ ಕೇವಲಃ ॥ ೧೯೭
ಶಕುನೈಃ ಪೂರ್ವಮಾಖ್ಯಾತಶುಭೋಽಪಶ್ಯತ್ತ್ರ ಭೂಪತಿಃ।
ತಾಮನಂಗಪ್ರಭಾಂ ಸತ್ಯಾಮನಂಗಸ್ಯ ಪ್ರಭಾಮಿವ ॥ ೧೯೮
ತದಾ ತದ್ಗೀತರೂಪಾಭ್ಯಾಂ ನೀತಂ ತಸ್ಯ ವಿಹಸ್ತತಾಮ್ ।
ನಿರ್ಬಿಭೇದ ಯಥಾಕಾಮಂ ಹೃದಯಂ ಮದನಃ ಶರೈಃ ॥ ೧೯೯

೨೦೦. ಅನಂಗಪ್ರಭೆಯೂ ಸುಂದರನಾದ ಆ ಹರಿವರನನ್ನು ನೋಡಿ ಕೂಡಲೇ ಮನ್ಮಥನ ದೃಷ್ಟಿಗೆ ಬಿದ್ದು ಕ್ಷಣಕಾಲ ಚಿಂತಿಸಿದಳು.

೨೦೧. "'ಯಾರಿವನು ? ಹೂವಿನ ಬಿಲ್ಲನ್ನು ಬಿಟ್ಟು ಬಂದಿರುವ ಮನ್ಮಥನೇನು ? ಗಾನದಿಂದ ಸಂತುಷ್ಟನಾದ ಈಶ್ವರನ ಅನುಗ್ರಹವೇ ಮೂರ್ತಿರೂಪವಾಗಿ ಬಂದಿದೆಯೇನು ?"

೨೦೨. ಹೀಗೆ ಯೋಚಿಸಿ ಅನಂಗಪ್ರಭೆಯು ಮನ್ಮಥನಿಂದ ಮೋಹಿತಳಾಗಿ ಹರಿವರನನ್ನು ಕುರಿತು, "'ನೀನು ಯಾರು ? ಈ ಕಾಡಿಗೆ ನೀನು ಹೇಗೆ ಬಂದೆ, ಹೇಳು" ಎಂದು ಕೇಳಿದಳು.

೨೦೩. ಆಗ ಅವನು ತಾನು ಬಂದ ಬಗ್ಗೆ ಎಲ್ಲವನ್ನೂ ಅವಳಿಗೆ ಹೇಳಿದನು. ಅನಂತರ ಅವನು "'ಸುಂದರಿಯೇ ! ನೀನು ಯಾರೆಂದು ನನಗೆ ಹೇಳು" ಎಂದು ಅವಳನ್ನು ಕೇಳಿದನು.

೨೦೪. "'ಕಮಲಮುಖಿಯೇ ! ಇಲ್ಲಿ ಮಲಗಿರುವ ಇವನು ಯಾರು ? ಎಂದು ಕೇಳಿದ ಅವನನ್ನು ಕುರಿತು ಆ ಅನಂಗಪ್ರಭೆಯು ಸಂಕ್ಷೇಪವಾಗಿ ಹೇಳಿದಳು.

೨೦೫. "'ನಾನು ವಿದ್ಯಾಧರಿಯು ಮತ್ತು ಈ ಖಡ್ಗಸಿದ್ಧನು ನನ್ನ ಪತಿಯು. ಆದರೆ ನೋಡಿದ ಮಾತ್ರದಿಂದಲೇ ನಿನ್ನಲ್ಲಿ ನಾನು ಈಗ ಅನುರಕ್ತಳಾಗಿದ್ದೇನೆ.

೨೦೬. ಆದುದರಿಂದ ಬಾ. ಇವನು ಎಚ್ಚರಗೊಳ್ಳುವುದರೊಳಗಾಗಿ ನಾವಿಬ್ಬರೂ ಶೀಘ್ರವಾಗಿ ನಿನ್ನ ಪಟ್ಟಣಕ್ಕೆ ಹೋಗೋಣ. ಅಲ್ಲಿ ಎಲ್ಲವನ್ನೂ ವಿಸ್ತಾರವಾಗಿ ಹೇಳುವೆನು."

---

ಸಾಪಿ ತಂ ವೀಕ್ಷ್ಯ ಸಹಸಾ ಸುಭಗಂ ಪುಷ್ಪಧನ್ವನಃ ।
ಪತಿತಾ ಗೋಚರೇಽನಂಗಪ್ರಭಾ ಕ್ಷಣಮಚಿಂತಯತ್ ॥ ೨೦೦
ಕೋಽಯಂ ಕಿಮಯಮುನ್ಮುಕ್ತಪುಷ್ಪಚಾಪೋ ಮನೋಭವಃ ।
ಕಿಂ ಮೂರ್ತೋ ಗೀತತುಷ್ಟಸ್ಯ ಶರ್ವಸ್ಯಾನುಗ್ರಹೋ ಮಯಿ ॥ ೨೦೧
ಇತಿ ಸಂಚಿಂತ್ಯ ಪಪ್ರಚ್ಛ ಸಾ ತಂ ಮದನಮೋಹಿತಾ ।
ಕಸ್ತ್ವಂ ಕಥಂ ವನಂ ಚೇದಮಾಗತೋಽಸ್ಯುಚ್ಯತಾಮಿತಿ ॥ ೨೦೨
ತತೋ ಯಥಾಗತೋ ಯಃ ಸ ಸರ್ವಂ ತಸ್ಯೈ ಶಶಂಸ ತತ್ ।
ಸ ರಾಜಾ ತಾಮಥಾಪೃಚ್ಛತ್ಕಾ ತ್ವಂ ಸುಂದರಿ ಶಂಸ ಮೇ ॥ ೨೦೩
ಯಶ್ಚ ಸುಪ್ತಸ್ಥಿತೋಽತ್ರಾಯಮೇಷ ಕಃ ಕಮಲಾನನೇ ।
ಇತಿ ತಂ ಪೃಷ್ಟವಂತಂ ಚ ಸಂಕ್ಷೇಪೇಣ ಜಗಾದ ಸಾ ॥ ೨೦೪
ಅಹಂ ವಿದ್ಯಾಧರೀ ಖಡ್ಗಸಿದ್ಧಶ್ಚೈಷ ಪತಿರ್ಮಮ ।
ದೃಷ್ಟಮಾತ್ರೇಚ ಜಾತಾಸ್ಮಿ ಸಾನುರಾಗಾಧುನಾ ತ್ವಯಿ ॥ ೨೦೫
ತದೇಹಿ ತಾವದ್ಗಚ್ಛಾವಸ್ತ್ವದೀಯಂ ನಗರಂ ದ್ರುತಮ್ ।
ಯಾವತ್ ಪ್ರಬುಧ್ಯತೇ ನಾಯಂ ತತ್ರ ವಕ್ಷ್ಯಾಮಿ ವಿಸ್ತರಾತ್ ॥ ೨೦೬

೨೦೭. ಆ ರಾಜನು ಅವಳ ಈ ಮಾತನ್ನು ಕೇಳಿ ಹಾಗೆಯೇ ಆಗಲೆಂದು ಒಪ್ಪಿಕೊಂಡನು. ಅವನಿಗೆ ಮೂರು ಲೋಕಗಳ ರಾಜ್ಯವನ್ನು ಪಡೆದಷ್ಟು ಸಂತೋಷವಾಗಿತ್ತು.

೨೦೮. ಈ ರಾಜನನ್ನು ಮಡಿಲಿನಲ್ಲಿ ಕುಳ್ಳಿರಿಸಿಕೊಂಡು ಆಕಾಶಕ್ಕೆ ಜಿಗಿದು ಶೀಘ್ರವಾಗಿ ಹೋಗಿಬಿಡುತ್ತೇನೆ ಎಂದು ಅನಂಗಪ್ರಭೆಯು ಮನಸ್ಸಿನಲ್ಲಿ ತ್ವರೆಯಿಂದ ಯೋಚಿಸಿದಳು.

೨೦೯. ಅಷ್ಟರಲ್ಲಿ ಆ ಪತಿದ್ರೋಹದಿಂದ ಅವಳ ವಿದ್ಯೆ ನಷ್ಟವಾಯಿತು ಮತ್ತು ಅವಳಿಗೆ ತಾಯಿತಂದೆಯರ ಶಾಪ ನೆನಪಿಗೆ ಬಂದು ಅವಳು ವಿಷಣ್ಣಳಾದಳು.

೨೧೦. ಅದನ್ನು ನೋಡಿ ವಿಷಾದಕ್ಕೆ ಕಾರಣವನ್ನು ಕೇಳಿ ರಾಜನು ಅವಳನ್ನು ಕುರಿತು ಹೇಳಿದನು. ""ಇದು ವಿಷಾದಕ್ಕೆ ಕಾಲವಲ್ಲ. ನಿನ್ನ ಪತಿಯು ಎಚ್ಚರಗೊಂಡಾನು.

೨೧೧. ಈ ವಿಷಯವು ದೈವಾಧೀನವಾದುದು. ಪ್ರಿಯೆಯೇ ! ಇದನ್ನು ಕುರಿತು ಶೋಕಪಡುವುದು ನಿನಗೆ ತಕ್ಕುದಲ್ಲ. ಯಾವನು ತಾನೆ ತನ್ನ ಶಿರಸ್ಸಿನ ನೆರಳನ್ನು ಮತ್ತು ವಿಧಿಯ ಗತಿಯನ್ನು ದಾಟಿಯಾನು ?

೨೧೨. ಆದುದರಿಂದ ಬಾ, ಹೋಗೋಣ.'' ಹೀಗೆ ಹೇಳಿ ಅವನ ಮಾತನ್ನು ನಂಬಿದ ಅನಂಗ ಪ್ರಭೆಯನ್ನು ಶೀಘ್ರವಾಗಿ ಆ ಹರಿವರ ರಾಜನು ಮಡಿಲಲ್ಲಿ ಎತ್ತಿಕೊಂಡನು.

೨೧೩. ಅನಂತರ ನಿಧಿಯನ್ನು ಹೊಂದಿದಂತೆ ಸಂತುಷ್ಟನಾದ ರಾಜನು ಅಲ್ಲಿಂದ ಶೀಘ್ರವಾಗಿ ಹೋಗಿ ಸೇವಕರಿಂದ ಅಭಿನಂದಿತನಾಗಿ ತನ್ನ ರಥವನ್ನು ಹತ್ತಿದನು.

---

ಶ್ರುತ್ವೈತತ್ತದ್ವಚೋ ರಾಜಾ ಪ್ರತಿಪದ್ಯ ತಥೇತಿ ಸಃ ।
ತ್ರೈಲೋಕ್ಯರಾಜ್ಯಸಂಪ್ರಾಪ್ತಿಹರ್ಷಂ ಹರಿವರೋ ದಧೇ ॥ ೨೦೭

ನೃಪಮಂಕೇ ಗೃಹೀತ್ವೇಮಂ ಗಚ್ಛಾಮ್ಯುತ್ಪತ್ಯ ಖಂ ಜವಾತ್ ।
ಇತ್ಯನಂಗಪ್ರಭಾ ಸಾಂತಃ ಸತ್ವರಾ ಸಮಚಿಂತಯತ್ ॥ ೨೦೮

ತಾವಚ್ಚ ಭ್ರಷ್ಟವಿದ್ಯಾಭೂದ್‌ಭರ್ತೃದ್ರೋಹೇಣ ತೇನ ಸಾ ।
ಸ್ಮರಂತೀ ಪಿತೃಶಾಪಂ ಚ ವಿಷಾದಂ ಸಹಸಾ ಯಯೌ ॥ ೨೦೯

ತದ್‌ದೃಷ್ಟ್ವಾ ಕಾರಣಂ ಪೃಷ್ಟ್ವಾ ಸ ರಾಜಾ ತಾಮಭಾಷತ ।
ನ ವಿಷಾದಸ್ಯ ಕಾಲೋಽಯಂ ಪ್ರಬುಧ್ಯೇತೈಷ ತೇ ಪತಿಃ ॥ ೨೧೦

ದೈವಾಯತ್ತಂ ಚ ವಸ್ತ್ವೇತಚ್ಛೋಚಿತುಂ ನಾರ್ಹಸಿ ಪ್ರಿಯೇ ।
ಕೋಹಿ ಸ್ವಶಿರಸಶ್ಛಾಯಾಂ ವಿಧೇಶ್ಚೋಲ್ಲಂಘಯೇದ್ಗತಿಮ್ ॥ ೨೧೧

ತದೇಹಿ ಯಾಮ ಇತ್ಯುಕ್ತ್ವಾ ತಾಂ ಸ ಶ್ರದ್ಧಿತತದ್ಗಿರಮ್ ।
ಅಂಕೇ ಹರಿವರಶ್ಚಕ್ರೇ ರಾಜಾನಂಗಪ್ರಭಾಂ ದ್ರುತಮ್ ॥ ೨೧೨

ತತೋ ನಿಧಾನಂ ಲಬ್ಧ್ವೇವ ತುಷ್ಟೋ ಗತ್ವಾ ಜವಾತ್ತತಃ ।
ರಾಜಾರುರೋಹ ಸ್ವರಥಂ ಸಭೃತ್ಯೈರಭಿನಂದಿತಃ ॥ ೨೧೩

೨೧೪. ಮನೋವೇಗದಿಂದ ಹೋಗುವ ಆ ರಥದಿಂದ ಅನಂಗಪ್ರಭೆಯೊಡನೆ ಪ್ರಜೆಗಳ ಕುತೂಹಲದ ನಡುವೆ ಅವನು ತನ್ನ ಪಟ್ಟಣವನ್ನು ಸೇರಿದನು.

೨೧೫. ಅನಂತರ ತನ್ನ ಹೆಸರಿನ ಅಂಕಿತವುಳ್ಳ ಆ ಪಟ್ಟಣದಲ್ಲಿ ಆ ಹರಿವರ ರಾಜನು ಅನಂಗಪ್ರಭೆಯೊಡನೆ ದಿವ್ಯವಾದ ಸುಖವನ್ನು ಅನುಭವಿಸುತ್ತಾ ಇದ್ದನು.

೨೧೬. ಅನಂಗಪ್ರಭೆಯೂ ಅವನಲ್ಲಿ ಅನುರಾಗವುಳ್ಳವಳಾಗಿ ಮತ್ತು ಶಾಪದಿಂದ ವಿಮೋಹಿತಳಾಗಿ ತನ್ನ ಸಮಸ್ತ ಪ್ರಭಾವವನ್ನೂ ಮರೆತು ಆ ಪಟ್ಟಣದಲ್ಲಿಯೇ ಇದ್ದಳು.

೨೧೭. ಈ ಮಧ್ಯದಲ್ಲಿ ಜೀವದತ್ತನು ಎಚ್ಚರಗೊಂಡು ನೋಡಿದಾಗ ಆ ಪರ್ವತದಲ್ಲಿ ಕೇವಲ ಅನಂಗಪ್ರಭೆಯಷ್ಟೇ ಅಲ್ಲದೆ ಅವನ ಖಡ್ಗವೂ ಕಾಣಲಿಲ್ಲ.

೨೧೮. "ಅನಂಗಪ್ರಭೆಯು ಎಲ್ಲಿ ? ಕಷ್ಟವೊದಗಿತಲ್ಲ ! ಆ ಖಡ್ಗವೆಲ್ಲಿ ? ಅವಳು ಅದನ್ನು ಅಪಹರಿಸಿಕೊಂಡು ಹೋದಳೋ ? ಅಥವಾ ಅನಂಗಪ್ರಭೆ ಮತ್ತು ಕತ್ತಿ ಎರಡನ್ನೂ ಯಾವನಾದರೂ ಒಯ್ದನೋ ?'

೨೧೯. ಹೀಗೆ ಭ್ರಮೆಗೊಂಡು ಅನೇಕ ವಿಧವಾದ ಊಹೆಗಳನ್ನು ಮಾಡುತ್ತಾ ಅವನು ಮನ್ಮಥಾಗ್ನಿಯಿಂದ ಸುಟ್ಟುಹೋದವನಾಗಿ ಮೂರು ದಿನಗಳು ಆ ಪರ್ವತದಲ್ಲಿ ಹುಡುಕಾಡಿದನು.

---

ತೇನ ಸ್ವನಗರಂ ಪ್ರಾಪ ಸ ಮನಃಶೀಘ್ರಗಾಮಿನಾ ।
ರಥೇನ ರಮಣೀಯುಕ್ತಃ ಪ್ರಜಾನಾಂ ದತ್ತಕೌತುಕಃ ॥ ೨೧೪
ಸ್ವನಾಮಲಾಂಛನೇ ತಸ್ಮಿನ್ ಸೋಽನಂಗಪ್ರಭಯಾ ತಯಾ ।
ಸಹ ದಿವ್ಯಸುಖಸ್ತಸ್ಥೌ ತತೋ ಹರಿವರೋ ನೃಪಃ ॥ ೨೧೫
ಸಾಪ್ಯನಂಗಪ್ರಭಾ ತತ್ರೈವಾಸೀತ್ತದನುರಾಗಿಣೀ ।
ವಿಸ್ಮೃತ್ಯ ಸ್ವಂ ಪ್ರಭಾವಂ ತಂ ಸರ್ವಂ ಶಾಪವಿಮೋಹಿತಾ ॥ ೨೧೬
ಅತ್ರಾಂತರೇ ಸ ತತ್ರಾದ್ರೌ ಜೀವದತ್ತೋ ನ ಕೇವಲಮ್ ।
ಪ್ರಬುದ್ಧೋ ನೈಕ್ಷತಾನಂಗಪ್ರಭಾಂ ಯಾವತ್ ಸ್ವಮಪ್ಯಸಿಮ್ ॥ ೨೧೭
ಕ್ವ ಸಾನಂಗಪ್ರಭಾ ಕಷ್ಟಂ ಕ್ವ ಸ ಖಡ್ಗೋಽಪಿ ಕಿಂ ನು ತಮ್ ।
ಹೃತ್ವಾ ಗತಾ ಸಾ ಕಿಂ ವಾ ತೌ ನೀತೌ ದ್ವಾವಪಿ ಕೇನಚಿತ್ ॥ ೨೧೮
ಇತ್ಯುದ್ಭ್ರಾಂತೋ ಬಹೂನ್ ಕುರ್ವನ್ ವಿತರ್ಕಾನ್ ಸ ದಿನತ್ರಯಮ್ ।
ಗಿರಿಂ ತಂ ವಿಚಿನೋತಿ ಸ್ಮ ದಹ್ಯಮಾನಃ ಸ್ಮರಾಗ್ನಿನಾ ॥ ೨೧೯

೨೨೦. ಅನಂತರ ಕೆಳಗೆ ಇಳಿದು ಹತ್ತು ದಿವಸಗಳ ಕಾಲ ಕಾಡುಗಳಲ್ಲಿ ಹುಡುಕುತ್ತಾ ಸುತ್ತಾಡಿದನು. ಆದರೆ ಅವನು ಎಲ್ಲಿಯೂ ಅವಳ ಹೆಜ್ಜೆಯನ್ನೂ ಕಾಣಲಿಲ್ಲ.

೨೨೧. "ಹಾ ದುಷ್ಟವಿಧಿಯೇ। ನನ್ನ ಪ್ರಿಯೆಯಾದ ಅನಂಗಪ್ರಭೆಯನ್ನು ಕಷ್ಟದಿಂದ ನನಗೆ ಕೊಟ್ಟರೂ ಅವಳನ್ನು ಖಡ್ಗಸಿದ್ಧಿಯೊಡನೆ ಹೇಗೆ ತಾನೆ ನೀನು ಅಪಹರಿಸಿದೆ ?'

೨೨೨. ಹೀಗೆ ಗೋಳಾಡುತ್ತಾ ನಿರಾಹಾರನಾಗಿ ಸುತ್ತಾಡುತ್ತಾ ಒಂದು ಗ್ರಾಮವನ್ನು ಸೇರಿ ಅಲ್ಲಿದ್ದ ಒಂದು ಸಮೃದ್ಧವಾದ ಬ್ರಾಹ್ಮಣನ ಮನೆಯನ್ನು ಪ್ರವೇಶಿಸಿದನು.

೨೨೩. ಮತ್ತು ಅಲ್ಲಿ ಉತ್ತಮ ವಸ್ತ್ರಗಳನ್ನು ಧರಿಸಿರುವ ಪ್ರಿಯದತ್ತಾ ಎಂಬ ಹೆಸರುಳ್ಳ ಒಬ್ಬ ಸುಂದರಿಯಾದ ಗೃಹಿಣಿಯು ಅವನನ್ನು ಆಸನದಲ್ಲಿ ಕುಳ್ಳಿರಿಸಿ ತನ್ನ ದಾಸಿಯರಿಗೆ ಒಡನೆಯೇ ಆಜ್ಞೆ ಮಾಡಿದಳು.

೨೨೪. "ಈ ಜೀವದತ್ತನ ಪಾದಗಳನ್ನು ಶೀಘ್ರವಾಗಿ ತೊಳೆಯಿರಿ. ಇವನು ವಿರಹದಿಂದ ನಿರಾಹಾರನಾಗಿ ಇಂದಿಗೆ ಹದಿಮೂರನೆಯ ದಿನವಾಗಿದೆ'

೨೨೫. ಅದನ್ನು ಕೇಳಿ ಆಶ್ಚರ್ಯಗೊಂಡ ಜೀವದತ್ತನು ಮನಸ್ಸಿನಲ್ಲಿ ವಿಚಾರಮಾಡಿದನು. "ಅನಂಗಪ್ರಭೆಯು ಇಲ್ಲಿಗೆ ಬಂದಿದ್ದಾಳೆಯೇನು ? ಅಥವಾ ಇವಳು ಯೋಗಿನಿಯೇನು?'

---

ತತೋಽವತೀರ್ಯ ಚಿನ್ವಾನೋ ವನಾನಿ ದಿವಸಾನ್ದಶ।
ಸ ಬಭ್ರಾಮ ನ ಚಾಪಶ್ಯತ್ತಸ್ಯಾಃ ಪಾದಮಪಿ ಕ್ವಚಿತ್ ॥ ೨೨೦
ಹಾ ದುರ್ಜನವಿಧೇ ಕೃಚ್ಛ್ರಾತ್ಸಾ ದತ್ತಾಪಿ ಕಥಂ ತ್ವಯಾ।
ಖಡ್ಗಸಿದ್ಧ್ಯಾ ಸಹ ಹೃತಾ ಪ್ರಿಯಾನಂಗಪ್ರಭಾ ಮಮ ॥ ೨೨೧
ಇತ್ಯಾಕ್ರಂದನ್ನಿರಾಹಾರೋ ಭ್ರಮನ್ನೇಕಮವಾಪ್ತವಾನ್ ।
ಗ್ರಾಮಂ ತತ್ರ ವಿವೇಶೈಕಮಾಢ್ಯಂ ದ್ವಿಜಗೃಹಂ ಚ ಸಃ ॥ ೨೨೨
ಗೃಹಿಣೀ ತತ್ರ ಸುಭಗಾ ಸುವಸ್ತ್ರಾ ಚೋಪವೇಶ್ಯ ತಮ್ ।
ಆಸನೇ ಪ್ರಿಯದತ್ತಾಖ್ಯಾ ಸ್ವಚೇಟೀಃ ಶೀಘ್ರಮಾದಿಶತ್ ॥ ೨೨೩
ತ್ವರಿತಂ ಜೀವದತ್ತಸ್ಯ ಪಾದೌ ಕ್ಷಾಲಯತಾಸ್ಯ ಹಿ।
ನಿರಾಹಾರಸ್ಯ ವಿರಹಾದ್ದಿನಮದ್ಯ ತ್ರಯೋದಶಮ್ ॥ ೨೨೪
ತಚ್ಛ್ರುತ್ವಾ ವಿಸ್ಮಿತೋ ಜೀವದತ್ತೋಽಂತರ್ವಿಮಮರ್ಶ ಸಃ।
ಇಹಾನಂಗಪ್ರಭಾ ಪ್ರಾಪ್ತಾ ಕಿಂ ಕಿಮೇಷಾಥ ಯೋಗಿನೀ ॥ ೨೨೫

೨೨೬. ಹೀಗೆ ಚಿಂತಿಸುತ್ತಾ ಪಾದಗಳನ್ನು ತೊಳೆದ ಮೇಲೆ ಅವಳು ನೀಡಿದ ಭೋಜನವನ್ನು ಸೇವಿಸಿ ಜೀವದತ್ತನು ಪ್ರಿಯದತ್ತೆಗೆ ನಮಸ್ಕಾರ ಮಾಡಿ ಅತ್ಯಂತ ದುಃಖದಿಂದ ಅವಳನ್ನು ಕೇಳಿದನು.

೨೨೭. "ಅನಿಂದಿತೇ ! ಒಂದು ವಿಷಯವನ್ನು ಹೇಳು. ನನ್ನ ವೃತ್ತಾಂತ ನಿನಗೆ ಹೇಗೆ ತಿಳಿಯಿತು ? ಎರಡನೆಯದಾಗಿ ನನ್ನ ಪ್ರಿಯೆ ಮತ್ತು ಖಡ್ಗಗಳು ಎಲ್ಲಿ ?' ಎಂಬುದನ್ನು ಹೇಳು.

೨೨೮. ಅದನ್ನು ಕೇಳಿ ಪತಿವ್ರತೆಯಾದ ಆ ಪ್ರಿಯದತ್ತೆಯು ಅವನನ್ನು ಕುರಿತು ಹೇಳಿದಳು. "(ನನ್ನ) ಪತಿಗಿಂತಲೂ ಬೇರೆಯಾದವನು ಸ್ವಪ್ನದಲ್ಲಿಯೂ ನನ್ನ ಮನಸ್ಸಿನಲ್ಲಿ ಕಾಲಿಡುವುದಿಲ್ಲ.

೨೨೯. ನಾನು ಬೇರೆ ಪುರುಷರನ್ನು ಪುತ್ರ ಮತ್ತು ಸೋದರರಿಗೆ ಸಮಾನರನ್ನಾಗಿ ನೋಡುತ್ತೇನೆ. ಮತ್ತು ಅತಿಥಿಯಾದವನು ನನ್ನಿಂದ ಅರ್ಚಿತನಾಗದೆ (ಈ) ಮನೆಯಿಂದ ಎಂದಿಗೂ ಹೋಗುವುದಿಲ್ಲ.

೨೩೦. ಅದರ ಪ್ರಭಾವದಿಂದ ನಾನು ಭೂತ, ವರ್ತಮಾನ ಮತ್ತು ಭವಿಷ್ಯತ್ತುಗಳನ್ನು ತಿಳಿಯುತ್ತೇನೆ. ನಿನ್ನ ಅನಂಗಪ್ರಭೆಯನ್ನು ರಾಜನಾದ ಹರಿವರನು ಒಯ್ದಿದ್ದಾನೆ.

೨೩೧. ತನ್ನದೇ ಹೆಸರುಳ್ಳ ಪಟ್ಟಣದಲ್ಲಿ ವಾಸ ಮಾಡುವ ಆ ಹರಿಹರ ರಾಜನು ನೀನು ಮಲಗಿರುವಾಗ ವಿಧಿಯೋಗದಿಂದ ಆ ಮಾರ್ಗದಲ್ಲಿ ಬಂದಾಗ ಅವಳ ಗಾನದಿಂದ ಆಕೃಷ್ಟನಾಗಿ (ಅವಳಬಳಿ) ಬಂದು ಅವಳನ್ನು ಒಯ್ದಿದ್ದಾನೆ.

---

ಇತಿ ಧ್ಯಾಯನ್ ಧೌತಪಾದೋ ಭುಕ್ತತದ್ದತ್ತಭೋಜನಃ ।
ಪ್ರಣತಃ ಪ್ರಿಯದತ್ತಾಂ ತಾಮತ್ಯಾರ್ತ್ಯಾ ಪೃಚ್ಛತಿ ಸ್ಮ ಸಃ ॥ ೨೨೬

ಏಕಂ ಬ್ರೂಹಿ ಕಥಂ ವೇತ್ಸಿ ಮದ್ವೃತ್ತಾಂತಮನಿಂದಿತೇ ।
ದ್ವಿತೀಯಂ ಚಾಪಿ ಕಥಯ ಪ್ರಿಯಾಖಡ್ಗೌ ಕ್ವ ಮೇ ಗತೌ ॥ ೨೨೭

ತಚ್ಛ್ರುತ್ವಾ ತಮುವಾಚೈತಾಂ ಪ್ರಿಯದತ್ತಾ ಪತಿವ್ರತಾ ।
ಭರ್ತುರನ್ಯೋ ನ ಮೇ ಚಿತ್ತೇ ಸ್ವಪ್ನೇಽಪಿ ಕುರುತೇ ಪದಮ್ ॥ ೨೨೮

ಪುತ್ರಭ್ರಾತೃಸಮಾನನ್ಯಾನ್ ಪಶ್ಯಾಮಿ ಪುರುಷಾನಹಮ್ ।
ನ ಚ ಮೇಽನರ್ಚಿತೋ ಯಾತಿ ಕದಾಚಿದತಿಥಿರ್ಗೃಹಾತ್ ॥ ೨೨೯

ತತ್ಪ್ರಭಾವೇಣ ಜಾನಾಮಿ ಭೂತಂ ಭವ್ಯಂ ಚ ಭಾವಿ ಚ ।
ಸಾ ಚಾನಂಗಪ್ರಭಾ ನೀತಾ ರಾಜ್ಞಾ ಹರಿವರೇಣ ತೇ ॥ ೨೩೦

ಸುಪ್ತೇ ತ್ವಯಿ ವಿಧೇರ್ಯೋಗಾತ್ತನ್ಮಾರ್ಗಗಾಮಿನಾ ತದಾ ।
ಗೀತಾಕೃಷ್ಟೋಪಯಾತೇನ ಸ್ವನಾಮಪುರವಾಸಿನಾ ॥ ೨೩೧

೨೩೨. ನಿನಗೆ ಅವಳನ್ನು ಪಡೆಯಲು ಸಾಧ್ಯವಿಲ್ಲ. ಆ ರಾಜನು ಮಹಾಬಲಶಾಲಿ. ಅವಳೂ ಕೂಡ ಅವನನ್ನೂ ತ್ಯಜಿಸಿ ಕುಲಟೆಯಾಗಿ ಬೇರೆಯವನಲ್ಲಿ ಹೋಗಿ ಸೇರುತ್ತಾಳೆ.

೨೩೩. ದೇವಿಯು ನಿನಗೆ ಆ ಅನಂಗಪ್ರಭೆಯನ್ನು ಪಡೆಯುವುದಕ್ಕಾಗಿ ಖಡ್ಗವನ್ನು ಕೊಟ್ಟಳು. ಆ ಖಡ್ಗವು ಅದನ್ನು ನಡೆಸಿ ಅವಳು ಅಪಹೃತಳಾದ ಮೇಲೆ ಅದು ದಿವ್ಯವಾದ ಕಾರಣ ದೇವಿಯ ಬಳಿಗೇ ಹೊರಟುಹೋಯಿತು.

೨೩೪. ಮತ್ತೇನೆಂದರೆ, ದೇವಿಯೇ ನಿನಗೆ ಅನಂಗಪ್ರಭೆಯ ಶಾಪವನ್ನು ವರ್ಣಿಸುವ ಸ್ವಪ್ನದಲ್ಲಿ ಮುಂದೆ ಆಗುವುದನ್ನು ಹೇಳಿದ್ದುದು ನಿನಗೆ ಹೇಗೆ ಮರೆತು ಹೋಯಿತು ?

೨೩೫. ಆದುದರಿಂದ ಆಗಬೇಕಾದ ಈ ವಿಷಯದಲ್ಲಿ ವ್ಯರ್ಥವಾದ ಈ ನಿನ್ನ ವ್ಯಾಮೋಹ ಎಂತಹುದು ? ಮತ್ತೆ ಮತ್ತೆ ಅತ್ಯಂತ ದುಃಖವನ್ನು ಉಂಟುಮಾಡುವ ಈ ಪಾಪ ಪರಂಪರೆಯನ್ನು ಬಿಟ್ಟುಬಿಡು.

೨೩೬. ಸೋದರನೇ ! ಬೇರೆಯವನಲ್ಲಿ ಅನುರಕ್ತಳೂ ಪಾಪಕಾರಿಣಿಯೂ ಆದ ಅವಳು ನಿನಗೆ ದ್ರೋಹವನ್ನು ಮಾಡಿದ ಕಾರಣದಿಂದ ವಿದ್ಯಾಪ್ರಭಾವವನ್ನು ಕಳೆದುಕೊಂಡು ಮನುಷ್ಯ ಸ್ತ್ರೀಯಾಗಿದ್ದಾಳೆ. ಅಂತಹವಳಿಂದ ನಿನಗೆ ಈಗ ಆಗಬೇಕಾದುದೇನು ?'

೨೩೭. ಆ ಸಾಧ್ವಿಯು ಹೀಗೆ ಹೇಳಿದಮೇಲೆ ಅನಂಗಪ್ರಭೆಯ ಆಸೆಯನ್ನು ಬಿಟ್ಟು ಆ ಚಾಪಲದಿಂದ ಜೀವದತ್ತನ ಮನಸ್ಸು ಮುಕ್ತವಾಗಿ ಅವನು ಆ ಸಾಧ್ವಿಯನ್ನು ಕುರಿತು ಹೇಳಿದನು.

---

ಸಾ ಚ ಶಕ್ಯಾ ನ ತೇ ಪ್ರಾಪ್ತುಂ ಸ ಹಿ ರಾಜಾ ಮಹಾಬಲಃ ।
ಸಾ ಪುನಸ್ತಮಪಿ ತ್ಯಕ್ತ್ವಾ ಕುಲಟಾನ್ಯತ್ರ ಯಾಸ್ಯತಿ ॥ ೨೩೨

ಖಡ್ಗಂ ಚ ದೇವೀ ಪ್ರಾದಾತ್ತೇ ತತ್ಪ್ರಾಪ್ತ್ಯೈ ತದ್ವಿಧಾಯ ಸಃ ।
ತಸ್ಯಾಂ ಹೃತಾಯಾಂ ದಿವ್ಯತ್ವಾದ್ದೇವ್ಯಾ ಏವಾಂತಿಕಂ ಗತಃ ॥ ೨೩೩

ಕಿಂ ಚ ದೇವ್ಯೈವ ತೇಽನಂಗಪ್ರಭಾಶಾಪೋಪವರ್ಣನೇ ।
ಸ್ವಪ್ನೇ ಭಾವಿ ಯದಾದಿಷ್ಟಂ ತತ್ಕಥಂ ವಿಸ್ಮೃತಂ ತವ ॥ ೨೩೪

ತದೇಷ ಭವಿತವ್ಯೇಽರ್ಥೇ ವ್ಯಾಮೋಹಸ್ತೇ ವೃಥೈವ ಕಃ ।
ಪಾಪಾನುಬಂಧಂ ಮುಂಚೈನಂ ಭೂಯೋಭೂಯೋಽತಿದುಃಖದಮ್ ॥
೨೩೫

ಕಿಂ ವಾಧುನಾ ತವ ತಯಾ ಪಾಪಯಾನ್ಯಾನುರಕ್ತಯಾ ।
ಮಾನುಷೀಭೂತಯಾ ಭ್ರಾತಸ್ತ್ವದ್ದ್ರೋಹಭ್ರಷ್ಟವಿದ್ಯಯಾ ॥ ೨೩೬

ಇತ್ಯುಕ್ತೇ ಸ ತಯಾ ಸಾಧ್ವ್ಯಾ ತ್ಯಕ್ತಾನಂಗಪ್ರಭಾಸ್ಪೃಹಃ ।
ತಚ್ಚಾಪಲವಿರಕ್ತಾತ್ಮಾ ಜೀವದತ್ತೋ ಜಗಾದ ತಾಮ್ ॥ ೨೩೭

೨೩೮. "ಅಮ್ಮ ! ಈ ನಿನ್ನ ಸತ್ಯವಾದ ಮಾತಿನಿಂದ ನನ್ನ ಮೋಹವು ಶಾಂತವಾಯಿತು. ಪುಣ್ಯಕರ್ಮ ಮಾಡಿದವರೊಡನೆ ಸಾಹಚರ್ಯವು ಯಾರಿಗೆ ತಾನೆ ಶ್ರೇಯಸ್ಸನ್ನು ತರುವುದಿಲ್ಲ ?

೨೩೯. ಹಿಂದಿನ ಪಾಪದ ಕಾರಣದಿಂದ ನನಗೆ ಈ ದುಃಖವು ಬಂದೊದಗಿತು. ಅದನ್ನು ತೊಳೆದುಕೊಳ್ಳುವುದಕ್ಕಾಗಿ ಮತ್ಸರವನ್ನು ತ್ಯಜಿಸಿ ತೀರ್ಥ ಯಾತ್ರೆ ಮಾಡುವೆನು.

೨೪೦. ಅನಂಗಪ್ರಭೆಯ ಕಾರಣಕ್ಕಾಗಿ ಬೇರೆಯವರೊಡನೆ ವೈರ ಕಟ್ಟಿಕೊಂಡು ನನಗೆ ಆಗಬೇಕಾದುದೇನು ? ಕ್ರೋಧವನ್ನು ಜಯಿಸಿದವನು ಈ ಜಗತ್ತೆಲ್ಲವನ್ನೂ ಗೆಲ್ಲುತ್ತಾನೆ.'

೨೪೧. ಜೀವದತ್ತನು ಹೀಗೆ ಹೇಳುತ್ತಿರುವಾಗ ಧಾರ್ಮಿಕನೂ ಅತಿಥಿಪ್ರಿಯನೂ ಆದ ಪ್ರಿಯದತ್ತೆಯ ಪತಿಯು ಮನೆಯ ಒಳಗೆ ಬಂದನು.

೨೪೨. ಅವನಿಂದಲೂ ಆತಿಥ್ಯವನ್ನು ಪಡೆದ ಜೀವದತ್ತನು ದುಃಖದಿಂದ ಮುಕ್ತನಾಗಿ ಅಲ್ಲಿಯೇ ವಿಶ್ರಾಂತಿ ಪಡೆದು ಅನಂತರ ಅವರಿಬ್ಬರಿಂದಲೂ ಬೀಳ್ಕೊಂಡು ಅಲ್ಲಿಂದ ತೀರ್ಥಯಾತ್ರೆಗೆ ಹೊರಟನು.

೨೪೩. ಅನಂತರ ಅವನು ಅನೇಕ ಕಾಡುಮೇಡುಗಳ ಸಂಚಾರದ ಕಷ್ಟಗಳನ್ನು ಸಹಿಸುತ್ತಾ ಕೇವಲ ಕಂದಮೂಲಫಲಗಳನ್ನು ತಿನ್ನುತ್ತಾ ಭೂಮಿಯಲ್ಲಿ ಸಿಗುವ ಎಲ್ಲ ತೀರ್ಥಕ್ಷೇತ್ರಗಳನ್ನೂ ಸುತ್ತಿದನು.

---

ಶಾಂತಸ್ತ್ವದ್ವಚಸಾ ಮೋಹಃ ಸತ್ಯೇನಾಂಬಾಮುನಾ ಮಮ ।
ಕಾಮಂ ನ ಶ್ರೇಯಸೇ ಕಸ್ಯ ಸಂಗಮಃ ಪುಣ್ಯಕರ್ಮಭಿಃ ॥ ೨೩೮

ಪೂರ್ವಪಾಪವಶಾದೇತದ್ದುಃಖಮಾಪತಿತಂ ಮಮ ।
ತತ್ಕ್ಷಾಲನಾಯ ಯಾಸ್ಯಾಮಿ ತೀರ್ಥಾನ್ಯುಜ್ಝಿತಮತ್ಸರಃ ॥ ೨೩೯

ಕೋ ಮೇಽನಂಗಪ್ರಭಾಹೇತೋರ್ವೈರೇಣಾರ್ಥಃ ಪರೈಃ ಸಹ ।
ಜಿತಕ್ರೋಧೇನ ಸರ್ವಂ ಹಿ ಜಗದೇತದ್ವಿಜೀಯತೇ ॥ ೨೪೦

ಇತಿ ಯಾವತ್ಸ ವಕ್ತ್ಯತ್ರ ತಾವತ್ತಸ್ಯಾಃ ಪತಿರ್ಗೃಹೇ ।
ಆಯಯೌ ಪ್ರಿಯದತ್ತಾಯಾ ಧಾರ್ಮಿಕೋಽತಿಥಿವತ್ಸಲಃ ॥ ೨೪೧

ಕೃತಾತಿಥ್ಯೇನ ತೇನಾಪಿ ತ್ಯಾಜಿತೋ ದುಃಖಮತ್ರ ಸಃ ।
ವಿಶ್ರಮ್ಯ ತೀರ್ಥಯಾತ್ರಾಯೈ ಪ್ರಾಯಾದಾಪೃಚ್ಛ್ಯ ತಾವುಭೌ ॥ ೨೪೨

ತತಃ ಕ್ರಮೇಣ ಸರ್ವಾಣಿ ಪೃಥ್ವ್ಯಾಂ ತೀರ್ಥಾನಿ ಸೋಽಭ್ರಮತ್ ।
ವಿಸೋಢಾನೇಕಕಾಂತಾರಕಷ್ಟೋ ಮೂಲಫಲಾಶನಃ ॥ ೨೪೩

೨೫೪. ತೀರ್ಥಕ್ಷೇತ್ರಗಳನ್ನು ಸುತ್ತಿದ ಅವನು ಅದೇ ವಿಂಧ್ಯವಾಸಿನಿಯನ್ನು ದರ್ಶಿಸಲು ಅಲ್ಲಿಗೆ ಹೋದನು. ಅಲ್ಲಿ ಕುಶಾಸನದಲ್ಲಿ (ಕುಳಿತು) ನಿರಾಹಾರನಾಗಿ ತೀವ್ರವಾದ ತಪಸ್ಸನ್ನು ಆಚರಿಸಿದನು.

೨೫೫. ಅವನ ತಪಸ್ಸಿನಿಂದ ಸಂತುಷ್ಟಳಾದ ಅಂಬಿಕೆಯು ಪ್ರತ್ಯಕ್ಷಳಾಗಿ ಅವನನ್ನು ಕುರಿತು ಹೀಗೆ ಹೇಳಿದಳು. "ಪುತ್ರನೇ ! ಏಳು. ನೀವುಗಳು ನಾಲ್ಕು ಮಂದಿ ನನ್ನ ಗಣಗಳು.

೨೫೬. ಪಂಚಮೂಲ, ಚತುರ್ವಕ್ತ್ರ ಮಹೋದರಮುಖ ಎಂಬ ಮೂರು ಮಂದಿ ಮತ್ತು ಉತ್ತಮನೂ ವಿಕಟವದನ ಎಂಬ ಹೆಸರಿನ ನಾಲ್ಕನೆಯವನಾದ ನೀನೂ (ಆ ನಾಲ್ಕೂ ಮಂದಿ ಗಣಗಳು)

೨೫೭. ನೀವುಗಳು ಒಂದು ಸಾರಿ ವಿಹಾರಮಾಡುವುದಕ್ಕಾಗಿ ಗಂಗಾನದಿಯ ಮರಳಿನ ರಾಶಿಯ ಬಳಿ ಹೋದಿರಿ. ಆಗ ಅಲ್ಲಿ ಸ್ನಾನಮಾಡುತ್ತಿದ್ದ ಒಬ್ಬ ಮುನಿಕನ್ಯೆಯನ್ನು ನೋಡಿದಿರಿ.

೨೫೮. ಕಪಿಲಜಟ ಎಂಬ ಹೆಸರಿನ ಮಹರ್ಷಿಯ ಮಗಳಾದ ಅವಳ ಹೆಸರು ಚಾಪಲೇಖಾ ಎಂದು. ನೀವೆಲ್ಲರೂ ಮದನಾತುರರಾಗಿ ಅವಳನ್ನು ಪ್ರಾರ್ಥಿಸಿದಿರಿ.

೨೫೯. "ನಾನೊಬ್ಬ ಕನ್ಯೆ. ಇಲ್ಲಿಗೆ ಸ್ನಾನಕ್ಕಾಗಿ ಬಂದಿದ್ದೇನೆ' ಎಂದು ಅವಳು ಹೇಳಲಾಗಿ ಇತರ ಆ ಮೂರು ಮಂದಿಯೂ ಸುಮ್ಮನೆ ಇದ್ದರು. ನೀನಾದರೋ ಅವಳನ್ನು ಬಲಾತ್ಕಾರದಿಂದ ಬಾಹುವಿನಲ್ಲಿ ಹಿಡಿದೆ

---

ಭ್ರಾಂತತೀರ್ಥಶ್ಚ ತಾಮೇವ ಸ ಯಯೌ ವಿಂಧ್ಯವಾಸಿನೀಮ್ ।
ತತ್ರ ತೇಪೇ ತಪಸ್ತೀವ್ರಂ ನಿರಾಹಾರಃ ಕುಶಾಸ್ತರೇ ॥ ೨೫೪

ತಪಸ್ತುಷ್ಟಾ ಚ ಸಾ ಸಾಕ್ಷಾದುವಾಚೈವಂ ತಮಂಬಿಕಾ ।
ಉತ್ತಿಷ್ಠ ಪುತ್ರ ಯೂಯಂ ಹಿ ಚತ್ವಾರೋ ಮಾಮಕಾ ಗಣಾಃ ॥ ೨೫೫

ಪಂಚಮೂಲಚತುರ್ವಕ್ತ್ರಮಹೋದರಮುಖಾಸ್ತ್ರಯಃ ।
ತ್ವಂ ಚತುರ್ಥಶ್ಚ ವಿಕಟವದನಾಖ್ಯಃ ಕ್ರಮೋತ್ತಮಃ ॥ ೨೫೬

ತೇ ಯೂಯಂ ಜಾತು ಗಂಗಾಯಾ ವಿಹರ್ತುಂ ಪುಲಿನಂ ಗತಾಃ ।
ತತ್ರ ಸ್ನಾಂತೀ ಚ ಯುಷ್ಮಾಭಿರ್ದೃಷ್ಟೈಕಾ ಮುನಿಕನ್ಯಕಾ ॥ ೨೫೭

ಚಾಪಲೇಖೇತಿ ಕಪಿಲಜಟಾಖ್ಯಸ್ಯ ಮುನೇಃ ಸುತಾ ।
ಪ್ರಾರ್ಥ್ಯತೇ ಸ್ಮ ಚ ಸರ್ವೈಃ ಸಾ ಭವದ್ಭಿರ್ಮದನಾತುರೈಃ ॥ ೨೫೮

ಕನ್ಯಾಹಮುಪಯಾತೇತಿ ತಯೋಕ್ತೇ ತೇ ತ್ರಯೋಽಪರೇ ।
ತೂಷ್ಣೀಮಾಸಂಸ್ತ್ವಯಾ ಸಾ ತು ಹಠಾದ್ಬಾಹಾವಗೃಹ್ಯತ ॥ ೨೫೯

೨೫೦. ಆಗ ಅವಳು "ತಂದೆಯೇ ! ತಂದೆಯೇ ! ಕಾಪಾಡು" ಎಂದು ಕೂಗಿಕೊಂಡಳು. ಅದನ್ನು ಕೇಳಿ ಅಲ್ಲೇ ಹತ್ತಿರದಲ್ಲೇ ಇದ್ದ ಆ ಮುನಿಯು ಕ್ರುದ್ಧನಾಗಿ ಬಂದನು.

೨೫೧. ಆ ಮುನಿಯನ್ನು ನೋಡಿ ನೀನು ಅವಳನ್ನು ಬಿಟ್ಟೆ. ಅನಂತರ ಆ ಮುನಿಯು ನಿಮ್ಮನ್ನು "ಪಾಪಿಷ್ಠರೇ ! ಎಲ್ಲರೂ ಮನುಷ್ಯಯೋನಿಯನ್ನು ಹೊಂದಿರಿ" ಎಂದು ತತ್ಕ್ಷಣದಲ್ಲಿ ಶಪಿಸಿದನು.

೨೫೨–೨೫೩. ಅನಂತರ ನಿನ್ನ ಬೇಡಿಕೆಯಂತೆ ಆ ಮುನಿಯು ನಿಮಗೆ ಶಾಪಾಂತವನ್ನು ಹೀಗೆ ಹೇಳಿದನು.' "ರಾಜಪುತ್ರಿಯಾದ ಅನಂಗಪ್ರಭೆಯನ್ನು ನೀವು ಬೇಡಿ ಅವಳು ವಿದ್ಯಾಧರ ಲೋಕಕ್ಕೆ ಹೋದಾಗ ಈ ಮೂರು ಮಂದಿಯೂ ಬಿಡುಗಡೆ ಹೊಂದುವರು. ನೀನಾದರೋ ವಿದ್ಯಾಧರಿಯಾದ ಇವಳ ಬಳಿ ಸಾರಿ ಅಪಹರಿಸುವಿ.

೨೫೪. ವಿಕಟವದನನೇ ! ನಿನಗೆ ದೊಡ್ಡವ್ಯಸನ ಕಾದಿದೆ. ಮತ್ತು ನೀನು ಬಹಳಕಾಲ ದೇವಿಯನ್ನು ಆರಾಧಿಸಿ ಈ ಶಾಪದ ದೆಸೆಯಿಂದ ಬಿಡುಗಡೆಯನ್ನು ಹೊಂದುವೆ.

೨೫೫. ನೀನು ಈ ಚಾಪಲೇಖೆಯ ಕೈಯನ್ನು ಮುಟ್ಟಿದುದರಿಂದ ನಿನಗೆ ಪರಸ್ತ್ರೀಯ ಅಪಹಾರದ ದೊಡ್ಡ ಪಾಪವು ಬಂದಿದೆ"

೨೫೬. ಹೀಗೆ ಆ ಮಹರ್ಷಿಯಿಂದ ಶಪ್ತರಾದ ನನ್ನ ಗಣಗಳಾದ ನೀವು ಅನಂತರ ದಕ್ಷಿಣಾಪಥದಲ್ಲಿ ಮಹಾ ವೀರರಾಗಿ ಹುಟ್ಟಿದ್ದೀರಿ.

---

ಕ್ರುಂದತಿ ಸ್ಮ ಚ ಸಾ ತಾತ ತಾತ ತ್ರಾಯಸ್ವ ಮಾಮಿತಿ ।
ತಚ್ಛ್ರುತ್ವಾ ನಿಕಟಸ್ಥೋಽತ್ರಸ ಕ್ರುದ್ಧೋ ಮುನಿರಾಗಮತ್ ॥ ೨೫೦
ತಂ ದೃಷ್ಟ್ವಾ ಸಾ ತ್ವಯಾ ಮುಕ್ತಾ ತತೋಽಯುಷ್ಮಾನ್ ಶಶಾಪ ಸಃ ।
ಮನುಷ್ಯಯೋನಿಂ ಪಾಪಿಷ್ಠಾ ಸರ್ವೇ ಯಾತೇತಿ ತತ್ಕ್ಷಣಾತ್ ॥ ೨೫೧
ಪ್ರಾರ್ಥಿತಃ ಸೋಽಥ ಶಾಪಾಂತಮೇವಂ ವೋ ಮುನಿರಭ್ಯಧಾತ್ ।
ಯದಾನಂಗಪ್ರಭಾರಾಜಸುತಾ ಯುಷ್ಮಾಭಿರರ್ಥಿತಾ ॥ ೨೫೨
ಗತಾ ವೈದ್ಯಾಧರಂ ಲೋಕಂ ಮೋಕ್ಷ್ಯಾಶ್ಚಾಮೀ ತದಾ ತ್ರಯಃ ।
ತ್ವಂ ತು ವಿದ್ಯಾಧರೀಭೂತಾಂ ಪ್ರಾಪ್ಯೈತಾಂ ಹಾರಯಿಷ್ಯಸಿ ॥ ೨೫೩
ತತಃ ಪ್ರಾಪ್ತಾಸಿ ವಿಕಟವದನವ್ಯಸನಂ ಮಹತ್ ।
ಚಿರಾಚ್ಚ ದೇವೀಮಾರಾಧ್ಯ ಶಾಪಾದಸ್ಮಾದ್ವಿಮೋಕ್ಷ್ಯಸೇ ॥ ೨೫೪
ತ್ವಯಾಸ್ಯಾಶ್ಚಾಪಲೇಖಾಯಾ ಹಸ್ತಸ್ಪರ್ಶೋ ಯತಃ ಕೃತಃ ।
ಪರದಾರಾಪಹಾರೋತ್ಥಂ ಪಾಪಮಸ್ತಿ ಚ ತೇ ಬಹು ॥ ೨೫೫
ಇತಿ ಯೇ ಮದ್ಗಣಾ ಯೂಯಂ ಶಪ್ತಾಸ್ತೇನ ಮಹರ್ಷಿಣಾ ।
ತೇಽಥ ಜಾತಾಃ ಸ್ಥ ಚತ್ವಾರಃ ಪ್ರವೀರಾ ದಕ್ಷಿಣಾಪಥೇ ॥ ೨೫೬

೨೫೭. ಪಂಚಪಟ್ಟಿಕ, ಭಾಷಾಜ್ಞ ಎಂಬ ಇಬ್ಬರೂ ಮತ್ತೆ ಮೂರನೆಯವನಾದ ಖಡ್ಗಧರನೆಂಬುವನೂ ನಿನ್ನ ಸ್ನೇಹಿತರು. ನಾಲ್ಕನೆಯವನಾದ ನೀನೇ ನೀಚನಾದ ಜೀವದತ್ತನು.

೨೫೮. ಅನಂಗರತಿಯು ತನ್ನ ಸ್ಥಾನಕ್ಕೆ (ಲೋಕಕ್ಕೆ) ಹೋದ ಮೇಲೆ ಆ ಮೂರು ಮಂದಿಯೂ ಇಲ್ಲಿಗೆ ಬಂದೇ ನನ್ನ ಅನುಗ್ರಹದಿಂದ ಶಾಪದ ದೆಸೆಯಿಂದ ಬಿಡುಗಡೆಹೊಂದಿದರು.

೨೫೯. ಇಂದು ನೀನೂ ನನ್ನನ್ನು ಆರಾಧಿಸಿದ್ದೀಯೆ. ಆದ್ದರಿಂದ ನಿನಗೆ ಶಾಪನಾಶವು ಉಂಟಾಗಿದೆ. ಆದುದರಿಂದ ಈ ಅಗ್ನಿಧಾರಣೆಯನ್ನು ಮಾಡಿ ನಿನ್ನ ಶರೀರವನ್ನು ತ್ಯಜಿಸು.

೨೬೦. ಎಂಟು ಜನ್ಮಗಳಲ್ಲಿ ಅನುಭವಿಸಲು ಯೋಗ್ಯವಾದ ಆ ಪಾಪವನ್ನು ಒಂದೇ ಬಾರಿಗೆ ಸುಟ್ಟು ಹಾಕು." ಹೀಗೆ ಹೇಳಿ ದೇವಿಯು ಅಗ್ನಿಧಾರಣೆಯನ್ನು ಅವನಿಗೆ ಕೊಟ್ಟು ಅಂತರ್ಧಾನವಾದಳು.

೨೬೧. ಜೀವದತ್ತನು ಆ ಅಗ್ನಿಧಾರಣೆಯಿಂದ ಮನುಷ್ಯ ದೇಹವನ್ನೂ ಪಾಪವನ್ನೂ ಸುಟ್ಟುಹಾಕಿ ದೀರ್ಘಕಾಲದ ಶಾಪದಿಂದ ಬಿಡುಗಡೆ ಹೊಂದಿ ಗಣಶ್ರೇಷ್ಠನಾಗಿ ಆದನು.

೨೬೨. ಅಯ್ಯೋ ! ದೇವತೆಗಳಿಗೂ ಕೂಡ ಪರಸ್ತ್ರೀಸಾಹಚರ್ಯದಿಂದ ಉಂಟಾದ ಪಾಪದಿಂದ ಇಂತಹ ಕಷ್ಟ ಒದಗುವಾಗ ಇನ್ನು ಬೇರೆಯವರ ಗತಿಯೇನು ?

---

ಪಂಚಪಟ್ಟಿಕಭಾಷಾಜ್ಞೌ ಯೌ ತೌ ಖಡ್ಗಧರಶ್ಚ ಯಃ ।
ಸಖಾಯಸ್ತೇ ತ್ರಯಸ್ತ್ವಂ ಚ ಚತುರ್ಥೋ ಜೀವದತ್ತಕಃ ॥ ೨೫೭
ತೇ ಚ ತ್ರಯೋಽನಂಗರತೌ ಪ್ರಯಾತಾಯಾಂ ನಿಜಂ ಪದಮ್ ।
ಇಹಾಗತ್ಯೈವ ನಿರ್ಮುಕ್ತಾ ಮತ್ಪ್ರಸಾದೇನ ಶಾಪತಃ ॥ ೨೫೮
ತ್ವಯಾ ಚಾರಾಧಿತಾಸ್ಮ್ಯದ್ಯ ಜಾತಃ ಶಾಪಕ್ಷಯಶ್ಚ ತೇ ।
ತದಾಗ್ನೇಯೀಂ ಗೃಹೀತ್ವೇಮಾಂ ಧಾರಣಾಂ ಸ್ವತನುಂ ತ್ಯಜ ॥ ೨೫೯
ಅಷ್ಟಜನ್ಮೋಪಭೋಗ್ಯಂ ಚ ಪಾತಕಂ ತತ್ಸಕೃದ್ದಹ ।
ಇತ್ಯುಕ್ತ್ವಾ ಧಾರಣಾಂ ದತ್ತ್ವಾ ದೇವೀ ತಸ್ಯ ತಿರೋದಧೇ ॥ ೨೬೦
ಸ ಮರ್ತ್ಯದೇಹಂ ಪಾಪಂ ಚ ದಗ್ಧ್ವಾ ಧಾರಣಯಾ ತಯಾ ।
ಜೀವದತ್ತಶ್ಚಿರಾಚ್ಛಾಪಮುಕ್ತೋ ಜಜ್ಞೇ ಗಣೋತ್ತಮಃ ॥ ೨೬೧
ದೇವಾನಾಮಪ್ಯಹೋ ಯೇನ ಪಾಪೇನ ಕ್ಲೇಶ ಈದೃಶಃ ।
ಪರಸ್ತ್ರೀಸಂಗಮೋತ್ಥೇನ ಹಾನ್ಯೇಷಾಂ ತೇನ ಕಾ ಗತಿಃ ॥ ೨೬೨

೩೩. ಹರಿವರಪಟ್ಟಣದಲ್ಲಿ ಆ ಅನಂಗಪ್ರಭೆಯು ಹರಿವರರಾಜನ ಅಂತಃಪುರ ಸ್ತ್ರೀಯರಲ್ಲಿ ಮುಖ್ಯಳಾದಳು.

೩೪. ರಾಜನೂ ಸುಮಂತ್ರನೆಂಬ ತನ್ನ ಮಂತ್ರಿಯಲ್ಲಿ ರಾಜ್ಯದ ಮಹಾಭಾರವನ್ನು ವಹಿಸಿ ಹಗಲೂ ರಾತ್ರಿ ಅನಂಗಪ್ರಭೆಯಲ್ಲೇ ಮನಸ್ಸನ್ನು ನೆಟ್ಟಿದ್ದನು.

೩೫. ಒಂದು ದಿವಸ ರಾಜನ ಬಳಿಗೆ ಮಧ್ಯದೇಶದಿಂದ ಲಬ್ಧವರನೆಂಬ ಹೊಸ ನಾಟ್ಯಾಚಾರ್ಯನು ಬಂದನು.

೩೬. ರಾಜನು ವಾದ್ಯ ಮತ್ತು ನಾಟ್ಯಗಳಲ್ಲಿ ಅವನ ನೈಪುಣ್ಯವನ್ನು ನೋಡಿ ಅವನನ್ನು ಬಹುವಾಗಿ ಸತ್ಕರಿಸಿ ಅವನನ್ನು ಅಂತಃಪುರಸ್ತ್ರೀಯರ ನಾಟ್ಯಾಚಾರ್ಯನನ್ನಾಗಿ ಮಾಡಿದನು.

೩೭. ಅನಂಗಪ್ರಭೆಯು ನೃತ್ಯ ಮಾಡುವಾಗ ಸಪತ್ನಿಯರಿಗೂ ಪ್ರಿಯವಾಗುವಂತೆ ಆ ನಾಟ್ಯಾಚಾರ್ಯನು ನೃತ್ಯದಲ್ಲಿ ಅವಳಿಗೆ ಪ್ರಾವೀಣ್ಯವನ್ನು ಉಂಟುಮಾಡಿದನು.

೩೮. ಅನಂತರ ಆ ನಾಟ್ಯಾಚಾರ್ಯನ ಸಹವಾಸದಿಂದಲೂ ನಾಟ್ಯ ಶಿಕ್ಷಣದ ಸಂತೋಷಾನುಭವದಿಂದಲೂ ಅನಂಗಪ್ರಭೆಯು (ಅವನಲ್ಲಿ) ಅನುರಕ್ತಳಾದಳು.

---

ತಾವಚ್ಚ ತತ್ರ ಸಾನಂಗಪ್ರಭಾಹರಿವರೇ ಪುರೇ ।
ರಾಜ್ಞೋ ಹರಿವರಸ್ಯಾಂತಃಪುರಾಣಾಂ ಪ್ರಾಪ ಮುಖ್ಯತಾಮ್ ॥ ೩೩
ಸ ಚ ರಾಜಾ ತದೇಕಾಗ್ರಮನಾಸ್ತಸ್ಥೌ ದಿವಾನಿಶಮ್ ।
ಸ್ವಮಂತ್ರಿಣಿ ಸುಮಂತ್ರಾಖ್ಯೇ ನ್ಯಸ್ತರಾಜ್ಯಮಹಾಭರಃ ॥ ೩೪
ಏಕದಾ ತಸ್ಯ ರಾಜ್ಞಶ್ಚ ನಿಕಟಂ ಮಧ್ಯದೇಶತಃ ।
ಆಗಾಲ್ಲಬ್ಧವರೋ ನಾಮ ನಾಟ್ಯಾಚಾರ್ಯೋಽತ್ರ ನೂತನಃ ॥ ೩೫
ಸ ದೃಷ್ಟಕೌಶಲಸ್ತೇನ ಭೂಭೃತಾ ವಾದ್ಯನಾಟ್ಯಯೋಃ ।
ಸಂಮಾನ್ಯಾಂತಃಪುರಸ್ತ್ರೀಣಾಂ ನಾಟ್ಯಾಚಾರ್ಯೋ ವ್ಯಧೀಯತ ॥ ೩೬
ತೇನಾನಂಗಪ್ರಭಾನೃತ್ತೇ ಪ್ರಕರ್ಷಂ ಪ್ರಾಪಿತಾ ತಥಾ ।
ನೃತ್ಯಂತ್ಯಪಿ ಸಪತ್ನೀನಾಂ ಸ್ಪೃಹಣೀಯಾಭವದ್ಯಥಾ ॥ ೩೭
ಸಹವಾಸಾಚ್ಚ ತಸ್ಯಾಥ ನೃತ್ತಶಿಕ್ಷಾರಸಾದಪಿ ।
ನಾಟ್ಯಾಚಾರ್ಯಸ್ಯ ಸಾನಂಗಪ್ರಭಾಭೂದನುರಾಗಿಣೀ ॥ ೩೮

೨೧೯. ಅಯ್ಯೋ, ಅವಳ ಸೌಂದರ್ಯ ಮತ್ತು ನಾಟ್ಯಾಭ್ಯಾಸದಿಂದ ಆಕೃಷ್ಟನಾದ ಆ ನಾಟ್ಯಾಚಾರ್ಯನೂ ಕೂಡ ಮೆಲ್ಲಗೆ ಕಾಮದಿಂದ ಬೇರೆಯೇ ನಾಟ್ಯವಾಡಿದನು.

೨೨೦. ಒಂದು ಬಾರಿ ನಿರ್ಜನವಾದ ಆ ನಾಟ್ಯಗೃಹದಲ್ಲಿ ಅನಂಗಪ್ರಭೆಯು ಸುರತಲಾಲಸಳಾಗಿ ಆ ನಾಟ್ಯಾಚಾರ್ಯನ ಬಳಿ ಹಠಾತ್ತಾಗಿ ಸಾರಿದಳು.

೨೨೧. ಸುರತದ ಕೊನೆಯಲ್ಲಿ ಅವಳು ಅತ್ಯಂತ ಅನುರಾಗದಿಂದ ಅವನನ್ನು ಕುರಿತು ಹೇಳಿದಳು. "ನಿನ್ನನ್ನು ಬಿಟ್ಟು ನಾನು ಒಂದು ಕ್ಷಣವೂ ಇರಲಾರೆ.

೨೨೨. ಆದರೆ ರಾಜನಾದ ಹರಿವರನಿಗೆ ಈ ವಿಷಯ ತಿಳಿದರೆ ಅವನು ಕ್ಷಮಿಸುವುದೇ ಇಲ್ಲ. ಆದುದರಿಂದ ರಾಜನಿಗೆ ಗೊತ್ತಿಲ್ಲದ ಸ್ಥಳಕ್ಕೆ ಹೋಗೋಣ ಬಾ.

೨೨೩. ನಾಟ್ಯದಿಂದ ಸಂತುಷ್ಟನಾದ ರಾಜನು ಕೊಟ್ಟಿರುವ ಸುವರ್ಣ, ಕುದುರೆ, ಒಂಟೆ–ಮುಂತಾದ ಧನವು ನಿನಗೂ ಇದೆ. ನನಗೂ ಆಭರಣಗಳಿವೆ.

೨೨೪. ಆದುದರಿಂದ ನಿರ್ಭಯರಾಗಿ ಇರುವಂತಹ ಸ್ಥಳಕ್ಕೆ ಶೀಘ್ರವಾಗಿ ಹೋಗೋಣ." ಹರ್ಷಗೊಂಡ ಆ ನಾಟ್ಯಾಚಾರ್ಯನು ಅವಳ ಈ ಮಾತನ್ನು ಅನುಮೋದಿಸಿದನು.

೨೨೫. ಅನಂತರ ಅನಂತಪ್ರಭೆಯು ಪುರುಷವೇಷವನ್ನು ಧರಿಸಿ ಅತ್ಯಂತ ಆತ್ಮೀಯಳಾದ ಒಬ್ಬ ದಾಸಿಯೊಡನೆ ನಾಟ್ಯಾಚಾರ್ಯನ ಮನೆಗೆ ಹೋದಳು.

---

ತಸ್ಯಾಶ್ಚ ರೂಪನೃತ್ತಾಭ್ಯಾಮಾಕೃಷ್ಟಃ ಸ ಶನೈರಹೋ ।
ನಾಟ್ಯಾಚಾರ್ಯೋಽಪಿ ಕಾಮೇನ ಕಿಮಪ್ಯನ್ಯದನೃತ್ಯತ ॥ ೨೧೯
ವಿಜನೇ ಚೈಕದಾನಂಗಪ್ರಭಾ ಸಾ ನಾಟ್ಯವೇಶ್ಮನಿ ।
ಪ್ರಸಹ್ಯ ನಾಟ್ಯಾಚಾರ್ಯಂ ತಮುಪಾಗಾದ್ರತಲಾಲಸಾ ॥ ೨೨೦
ಸುರತಾಂತೇ ಚ ಸಾತ್ಯಂತಸಾನುರಾಗಾ ಜಗಾದ ತಮ್ ।
ತ್ವಯಾ ವಿನಾಕೃತಾ ನಾಹಂ ಸ್ಥಾತುಂ ಶಕ್ನೋಮ್ಯಪಿ ಕ್ಷಣಮ್ ॥ ೨೨೧
ರಾಜಾ ಹರಿವರಶ್ಚೈತದ್ಬುದ್ಧ್ವಾ ನೈವ ಕ್ಷಮಿಷ್ಯತೇ ।
ತದೇಹ್ಯನ್ಯತ್ರ ಗಚ್ಛಾವೋ ಯತ್ರ ರಾಜಾ ನ ಬುಧ್ಯತೇ ॥ ೨೨೨
ಅಸ್ತಿ ಹೇಮಹಯೋಷ್ಟ್ರಾದಿ ಧನಂ ತವ ಚ ಭೂಭೃತಾ ।
ನಾಟ್ಯತುಷ್ಟೇನ ಯದ್ದತ್ತಮಸ್ತಿ ಚಾಭರಣಂ ಮಮ ॥ ೨೨೩
ತತ್ತತ್ರ ತ್ವರಿತಂ ಯಾಮಃ ಸ್ಥಾಸ್ಯಾಮೋ ಯತ್ರ ನಿರ್ಭಯಾಃ ।
ಏತತ್ಸ ತದ್ವಚೋ ಹೃಷ್ಟೋ ನಾಟ್ಯಾಚಾರ್ಯೋಽನ್ವಮನ್ಯತ ॥ ೨೨೪
ತತಃ ಪುರುಷವೇಷಂ ಸಾ ಕೃತ್ವಾನಂಗಪ್ರಭಾ ಯಯೌ ।
ನಾಟ್ಯಾಚಾರ್ಯಗೃಹಂ ಚೇಟ್ಯಾ ಸಹ ಸುಸ್ನಿಗ್ಧಯೈಕಯಾ ॥ ೨೨೫

೨೭೬ ಅಲ್ಲಿಂದ ಒಂಟೆಯ ಬೆನ್ನಿನ ಮೇಲೆ ಧನ ಸಮೃದ್ಧಿಯನ್ನು ಹಾಕಿಕೊಂಡು ಅನಂತಪ್ರಭೆಯು ಆ ನಾಟ್ಯೋಪದೇಶಕನೊಡನೆ ಕುದುರೆಯನ್ನು ಏರಿ ಹೊರಟಳು.

೨೭೭ ಅನಂಗಪ್ರಭೆಯು ಮೊದಲು ವಿದ್ಯಾಧರ ಸಂಬಂಧವಾದ ಐಶ್ವರ್ಯವನ್ನು ತ್ಯಜಿಸಿ ಮತ್ತೆ ರಾಜಸಂಪತ್ತನ್ನೂ ಬಿಟ್ಟು ಅಲೆಮಾರಿ ಸಂಪತ್ತನ್ನು (ಸ್ತುತಿಪಾಠಕ ಸಮೃದ್ಧಿಯನ್ನು) ಆಶ್ರಯಿಸಿದಳು. ಸ್ತ್ರೀಯರ ಚಂಚಲವಾದ ಮನಸ್ಸಿಗೆ ಧಿಕ್ಕಾರವಿರಲಿ.

೨೭೮. ಅನಂತರ ಅನಂಗಪ್ರಭೆಯು ಆ ನಾಟ್ಯಾಚಾರ್ಯನೊಡನೆ ದೂರ ಹೋಗಿ ವಿಯೋಗಪುರವೆಂಬ ಹೆಸರುಳ್ಳ ಪಟ್ಟಣವನ್ನು ತಲುಪಿದಳು.

೨೭೯. ಅಲ್ಲಿ ಆ ನಾಟ್ಯಾಚಾರ್ಯನೊಡನೆ ಅನಂಗಪ್ರಭೆಯು ಸುಖವಾಗಿ ಇದ್ದಳು. ಆ ನಾಟ್ಯ ಶ್ರೇಷ್ಠನೂ ಕೂಡ ತನಗೆ ಅವಳು ಸಿಕ್ಕಂದಿನಿಂದ ತನ್ನ ಲಬ್ಧವರನೆಂಬ ಹೆಸರು ಸತ್ಯವಾಯಿತೆಂದು ತಿಳಿದನು.

೨೮೦. ಅಷ್ಟರಲ್ಲಿ ಪ್ರಿಯೆಯಾದ ಅನಂಗಪ್ರಭೆಯು ಎಲ್ಲಿಗೋ ಹೋದಳೆಂದು ತಿಳಿದು ರಾಜಾ ಹರಿವರನು ಶೋಕದಿಂದ ದೇಹತ್ಯಾಗವನ್ನು ಮಾಡಲು ಪ್ರವೃತ್ತನಾದನು.

೨೮೧. ಆಗ ಸುಮಂತ್ರನೆಂಬ ಮಂತ್ರಿಯು ರಾಜನನ್ನು ಸಮಾಧಾನಪಡಿಸುತ್ತಾ ಹೇಳಿದನು. ""ಪ್ರಭುವೇ ! ನಿನಗೆ ಯಾವುದು ತಾನೆ ತಿಳಿದಿಲ್ಲ ! ಅದನ್ನು ನೀನೇ ಪರ್ಯಾಲೋಚಿಸು.

---

ತತಸ್ತದೈವ ತೇನೋಷ್ಟ್ರಪೃಷ್ಠಾರ್ಪಿತಧನರ್ದ್ಧಿನಾ ।
ಸಾಕಂ ಸಾ ತುರಗಾರೂಢಾ ಪ್ರಾಯಾನ್ನಾಟ್ಯೋಪದೇಶಿನಾ ॥ ೨೭೬

ಸಾದೌ ವೈದ್ಯಾಧರೀಂ ಲಕ್ಷ್ಮೀಂ ತ್ಯಕ್ತ್ವಾ ರಾಜಶ್ರಿಯಂ ಪುನಃ ।
ಶಿಶ್ರಿಯೇ ಚಾರಣರ್ದ್ಧಿಂ ಸಾ ಧಿಕ್ ಸ್ತ್ರೀಣಾಂ ಚಪಲಂ ಮನಃ ॥ ೨೭೭

ಗತ್ವಾ ಚ ನಾಟ್ಯಾಚಾರ್ಯೇಣ ತೇನಾನಂಗಪ್ರಭಾ ಸಹ ।
ದೂರಂ ಸಾ ನಗರಂ ಪ್ರಾಪ ವಿಯೋಗಪುರಸಂಜ್ಞಕಮ್ ॥ ೨೭೮

ತತ್ರ ತತ್ಸಹಿತಾ ತಸ್ಥೌ ಸುಖಂ ಸಾ ಸೋಽಪಿ ಲಬ್ಧಯಾ ।
ತಯಾ ಲಬ್ಧವರಾಖ್ಯಾಂ ಸ್ವಾಂ ಸತ್ಯಾಂ ಮೇನೇ ನಟಾಗ್ರಣೀಃ ॥ ೨೭೯

ತಾವಚ್ಚ ತಾಂ ಗತಾಂ ಕ್ವಾಪಿ ಬುದ್ಧ್ವಾನಂಗಪ್ರಭಾಂ ಪ್ರಿಯಾಮ್ ।
ರಾಜಾ ಹರಿವರಃ ಸೋಽಭೂದ್ದೇಹತ್ಯಾಗೋನ್ಮುಖಃ ಶುಚಾ ॥ ೨೮೦

ತತಃ ಸುಮಂತ್ರೋ ಮಂತ್ರೀ ತಮುವಾಚಾಶ್ವಾಸಯನ್ನೃಪಮ್ ।
ದೇವ ಕಿಂ ಯನ್ನ ವೇತ್ಸಿ ತ್ವಂ ಪರ್ಯಾಲೋಚಯ ತತ್ಸ್ವಯಮ್ ॥ ೨೮೧

೨೮೨. ಪ್ರಭುವೇ ! ಖಡ್ಗವಿದ್ಯಾಧರನನ್ನು ತ್ಯಜಿಸಿ ನಿನ್ನನ್ನು ನೋಡಿದ ಮಾತ್ರಕ್ಕೆ ನಿನ್ನನ್ನು ಆಶ್ರಯಿಸಿದ ಅವಳಿಗೆ ನಿನ್ನಲ್ಲಿಯೂ ಸ್ಥಿರವಾಗಿರುವುದು ಹೇಗೆ ಆದೀತು ?

೨೮೩. ಸದ್ವಸ್ತುವಿನಲ್ಲಿ ಆಸೆಯನ್ನು ತೊರೆದು ಹುಲ್ಲುಕಡ್ಡಿಯ ದೃಷ್ಟಿಯ ಅನುರಾಗದಿಂದ ರತ್ನದಂಡವು ಹುಲ್ಲುಕಡ್ಡಿಯನ್ನು ಸೇರಿದಂತೆ ಅವಳು ಅಲ್ಪನಾದ ಯಾವನನ್ನೋ ಸ್ವೀಕರಿಸಿ ಹೊರಟುಹೋದಳು.

೨೮೪. ನಿಶ್ಚಯವಾಗಿ ನಾಟ್ಯಾಚಾರ್ಯನು ಅವಳನ್ನು ಒಯ್ದಿದ್ದಾನೆ ಅವನೂ ಕಾಣುತ್ತಿಲ್ಲವಷ್ಟೆ ಬೆಳಿಗ್ಗೆ ಅವರಿಬ್ಬರೂ ಸಂಗೀತ ಶಾಲೆಯಲ್ಲಿ ಇದ್ದರೆಂದೂ ಕೇಳಿಬಂದಿದೆ.

೨೮೫. ಆದ್ದರಿಂದ ದೇವ ! ಎಲ್ಲವನ್ನೂ ತಿಳಿದವನಾಗಿದ್ದರೂ ನಿನಗೆ ಅವಳಲ್ಲಿ ಹಠವೇಕೆ, ಹೇಳು. ವಿಲಾಸಿನಿಯು ಸಂಧ್ಯೆಯಂತೆ. ಅವಳ ಅನುರಾಗ (ಕೆಂಪು) ಕ್ಷಣಮಾತ್ರ ಇರುವಂತಹುದು."

೨೮೬. ಹೀಗೆ ಮಂತ್ರಿಯು ಹೇಳಿದಾಗ ಆ ಹರಿವರ ರಾಜನು ವಿಚಾರ ಮಾಡಲು ತೊಡಗಿ ಚಿಂತಿಸಿದನು. ""ಅಹೋ ! ಉತ್ತಮ ಬುದ್ಧಿಯುಳ್ಳ ಇವನು ನನಗೆ ಸತ್ಯವೇ ಹೇಳಿದ್ದಾನೆ

೨೮೭. ಪ್ರತಿಕ್ಷಣವೂ ರೂಪಾಂತರಗೊಳ್ಳುವ, ಹಾಗೂ ವಿರಸದಲ್ಲಿ ಕೊನೆಗೊಳ್ಳುವ ಸಂಸಾರಸ್ಥಿತಿಯಂತೆಯೇ ವಿಲಾಸಿನಿಯ ಸಂಬಂಧವೂ ಅನಿತ್ಯವಾದದ್ದು.

---

ಖಡ್ಗವಿದ್ಯಾಧರಂ ತ್ಯಕ್ತ್ವಾ ಪತಿಂ ತ್ವಾಂ ದೃಷ್ಟ್ವೈವ ಯಾ ।
ಉಪಾಶ್ರಿತಾ ಕಥಂ ತಸ್ಯಾಃ ಸ್ಥೈರ್ಯಂ ಸ್ಯಾತ್ತ್ವಯ್ಯಪಿ ಪ್ರಭೋ ॥ ೨೮೨
ಲಘುಂ ಕಂಚಿದ್ಗೃಹೀತ್ವಾ ಸಾ ಗತಾ ಸದ್ವಸ್ತುನಿಃಸ್ಪೃಹಾ ।
ತೃಣಂ ರತ್ನಶಲಾಕೇವ ತೃಣದೃಷ್ಟ್ಯನುರಾಗತಃ ॥ ೨೮೩
ನಾಟ್ಯಾಚಾರ್ಯೇಣ ಸಾ ನೂನಂ ನೀತಾ ಸ ಹಿ ನ ದೃಶ್ಯತೇ ।
ಸಂಗೀತಕಗೃಹೇ ಪ್ರಾತಸ್ತೌ ಸ್ಥಿತಾವಿತಿ ಚ ಶ್ರುತಮ್ ॥ ೨೮೪
ತದ್ದೇವ ವದ ಕಸ್ತಸ್ಯಾಂ ಜಾನತೋಽಪಿ ತವಾಗ್ರಹಃ ।
ವಿಲಾಸಿನೀ ಹಿ ಸರ್ವಸ್ಯ ಸಂಧ್ಯೇವ ಕ್ಷಣರಾಗಿಣೀ ॥ ೨೮೫
ಇತ್ಯುಕ್ತೋ ಮಂತ್ರಿಣಾ ಸೋಽಥ ವಿಚಾರಪತಿತೋ ನೃಪಃ ।
ಅಚಿಂತಯದಹೋ ಸತ್ಯಮುಕ್ತಂ ಮೇ ಸುಧಿಯಾಮುನಾ ॥ ೨೮೬
ಪರ್ಯಂತವಿರಸಾ ಕಷ್ಟಾ ಪ್ರತಿಕ್ಷಣವಿವರ್ತಿನೀ।
ಭವಸ್ಥಿತಿರಿವಾನಿತ್ಯಸಂಬಂಧಾ ಹಿ ವಿಲಾಸಿನೀ ॥ ೨೮೭

೨೮. ಬಿದ್ದವನನ್ನು ಮುಳುಗಿಸುವ, ಉತ್ಕಂಠೆಯನ್ನು ತೋರಿಸುವ (ಮೊಗ್ಗುಗಳನ್ನು ಮೇಲೆ ತೋರಿಸುವ) ಆಳವೇ ತಿಳಿಯದ (ಅಗಾಧವಾದ) ಸ್ತ್ರೀಯರಲ್ಲೂ ನದಿಗಳಲ್ಲೂ ಪ್ರಾಜ್ಞನಾದವನು ಬೀಳುವುದಿಲ್ಲ.

೨೯. ವ್ಯಸನಗಳಲ್ಲಿ ಉದ್ವೇಗರಹಿತರೂ ಐಶ್ವರ್ಯಗಳಲ್ಲಿ ಕೂಡ ಗರ್ವರಹಿತರೂ ಕರ್ತವ್ಯಗಳಲ್ಲಿ ಕಾತರರಾಗಿರುವವರೂ ಧೀರರು. ಅವರು ಜಗತ್ತನ್ನು ಜಯಿಸುತ್ತಾರೆ."

೩೦. ಹೀಗೆ ಆಲೋಚಿಸಿ ಮಂತ್ರಿಯ ಮಾತಿನಿಂದ ಶೋಕವನ್ನು ತ್ಯಜಿಸಿ ಹರಿವರ ರಾಜನು ತನ್ನ ಪತ್ನಿಯರಲ್ಲೇ ಸಂತೋಷವನ್ನು ಹೊಂದಿದನು.

೩೧. ಅನಂಗಪ್ರಭೆಯೋ ವಿಯೋಗಪುರದಲ್ಲಿ ನಾಟ್ಯಾಚಾರ್ಯನೊಡಗೂಡಿ ಕೆಲವುಕಾಲ ಮಾತ್ರ ಇದ್ದಳು.

೩೨. ಅಷ್ಟರಲ್ಲಿ ಅಲ್ಲಿಯೂ ದೈವಯೋಗದಿಂದ ನಾಟ್ಯಾಚಾರ್ಯನಿಗೆ ಸುದರ್ಶನನೆಂಬ ಯುವಕ ಜೂಜುಗಾರನೊಡನೆ ಸಾಹಚರ್ಯವು ಉಂಟಾಯಿತು.

೩೩. ಆ ಪಟ್ಟಣದಲ್ಲಿ ಸುದರ್ಶನನು ಅನಂಗಪ್ರಭೆಯ ಎದುರಿಗೇ ಆ ನಾಟ್ಯಾಚಾರ್ಯನ ಎಲ್ಲ ಧನವನ್ನೂ ಶೀಘ್ರವಾಗಿ ಜೂಜಿನಲ್ಲಿ ಅಪಹರಿಸಿದನು.

೩೪. ಆ ರೋಷದಿಂದಲೋ ಎಂಬಂತೆ ಐಶ್ವರ್ಯಹೀನನಾದ ನಾಟ್ಯಾಚಾರ್ಯನನ್ನು ತ್ಯಜಿಸಿ ಅನಂಗಪ್ರಭೆಯು ಸುದರ್ಶನನ್ನೇ ಬಲಾತ್ಕಾರವಾಗಿ ಪತಿಯನ್ನಾಗಿ ಆಶ್ರಯಿಸಿದಳು.

---

ಪತಿತಂ ಮಜ್ಜಯಂತೀಷು ದರ್ಶಿತೋತ್ಕಲಿಕಾಸು ಚ ।
ಪ್ರಾಜ್ಞಃ ಪತತ್ಯಗಾಧಾಸು ನ ಸ್ತ್ರೀಷು ಚ ನದೀಷು ಚ ॥ ೨೮
ವ್ಯಸನೇಷು ನಿರುದ್ವೇಗಾ ವಿಭವೇಷ್ವಪ್ಯಗರ್ವಿತಾಃ ।
ಕಾರ್ಯೇಷ್ವಕಾತರಾ ಯೇ ಚ ತೇ ಧೀರಾಸ್ತೈರ್ಜಿತಂ ಜಗತ್ ॥ ೨೯
ಇತ್ಯಾಲೋಚ್ಯ ಶುಚಂ ತ್ಯಕ್ತ್ವಾ ಮಂತ್ರಿಣೋ ವಚನೇನ ಸಃ ।
ಸ್ವದಾರೇಷ್ವೇವ ಸಂತೋಷಂ ರಾಜಾ ಹರಿವರೋ ವ್ಯಧಾತ್ ॥ ೩೦
ಸಾಪ್ಯನಂಗಪ್ರಭಾ ತತ್ರ ವಿಯೋಗಪುರನಾಮನಿ ।
ನಾಟ್ಯಾಚಾರ್ಯಯುತಾ ತಾವತ್ಕಂಚಿತ್ಕಾಲಂ ಸ್ಥಿತಾ ಪುರೇ ॥ ೩೧
ತಾವತ್ತತ್ರಾಪಿ ಸಂಜಜ್ಞೇ ನಾಟ್ಯಾಚಾರ್ಯಸ್ಯ ದೈವತಃ ।
ಯೂನಾ ಸುದರ್ಶನಾಖ್ಯೇನ ದ್ಯೂತಕಾರೇಣ ಸಂಗತಿಃ ॥ ೩೨
ತೇನ ದ್ಯೂತಹೃತಾಶೇಷಧನೋಽನಂಗಪ್ರಭಾಗ್ರತಃ ।
ಕೃತಃ ಸುದರ್ಶನೇನಾತ್ರ ನಾಟ್ಯಾಚಾರ್ಯೋಽಚಿರೇಣ ಸಃ ॥ ೩೩
ತದ್ರೋಷಾದಿವ ನಿಃಶ್ರೀಕಂ ತ್ಯಕ್ತ್ವಾನಂಗಪ್ರಭಾಥ ತಮ್ ।
ಸಾ ಸುದರ್ಶನಮೇವೈತಂ ಪ್ರಸಹ್ಯಾಶಿಶ್ರಿಯತ್ಪತಿಮ್ ॥ ೩೪

೨೯೫. ಅನಂತರ ಹೆಂಡತಿಯನ್ನೂ ಧನವನ್ನೂ ಕಳೆದುಕೊಂಡ ನಾಟ್ಯಾಚಾರ್ಯನು ಆಶ್ರಯರಹಿತನಾಗಿ ವೈರಾಗ್ಯದಿಂದ ಜಟೆಯನ್ನು ಧರಿಸಿ ತಪಸ್ಸಿಗಾಗಿ ಗಂಗಾತಟಕ್ಕೆ ಹೋದನು.

೨೯೬. ಹೊಸಹೊಸದನ್ನು ಬಯಸುವ ಅನಂಗಪ್ರಭೆಯು ಜೂಜುಗಾರ ಸುದರ್ಶನನೊಡನೆ ಸೇರಿಕೊಂಡು ಅಲ್ಲಿಯೇ ತಂಗಿದಳು.

೨೯೭. ಒಂದು ದಿವಸ ಕಳ್ಳರು ರಾತ್ರಿಯಲ್ಲಿ ಒಳಗೆ ನುಗ್ಗಿ ಅನಂಗಪ್ರಭೆಯ ಪತಿಯಾದ ಸುದರ್ಶನನ ಸರ್ವಸ್ವವನ್ನೂ ಅಪಹರಿಸಿದರು.

೨೯೮. ಅನಂತರ ಹಣವಿಲ್ಲದೆ ದುರವಸ್ಥೆಗೆ ಬಿದ್ದು ಅನುತಾಪಪಡುತ್ತಿದ್ದ ಅನಂಗಪ್ರಭೆಯನ್ನು ನೋಡಿ ಸುದರ್ಶನನು ಹೇಳಿದನು.

೨೯೯. "ನನಗೆ ಮಹಾಧನಶಾಲಿಯಾದ ಹಿರಣ್ಯಗುಪ್ತನೆಂಬ ಹೆಸರಿನ ಸ್ನೇಹಿತನೊಬ್ಬನಿದ್ದಾನೆ. ಅವನ ಬಳಿ ಸಾಗಿ ಸ್ವಲ್ಪ ಸಾಲವನ್ನು ಯಾಚಿಸೋಣ ಬಾ."

೩೦೦. ಹೀಗೆ ಹೇಳಿ ದೈವದಿಂದ ಹತವಾದ ಬುದ್ಧಿಯುಳ್ಳ ಆ ಸುದರ್ಶನನು ಅನಂಗಪ್ರಭೆಯೊಡನೆಯೇ ಹೋಗಿ ವಣಿಕ್ಶ್ರೇಷ್ಠನಾದ ಆ ಹಿರಣ್ಯಗುಪ್ತನನ್ನು ಸಾಲಕೇಳಿದನು.

೩೦೧. ಆಗ ವ್ಯಾಪಾರಿಯೂ ಅನಂಗಪ್ರಭೆಯೂ ಪರಸ್ಪರ ನೋಡಿ ಅನುರಾಗವುಳ್ಳವರಾಗಿ ಹೋದರು.

---

ನಷ್ಟದಾರಧನಃ ಸೋಽಥ ನಾಟ್ಯಾಚಾರ್ಯೋಽಪ್ರತಿಶ್ರಯಃ ।
ವೈರಾಗ್ಯಾತ್ತಪಸೇ ಬದ್ಧಜಟೋ ಗಂಗಾತಟಂ ಯಯೌ ॥ ೨೯೫
ಸಾ ತ್ವನಂಗಪ್ರಭಾ ತೇನ ದ್ಯೂತಕಾರೇಣ ಸಂಗತಾ ।
ಸುದರ್ಶನೇನ ತತ್ರೈವ ತಸ್ಥೌ ನವನವಪ್ರಿಯಾ ॥ ೨೯೬
ಏಕದಾ ಚ ಪತಿಸ್ತಸ್ಯಾಸ್ತಸ್ಕರೈಃ ಸ ಸುದರ್ಶನಃ ।
ಮುಷಿತಾಶೇಷಸರ್ವಸ್ವಃ ಪ್ರವಿಶ್ಯ ರಜನೌ ಕೃತಃ ॥ ೨೯೭
ತತಸ್ತಾಂ ದ್ರವಿಣಾಭಾವಾದ್ದುಃಸ್ಥಿತಾಮನುತಾಪಿನೀಮ್ ।
ದೃಷ್ಟ್ವಾ ಸುದರ್ಶನೋಽನಂಗಪ್ರಭಾಮಿದಮುವಾಚ ಸಃ ॥ ೨೯೮
ಹಿರಣ್ಯಗುಪ್ತನಾಮಾ ಯಃ ಸುಹೃನ್ಮೇಽಸ್ತಿ ಮಹಾಧನಃ ।
ತತ್ಸಕಾಶಾದೃಣಂ ಕಂಚಿದೇತ್ಯಾದ್ಯ ಮೃಗಯಾಮಹೇ ॥ ೨೯೯
ಇತ್ಯುಕ್ತ್ವಾ ದೈವಹತಧೀಃ ಸ ಗತ್ವೈವ ತಯಾ ಸಹ ।
ಋಣಂ ಹಿರಣ್ಯಗುಪ್ತಂ ತಂ ವಣಿಙ್ಮುಖ್ಯಮಯಾಚತ ॥ ೩೦೦
ಸ ಚಾನಂಗಪ್ರಭಾಂ ದೃಷ್ಟ್ವಾ ವಣಿಕ್ಸಾಪಿ ಚ ತಂ ತದಾ ।
ಅನ್ಯೋನ್ಯಸಾಭಿಲಾಷೌ ತೌ ಬಭೂವತುರುಭಾವಪಿ ॥ ೩೦೧

೩೦೨. ಆಗ ಆ ವಣಿಜನು ಸುದರ್ಶನನ್ನು ಕುರಿತು ಆದರದಿಂದ ಹೇಳಿದನು. "ನಿಮ್ಮಿಬ್ಬರಿಗೂ ಪ್ರಾತಃಕಾಲದಲ್ಲಿ ಸುವರ್ಣವನ್ನು ಕೊಡುವೆನು. ಇಂದು ಇಲ್ಲಿಯೇ ಭೋಜನ ಮಾಡಿರಿ."

೩೦೩. ಅದನ್ನು ಕೇಳಿ ಅನಂಗಪ್ರಭೆ ಮತ್ತು ವಣಿಜರ ನಡುವೆ ಬೇರೆ ರೀತಿಯ ಮನೋಭಾವವಿದ್ದುದನ್ನು ಕಂಡು ಸುದರ್ಶನನು ಹೇಳಿದನು. ""ಇಂದು ನಾನು ಊಟ ಮಾಡಲಾರೆ."

೩೦೪. ಆಗ ವಣಿಜಪತಿಯು ಹೇಳಿದನು. "ಹಾಗಿದ್ದರೆ, ಮಿತ್ರನೇ ! ನಿನ್ನ ಸ್ತ್ರೀಯು ಮೊದಲು ಭೋಜನ ಮಾಡಲಿ. ಏಕೆಂದರೆ ಇವಳು ನಮ್ಮ ಮನೆಗೆ ಬಂದಿರುವಂತಹವಳು."

೩೦೫. ಹೀಗೆ ಆ ವಣಿಜನು ಹೇಳಿದಾಗ ಸುದರ್ಶನನು ಧೂರ್ತನಾದರೂ ಸುಮ್ಮನಾದನು. ಆ ವಣಿಜನು ಅನಂಗಪ್ರಭೆಯೊಡಗೂಡಿ ಮನೆಯ ಒಳಗೆ ಹೋದನು.

೩೦೬. ಅನಂತಪ್ರಭೆಯು ಆ ವಣಿಜನಿಗೆ ಊಹಿಸದೆಯೇ ಸಿಕ್ಕಿದ್ದಳು. ಅವಳ ಮದನವಿಲಾಸವೂ ವ್ಯಕ್ತವಾಗಿಯೇ ಕಾಣಿಸುತ್ತಿತ್ತು. ಅವಳೊಂದಿಗೆ ವಣಿಜನು ಆಹಾರ, ಪಾನ ಮುಂತಾದ ಸೌಖ್ಯವನ್ನು ಅನುಭವಿಸಿದನು.

---

ಉವಾಚ ಚೈವಂ ಸ ವಣಿಕ್‌ತಂ ಸುದರ್ಶನಮಾದರಾತ್ ।
ಪ್ರಾತರ್ದಾಸ್ಯೇ ಹಿರಣ್ಯಂ ವಾಮದ್ಯೇಹೈವ ತು ಭುಜ್ಯತಾಮ್ ॥ ೩೦೨
ತಚ್ಛ್ರುತ್ವಾನ್ಯಾದೃಶಂ ಭಾವಮುಪಲಕ್ಷ್ಯ ತಯೋರ್ದ್ವಯೋಃ ।
ಸುದರ್ಶನೋಽಬ್ರವೀನ್ನಾಹಂ ಭೋಜನೇಽದ್ಯ ಪಟುಃ ಸ್ಥಿತಃ ॥ ೩೦೩
ವಣಿಕ್ಪತಿಸ್ತತೋಽವಾದೀತ್ತರ್ಹಿ ತ್ವದ್ವನಿತಾ ಸಖೇ ।
ಭುಂಕ್ತಾಂ ಪ್ರಥಮಮಸ್ಮಾಕಮೇಷಾ ಹಿ ಗೃಹಮಾಗತಾ ॥ ೩೦೪
ಇತ್ಯುಕ್ತೇನ ತೂಷ್ಣೀಂ ಸ ಬಭೂವ ಕಿತವೋಽಪಿ ಸನ್ ।
ಸ ಚಾನಂಗಪ್ರಭಾಯುಕ್ತೋ ಯಯಾವಭ್ಯಂತರಂ ವಣಿಕ್ ॥ ೩೦೫
ತತ್ರ ಚಕ್ರೇ ತಯಾ ಸಾಕಂ ಪಾನಾಹಾರಾದಿನಿರ್ವೃತಿಮ್ ।
ಅತರ್ಕಿತೋಪನತಯಾ ಲಸನ್ಮದವಿಲಾಸಯಾ ॥ ೩೦೬

೩೦೭–೩೦೮. ಅವಳು ಹೊರಬರುವುದನ್ನು ಪ್ರತೀಕ್ಷಿಸುತ್ತಾ ಹೊರಗಡೆಯೇ ಇದ್ದ ಸುದರ್ಶನನ್ನು ಕುರಿತು ನಂತರ ವಣಿಜನ ಸೂಚನೆಯ ಪ್ರಕಾರ ಅವನ ಸೇವಕರು "ನಿನ್ನವಳು ಭೋಜನಮಾಡಿ ಮನೆಗೆ ಹೋದಳು. ಅವಳು ಹೊರಗೆ ಹೋಗುತ್ತಿದ್ದಾಗ ನೀನು ನೋಡಲಿಲ್ಲ. ಆದುದರಿಂದ ನೀನು ಇನ್ನೂ ಇಲ್ಲಿ ಏನು ಮಾಡುತ್ತಿ ? (ಇಲ್ಲಿಂದ) ಹೊರಡು" ಎಂದು ಹೇಳಿದರು.

೩೦೯. ""ಅವಳು ಒಳಗಡೆ ಇದ್ದಾಳೆ. ಹೊರಗಡೆ ಬಂದಿಲ್ಲ. ನಾನು ಹೋಗುವುದಿಲ್ಲ" ಎಂದು ಹೇಳುತ್ತಿದ್ದ ಅವನನ್ನು ಒದ್ದು ವಣಿಜನ ಸೇವಕರು ಹೊರಹಾಕಿದರು.

೩೧೦. ದುಃಖಿತನಾದ ಸುದರ್ಶನನು ಹೋಗಿ ಚಿಂತಿಸಿದನು.""ಮಿತ್ರನಾಗಿದ್ದರೂ ಕೂಡ ವಣಿಜನು ನನ್ನ ಹೆಂಡತಿಯನ್ನು ಹೇಗೆ ಅಪಹರಿಸಿದನು ?

೩೧೧. ಅಥವಾ ಸಾಮೂಹಿಕ ಪಾಪದ ಫಲವು ಇಲ್ಲಿಯೇ ಬಂದೊದಗಿತೋ ? ಮತ್ತೊಬ್ಬನಿಗೆ ನಾನು ಮಾಡಿದುದನ್ನು ಬೇರೊಬ್ಬನು ನನಗೆ ಮಾಡಿದನು.

೩೧೨. ಆದುದರಿಂದ ಬೇರೆಯವರ ವಿಷಯದಲ್ಲಿ ಏಕೆ ಕೋಪಮಾಡಿಕೊಳ್ಳಲಿ ? ನನ್ನ ಕೋಪಕ್ಕೆ ಅರ್ಹವಾದದ್ದು ನನ್ನ ಕರ್ಮ. ಅದನ್ನು ನಾಶಪಡಿಸುತ್ತೇನೆ. ಅದರಿಂದ ಮತ್ತೆ ನನಗೆ ಪರಾಭವ ಆಗುವುದು ಬೇಡ."

೩೧೩. ಹೀಗೆ ಆಲೋಚಿಸಿ ಕೋಪವನ್ನು ಬಿಟ್ಟು ಆ ಜೂಜುಗಾರನು ಬದರಿಕಾಶ್ರಮಕ್ಕೆ ಹೋಗಿ ಅಲ್ಲಿ ಸಂಸಾರನಾಶಕವಾದ ತಪಸ್ಸನ್ನು ಮಾಡಿದನು.

---

ಸುದರ್ಶನಃ ಸ ತಸ್ಯಾಶ್ಚ ನಿರ್ಗಮಂ ಪ್ರತಿಪಾಲಯನ್ ।
ಬಹಿಃ ಸ್ಥಿತಃ ಸಂಸ್ತದ್ಭೃತ್ಯೈರೂಚೇ ತತ್ಪ್ರೇರಿತೈಸ್ತತಃ ॥ ೩೦೭
ಭುಕ್ತ್ವಾ ಗೃಹಂ ಗತಾ ಸಾ ತೇ ನಿರ್ಯಾಂತೀ ನ ತ್ವಯೇಕ್ಷಿತಾ ।
ತತ್ತ್ವಯಾ ಕಿಮಿಹಾದ್ಯಾಪಿ ಕ್ರಿಯತೇ ಗಮ್ಯತಾಮಿತಿ ॥ ೩೦೮
ಸಾಂತಃಸ್ಥಿತಾ ನ ನಿರ್ಯಾತಾ ನ ಯಾಸ್ಯಾಮೀತಿ ಸ ಬ್ರುವನ್ ।
ದತ್ತ್ವಾ ಪಾದಪ್ರಹಾರಾಂಸ್ತೈಸ್ತದ್ಭೃತ್ಯೈರ್ನಿರಕಾಲ್ಯತ ॥ ೩೦೯
ತತಃ ಸುದರ್ಶನೋ ಗತ್ವಾ ದುಃಖಿತಃ ಸ ವ್ಯಚಿಂತಯತ್ ।
ಕಥಂ ಮೇ ವಣಿಜಂ ದಾರಾಮಿತ್ರೇಣಾಪ್ಯಮುನಾ ಹೃತಾಃ ॥ ೩೧೦
ಇಹೈವೋಪನತಂ ವಾ ಮೇ ಸ್ವಪಾಪಫಲಮೀದೃಶಮ್ ।
ಯನ್ಮಯಾಕೃತಮನ್ಯಸ್ಯ ತದನ್ಯೇನ ಕೃತಂ ಮಮ ॥ ೩೧೧
ಕುಪ್ಯಾಮಿ ಕಿಂ ತದನ್ಯಸ್ಮೈ ಕೋಪಾರ್ಹಂ ತತ್ಸ್ವಕರ್ಮ ಮೇ ।
ತಚ್ಛಿನದ್ಮಿ ನ ಯೇನ ಸ್ಯಾತ್ ಪುನರ್ಮಮ ಪರಾಭವಃ ॥ ೩೧೨
ಇತ್ಯಾಲೋಚ್ಯ ಕ್ರುಧಂ ತ್ಯಕ್ತ್ವಾ ಗತ್ವಾ ಬದರಿಕಾಶ್ರಮಮ್ ।
ದ್ಯೂತಕಾರಸ್ತದಾ ತತ್ರ ಭವಚ್ಛೇದಿ ವ್ಯಧಾತ್ತಪಃ ॥ ೩೧೩

೩೧೪. ಅನಂಗಪ್ರಭೆಯೂ ಅತಿ ಸುಂದರನೂ ಪ್ರಿಯನೂ ಆದ ಆ ವಣಿಜನನ್ನು ಪತಿಯನ್ನಾಗಿ ಪಡೆದು ಹೆಣ್ಣು ದುಂಬಿಗಳು ಒಂದು ಹೂವಿನಿಂದ ಮತ್ತೊಂದು ಹೂವಿಗೆ ಬಂದಂತೆ ರಮಿಸಿದಳು.

೩೧೫. ಇವಳಲ್ಲಿ ಅನುರಕ್ತನಾದ ಆ ಮಹಾಧನಿಕನಾದ ವ್ಯಾಪಾರಿಯ ಪ್ರಾಣಕ್ಕೂ ಸಂಪತ್ತಿಗೂ ಅವಳು ಕ್ರಮೇಣ ಒಡೆಯಳಾದಳು.

೩೧೬. ಅಲ್ಲಿ ರಾಜನಾದ ವೀರಬಾಹುವಿಗೆ ಆ ವಣಿಜನಲ್ಲಿದ್ದವಳು ಏಕಮಾತ್ರ ಸುಂದರಿಯೆಂದು ತಿಳಿಯಿತು. ಆದರೂ ಅವನು ಧರ್ಮಮರ್ಯಾದೆಯನ್ನು ರಕ್ಷಿಸಿ ಅವಳನ್ನು ಅಪಹರಿಸಲಿಲ್ಲ.

೩೧೭. ದಿನಗಳು ಕಳೆದಂತೆ ಧನವ್ಯಯದಿಂದ ಆ ವಣಿಜನ ಧನವು ಕ್ಷೀಣಿಸಿತು. ವೇಶ್ಯೆಯಿಂದ ಪ್ರಧಾನವಾಗಿ ನಿಯಂತ್ರಿತವಾಗಿರುವ ಮನೆಯಲ್ಲಿ ಕುಲಸ್ತ್ರೀಯಂತೆ ಸಂಪತ್ತು ಕ್ಷೀಣವಾಗುತ್ತದೆ.

೩೧೮. ಅನಂತರ ವ್ಯಾಪಾರದ ಸರಕನ್ನು ಸಂಗ್ರಹಿಸಿಕೊಂಡು ಹಿರಣ್ಯಗುಪ್ತ ವಣಿಜನು ವ್ಯಾಪಾರನಿಮಿತ್ತ ಹಿರಣ್ಯ ಭೂಮಿಯೆಂಬ ದ್ವೀಪವನ್ನು ಕುರಿತು ಹೊರಟನು.

೩೧೯. ವಿಯೋಗಭೀತಿಯಿಂದ ಅನಂಗಪ್ರಭೆಯನ್ನು ಜೊತೆಯಲ್ಲೇ ಕರೆದುಕೊಂಡು ಹೋಗುತ್ತಾ ಕ್ರಮವಾಗಿ ದಾರಿಯಲ್ಲಿ ಆ ವಣಿಜನು ಸಾಗರಪುರವೆಂಬ ಪಟ್ಟಣವನ್ನು ಸೇರಿದನು.

---

ಸಾ ಚ ರೂಪಾಧಿಕಂ ಪ್ರಾಪ್ಯ ಪ್ರಿಯಂ ತಂ ವಣಿಜಂ ಪತಿಮ್ ।
ರೇಮೇಽನಂಗಪ್ರಭಾ ಭೃಂಗೀ ಪುಷ್ಪಾತ್ಪುಷ್ಪಮಿವಾಗತಾ ॥ ೩೧೪
ಕ್ರಮೇಣ ತಸ್ಯ ಸಾ ಚಾಭೂದ್ವಣಿಜೋ ವಿಪುಲಶ್ರಿಯಃ ।
ಸ್ವಾಮಿನೀ ಸಾನುರಾಗಸ್ಯ ಪ್ರಾಣೇಷ್ವಪಿ ಧನೇಷ್ವಪಿ ॥ ೩೧೫
ರಾಜಾತ್ರ ವೀರಬಾಹುಶ್ಚ ತತ್ರಸ್ಥಾಮೇಕಸುಂದರೀಮ್ ।
ಬುದ್ಧ್ವಾಪಿ ಧರ್ಮಮರ್ಯಾದಾಂ ರಕ್ಷನ್ನೈವ ಜಹಾರ ತಾಮ್ ॥ ೩೧೬
ದಿನೈಶ್ಚ ತದ್ವ್ಯಯೈಃ ಸೋಽಭೂದ್ವಣಿಗಲ್ಪೀಭವದ್ಧನಃ ।
ಮ್ಲಾಯತಿ ಶ್ರೀಃ ಕುಲಸ್ತ್ರೀವ ಗೃಹೇ ಬಂಧಕ್ಯಧಿಷ್ಠಿತೇ ॥ ೩೧೭
ತತಃ ಸುವರ್ಣಭೂಮ್ಯಾಖ್ಯಂ ದ್ವೀಪಂ ಸಂಭೃತಭಾಂಡಕಃ ।
ಹಿರಣ್ಯಗುಪ್ತಃ ಸ ವಣಿಕ್ ಪ್ರಸ್ಥಿತೋಽಭೂದ್ವಣಿಜ್ಯಯಾ ॥ ೩೧೮
ವಿಯೋಗಭೀತ್ಯಾ ಚಾದಾಯ ತಾಮನಂಗಪ್ರಭಾಂ ಸಹ ।
ವ್ರಜನ್ ಪಥಿ ಕ್ರಮಾತ್ ಪ್ರಾಪ ಸ ಸಾಗರಪುರಂ ಪುರಮ್ ॥ ೩೧೯

೩೨೦. ಅಲ್ಲಿ ವಾಸವಾಗಿದ್ದ ಸಾಗರವೀರನೆಂಬ ಹೆಸರಿನ ಒಬ್ಬ ಬೆಸ್ತರ ಅಧಿಪತಿಯು ಸಮುದ್ರದ ಸಮೀಪದಲ್ಲಿದ್ದ ಪಟ್ಟಣದಲ್ಲಿ ಆ ವಣಿಜನಿಗೆ ಸಿಕ್ಕಿದನು.

೩೨೧. ಸಮುದ್ರಜೀವಿಯಾದ ಆ ಬೆಸ್ತರ ಅಧಿಪತಿಯೊಡನೆ ವಣಿಜನು ಸಮುದ್ರದ ತೀರಕ್ಕೆ ಹೋಗಿ ಆ ಬೆಸ್ತರವನು ನಡೆಸಿದ ದೋಣಿಯನ್ನು ಪ್ರಿಯೆಯೊಡನೆ ಹತ್ತಿದನು.

೩೨೨–೩೨೩. ಆ ವಣಿಜನ ಪ್ರಯಾಣ ಸಮುದ್ರದಲ್ಲಿ ಆ ಸಾಗರವೀರನೊಡನೆ ಕೆಲವು ದಿನಗಳು ಸಾಗಿದಾಗ ಒಂದು ಭಯಂಕರವಾದ ಕಾಲಮೇಘವು ಕಾಣಿಸಿಕೊಂಡಿತು. ಜ್ವಲಿಸುತ್ತಿದ್ದ ಮಿಂಚಿನ ಕಣ್ಣುಳ್ಳ ಆ ಮೋಡವು ಮರಣಭಯವನ್ನು ಉಂಟು ಮಾಡುತ್ತಿತ್ತು.

೩೨೪. ಆ ದೋಣಿಯು ಬಲವಾದ ಮಳೆಯ ಧಾರೆಗಳಿಂದಲೂ ವೇಗವಾಗಿ ಬೀಸಿದ ಗಾಳಿಯಿಂದಲೂ ಹಾನಿಗೊಳಗಾಗಿ ಸಮುದ್ರದ ಅಲೆಗಳಲ್ಲಿ ಮುಳುಗಲು ತೊಡಗಿತು.

೩೨೫–೩೨೬. ಆಗ ಪರಿಜನರು ಗೋಳಾಡಿದರು. ದೋಣಿಯು ಮನೋರಥದಂತೆ ಮುಳುಗಿ ಹೋಗುತ್ತಿದ್ದುದನ್ನು ನೋಡಿ ಉತ್ತರೀಯವನ್ನು ಸೊಂಟಕ್ಕೆ ಕಟ್ಟಿ ಹಿರಣ್ಯಗುಪ್ತವಣಿಜನು ಅನಂಗಪ್ರಭೆಯ ಮುಖವನ್ನು ಎಲ್ಲೂ ಕಾಣದೆ "ಹಾ ಪ್ರಿಯೇ ! ನೀನು ಎಲ್ಲಿರುವೆ ?" ಎಂದು ಹೇಳುತ್ತಾ ಸಮುದ್ರಕ್ಕೆ ಹಾರಿದನು.

---

ತತ್ರ ಸಾಗರವೀರಾಖ್ಯೋ ವಾಸ್ತವ್ಯೋ ಧೀವರಾಧಿಪಃ ।
ನಗರೇಂಽಭೋಧಿನಿಕಟೇ ತಸ್ಯೈಕೋ ಮಿಲಿತೋಽಭವತ್ ॥ ೩೨೦
ತೇನಾಬ್ಧಿಜೀವಿನಾ ಸಾಕಂ ಸೋಽಥ ಗತ್ವಾಂಬುಧೇಸ್ತಟಮ್ ।
ತಡ್ಢೌಕಿತಂ ಯಾನಪಾತ್ರಮಾರುರೋಹ ಪ್ರಿಯಾಸಖಃ ॥ ೩೨೧
ತತೋಽಬ್ಧೌ ಯಾನಪಾತ್ರೇಣ ತೇನ ಯಾವತ್ಪ್ರಯಾತಿ ಸಃ ।
ವ್ಯಗ್ರಃ ಸಾಗರವೀರೇಣ ದಿನಾನಿ ಕತಿಚಿದ್ವಣಿಕ್ ॥ ೩೨೨
ಏಕಸ್ಮಿನ್ ದಿವಸೇ ತಾವಜ್ಜ್ವಲದ್ವಿದ್ಯುದ್ವಿಲೋಚನಃ ।
ಉಗ್ರಃ ಸಂಹಾರಭಯದಃ ಕಾಲಮೇಘಃ ಸಮಾಯಯೌ ॥ ೩೨೩
ಸ್ವಸ್ಥೂಲವರ್ಷಧಾರೇಣ ವಾಯುನಾ ಬಲಿನಾ ಹೃತಮ್ ।
ತತೋ ಮಜ್ಜಿತುಮಾರೇಭೇ ಯಾನಪಾತ್ರಂ ತದೂರ್ಮಿಷು ॥ ೩೨೪
ಮುಕ್ತಾಕ್ರಂದೇ ಪರಿಜನೇ ಮನೋರಥ ಇವ ಸ್ವಕೇ ।
ಮಜ್ಜ್ಯಮಾನೇ ಪ್ರವಹಣೇ ಕಕ್ಷ್ಯಾಬದ್ಧೋತ್ತರೀಯಕಃ ॥ ೩೨೫
ವಣಿಗ್ಘಿರಣ್ಯಗುಪ್ತಃ ಸೋಽದೃಷ್ಟ್ವಾನಂಗಪ್ರಭಾಮುಖಮ್ ।
ಹಾ ಪ್ರಿಯೇ ಕ್ವ ತ್ವಮಿತ್ಯುಕ್ತ್ವಾ ಚಿಕ್ಷೇಪಾತ್ಮಾನಮಂಬುಧೌ ॥ ೩೨೬

೩೨೭ ಅನಂತರ ವ್ಯಾಪಾರಿಯು ಕೈಗಳನ್ನು ಚಾಚುತ್ತಾ ಈಜಿಕೊಂಡು ಹೋದಾಗ ದೈವವಶಾತ್ ಅವನಿಗೆ ದೋಣಿಯೊಂದು ಸಿಕ್ಕಿತು. ಆ ದೋಣಿಯನ್ನು ಹಿಡಿದುಕೊಂಡು ಅವನು ಅದನ್ನು ಹತ್ತಿಕೊಂಡನು.

೩೨೮. ಆ ಸಾಗರ ವೀರನು ಅನಂಗಪ್ರಭೆಯನ್ನು ಹಗ್ಗದಿಂದ ಬಿಗಿದು ಕಟ್ಟಿದ್ದ ಹಲಗೆಗಳ ಮೇಲೆ ಕೂಡಲೇ ಹತ್ತಿಸಿದನು.

೩೨೯. ತಾನೂ ಅದರ ಮೇಲೆಯೇ ಹತ್ತಿ ಹೆದರಿಕೊಂಡಿದ್ದ ಅನಂಗಪ್ರಭೆಯನ್ನು ಸಮಾಧಾನಪಡಿಸುತ್ತಾ ಬಾಹುಗಳಿಂದಲೇ ನೀರನ್ನು ತಳ್ಳುತ್ತಾ ಸಮುದ್ರದಲ್ಲಿ ತೇಲುತ್ತಾ ಹೋದನು.

೩೩೦. ಆದರೆ ಕ್ಷಣಮಾತ್ರದಲ್ಲಿ ಆ ದೋಣಿಯು ಮುರಿದುಹೋಯಿತು. ಅನಂತರ ಆಕಾಶದಿಂದ ಮೋಡಗಳು ಮರೆಯಾದುವು. ಕೋಪ ಅಡಗಿದ ಸಾಧುವಿನಂತೆ ಸಮುದ್ರವು ಶಾಂತವಾಯಿತು.

೩೩೧. ಅನಂತರ ಹಿರಣ್ಯಗುಪ್ತವಣಿಜನು ಗಾಳಿಯಿಂದ ಮುಂದೆ ಸಾಗುವ ತೆಪ್ಪವನ್ನು ಹತ್ತಿ ದೈವವಶಾತ್ ಐದು ದಿನಗಳಲ್ಲಿ ಸಮುದ್ರದ ದಡವನ್ನು ತಲುಪಿದನು.

---

ಗತ್ವಾ ಚ ಬಾಹುವಿಕ್ಷೇಪಾತ್ ಕಾಂಚಿತ್ಪ್ರಾಪ ಸ ದೈವತಃ ।
ವಣಿಕ್ ಪ್ರವಾಹಣೀಮೇಕಾಂ ತಾಂ ಚಾಲಂಬ್ಯಾರುರೋಹ ಸಃ ॥ ೩೨೭
ಸಾಽಪ್ಯನಂಗಪ್ರಭಾ ರಜ್ಜ್ವಾ ಬದ್ಧೇ ಫಲಹಕೋತ್ಕರೇ ।
ತೇನ ಸಾಗರವೀರೇಣ ಝಗಿತ್ಯೇವಾಧ್ಯರೋಪ್ಯತ ॥ ೩೨೮
ಸ್ವಯಂ ಚಾರುಹ್ಯ ತತ್ರೈವ ಭೀತಾಮಾಶ್ವಾಸಯನ್ ಸ ತಾಮ್ ।
ಪ್ಲವಮಾನೋ ಯಯಾವಬ್ಧೌ ಬಾಹುಭ್ಯಾಂ ವಾರಿ ವಿಕ್ಷಿಪನ್ ॥ ೩೨೯
ಕ್ಷಣಾತ್ ಪ್ರವಹಣೇ ಭಗ್ನೇ ನಷ್ಟಾಭ್ರಮಭವನ್ನಭಃ ।
ಸಾಧೋಃ ಪ್ರಶಾಂತಕೋಪಸ್ಯ ತುಲ್ಯೋಽಭೂತ್ಸ್ತಿಮಿತೋಂಬುಧಿಃ ॥ ೩೩೦
ಸ ಚಾರೂಢಃ ಪ್ರವಹಣಂ ಪಂಚಾಹೇನಾನಿಲೇರಿತಮ್ ।
ಹಿರಣ್ಯಗುಪ್ತಃ ಪ್ರಾಪಾಬ್ಧೇಃ ಕೂಲಂ ದೈವಾದ್ವಣಿಕ್ ತತಃ ॥ ೩೩೧

೩೩೨–೩೩೩. ಅನಂತರ ತೀರದಲ್ಲಿ ಇಳಿದ ಹಿರಣ್ಯಗುಪ್ತನು ಪ್ರಿಯೆಯ ವಿರಹದಿಂದ ದುಃಖಿತನಾದನು. ಆದರೆ ವಿಧಿಯ ವಿಶಿಷ್ಟ ಚೇಷ್ಟೆಗೆ ಪ್ರತೀಕಾರವೇ ಅಸಾಧ್ಯ ವೆಂಬುದನ್ನು ಅರಿತು ಧೀರವಾದ ಮನೋಭಾವದಿಂದ ಸ್ಥೈರ್ಯವನ್ನು ತಳೆದು ಮೆಲ್ಲಗೆ ತನ್ನ ಪಟ್ಟಣವನ್ನು ಸೇರಿ ಮತ್ತೆ ಧನವನ್ನು ಸಂಪಾದನೆ ಮಾಡಿ ಸುಖವಾಗಿ ಇದ್ದನು.

೩೩೪. ಇತ್ತ ಆಶ್ಚರ್ಯವೆಂದರೆ ಹಲಗೆಯ ಮೇಲಿದ್ದ ಅನಂಗಪ್ರಭೆಯನ್ನು ಒಂದು ದಿವಸದಲ್ಲಿ ಆ ಸಾಗರವೀರನು ಸಮುದ್ರದ ತೀರಕ್ಕೆ ತಲುಪಿದನು.

೩೩೫. ಅಲ್ಲಿ ಅವಳನ್ನು ಸಮಾಧಾನಪಡಿಸಿ ಆ ಬೆಸ್ತರ ಅಧಿಪತಿಯು ಅವಳನ್ನು ಸಾಗರಪುರವೆಂಬ ಪಟ್ಟಣಕ್ಕೆ ಒಯ್ದು ತನ್ನ ಮನೆಗೆ ಕರೆದುಕೊಂಡು ಹೋದನು.

೩೩೬–೩೩೭. ಆ ಬೆಸ್ತನಿಗೆ ರಾಜನಿಗೆ ಸಮಾನವಾದ ಐಶ್ವರ್ಯವಿತ್ತು. ಅವನು ವೀರ. ಇವಳ ಪ್ರಾಣವುಳಿಸಿದವನು. ಉತ್ತಮವಾದ ಯೌವನವನ್ನು ಹೊಂದಿದ್ದ ಅವನು ಬಹಳ ಸುಂದರನೂ ಆಗಿದ್ದನು. ಇವಳ ಆಜ್ಞೆಗಳನ್ನು ನಡೆಸುತ್ತಿದ್ದನು. ಆದ್ದರಿಂದ ಅನಂಗಪ್ರಭೆಯು ಅವನನ್ನು ತನ್ನ ಪತಿಯನ್ನಾಗಿ ಮಾಡಿಕೊಂಡಳು. ಪತಿತೆಯಾದ ಸ್ತ್ರೀಯು ಕೀಳುಮೇಲು ಎಂಬುದನ್ನೆಲ್ಲ ನೋಡುವುದಿಲ್ಲ.

೩೩೮. ಅನಂತರ ಅನಂಗಪ್ರಭೆಯು ಬೆಸ್ತರ ಅಧಿಪತಿಯ ಮನೆಯಲ್ಲಿ ಅವನು ನೀಡಿದ ಸಮೃದ್ಧಿಯನ್ನು ಉಪಭೋಗಿಸುತ್ತಾ ಅವನೊಡನೆ ವಾಸಮಾಡಿದಳು.

---

ಅವತೀರ್ಯ ತಟೇ ಸೋಽಥ ಪ್ರಿಯಾವಿರಹದುಃಖಿತಃ ।
ಅಶಕ್ಯಪ್ರತಿಕಾರಂ ಚ ಮತ್ವಾ ವಿಧಿವಿಚೇಷ್ಟಿತಮ್ ॥ ೩೩೨
ಗತ್ವಾ ಶನೈಃ ಸ್ವನಗರಂ ಬದ್ಧ್ವಾ ಧೀರಾಶಯೋ ಧೃತಿಮ್ ।
ಹಿರಣ್ಯಗುಪ್ತೋ ಭೂಯೋಽ ರ್ಥಾನುಪಾರ್ಜ್ಯಾಸ್ತ ಸುನಿರ್ವೃತಃ ॥ ೩೩೩
ಸಾ ತ್ವನಂಗಪ್ರಭೈಕಾಹಾಚ್ಚಿತ್ರಂ ಫಲಹಕಸ್ಥಿತಾ ।
ತೇನ ಸಾಗರವೀರೇಣ ಪ್ರಾಪಿತಾಂಭೋನಿಧೇಸ್ತಟಮ್ ॥ ೩೩೪
ತತ್ರಾಶ್ವಾಸ್ಯ ಚ ನೀತಾಭೂದ್ಧೀವರೇಂದ್ರೇಣ ತೇನ ಸಾ ।
ತತ್ಸಾಗರಪುರಂ ನಾಮ ನಗರಂ ಭವನಂ ನಿಜಮ್ ॥ ೩೩೫
ತತ್ರ ರಾಜಸಮಶ್ರೀಕಂ ವೀರಂ ಪ್ರಾಣಪ್ರದಾಯಿನಮ್ ।
ಸುಯೌವನಂ ಸುರೂಪಂ ಚ ವಿಚಿಂತ್ಯಾಜ್ಞಾವಿಧಾಯಿನಮ್ ॥ ೩೩೬
ತಮೇವ ಚಕ್ರೇ ಸಾನಂಗಪ್ರಭಾ ದಾಶಪತಿಂ ಪತಿಮ್ ।
ನ ಸ್ತ್ರೀ ಚಲಿತಚಾರಿತ್ರಾ ನಿಮ್ನೋನ್ನತಮವೇಕ್ಷತೇ ॥ ೩೩೭
ತತಃ ಕೈವರ್ತಪತಿನಾ ತೇನ ಸಾಕಮುವಾಸ ಸಾ ।
ತದ್ವೇಶ್ಮನ್ಯುಪಭುಂಜಾನಾ ತತ್ಸಮೃದ್ಧಿಂ ತದರ್ಪಿತಾಮ್ ॥ ೩೩೮

೩೫. ಒಂದು ದಿವಸ ಅನಂಗಪ್ರಭೆಯು ಉಪ್ಪರಿಗೆಯ ತುದಿಯನ್ನು ಹತ್ತಿ ಆ ದಾರಿಯಿಂದ ಹೋಗುತ್ತಿದ್ದ ವಿಜಯವರ್ಮನೆಂಬ ಸುಂದರನಾದ ಕ್ಷತ್ರಿಯಪುತ್ರನನ್ನು ನೋಡಿದಳು.

೩೬. ಸೌಂದರ್ಯಲುಬ್ಧಳಾದ ಅವಳು ಕೆಳಗೆ ಇಳಿದು ಅವನ ಬಳಿಗೆ ಹೋಗಿ "ನಿನ್ನನ್ನು ನೋಡಿದ್ದರಿಂದಲೇ ನನ್ನ ಮನಸ್ಸು ಆಕೃಷ್ಟವಾಗಿದೆ. ಅನುರಕ್ತಳಾದ ನನ್ನನ್ನು ಸೇವಿಸು" ಎಂದು ಹೇಳಿದಳು.

೩೭. ಆ ರಾಜಪುತ್ರನು ಹರ್ಷದಿಂದ ಆಕಾಶದಿಂದ ಇಳಿದುಬಂದ ತ್ರೈಲೋಕ್ಯ ಸುಂದರಿಯೋ ಎಂಬಂತಿದ್ದ ಅವಳನ್ನು ಅಭಿನಂದಿಸಿ ಸ್ವೀಕರಿಸಿ ಅವಳೊಡನೆ ತನ್ನ ಮನೆಗೆ ಹೋದನು.

೩೮–೩೯. ಅನಂತರ ಆ ಸಾಗರವೀರನು ಪ್ರಿಯೆಯು ಎಲ್ಲಿಗೋ ಹೋದಳೆಂದು ತಿಳಿದು ಎಲ್ಲವನ್ನೂ ತ್ಯಜಿಸಿ ಶರೀರವನ್ನು ತಪಸ್ಸಿನಿಂದ ಬಿಡಲು ಗಂಗಾನದಿಯ ಬಳಿಗೆ ಹೋದನು. ಆ ವಿಧವಾದ ದುಃಖವು ಅವನಿಗೆ ಹೇಗೆ ತಾನೆ ಆಗದಿರಲು ಸಾಧ್ಯ? ಆ ಬೆಸ್ತನೆಲ್ಲಿ? ಅಂತಹ ವಿದ್ಯಾಧರಿಯೊಡನೆ ಸಾಹಚರ್ಯವು ಎಲ್ಲಿಯದು?

೪೦. ಅನಂಗಪ್ರಭೆಯು ಮಾತ್ರ ವಿಜಯವರ್ಮನ ಜೊತೆಯಲ್ಲಿ ಅದೇ ನಗರದಲ್ಲೇ ಯಾವ ಅಡ್ಡಿಯೂ ಇಲ್ಲದೆ ಸುಖವಾಗಿ ಇದ್ದಳು.

---

ಏಕದಾ ಸಾತ್ರ ಹರ್ಮ್ಯಾಗ್ರಾದಪಶ್ಯದ್ರಥ್ಯಯಾ ತಯಾ ।
ಯಾಂತಂ ವಿಜಯವರ್ಮಾಖ್ಯಂ ಭವ್ಯಂ ಕ್ಷತ್ರಿಯಪುತ್ರಕಮ್ ॥ ೩೫
ರೂಪಲುಬ್ಧಾವತೀರ್ಯೈವ ತಮುಪೇತ್ಯ ಜಗಾದ ಸಾ ।
ದರ್ಶನಾಕೃಷ್ಟಚಿತ್ತಾಂ ಮಾಂ ಭಜ ಪ್ರಣಯಿನೀಮಿತಿ ॥ ೩೬
ಸ ಚಾಭಿನಂದ್ಯ ಹೃಷ್ಟಸ್ತಾಮಾಕಾಶಪತಿತಾಮಿವ ।
ಗೃಹೀತ್ವಾ ಚ ಜಗಾಮ ಸ್ವಂ ಗೃಹಂ ತ್ರೈಲೋಕ್ಯಸುಂದರೀಮ್ ॥ ೩೭
ಸೋಽಥ ಸಾಗರವೀರಸ್ತಾಂ ಬುದ್ಧ್ವಾ ಕ್ವಾಪಿ ಗತಾಂ ಪ್ರಿಯಾಮ್ ।
ತ್ಯಕ್ತ್ವಾ ಸರ್ವಂ ತನುಂ ತ್ಯಕ್ತುಂಸ್ತಪಸಾ ಸುರನಿಮ್ನಗಾಮ್ ॥ ೩೮
ಯದಗಾತ್ತತ್ಕಥಂ ಮಾ ಭೂದ್ದುಃಖಂ ತಸ್ಯ ತಥಾವಿಧಮ್ ।
ಕ್ವ ದಾಶತ್ವಂ ಕ್ವ ತಾದೃಶ್ಯಾ ವಿದ್ಯಾಧರ್ಯಾ ಹಿ ಸಂಗಮಃ ॥ ೩೯
ಸಾಪ್ಯನಂಗಪ್ರಭಾ ತೇನ ಸಮಂ ವಿಜಯವರ್ಮಣಾ ।
ತಸ್ಥೌ ತತ್ರೈವ ನಗರೇ ಯಥಾಸುಖಮನರ್ಗಲಾ ॥ ೪೦

೩೪೫. ಅನಂತರ ಒಂದು ಬಾರಿ ಅಲ್ಲಿದ್ದ ಸಾಗರವರ್ಮನೆಂಬ ಹೆಸರಿನ ರಾಜನು ಹೆಣ್ಣಾನೆಯನ್ನು ಏರಿ ಆ ಪಟ್ಟದಲ್ಲಿ ಸಂಚಾರ ಮಾಡಲು ಹೊರ ಹೊರಟನು.

೩೪೬. ಆ ರಾಜನು ತಾನೇ ನಿರ್ಮಿಸಿದ ತನ್ನ ಹೆಸರನ್ನೇ ಹೊಂದಿದ್ದ ಆ ಪಟ್ಟಣವನ್ನು ನೋಡುತ್ತಾ ಆ ಮಾರ್ಗದಿಂದ ವಿಜಯವರ್ಮನ ಮನೆಯಿದ್ದೆಡೆಗೆ ಬಂದನು.

೩೪೭. ರಾಜನು ಬರುತ್ತಿರುವುದನ್ನು ತಿಳಿದು ಅವನನ್ನು ನೋಡುವ ಕುತೂಹಲದಿಂದ ಅನಂಗಪ್ರಭೆಯು ಉಪ್ಪರಿಗೆಯನ್ನು ಹತ್ತಿದಳು.

೩೪೮. ಆ ರಾಜನನ್ನು ನೋಡಿದ ಮಾತ್ರಕ್ಕೇ ಅವನಿಗೆ ವಶವಾಗಿ ರಾಜನ ಆನೆಯ ಮೇಲಿದ್ದ ಮಾವಟಿಗನನ್ನು ಕುರಿತು ಹಠಾತ್ತನೆ ಹೇಳಿದಳು:

೩೪೯. ""ಎಲೈ ಮಾವಟಿಗನೇ ! ನಾನು ಎಂದೂ ಆನೆಯನ್ನು ಹತ್ತಿದವಳೇ ಅಲ್ಲ. ಆದುದರಿಂದ ನನ್ನನ್ನು (ಆನೆಯ ಮೇಲೆ) ಹತ್ತಿಸು. ಅಲ್ಲಿ ಎಷ್ಟು ಸುಖವಿರುತ್ತದೆಯೆಂಬುದನ್ನು ನೋಡುತ್ತೇನೆ."

೩೫೦. ಅದನ್ನು ಕೇಳಿ ಆ ಮಾವಟಿಗನು ರಾಜನ ಮುಖವನ್ನು ನೋಡಿದನು. ರಾಜನು ಅಂತರಿಕ್ಷದಿಂದ ಕಳಚಿಬಿದ್ದ ಚಂದ್ರನ ಕಾಂತಿಯಂತಿದ್ದ ಅವಳನ್ನು ನೋಡಿದನು.

೩೫೧. ರಾಜನು ತೃಪ್ತಿಹೊಂದದ ಕಣ್ಣಿಂದ ಚಕೋರಪಕ್ಷಿಯಂತೆ ಅವಳನ್ನು ಪಾನಮಾಡುತ್ತಾ ಅವಳನ್ನು ಪಡೆಯುವುದರಲ್ಲಿ ಮನಸ್ಸನ್ನು ನೆಟ್ಟು ಮಾವಟಿಗನನ್ನು ಕುರಿತು ಹೇಳಿದನು.

---

ತತಃ ಕದಾಚಿತ್ತತ್ರತ್ಯಃ ಸಮಾರೂಢಕರೇಣುಕಃ ।
ರಾಜಾ ಸಾಗರವರ್ಮಾಖ್ಯೋ ನಿರಗಾದ್ಭ್ರಮಿತುಂ ಪುರಮ್ ॥ ೩೪೫
ಸ್ವನಾಮಸಂಜ್ಞಂ ಸ್ವಕೃತಂ ಸ ಪಶ್ಯಂಸ್ತತ್ಪುರಂ ನೃಪಃ ।
ತೇನಾಯಯೌ ಪಥಾ ಯತ್ರ ಗೃಹಂ ವಿಜಯವರ್ಮಣಃ ॥ ೩೪೬
ಬುದ್ಧ್ವಾ ಚ ನೃಪಮಾಯಾಂತಂ ತದ್ದರ್ಶನಕುತೂಹಲಾತ್ ।
ಆರುರೋಹಾತ್ರ ಸಾನಂಗಪ್ರಭಾ ಹರ್ಮ್ಯತಲಂ ತದಾ ॥ ೩೪೭
ದೃಷ್ಟ್ವೈವ ಸಾ ತಂ ರಾಜಾನಂ ತಥಾಭೂತ್ತದ್ವಶಾ ಯಥಾ ।
ಹಠಾದ್ರಾಜಕರೇಣುಸ್ಥಂ ಹಸ್ತ್ಯಾರೋಹಮಭಾಷತ ॥ ೩೪೮
ಭೋ ಹಸ್ತ್ಯಾರೋಹ ನೈವಾಹಮಾರೂಢಾ ಜಾತು ಹಸ್ತಿನಮ್ ।
ತದಾರೋಹಯ ಮಾಮತ್ರ ವೀಕ್ಷೇ ತಾವತ್ಕಿಯತ್ ಸುಖಮ್ ॥ ೩೪೯
ತಚ್ಛ್ರುತ್ವಾಧೋರಣೇ ತಸ್ಮಿನ್ ರಾಜಾನನವಿಲೋಕಿನಿ ।
ರಾಜಾ ದದರ್ಶ ತಾಮಿಂದೋರ್ದಿವಃ ಕಾಂತಿಮಿವ ಚ್ಯುತಾಮ್ ॥ ೩೫೦
ಪಿಬಂಶ್ಚ ತಾಮತೃಪ್ತೇನ ಚಕೋರ ಇವ ಚಕ್ಷುಷಾ ।
ನೃಪಸ್ತತ್ಪ್ರಾಪ್ತಿಬದ್ಧಾಶೋ ಹಸ್ತ್ಯಾರೋಹಮುವಾಚ ಸಃ ॥ ೩೫೧

೩೫೨. ""ಆನೆಯನ್ನು ಬಳಿಗೆ ಒಯ್ದು ಇವಳ ಮನೋರಥವನ್ನು ಪೂರಯಿಸು. ಈ ಇಂದು ಮುಖಿಯನ್ನು ಶೀಘ್ರವಾಗಿ ಇಲ್ಲಿಗೆ ಹತ್ತಿಸು."

೩೫೩. ಹೀಗೆ ರಾಜನು ಹೇಳಲಾಗಿ ಮಾವಟಿಗನು ಆ ಉಪ್ಪರಿಗೆ ಮನೆಯ ಕೆಳಭಾಗಕ್ಕೆ ಕೂಡಲೇ ಹೆಣ್ಣಾನೆಯನ್ನು ಒಯ್ದನು.

೩೫೪. ಬಳಿಗೆ ಬಂದ ಆ ಹೆಣ್ಣಾನೆಯನ್ನು ನೋಡಿ ಅನಂಗಪ್ರಭೆಯು ಅದನ್ನು ಹತ್ತಿ ರಾಜನಾದ ಸಾಗರವರ್ಮನ ಮಡಿಲಲ್ಲಿ ಬಿದ್ದಳು.

೩೫೫. ಮೊದಲಿದ್ದ ಆ ಪತಿದ್ವೇಷವು ಎಲ್ಲಿ ? ಈಗ ಎಷ್ಟು ಗಂಡಂದಿರಾದರೂ ಅವಳಲ್ಲಿ ಕಂಡುಬರುತ್ತಿರುವ ಅತೃಪ್ತಿಯೆಲ್ಲಿ ? ಅಯ್ಯೋ, ಅವಳ ತಂದೆತಾಯಂದಿರ ಶಾಪ ಎಂತಹ ವಿಪರ್ಯಾಸವನ್ನು ತೋರುತ್ತಿದೆ ?

೩೫೬. ಬಿದ್ದುಬಿಡುವ ಹೆದರಿಕೆಯಿಂದಲೋ ಎಂಬಂತೆ ಅವಳು ಆ ರಾಜನನ್ನು ಕತ್ತಿನಲ್ಲಿ ಹಿಡಿದುಕೊಂಡಳು. ಅವಳ ಸ್ಪರ್ಶದ ಅಮೃತದಿಂದ ರಾಜನ ಶರೀರವು ತೊಯ್ದುಹೋಯಿತು. ಅವನಿಗೆ ಪರಮಸಂತೋಷವಾಯಿತು.

೩೫೭. ಯುಕ್ತಿಯಿಂದ ತನ್ನನ್ನು ಸಮರ್ಪಿಸಿಕೊಂಡ ಹಾಗೂ ಪರಿಚುಂಬನದಲ್ಲಿ ಆಸಕ್ತಿಯುಳ್ಳ ಆ ಅನಂಗಪ್ರಭೆಯನ್ನು ಆ ರಾಜನು ಎತ್ತಿಕೊಂಡೇ ತನ್ನ ಮಂದಿರಕ್ಕೆ ಶೀಘ್ರವಾಗಿ ಹೋದನು.

---

ನೀತ್ವಾ ಕರೇಣುಂ ನಿಕಟಂ ಪೂರಯಾಸ್ಯಾ ಮನೋರಥಮ್ ।
ಆರೋಪಯೇಂದುವದನಾಮೇತಾಮತ್ರಾವಿಲಂಬಿತಮ್ ॥ ೩೫೨

ಇತಿ ರಾಜ್ಞೋದಿತೇ ತೇನ ಹಸ್ತ್ಯಾರೋಹೇಣ ಢೌಕಿತಾ ।
ಅಧಸ್ತಾತ್ತಸ್ಯ ಹರ್ಮ್ಯಸ್ಯ ತತ್ಕ್ಷಣಂ ಸಾ ಕರೇಣುಕಾ ॥ ೩೫೩

ದೃಷ್ಟ್ವಾ ತಾಂ ನಿಕಟಪ್ರಾಪ್ತಾಂ ರಾಜ್ಞಃ ಸಾಗರವರ್ಮಣಃ ।
ಉತ್ಸಂಗೇ ತಸ್ಯ ಸಾನಂಗಪ್ರಭಾತ್ಮಾನಮಪಾತಯತ್ ॥ ೩೫೪

ಕ್ವಾದೌ ಸ ಭರ್ತೃವಿದ್ವೇಷಃ ಕ್ವೈಷಾ ಭರ್ತೃಷ್ವತೃಪ್ತತಾ ।
ಹಾ ತಸ್ಯಾಃ ಪಿತೃಶಾಪೇನ ದರ್ಶಿತೋಽತಿವಿಪರ್ಯಯಃ ॥ ೩೫೫

ನಿಪಾತಭೀತೇವ ಚ ಸಾ ಕಂಠೇ ತಂ ನೃಪಮಗ್ರಹೀತ್ ।
ತತ್ಸ್ಪರ್ಶಾಮೃತಸಿಕ್ತಾಂಗಃ ಸೋಽಪಿ ಪ್ರಾಪ ಪರಾಂ ಮುದಮ್ ॥ ೩೫೬

ಯುಕ್ತ್ಯಾ ಸಮರ್ಪಿತಾತ್ಮಾನಂ ಪರಿಚುಂಬನಲಾಲಸಾಮ್ ।
ತಾಂ ಸ ರಾಜಾ ಗೃಹೀತ್ವೈವ ಜಗಾಮಾಶು ಸ್ವಮಂದಿರಮ್ ॥ ೩೫೭

೩೫೮. ತನ್ನ ವೃತ್ತಾಂತವನ್ನೆಲ್ಲ ಹೇಳಿದ ಆ ಆಕಾಶಚಾರಿಣಿಯಾದ ಅಂಗನೆಯನ್ನು ರಾಜನು ಅಂತಃಪುರಕ್ಕೆ ಒಯ್ದು ಆಗಲೇ ಅವಳನ್ನು ಮಹಾದೇವಿಯನ್ನಾಗಿ ಮಾಡಿದನು.

೩೫೯. ರಾಜನು ಅವಳನ್ನು ಅಪಹರಿಸಿದನೆಂದು ತಿಳಿದು ನಂತರ ಕ್ಷತ್ರಿಯ ತೇಜಸ್ಸನ್ನು ಹೊಂದಿದನೋ ಎಂಬಂತೆ ವಿಜಯವರ್ಮನು ಬಂದು ಹೊರಗಡೆ ರಾಜಸೇವಕರೊಡನೆ ಯುದ್ಧಮಾಡಿದನು.

೩೬೦. ಆ ಯುದ್ಧದಲ್ಲಿ ಅವನು ಹಿಂದಿರುಗಿ ಓಡದೆ ಶರೀರವನ್ನು ತ್ಯಜಿಸಿದನು. ಏಕೆಂದರೆ ಶೂರರು ಸ್ತ್ರೀನಿಮಿತ್ತವಾದ ಪರಾಭವವನ್ನು ಸಹಿಸುವುದಿಲ್ಲವಷ್ಟೆ

೩೬೧. ""ಈ ಬಡಪಾಯಿಯಿಂದ ನಿನಗೇನು ಪ್ರಯೋಜನ ? ನಮ್ಮನ್ನು ಸೇವಿಸು. ನಂದನವನಕ್ಕೆ ಬಾ." ಎಂದು ಸುರಸ್ತ್ರೀಯರು ಅವನಿಗೆ ಹೇಳಿದರೋ ಎಂಬಂತೆ ಅವನನ್ನು ಸ್ವರ್ಗಕ್ಕೆ ಒಯ್ದರು.

೩೬೨. ಆ ಅನಂಗಪ್ರಭೆಯೂ ಬೇರೆಯವನನ್ನು ಹೋಗಿ ಸೇರದೆ ರಾಜನಾದ ಸಾಗರವರ್ಮನಲ್ಲೇ ಸಾಗರದಲ್ಲಿ ನದಿಯಂತೆ ಸ್ಥಿರವಾಗಿ ನಿಂತಳು.

೩೬೩. ಅವಳು ವಿಧಿಯ ಬಲದಿಂದ ಆ ಪತಿಯೊಡನೆ ಕೃತಾರ್ಥತೆಯನ್ನು ಹೊಂದಿದಳು. ರಾಜನೂ ಕೂಡ ಆ ಹೆಂಡತಿಯೊಡನೆ ಜನ್ಮಫಲವನ್ನು ಪಡೆದಂತೆ ಭಾವಿಸಿದನು.

---

ತತ್ರ ತಾಮುಕ್ತವೃತ್ತಾಂತಾಂ ತದೈವ ದ್ಯುಚರಾಂಗನಾಮ್ ।
ಸ ಚಕಾರ ಮಹಾದೇವೀಂ ಪ್ರವೇಶ್ಯಾಂತಃಪುರೇ ನೃಪಃ ॥ ೩೫೮

ಬುದ್ಧ್ವಾ ರಾಜಹೃತಾಮೇತಾಮೇತ್ಯ ಕ್ಷಾತ್ರಮಿವಾಥ ಸಃ ।
ಬಹಿರ್ವಿಜಯವರ್ಮಾತ್ರ ರಾಜಭೃತ್ಯಾನಯೋಧಯತ್ ॥ ೩೫೯

ಯುದ್ಧೇ ಚ ತತ್ರ ತತ್ಯಾಜ ಶರೀರಮಪರಾಙ್ಮುಖಃ ।
ನ ಶೂರಾ ವಿಷಹಂತೇ ಹಿ ಸ್ತ್ರೀನಿಮಿತ್ತಂ ಪರಾಭವಮ್ ॥ ೩೬೦

ಕಿಮೇತಯಾ ವರಾಕ್ಯಾ ತೇ ಭಜಾಸ್ಮಾನೇಹಿ ನಂದನಮ್ ।
ಇತೀವ ಚ ಸುರಸ್ತ್ರೀಭಿಃ ಸ ನೀತೋಽಭೂತ್ಸುರಾಲಯಮ್ ॥ ೩೬೧

ಸಾಪ್ಯನಂಗಪ್ರಭಾ ತಸ್ಮಿನ್ ರಾಜ್ಞಿ ಸಾಗರವರ್ಮಣಿ ।
ನದೀವ ಸಾಗರೇ ಸ್ಥೈರ್ಯಂ ಬಬಂಧಾನನ್ಯಗಾಮಿನೀ ॥ ೩೬೨

ಭವಿತವ್ಯಬಲಾನ್ಮೇನೇ ತೇನ ಪತ್ಯಾ ಕೃತಾರ್ಥತಾಮ್ ।
ಸೋಽಪಿ ಜನ್ಮಫಲಂ ಪ್ರಾಪ್ತಂ ತಯಾಮನ್ಯತ ಭಾರ್ಯಯಾ ॥ ೩೬೩

೩೬೪. ಕೆಲವು ದಿನಗಳಾದ ಮೇಲೆ ಅನಂಗಪ್ರಭೆಯು ಗರ್ಭವನ್ನು ಧರಿಸಿದಳು. ಮತ್ತು ಸಕಾಲದಲ್ಲಿ ಒಂದು ಗಂಡು ಮಗುವನ್ನು ಹಡೆದಳು.

೩೬೫. ರಾಜನು ಪುತ್ರಜನ್ಮ ಮಹೋತ್ಸವವನ್ನು ಉದಾರವಾಗಿ ಆಚರಿಸಿ ಶಿಶುವಿಗೆ ಸಮುದ್ರವರ್ಮನೆಂದು ನಾಮಕರಣ ಮಾಡಿದನು.

೩೬೬. ಪುತ್ರನು ಕ್ರಮವಾಗಿ ಬೆಳವಣಿಗೆಯನ್ನು ಹೊಂದಿ ಗುಣವಂತನೂ ಬಾಹು (ಪರಾಕ್ರಮ) ಶಾಲಿಯೂ ಆಗಿ ತಾರುಣ್ಯವನ್ನು ತಲುಪಿದಾಗ ಅವನನ್ನು ರಾಜನು ಯುವರಾಜ ಪದವಿಯಲ್ಲಿ ಅಭಿಷೇಕ ಮಾಡಿದನು.

೩೬೭. ಅನಂತರ ಆ ರಾಜನು ರಾಜನಾದ ಸಮರವರ್ಮನ ಕಮಲಾವತೀ ಎಂಬ ಹೆಸರಿನ ಪುತ್ರಿಯನ್ನು ತಂದು ಪುತ್ರನಿಗೆ ಮದುವೆ ಮಾಡಿಸಿದನು.

೩೬೮. ಅನಂತರ ಆ ರಾಜನು ಪುತ್ರನ ಗುಣಗಳಿಂದ ಸಂತುಷ್ಟನಾಗಿ ಅವನಿಗೆ ತನ್ನ ರಾಜ್ಯವನ್ನು ಒಪ್ಪಿಸಿದನು.

೩೬೯. ಓಜಃಶಾಲಿಯೂ ಕ್ಷತ್ರಧರ್ಮಜ್ಞನೂ ಆದ ಆ ಸಮುದ್ರವರ್ಮ ಕೂಡ ಆ ರಾಜ್ಯ ಭಾರವನ್ನು ಸ್ವೀಕರಿಸಿ ತಂದೆಗೆ ನಮಸ್ಕಾರ ಮಾಡಿ ವಿಜ್ಞಾಪಿಸಿದನು.

೩೭೦. '"ತಂದೆಯೇ ! ನನಗೆ ಅನುಮತಿಯನ್ನು ಕೊಡು. ನಾನು ದಿಕ್ಕುಗಳನ್ನು ಗೆಲ್ಲಲು ಹೋಗುತ್ತೇನೆ. ಸ್ತ್ರೀಯರಿಂದ ನಪುಂಸಕನು ನಿಂದ್ಯನಾಗುವಂತೆ ಜಿಗೀಷುವಲ್ಲದ ರಾಜನು ನಿಂದ್ಯನಾಗುತ್ತಾನೆ.

---

ದಿನೈಶ್ಚ ತಸ್ಯ ರಾಜ್ಞೀ ಸಾ ರಾಜ್ಞಃ ಸಾಗರವರ್ಮಣಃ ।
ದಧ್ರೇಽನಂಗಪ್ರಭಾಗರ್ಭಂ ಕಾಲೇ ಚ ಸುಷುವೇ ಸುತಮ್ ॥ ೩೬೪

ನಾಮ್ನಾ ಸಮುದ್ರವರ್ಮಾಣಂ ತಂ ಸ ರಾಜಾ ಪಿತಾ ಶಿಶುಮ್ ।
ಚಕಾರ ವಿಹಿತೋದಾರಪುತ್ರಜನ್ಮಮಹೋತ್ಸವಃ ॥ ೩೬೫

ಕ್ರಮಾಚ್ಚ ವೃದ್ಧಿಮಾಯಾತಂ ಸಗುಣಂ ಪ್ರಾಪ್ತಯೌವನಮ್ ।
ಯೌವರಾಜ್ಯೇಽಭ್ಯಷಿಂಚತ್ತಂ ಸುತಂ ಸ ಭುಜಶಾಲಿನಮ್ ॥ ೩೬೬

ವಿವಾಹಹೇತೋಸ್ತಸ್ಯಾಥ ಸೂನೋಃ ಸಮರವರ್ಮಣಃ ।
ರಾಜ್ಞಃ ಕಮಲವತ್ಯಾಖ್ಯಾಂ ಸುತಾಮಾಹರತಿ ಸ್ಮ ಸಃ ॥ ೩೬೭

ಕೃತೋದ್ವಾಹಾಯ ತಸ್ಮೈಚ ಪುತ್ರಾಯಾವರ್ಜಿತೋ ಗುಣೈಃ ।
ಸಮುದ್ರವರ್ಮಣೇ ರಾಜ್ಯಂ ನಿಜಂ ಪ್ರಾದಾತ್ಸ ಭೂಪತಿಃ ॥ ೩೬೮

ಸೋಽಪಿ ಪ್ರಾಪ್ಯೈವ ತದ್ರಾಜ್ಯಮೋಜಸ್ವೀ ಕ್ಷತ್ರಧರ್ಮವಿತ್ ।
ಸಮುದ್ರವರ್ಮಾ ಪಿತರಂ ಪ್ರಣತಸ್ತಂ ವ್ಯಜಿಜ್ಞಪತ್ ॥ ೩೬೯

ಅನುಜಾನೀಹಿ ಮಾಂ ತಾತ ದಿಶೋ ಜೇತುಂ ವ್ರಜಾಮ್ಯಹಮ್ ।
ಅಜಿಗೀಷುಃ ಪತಿರ್ಭೂಮೇರ್ನಿಂದ್ಯಃ ಕ್ಲೀಬ ಇವ ಸ್ತ್ರಿಯಾಃ ॥ ೩೭೦

೩೭೧. ಪರರಾಷ್ಟ್ರಗಳನ್ನು ಗೆದ್ದು ತಮ್ಮ ಬಾಹುಬಲದಿಂದ ಸಂಪಾದಿತವಾದ ರಾಜರ ಲಕ್ಷ್ಮಿಯೇ ಈ ಲೋಕದಲ್ಲಿ ಧರ್ಮಸಮ್ಮತಳೂ ಕೀರ್ತಿಕರಳೂ ಆಗಿರುತ್ತಾಳೆ.

೩೭೨. ತಂದೆಯೇ ! ಕ್ಷುದ್ರಜನರ ಪರಾಜಯಕ್ಕಾಗಿ ರಾಜತ್ವವಿದ್ದರೆ ಅಂತಹ ರಾಜತ್ವದಿಂದ ಏನು ಪ್ರಯೋಜನ ? ವಿಷಯಲೋಲುಪರಾದವರು ಬೆಕ್ಕುಗಳಂತೆ ತಮ್ಮ ಪ್ರಜೆಯನ್ನೇ (ತಮ್ಮ ಸಂತಾನವನ್ನೇ) ಭಕ್ಷಿಸುತ್ತಾರೆ."

೩೭೩. ಹೀಗೆ ಹೇಳಿದ ಅವನನ್ನು ಕುರಿತು ಸಾಗರವರ್ಮನು ಹೇಳಿದನು. ""ಪುತ್ರನೇ ! ನಿನಗೆ ರಾಜ್ಯವು ಇನ್ನೂ ಹೊಸದು. ನೀನು ಅದನ್ನು ಮಾತ್ರ ಚೆನ್ನಾಗಿ ನಿರ್ವಹಿಸು.

೩೭೪. ಪ್ರಜೆಗಳನ್ನು ಧರ್ಮದಿಂದ ಆಳುವವನಿಗೆ ಪಾಪವಾಗಲಿ ಅಕೀರ್ತಿಯಾಗಲಿ ಇರುವುದಿಲ್ಲ. ಮತ್ತು ತಮ್ಮ ಸಾಮರ್ಥ್ಯವನ್ನು ಅಳೆಯದೆ (ಇರುವ) ರಾಜರಿಗೆ ಯುದ್ಧವು ಯುಕ್ತವಾದುದಲ್ಲ.

೩೭೫. ವತ್ಸನೇ ! ಯದ್ಯಪಿ ನೀನು ಶೂರನು, ಮತ್ತು ನಿನಗೆ ದೊಡ್ಡಸೈನ್ಯವಿದೆ. ಆದರೂ ಹೇಳುವಂತಿಲ್ಲ. ಯುದ್ಧದಲ್ಲಿ ಜಯಶ್ರೀಯು ಚಂಚಲಳಾದವಳು."

೩೭೬. ಇತ್ಯಾದಿಯಾಗಿ ತಂದೆಯು ಹೇಳಿದರೂ ಒತ್ತಾಯದಿಂದ ತಂದೆಯ ಅನುಮತಿ ಯನ್ನು ಪಡೆದು ತೇಜಃಶಾಲಿಯಾದ ಸಮುದ್ರವರ್ಮನು ದಿಕ್ಕುಗಳನ್ನು ಗೆಲ್ಲುವ ಇಚ್ಛೆಯಿಂದ ಹೊರಟನು.

---

ಧರ್ಮ್ಯಾ ಕೀರ್ತಿಕರೀ ಸಾ ಚ ಲಕ್ಷ್ಮೀರಿಹ ಮಹೀಭುಜಾಮ್ ।
ಯಾಜಿತ್ವಾ ಪರರಾಷ್ಟ್ರಾಣಿ ನಿಜಬಾಹುಬಲಾರ್ಜಿತಾ ॥ ೩೭೧
ಕಿಂ ತೇಷಾಂ ತಾತ ರಾಜತ್ವಂ ಕ್ಷುದ್ರಾಣಾಮಭಿಭೂತಯೇ ।
ಸ್ವಪ್ರಜಾಮೇವ ಖಾದಂತಿ ಮಾರ್ಜಾರಾ ಇವ ಲೋಲುಪಾಃ ॥ ೩೭೨
ಇತ್ಯೂಚಿವಾನ್ ಸ ತೇನೋಚೇ ಪಿತ್ರಾ ಸಾಗರವರ್ಮಣಾ ।
ನೂತನಂ ಪುತ್ರ ರಾಜ್ಯಂ ತೇ ತತ್ತಾವತ್ತ್ವಂ ಪ್ರಸಾಧಯ ॥ ೩೭೩
ನಾಸ್ತ್ಯಪುಣ್ಯಮಕೀರ್ತಿರ್ವಾ ಪ್ರಜಾಧರ್ಮೇಣ ಶಾಸತಃ ।
ಅನವೇಕ್ಷ್ಯ ಚ ಶಕ್ತಿಂ ಸ್ವಾಂ ಯುಕ್ತೋ ರಾಜ್ಞಾಂ ನ ವಿಗ್ರಹಃ ॥ ೩೭೪
ವತ್ಸ ಯದ್ಯಪಿ ಶೂರಸ್ತ್ವಂ ಸೈನ್ಯಮಸ್ತಿ ಚ ತೇ ಬಹು ।
ತಥಾಪಿ ನೈವ ವಿಶ್ವಾಸೋ ಜಯಶ್ರೀಶ್ಚಂಚಲಾ ರಣೇ ॥ ೩೭೫
ಇತ್ಯಾದಿ ಪಿತ್ರಾ ಪ್ರೋಕ್ತೋಽಪಿ ತಮನುಜ್ಞಾಪ್ಯ ಯತ್ನತಃ ।
ಸಮುದ್ರವರ್ಮಾ ಸ ಯಯೌ ತೇಜಸ್ವೀ ದಿಗ್ಜಿಗೀಷಯಾ ॥ ೩೭೬

೩೭೭. ಕ್ರಮವಾಗಿ ದಿಕ್ಕುಗಳನ್ನು ಗೆದ್ದು ರಾಜರುಗಳನ್ನು (ತನ್ನ) ವಶದಲ್ಲಿ ಸ್ಥಾಪಿಸಿ ಆನೆ, ಕುದುರೆ, ಸುವರ್ಣ ಮೊದಲಾದುವನ್ನು ಪಡೆದು ತನ್ನ ಪಟ್ಟಣಕ್ಕೆ ಬಂದನು.

೩೭೮. ಆ ಸಮುದ್ರವರ್ಮನು ಸಂತುಷ್ಟರಾದ ತಾಯಿತಂದೆಯರ ಪಾದಗಳಿಗೆ ನಮಸ್ಕಾರ ಮಾಡಿ ನಾನಾ ದೇಶಗಳಲ್ಲಿ ಉತ್ಪನ್ನವಾದ ಮಹಾರತ್ನಗಳಿಂದ ಪೂಜಿಸಿದನು.

೩೭೯. ಮತ್ತು ಮಹಾಕೀರ್ತಿವಂತನಾದ ಆ ಸಮುದ್ರವರ್ಮನು ತಾಯಿತಂದೆಯರ ಅಪ್ಪಣೆಯಿಂದ ಬ್ರಾಹ್ಮಣರುಗಳಿಗೆ ಆನೆ, ಕುದುರೆ, ಸುವರ್ಣ ಹಾಗೂ ರತ್ನಗಳ ರೂಪವಾದ ಮಹಾದಾನಗಳನ್ನು ಕೊಟ್ಟನು.

೩೮೦. ಅನಂತರ ಆ ನಗರದಲ್ಲಿ ದರಿದ್ರವೆಂಬ ಶಬ್ದವು ಅರ್ಥಶೂನ್ಯವಾಗುವಂತೆ ಯಾಚಕರಿಗೂ ಸೇವಕರಿಗೂ ಧನವನ್ನು ಸುರಿದನು.

೩೮೧. ತನ್ನ ಪುತ್ರನ ಆ ಮಹಿಮೆಯನ್ನು ನೋಡಿ ರಾಜನಾದ ಸಾಗರವರ್ಮನು ತಾನೂ ಅನಂಗಪ್ರಭೆಯೂ ಕೃತಕೃತ್ಯರೆಂದು ಭಾವಿಸಿದನು.

೩೮೨. ರಾಜನು ಆ ದಿವಸಗಳನ್ನು ಉತ್ಸವದಿಂದ ಕಳೆದು ಪುತ್ರನಾದ ಸಮುದ್ರವರ್ಮನನ್ನು ಕುರಿತು ಮಂತ್ರಿಗಳ ಸನ್ನಿಧಿಯಲ್ಲಿ ಹೇಳಿದನು.

೩೮೩. ""ಪುತ್ರನೇ ! ಈ ಜನ್ಮದಲ್ಲಿ ನಾನು ಮಾಡಬೇಕಾಗಿದ್ದುದನ್ನು ಮಾಡಿದೆನು. ರಾಜ್ಯ ಸುಖವನ್ನು ಅನುಭವಿಸಿದೆನು. ಬೇರೆಯವರಿಂದ ಪರಾಭವವನ್ನು ಕಾಣಲಿಲ್ಲ.

---

ಕ್ರಮೇಣ ಚ ದಿಶೋ ಜಿತ್ವಾ ಸ್ಥಾಪಯಿತ್ವಾ ವಶೇ ನೃಪಾನ್ ।
ಪ್ರಾಪ್ತಹಸ್ತ್ಯಶ್ವಹೇಮಾದಿರಾಯಯೌ ನಗರಂ ನಿಜಮ್ ॥ ೩೭೭
ತತ್ರ ಪಿತ್ರೋರ್ಮಹಾರತ್ನೈರ್ನಾನಾದೇಶೋದ್ಭವೈಶ್ಚ ಸಃ ।
ಚರಣೌ ಪೂಜಯಾಮಾಸ ಪ್ರಣತಃ ಪರಿತುಷ್ಟಯೋಃ ॥ ೩೭೮
ತದಾಜ್ಞಯಾ ಚ ಪ್ರದದೌ ಬ್ರಾಹ್ಮಣೇಭ್ಯೋ ಮಹಾಯಶಾಃ ।
ಮಹಾದಾನಾನಿ ಹಸ್ತ್ಯಶ್ವಹೇಮರತ್ನಮಯಾನಿ ಸಃ ॥ ೩೭೯
ತತೋ ವಸು ತಥಾರ್ಥಿಭ್ಯೋ ಭೃತ್ಯೇಭ್ಯಶ್ಚ ವವರ್ಷ ಸಃ ।
ಏಕೋ ದರಿದ್ರಶಬ್ದೋಽತ್ರ ಯಥಾಭೂದರ್ಥವರ್ಜಿತಃ ॥ ೩೮೦
ತದ್ದೃಷ್ಟ್ವಾ ಪುತ್ರಮಾಹಾತ್ಮ್ಯಮಾತ್ಮನಃ ಕೃತಕೃತ್ಯತಾಮ್ ।
ರಾಜಾ ಸಾಗರವರ್ಮಾ ಸ ಮೇನೇಽನಂಗಪ್ರಭಾಯುತಃ ॥ ೩೮೧
ಉತ್ಸವೇನ ಚ ನೀತ್ವಾ ತಾನ್ಯಹಾನಿ ನೃಪತಿಃ ಸ ತಮ್ ।
ಪುತ್ರಂ ಸಮುದ್ರವರ್ಮಾಣಮವೋಚನ್ಮಂತ್ರಿಸನ್ನಿಧೌ ॥ ೩೮೨
ಯನ್ಮಯಾ ಪುತ್ರ ಕರ್ತವ್ಯಂ ಕೃತಂ ತದಿಹ ಜನ್ಮನಿ ।
ಭುಕ್ತಂ ರಾಜ್ಯಸುಖಂ ದೃಷ್ಟಂ ಪರೇಭ್ಯೋ ನ ಪರಾಭವಃ ॥ ೩೮೩

೩೮೪. ಮತ್ತು ನೀನು ಸಾಮ್ರಾಜ್ಯವನ್ನು ಸ್ವೀಕರಿಸಿದುದನ್ನು ನೋಡಿದೆ. ನನಗೆ ಬೇರೆ ಇನ್ನೇನು ಪಡೆಯಬೇಕಾದುದು ಇದೆ ? ಆದುದರಿಂದ ನನ್ನ ಶರೀರವು ಇರುವವರೆಗೂ ನಾನು ತೀರ್ಥಕ್ಷೇತ್ರದಲ್ಲಿದ್ದುಬಿಡುತ್ತೇನೆ.

೩೮೫. ವಿನಶ್ವರವಾದ ಈ ಶರೀರದಲ್ಲಿ ಇಂದಿಗೂ ನಿನ್ನ ಮನೆಯಲ್ಲಿ (ಇರುವುದರಿಂದ) ಏನು ಪ್ರಯೋಜನ ಎಂದು ಈ ಮುಪ್ಪು ನನ್ನ ಕರ್ಣಗಳ ಮೂಲದಲ್ಲಿ ಹೇಳುತ್ತಿರುವಂತಿದೆ." (ಕರ್ಣಮೂಲದ ಬಿಳಿಕೂದಲು ಇದಕ್ಕೆ ಸೂಚಕವೆಂದು ಅಭಿಪ್ರಾಯ).

೩೮೬. ಹೀಗೆ ಹೇಳಿ ಪುತ್ರನಿಗೆ ಇಷ್ಟವಿಲ್ಲದಿದ್ದರೂ ಕೃತಕೃತ್ಯನಾದ ರಾಜಾ ಸಾಗರವರ್ಮನು ಪ್ರಿಯೆಯೊಡನೆ ಪ್ರಯಾಗಕ್ಕೆ ಹೋದನು.

೩೮೭. ತಂದೆಯನ್ನು ಹಿಂಬಾಲಿಸಿ ಹೋಗಿ ಸಮುದ್ರವರ್ಮನು ಮತ್ತೆ ತನ್ನ ಪಟ್ಟಣಕ್ಕೆ ಹಿಂದಿರುಗಿ ತನ್ನ ರಾಜ್ಯವನ್ನು ವಿಧಿಗನುಸಾರವಾಗಿ ಆಳಿದನು.

೩೮೮. ರಾಜನಾದ ಸಾಗರವರ್ಮನೂ ಅನಂಗಪ್ರಭೆಯೊಡಗೂಡಿ ಪ್ರಯಾಗದಲ್ಲಿ ದೇವನಾದ ವೃಷಧ್ವಜನನ್ನು (ಪರಮೇಶ್ವರನನ್ನು) ತಪಸ್ಸಿನಿಂದ ಸಂತೋಷಪಡಿಸಿದನು.

೩೮೯. ಆ ತ್ರಿಪುರಾರಿಯು ರಾತ್ರಿಯು ಕಳೆದಾಗ ಸ್ವಪ್ನದಲ್ಲಿ ಬಂದು ಸಾಗರವರ್ಮನಿಗೆ ಹೀಗೆ ಹೇಳಿದನು. "ಭಾರ್ಯಾಸಮೇತನಾದ ನಿನ್ನ ತಪಸ್ಸಿನಿಂದ ಸಂತುಷ್ಟನಾಗಿದ್ದೇನೆ ಆದುದರಿಂದ ಇದನ್ನು ಕೇಳು.

---

ದೃಷ್ಟಸ್ತ್ವಂ ಚಾತ್ತಸಾಮ್ರಾಜ್ಯಃ ಕಿಮನ್ಯತ್ಪ್ರಾಪ್ಯಮಸ್ತಿ ಮೇ ।
ತದಾಶ್ರಯಾಮ್ಯಹಂ ತೀರ್ಥಂ ಯಾವನ್ಮೇ ಧ್ರಿಯತೇ ತನುಃ ॥ ೩೮೪

ವಿನಶ್ವರೇ ಶರೀರೇಽಸ್ಮಿನ್ ಕಿಮದ್ಯಾಪಿ ಗೃಹೇ ತವ ।
ಇತೀವೈಷಾ ಜರಾ ಪಶ್ಯ ಕರ್ಣಮೂಲೇ ಬ್ರವೀತಿ ಮೇ ॥ ೩೮೫

ಇತ್ಯುಕ್ತ್ವಾ ಸ ಸುತೇಽನಿಚ್ಛತ್ಯಪಿ ತಸ್ಮಿನ್ನೃಪಃ ಕೃತೀ ।
ಯಯೌ ಸಾಗರವರ್ಮಾಥ ಪ್ರಯಾಗಂ ಪ್ರಿಯಯಾ ಸಹ ॥ ೩೮೬

ತಮನುವ್ರಜ್ಯ ಪಿತರಂ ಸ ಚಾಗತ್ಯ ನಿಜಂ ಪುರಮ್ ।
ಸಮುದ್ರವರ್ಮಾ ಸ್ವಂ ರಾಜ್ಯಂ ಯಥಾವಿಧಿ ಶಶಾಸ ತತ್ ॥ ೩೮೭

ರಾಜಾ ಸಾಗರವರ್ಮಾಪಿ ಸೋಽನಂಗಪ್ರಭಯಾ ಯುತಃ ।
ಪ್ರಯಾಗೇ ತಪಸಾ ದೇವಂ ವೃಷಧ್ವಜಮತೋಷಯತ್ ॥ ೩೮೮

ಸ ಸ್ವಪ್ನೇ ತಮುವಾಚೈವಂ ತ್ರಿಪುರಾರಿರ್ನಿಶಾಕ್ಷಯೇ ।
ತುಷ್ಟೋಽಸ್ಮಿ ತೇ ಸಭಾರ್ಯಸ್ಯ ತಪಸಾ ತದಿದಂ ಶೃಣು ॥ ೩೮೯

೩೯೦. ಪುತ್ರನೇ ! ಈ ಅನಂಗಪ್ರಭೆ ಮತ್ತು ನೀನು, ಇಬ್ಬರೂ ವಿದ್ಯಾಧರರು. ಶಾಪವು ನಷ್ಟವಾದುದರಿಂದ ಬೆಳಿಗ್ಗೆ ನಿಮ್ಮ ಲೋಕಕ್ಕೆ ಹೋಗುವಿರಿ."

೩೯೧. ಅದನ್ನು ಕೇಳಿ ರಾಜನು ಎಚ್ಚರಗೊಂಡನು. ಮತ್ತು ಅನಂಗಪ್ರಭೆಯೂ ಅವನಂತೆಯೇ ಸ್ವಪ್ನವನ್ನು ಕಂಡಿದ್ದಳು. ಅವರು ಪರಸ್ಪರ ಆ ಸ್ವಪ್ನಗಳನ್ನು ತಿಳಿಸಿದರು.

೩೯೨. ಅನಂತರ ಅನಂಗಪ್ರಭೆಯು ಹರ್ಷಗೊಂಡು ರಾಜನನ್ನು ಕುರಿತು ಹೇಳಿದಳು. ""ಆರ್ಯಪುತ್ರ ! ಈಗ ನಾನು ಜಾತಿಸ್ಮರೆಯಾದೆನು.

೩೯೩. ನಾನು ವೀರಪುರವೆಂಬ ಹೆಸರುಳ್ಳ ಪಟ್ಟಣದಲ್ಲಿ ವಿದ್ಯಾಧರೇಂದ್ರನಾದ ಸಮರನ ಮಗಳು.

೩೯೪. ತಾಯಿತಂದೆಯರ ಶಾಪದಿಂದ ಇಲ್ಲಿಗೆ ಬಂದು ವಿದ್ಯಾನಾಶವಾದುದರಿಂದ ಮನುಷ್ಯಸ್ತ್ರೀಯಾಗಿ ಹುಟ್ಟಿ ನಾನು ನನ್ನ ವಿದ್ಯಾಧರೀ ಭಾವವನ್ನು ಮರೆತೆನು.

೩೯೫. ಈಗ ನಾನು ಅದನ್ನು ನೆನಪಿಸಿಕೊಂಡಿದ್ದೇನೆ" ಎಂದು ಅವಳು ಹೇಳುವಷ್ಟರಲ್ಲಿ ಅವಳ ತಂದೆಯಾದ ಸಮರನು ಅಲ್ಲಿಗೆ ಅಂತರಿಕ್ಷದಿಂದ ಇಳಿದು ಬಂದನು.

೩೯೬ ಆಗ ರಾಜನಾದ ಸಾಗರವರ್ಮನು ಅವನಿಗೆ ನಮಸ್ಕರಿಸಿದನು. ಅವನ ಪುತ್ರಿ ಅನಂಗಪ್ರಭೆಯು ಅವನ ಕಾಲಿಗೆ ಬಿದ್ದಳು. ಆಗ ಸಮರನು ಹೇಳಿದನು.

---

ಏಷಾನಂಗಪ್ರಭಾ ತ್ವಂ ಚ ಯುವಾಂ ವಿದ್ಯಾಧರಾವುಭೌ ।
ಶಾಪಕ್ಷಯಾಗ್ನಿಜಂ ಲೋಕಂ ಪ್ರಾತಃ ಪುತ್ರ ಗಮಿಷ್ಯಥಃ ॥ ೩೯೦
ಶ್ರುತ್ವೇತಿ ಸ ಪ್ರಬುಬುಧೇ ರಾಜಾನಂಗಪ್ರಭಾ ಚ ಸಾ ।
ತದ್ವದಾಲೋಕಿತಸ್ವಪ್ನಾ ತಚ್ಚಾನ್ಯೋನ್ಯಮಥೋಚತುಃ ॥ ೩೯೧
ತತಶ್ಚ ನೃಪತಿಂ ತಂ ಸಾ ಹೃಷ್ಟಾನಂಗಪ್ರಭಾಭ್ಯಧಾತ್ ।
ಆರ್ಯಪುತ್ರ ಮಯಾ ಜಾತಿಃ ಕೃತ್ಸ್ನಾತ್ಮೀಯಂ ಸ್ಮೃತಾಧುನಾ ॥ ೩೯೨
ಅಹಂ ವಿದ್ಯಾಧರೇಂದ್ರಸ್ಯ ಸಮರಸ್ಯಾತ್ಮಸಂಭವಾ ।
ಏಷಾನಂಗಪ್ರಭಾ ನಾಮ ಪುರೇ ವೀರಪುರಾಭಿಧೇ ॥ ೩೯೩
ಪಿತೃಶಾಪಾದಿಹಾಗತ್ಯ ವಿದ್ಯಾಭ್ರಂಶೇನ ಮಾನುಷೀ ।
ಭೂತ್ವಾ ವಿದ್ಯಾಧರೀಭಾವಂ ಸಾಹಂ ವ್ಯಸ್ಮರಮಾತ್ಮನಃ ॥ ೩೯೪
ಇದಾನೀಂ ಚ ಪ್ರಬುದ್ಧಾಹಮಿತಿ ಯಾವಚ್ಚ ವಕ್ತಿ ಸಾ ।
ತಾವತ್ಸೋಽವತತಾರಾತ್ರ ಸಮರಸ್ತತ್ಪಿತಾ ದಿವಃ ॥ ೩೯೫
ನಮಸ್ಕೃತಃ ಸ ತೇನಾತ್ರ ರಾಜ್ಞಾ ಸಾಗರವರ್ಮಣಾ ।
ಉವಾಚ ಪಾದಪತಿತಾಂ ತಾಮನಂಗಪ್ರಭಾಂ ಸುತಾಮ್ ॥ ೩೯೬

೩೭. ""ಮಗಳೇ ! ಬಾ. ಈ ವಿದ್ಯೆಗಳನ್ನು ಸ್ವೀಕರಿಸು. ನಿನ್ನ ಶಾಪವು ಹೋಯಿತು. ಏಕೆಂದರೆ ಒಂದೇ ಜನ್ಮದಲ್ಲಿ ಎಂಟು ಜನ್ಮಗಳ ದುಃಖವನ್ನು ನೀನು ಅನುಭವಿಸಿದೆ"

೩೮. ಹೀಗೆ ಹೇಳಿ (ಅವಳನ್ನು) ಮಡಿಲಲ್ಲಿ ಎತ್ತಿಕೊಂಡು ಅವಳಿಗೆ ಮತ್ತೆ ವಿದ್ಯೆಗಳನ್ನು ಕೊಟ್ಟನು. ಅನಂತರ ರಾಜನಾದ ಸಾಗರವರ್ಮನನ್ನು ಕುರಿತು ಹೇಳಿದನು.

೩೯. ""ನೀನು ಮದನಪ್ರಭ ಎಂಬ ಹೆಸರುಳ್ಳ ವಿದ್ಯಾಧರಾಧಿಪತಿಯು. ನಾನು ಸಮರನೆಂಬುವನು. ನನ್ನ ಮಗಳು ಈ ಅನಂಗಪ್ರಭೆ

೧೦೦. ಮತ್ತು ಹಿಂದೆ ವಿವಾಹಕ್ಕೆ ಸಿದ್ಧಳಾದ ಇವಳನ್ನು ಅನೇಕ ವರರು ಯಾಚಿಸಿದರು. ಇವಳು ಸೌಂದರ್ಯದಿಂದ ಗರ್ವಿತಳಾಗಿ ಅವರಲ್ಲಿ ಯಾರನ್ನೂ ಪತಿಯನ್ನಾಗಿ ಇಚ್ಛಿಸಲಿಲ್ಲ

೧೦೧. ಅನಂತರ ಅವಳಿಗೆ ಸಮಾನ ಗುಣವುಳ್ಳ ನೀನು ಉತ್ಕಂಠಿತನಾಗಿ ಇವಳನ್ನು ಯಾಚಿಸಿದೆ. ಆದರೆ ವಿಧಿಯೋಗದಿಂದ ಆಗ ಇವಳು ನಿನ್ನನ್ನೂ ಅಂಗೀಕರಿಸಲಿಲ್ಲ.

೧೦೨–೧೦೩. ನಾನು ಅದರಿಂದ ಇವಳಿಗೆ ಮರ್ತ್ಯಲೋಕಕ್ಕೆ ಬರಲು ಶಾಪವನ್ನು ಕೊಟ್ಟೆನು. ಮರ್ತ್ಯಲೋಕದಲ್ಲೂ ಇವಳು ನನ್ನ ಹೆಂಡತಿಯಾಗಿ ಆಗಲಿ ಎಂದು ಅವಳ ಬಗ್ಗೆ ಅನುರಾಗವುಳ್ಳ ನೀನು ಹೃದಯದಲ್ಲಿ ಸಂಕಲ್ಪಮಾಡಿ ವರದನಾದ ಗಿರಿಜಾಪತಿಯನ್ನು ಯೋಗದಿಂದ ಧ್ಯಾನಮಾಡಿ ಅನಂತರ ನಿನ್ನ ವಿದ್ಯಾಧರಸಂಬಂಧವಾದ ಶರೀರವನ್ನು ತ್ಯಜಿಸಿದೆ.

---

ಏಹಿ ಪುತ್ರಿ ಗೃಹಾಣೈತಾ ವಿದ್ಯಾಃ ಶಾಪಃ ಸ ತೇ ಗತಃ ।
ತ್ವಯಾಷ್ಟಜನ್ಮದುಃಖಂ ಹಿ ಭುಕ್ತಮೇಕತ್ರ ಜನ್ಮನಿ ॥ ೩೭
ಇತ್ಯುಕ್ತ್ವೋತ್ಸಂಗಮಾರೋಪ್ಯ ವಿದ್ಯಾಸ್ತಸ್ಯೈ ಪುನರ್ದದೌ ।
ತತಃ ಸಾಗರವರ್ಮಾಣಂ ರಾಜಾನಂ ತಮಭಾಷತ ॥ ೩೮
ಭವಾನ್ ವಿದ್ಯಾಧರಾಧೀಶೋ ಮದನಪ್ರಭಸಂಜ್ಞಕಃ ।
ಅಹಂ ಚ ಸಮರೋ ನಾಮ ಸುತಾನಂಗಪ್ರಭಾ ಮಮ ॥ ೩೯
ಪ್ರದೇಯಾ ಪೂರ್ವಮೇಷಾ ಚ ವರೈಸ್ತೈಸ್ತೈರಯಾಚ್ಯತ ।
ನ ಚ ತೇಷಾಂ ಕಮಪ್ಯೈಚ್ಛದ್ಭರ್ತಾರಂ ರೂಪಗರ್ವಿತಾ ॥ ೧೦೦
ತತಸ್ತುಲ್ಯಗುಣೇನೈಷಾ ತ್ವಯಾತ್ಯುತ್ಕೇನ ಯಾಚಿತಾ ।
ವಿಧಿಯೋಗಾಚ್ಚ ನ ತದಾ ತ್ವಮಪ್ಯಂಗೀಕೃತೋಽನಯಾ ॥ ೧೦೧
ಮರ್ತ್ಯಲೋಕಾಗಮಾಯಾಸ್ಯಾಸ್ತೇನ ಶಾಪಮದಾಮಹಮ್ ।
ಭೂಯಾನ್ಮೇ ಮರ್ತ್ಯಲೋಕೇಽಪಿ ಭಾರ್ಯೇಯಮಿತಿ ರಾಗಿಣಾ ॥ ೧೦೨
ಸಂಕಲ್ಪ್ಯ ಹೃದಯೇ ಧ್ಯಾತ್ವಾ ವರದಂ ಗಿರಿಜಾ ಪತಿಮ್ ।
ಯೋಗೇನ ಸ್ವಾ ತನುಸ್ತ್ಯಕ್ತಾ ತತೋ ವೈದ್ಯಾಧರೀ ತ್ವಯಾ ॥ ೧೦೩

೪೦೪. ಅನಂತರ ನೀನು ಮನುಷ್ಯನಾಗಿ ಹುಟ್ಟಿದೆ. ಇವಳೂ ನಿನಗೆ ಹೆಂಡತಿಯಾಗಿ ಹುಟ್ಟಿದಳು. ಈಗ ನೀವಿಬ್ಬರೂ ಕೂಡಿ ನಿಮ್ಮ ಸ್ವಂತಲೋಕಕ್ಕೆ ಬನ್ನಿರಿ."

೪೦೫ ಹೀಗೆ ಸಮರನು ಹೇಳಿದ ನಂತರ ಸಾಗರವರ್ಮನು (ತನ್ನ) ಜಾತಿಯನ್ನು ಸ್ಮರಿಸಿದವನಾಗಿ ಪ್ರಯಾಗದ ಜಲದಲ್ಲಿ ತನ್ನ ಶರೀರವನ್ನು ಬಿಟ್ಟು ಒಡನೆಯೇ ಮದನಪ್ರಭನಾದನು.

೪೦೬ ಅನಂಗಪ್ರಭೆಯೂ ಮತ್ತೆ ವಿದ್ಯೆಯನ್ನು ಸಂಪಾದಿಸಿದವಳಾಗಿ ತೇಜೋಯುಕ್ತಳಾಗಿ ಅದೇ ಶರೀರದಿಂದಲೇ ಬೇರೆಯವಳಂತೆ ಕೂಡಲೇ ವಿದ್ಯಾಧರಿಯಾಗಿ ಜನ್ಮತಾಳಿ ಪ್ರಕಾಶಿಸಿದಳು.

೪೦೭ ಮದನಪ್ರಭನು ಆನಂದಿತನಾದನು. ಅನಂಗಪ್ರಭೆಗೂ ಆನಂದವಾಯಿತು. ಇಬ್ಬರೂ ತಮ್ಮ ದಿವ್ಯವಾದ ಶರೀರಗಳನ್ನು ಪರಸ್ಪರ ನೋಡಿದುದರಿಂದ ಅವರ ಅನುರಾಗ ಗಾಢವಾಯಿತು. ಗಗನಚರಪತಿಯೂ ಶ್ರೀಮಂತನೂ ಆದ ಸಮರನೂ ಆನಂದಭರಿತನಾದನು. ಅವರೆಲ್ಲರೂ ಅಂತರಿಕ್ಷಕ್ಕೆ ಜಿಗಿದು ಒಟ್ಟಿಗೇ ವಿದ್ಯಾಧರರಿಗೆ ಸೇರಿದ ಪಟ್ಟಣವಾದ ವೀರಪುರಕ್ಕೆ ಹೋದರು.

೪೦೮ ಅಲ್ಲಿ ಸಮರನು ನನ್ನ ಮಗಳಾದ ಅನಂಗಪ್ರಭೆಯನ್ನು ಆಗಲೇ ಗಗನಚರರಾಜನಾದ ಮದನಪ್ರಭನಿಗೆ ಯಥಾವಿಧಿಯಾಗಿ (ಕನ್ಯಾದಾನಮಾಡಿ) ಕೊಟ್ಟನು. ಮತ್ತು ಆ ಮದನಪ್ರಭನು ಶಾಪಮುಕ್ತಳೂ ಪ್ರೇಮಮಯಿಯೂ ಆದ ಅನಂಗಪ್ರಭೆಯೊಡನೆ ತನ್ನ ಪಟ್ಟಣಕ್ಕೆ ಹೋಗಿ ಸುಖವಾಗಿದ್ದನು.

---

ತತಸ್ತ್ವಂ ಮಾನುಷೋ ಜಾತೋ ಜಾತಾ ಭಾರ್ಯಾ ತವಾಪ್ಯಸೌ ।
ಆಗಚ್ಛತಮಿದಾನೀಂ ಸ್ವಂ ಲೋಕಂ ಯುಕ್ತೌ ಯುವಾಂ ಮಿಥಃ ॥ ೪೦೪

ಇತಿ ಸಮರೇಣ ಸ ಉಕ್ತಃ ಸ್ಮೃತಜಾತಿಸ್ತಾಂ ತನುಂ ಪ್ರಯಾಗಜಲೇ ।
ಮುಕ್ತ್ವಾ ಸಾಗರವರ್ಮಾ ಬಭೂವ ಮದನಪ್ರಭಃ ಸದ್ಯಃ ॥ ೪೦೫

ಸಾ ಪುನರಧಿಗತವಿದ್ಯಾ ದೀಪ್ತಾನಂಗಪ್ರಭಾಪಿ ತೇನೈವ ।
ದೇಹೇನಾನ್ಯೇವ ಬಭೌ ಜಾತಾ ವಿದ್ಯಾಧರೀ ಝಗಿತಿ ॥ ೪೦೬

ಸಾನಂದೋ ಮದನಪ್ರಭಃ ಸ ಚ ತತಃ ಸಾ ಚಾಪ್ಯನಂಗಪ್ರಭಾ
ದಿವ್ಯಾನ್ಯೋನ್ಯವಪುರ್ವಿಲೋಕನಲಸದ್ಗಾಢಾನುರಾಗಾವುಭೌ ।
ಸ ಶ್ರೀಮಾನ್ ಸಮರಶ್ಚ ಖೇಚರಪತಿಃ ಸರ್ವೇ ಸಮುತ್ಪತ್ಯ ಖಂ
ಜಗ್ಮುರ್ವೀರಪುರಂ ಸಹೈವ ಕಿಲ ತೇ ವೈದ್ಯಾಧರಂ ತತ್ಪುರಮ್ ॥ ೪೦೭

ಸ ತತ್ರ ಸಮರೋ ಯಥಾವಿಧಿ ಸುತಾಮನಂಗಪ್ರಭಾಂ
ತದೈವ ಮದನಪ್ರಭದ್ಯುಚರಭೂಭೃತೇ ತಾಂ ದದೌ ।
ಸ ಚ ಕ್ಷಪಿತಶಾಪಯಾ ಸಮಮಥೈತಯಾ ಪ್ರೀತಯಾ
ಜಗಾಮ ಮದನಪ್ರಭಃ ಸ್ವಪುರಮತ್ರ ಚಾಸೀತ್ಸುಖಮ್ ॥ ೪೦೮

೪೯. ಈ ರೀತಿ ತಮ್ಮ ದುಷ್ಟ ನಡತೆಯ ವಿಪಾಕದ ವಶದಿಂದ ಗಗನಚರರೂ ಶಾಪದಿಂದ ಚ್ಯುತರಾಗಿ ಮನುಷ್ಯಲೋಕದಲ್ಲಿ ಇಳಿದು ಬರುತ್ತಾರೆ ಮತ್ತು ಅದಕ್ಕೆ ಯೋಗ್ಯವಾದ ಫಲವನ್ನು ಅನುಭವಿಸುತ್ತಾರೆ. ಮತ್ತೆ ಹಿಂದೆ ಸಂಪಾದಿಸಿದ ಪುಣ್ಯದಿಂದ ಪುನಃ ತಮ್ಮ ಗತಿಯನ್ನು ಹೊಂದುತ್ತಾರೆ.

೫೦. ನರವಾಹನದತ್ತನು ಸಚಿವನಾದ ಗೋಮುಖನಿಂದ ಈ ರೀತಿ ಕಥೆಯನ್ನು ಕೇಳಿ ಅಲಂಕಾರವತೀಸಮೇತನಾಗಿ ಉಲ್ಲಸಿತನಾದನು. ಅನಂತರ ಅವನು ದಿನಕೃತ್ಯವನ್ನು ಆಚರಿಸಿದನು.

**ಇಲ್ಲಿಗೆ ಮಹಾಕವಿ ಶ್ರೀ ಸೋಮದೇವಭಟ್ಟನು ವಿರಚಿಸಿದ**

**ಕಥಾಸರಿತ್ಸಾಗರದ**

**ಅಲಂಕಾರವತೀಲಂಬಕದಲ್ಲಿ ಎರಡನೆಯ ತರಂಗವು ಮುಗಿಯಿತು.**

---

ಇತ್ಥಂ ಸ್ವದುರ್ನಯವಿಪಾಕವಶೇನ ದಿವ್ಯಾಃ
ಶಾಪಚ್ಯುತಾ ಹ್ಯವತರಂತಿ ಮನುಷ್ಯಲೋಕೇ ।
ಭುಕ್ತ್ವಾ ಫಲಂ ತದುಚಿತಂ ಚ ನಿಜಾಂ ಗತಿಂ ತೇ
ಪೂರ್ವಾರ್ಜಿತೇನ ಸುಕೃತೇನ ಪುನಃ ಪ್ರಯಾಂತಿ ॥ ೪೯
ಇತಿ ಸ ಕಥಾಂ ನರವಾಹನದತ್ತಃ ಸಚಿವಾನ್ನಿಶಮ್ಯ ಗೋಮುಖತಃ ।
ಸಾಲಂಕಾರವತೀಕಸ್ತುತೋಷ ಚಕ್ರೇ ತತಶ್ಚ ದಿನಕೃತ್ಯಮ್ ॥ ೫೦

**ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ**

**ಕಥಾಸರಿತ್ಸಾಗರೇ**

**ಅಲಂಕಾರವತೀಲಂಬಕೇ ದ್ವಿತೀಯಸ್ತರಂಗಃ**

## ಮೂರನೆಯ ತರಂಗ

೧ ಮಾರನೆಯ ದಿವಸ ಅಲಂಕಾರವತಿಯ ಪಕ್ಕದಲ್ಲಿದ್ದ ನರವಾಹನದತ್ತನನ್ನು ಕುರಿತು ಮಿತ್ರನಾದ ಮರುಭೂತಿಯು ಹೀಗೆ ವಿಜ್ಞಾಪಿಸಿದನು.

೨-೩ "ದೇವ, ನೋಡು, ನೋಡು ನಿನ್ನ ಬಡಪಾಯಿ ಕಾರ್ಪಟಿಕನನ್ನು. ಅವನ ಬಟ್ಟೆಯೆಂದರೆ ಕೇವಲ ಒಂದು ಚರ್ಮದ ಚೂರು. ತಲೆಯಲ್ಲೆಲ್ಲ ಜಟೆ, ಮೈಯೆಲ್ಲ ಧೂಳು, ನೋಡಲು ಬಡವಾಗಿದ್ದಾನೆ. ಇವರು ರಾತ್ರಿಹಗಲು ಬಿಸಿಲು ಚಳಿಯೆನ್ನದೆ ನಿನ್ನ ಸಿಂಹದ್ವಾರದಲ್ಲಿ ಇದ್ದಾನೆ. ಅದನ್ನು ಬಿಟ್ಟು ಹೋಗುತ್ತಿಲ್ಲ. ನೀನೇಕೆ ಅವನಿಗೆ ಅನುಗ್ರಹ ಮಾಡುತ್ತಿಲ್ಲ ?

೪. ಸಕಾಲದಲ್ಲಿ ಕೊಟ್ಟದ್ದು ಅಲ್ಪವಾಗಿದ್ದರೂ ಶ್ರೇಷ್ಠವಾದುದು. ಅಕಾಲದಲ್ಲಿ ಕೊಟ್ಟ ದಾನ ಅಧಿಕವಾಗಿದ್ದರೂ ಅದರಿಂದ ಏನು ಪ್ರಯೋಜನ ? ಆದುದರಿಂದ ಇವನು ಸಾಯುವುದರೊಳಗಾಗಿ ಇವನ ಮೇಲೆ ದಯೆಯನ್ನು ತೋರು.'

೫ ಅದನ್ನು ಕೇಳಿ ಗೋಮುಖನು ಹೇಳಿದನು. ""ದೇವ ! ಮರುಭೂತಿಯು ಒಳ್ಳೆಯದನ್ನೇ ಹೇಳಿದನು. ಆದರೆ ಈ ವಿಚಾರದಲ್ಲಿ ನಿನ್ನ ಅಪರಾಧವು ಏನೂ ಇಲ್ಲ

---

## ತೃತೀಯಸ್ತರಂಗಃ

ತತೋಽನ್ಯೇದ್ಯುರಲಂಕಾರವತೀಪಾರ್ಶ್ವಸ್ಥಿತಂ ಸಖಾ ।
ನರವಾಹನದತ್ತಂ ತಂ ಮರುಭೂತಿರ್ವ್ಯಜಿಜ್ಞಪತ್ ॥ ೧
ಪಶ್ಯ ಪಶ್ಯ ವರಾಕೋಽಯಂ ದೇವ ಕಾರ್ಪಟಿಕಸ್ತವ ।
ಚರ್ಮಖಂಡೈಕವಸನೋ ಜಟಾಲಃ ಕೃಶಧೂಸರಃ ॥ ೨
ಸಿಂಹದ್ವಾರಾದ್ದಿವಾರಾತ್ರು ಶೀತೇ ವಾಪ್ಯಾತಪೇಽಪಿ ವಾ ।
ನ ಚಲತ್ಯೇವ ತನ್ನಾಸ್ಯ ಕಿಮದ್ಯಾಪಿ ಪ್ರಸೀದಸಿ ॥ ೩
ಕಾಲೇ ದತ್ತಂ ವರಂ ಹ್ಯಲ್ಪಮಕಾಲೇ ಬಹುನಾಪಿ ಕಿಮ್ ।
ತದ್ಯಾವನ್ಮ್ರಿಯತೇ ನೈಷ ತಾವದಸ್ಯ ಕೃಪಾಂ ಕುರು ॥ ೪
ತಚ್ಛ್ರುತ್ವಾ ಗೋಮುಖೋಽವಾದೀತ್ಸಾಧೂಕ್ತಂ ಮರುಭೂತಿನಾ ।
ಕಿಂ ಪುನರ್ನಾಪರಾಧೋಽಸ್ತಿ ತವ ದೇವಾತ್ರ ಕಶ್ಚನ ॥ ೫

೬ ಪ್ರತಿಬಂಧಕವಾದ ಪಾಪವು ಎಲ್ಲಿಯವರೆಗೆ ನಾಶವಾಗುವುದಿಲ್ಲವೋ ಅಲ್ಲಿಯವರೆಗೆ ದಾನ ಕೊಡಬೇಕೆಂಬ ಮನಸ್ಸುಳ್ಳ ಪ್ರಭುವೂ ದಾನ ಮಾಡಲು ಸಮರ್ಥನಾಗುವುದಿಲ್ಲ

೭ ಪಾಪವು ಸಂಪೂರ್ಣವಾಗಿ ಕ್ಷೀಣವಾದಾಗ ಬೇಡವೆಂದು ತಡೆದರೂ ಪ್ರಭುವು ದಾನ ಮಾಡಿಯೇ ಮಾಡುತ್ತಾನೆ. ಇದು ಕರ್ಮಾಧೀನ.

೮ ದೇವ ! ರಾಜನಾದ ಲಕ್ಷದತ್ತನ ಮತ್ತು ಕಾರ್ಪಟಿಕನಾದ ಲಬ್ಧದತ್ತನ ಕಥೆಯನ್ನು ನಿನಗೆ ಹೇಳುತ್ತೇನೆ, ಕೇಳು.

೯. ಭೂಮಂಡಲದಲ್ಲಿ ಲಕ್ಷಪುರವೆಂಬ ಪಟ್ಟಣವು ಇತ್ತು. ಅಲ್ಲಿ ಲಕ್ಷದತ್ತನೆಂಬ ರಾಜನು ಇದ್ದನು. ಅವನು ತ್ಯಾಗಿಗಳಲ್ಲೇ ಶ್ರೇಷ್ಠನಾದವನು.

೧೦. ಕೇಳಿದವರಿಗೆ ಲಕ್ಷಕ್ಕಿಂತ ಕಡಿಮೆಕೊಡಲು ಆ ರಾಜನಿಗೆ ಗೊತ್ತೇ ಇರಲಿಲ್ಲ. ಯಾರನ್ನು ಮಾತನಾಡಿಸಿದರೂ ಅವನಿಗೆ ಐದು ಲಕ್ಷಗಳನ್ನು ರಾಜನು ಕೊಡುತ್ತಿದ್ದನು.

೧೧. ಯಾರ ವಿಷಯದಲ್ಲಿ ರಾಜನಿಗೆ ಸಂತೋಷವುಂಟಾದರೂ ಅವನಿಗೆ ಬಡತನವೇ ಇಲ್ಲದಂತೆ ಅವನು ಮಾಡುತ್ತಿದ್ದನು. ಆದ್ದರಿಂದಲೇ ಅವನಿಗೆ ಲಕ್ಷದತ್ತನೆಂಬ ಹೆಸರು ಪ್ರಸಿದ್ಧವಾಯಿತು.

೧೨. ಅವನ ಸಿಂಹದ್ವಾರದಲ್ಲಿ ಹಗಲು ರಾತ್ರಿ ಲಬ್ಧದತ್ತನೆಂಬ ಹೆಸರಿನ ಒಬ್ಬ ಕಪ್ಪಡಿಗನು ಒಂದು ಚರ್ಮದ ಚೂರನ್ನು ಮಾತ್ರ ಸೊಂಟದಲ್ಲಿ ಸುತ್ತಿಕೊಂಡು ನಿಲ್ಲುತ್ತಿದ್ದನು.

---

ಕ್ಷಯೋ ಯಾವನ್ನ ವೃತ್ತೋ ಹಿ ಪಾಪಸ್ಯ ಪರಿಪಂಥಿನಃ ।
ತಾವದ್ದಾನಪ್ರವೃತ್ತೋಽಪಿ ದಾತುಂ ಶಕ್ನೋತಿ ನ ಪ್ರಭುಃ ॥ ೬
ಪರಿಕ್ಷೀಣೇ ಪುನಃ ಪಾಪೇ ವಾರ್ಯಮಾಣೋಽಪಿ ಯತ್ನತಃ ।
ಈಶ್ವರಃ ಪ್ರದದಾತ್ಯೇವ ಕರ್ಮಾಯತ್ತಮಿದಂ ಕಿಲ ॥ ೭
ತಥಾ ಚ ಲಕ್ಷದತ್ತಸ್ಯ ರಾಜ್ಞಃ ಕಾರ್ಪಟಿಕಸ್ಯ ಚ ।
ಲಬ್ಧದತ್ತಸ್ಯ ದೇವೈತಾಂ ಕಥಾಮಾಖ್ಯಾಮಿ ತೇ ಶೃಣು ॥ ೮
ಅಭೂಲ್ಲಕ್ಷಪುರಂ ನಾಮ ನಗರಂ ವಸುಧಾತಲೇ ।
ತತ್ರಾಸೀಲ್ಲಕ್ಷದತ್ತಾಖ್ಯಸ್ತ್ಯಾಗಿನಾಮಗ್ರಣೀರ್ನೃಪಃ ॥ ೯
ಲಕ್ಷಾದೂನಂ ನ ದಾತುಂ ಸ ಜಾನಾತಿ ಸ್ಮ ಕಿಲಾರ್ಥಿನೇ ।
ಸಂಬಭಾಷೇ ತು ಯಂ ತಸ್ಮೈ ದದೌ ಲಕ್ಷಾಣಿ ಪಂಚ ಸಃ ॥ ೧೦
ತುತೋಷ ಯಸ್ಮೈ ಸ ಪುನರ್ನಿರ್ದಾರಿದ್ರ್ಯಂ ಚಕಾರ ತಮ್ ।
ಲಕ್ಷದತ್ತ ಇತಿ ಖ್ಯಾತಂ ನಾಮ ತಸ್ಯಾತ ಏವ ತತ್ ॥ ೧೧
ತಸ್ಯೈಕೋ ಲಬ್ಧದತ್ತಾಖ್ಯಃ ಸಿಂಹದ್ವಾರೇ ದಿವಾನಿಶಮ್ ।
ತಸ್ಥೌ ಕಾರ್ಪಟಿಕಶ್ಚರ್ಮಖಂಡೈಕಕುಟಿಕರ್ಪಟಃ ॥ ೧೨

೧೩. ಅವನು ಚಳಿಯಲ್ಲಾಗಲಿ ಉರಿಯುವ ಬೇಸಿಗೆಯಲ್ಲಾಗಲೀ ಅಲ್ಲಿಂದ ಕದಲುತ್ತಲೇ ಇರಲಿಲ್ಲ. ಅವನನ್ನು ರಾಜನು ಮೊದಲೇ ಗಮನಿಸಿದನು.

೧೪. ಆ ರೀತಿ ಅಲ್ಲಿ ಕಷ್ಟದಲ್ಲೇ ಬಹಳಕಾಲ ಇದ್ದ ಅವನಿಗೆ ಆ ರಾಜನು ದಾನಿಯಾಗಿದ್ದರೂ ದಯಾವಂತನಾಗಿದ್ದರೂ ಏನನ್ನೂ ದಾನಮಾಡಲಿಲ್ಲ.

೧೫. ಒಂದು ಬಾರಿ ರಾಜನು ಬೇಟೆಯಾಡಲು ಕಾಡಿಗೆ ಹೊರಟನು. ಆ ಕಾರ್ಪಟಿಕನೂ ದೊಣ್ಣೆಯನ್ನು ಹಿಡಿದುಕೊಂಡು ರಾಜನನ್ನು ಹಿಂಬಾಲಿಸಿ ಹೋದನು.

೧೬–೧೭. ಅಲ್ಲಿ ರಾಜನು ಸೈನ್ಯಸಮೇತನಾಗಿ ವಾಹನದಲ್ಲಿ ಧನುರ್ಧಾರಿಯಾಗಿ ಕುಳಿತು ಬಾಣವರ್ಷದಿಂದ ಹುಲಿಗಳನ್ನೂ ಹಂದಿಗಳನ್ನೂ ಜಿಂಕೆಗಳನ್ನೂ ಕೊಲ್ಲುತ್ತಿರುವಾಗ ಅವನ ಎದುರಿಗೆ ಆ ಕಾರ್ಪಟಿಕನು ಪಾದಚಾರಿಯಾಗಿದ್ದು ಏಕಾಕಿಯಾಗಿ ದೊಣ್ಣೆಯಿಂದಲೇ ಬಹಳ ಹಂದಿಗಳನ್ನೂ ಜಿಂಕೆಗಳನ್ನೂ ಕೊಂದುಹಾಕಿದನು.

೧೮. ರಾಜನು ಕಾರ್ಪಟಿಕನ ಆಶ್ಚರ್ಯಕರವಾದ ಪರಾಕ್ರಮವನ್ನು ನೋಡಿ ""ಇವನು ಎಷ್ಟು ಶೂರನು !" ಎಂದು ಮನಸ್ಸಿನಲ್ಲಿ ಚಿಂತಿಸಿದನು. ಆದರೆ ಅವನಿಗೆ ಏನನ್ನೂ ಕೊಡಲಿಲ್ಲ.

೧೯. ತನ್ನ ಸಂತೋಷಕ್ಕಾಗಿ ಬೇಟೆಯನ್ನು ಆಡಿ ಮುಗಿಸಿದ ರಾಜನು ಪಟ್ಟಣವನ್ನು ಪ್ರವೇಶಿಸಿದನು. ಆ ಕಾರ್ಪಟಿಕನು ಮಾತ್ರ ಹಿಂದಿನಂತೆಯೇ ಸಿಂಹದ್ವಾರದಲ್ಲೇ ನಿಂತನು.

---

ಸನಿಬದ್ಧಜಟಃ ಶೀತವರ್ಷೇ ಗ್ರೀಷ್ಮಾತಪೇಽಪಿ ವಾ ।
ನ ಚಚಾಲ ತತಃ ಕ್ಷಿಪ್ರಂ ಸ ರಾಜಾ ಚ ದದರ್ಶ ತಮ್ ॥ ೧೩
ತಥಾ ತಸ್ಯ ಚಿರಂ ತತ್ರ ತಿಷ್ಠತಃ ಕ್ಲೇಶವರ್ತಿನಃ ।
ನ ಸ ರಾಜಾ ದದೌ ಕಿಂಚಿದ್ದಾತಾಪಿ ಸಕೃಪೋಽಪಿ ಸನ್ ॥ ೧೪
ಅಥೈಕದಾ ಸ ನೃಪತಿರ್ಜಗಾಮಾಖೇಟಕಾಟವೀಮ್ ।
ಸ ಚ ತಂ ಲಗುಡಂ ಬಿಭ್ರದನ್ವಕ್ಕಾರ್ಪಟಿಕೋ ಯಯೌ ॥ ೧೫
ತತ್ರ ತಸ್ಯ ಸಸೈನ್ಯಸ್ಯ ವಾಹನಸ್ಥಸ್ಯ ಧನ್ವಿನಃ ।
ವ್ಯಾಘ್ರಾನ್ ವರಾಹಾನ್ ಹರಿಣಾನ್ ಬಾಣವರ್ಷೇಣ ನಿಘ್ನತಃ ॥ ೧೬
ಅಗ್ರತಃ ಪಾದಚಾರೀ ಸನ್‌ಸ ಕಾರ್ಪಟಿಕ ಏಕಕಃ ।
ಜಘಾನ ಲಗುಡೇನೈವ ವರಾಹಾನ್ ಹರಿಣಾನ್ ಬಹೂನ್ ॥ ೧೭
ಸ ದೃಷ್ಟ್ವಾ ವಿಕ್ರಮಂ ತಸ್ಯ ಚಿತ್ರಂ ಶೂರಃ ಕಿಯಾನಯಮ್ ।
ಇತಿ ದಧ್ಯೌ ಸ ರಾಜಾಂತರ್ನ ತ್ವಸ್ಮೈ ಕಿಂಚಿದಪ್ಯದಾತ್ ॥ ೧೮
ಕೃತಾಖೇಟಃ ಸನಗರಂ ಸ್ವಸುಖಾಯಾವಿಶನ್ನೃಪಃ ।
ಸ ಚ ಕಾರ್ಪಟಿಕಸ್ತಸ್ಥೌ ಸಿಂಹದ್ವಾರೇ ಚ ಪೂರ್ವವತ್ ॥ ೧೯

೨೦. ಒಮ್ಮೆ ಬಂದು ನದಿಯ ಬಳಿಯ ಗೋತ್ರಜರನ್ನು ಗೆಲ್ಲುವುದಕ್ಕಾಗಿ ರಾಜ ಲಕ್ಷದತ್ತನು ಹೋದನು. (ಅಲ್ಲಿ) ದೊಡ್ಡಯುದ್ಧವು ನಡೆಯಿತು.

೨೧. ಆ ಯುದ್ಧದಲ್ಲಿ ರಾಜನ ಎದುರಿಗೇ ಆ ಕಾರ್ಪಟಿಕನು ದೃಢವಾದ ಕಗ್ಗಲಿಮರದ ದೊಣ್ಣೆಯ ತುದಿಯ ಹೊಡೆತಗಳಿಂದ ಬಹಳ ಮಂದಿ ಶತ್ರುಗಳನ್ನು ಕೊಂದು ಹಾಕಿದನು.

೨೨. ಶತ್ರುಗಳನ್ನು ಗೆದ್ದ ಆ ರಾಜನು ತನ್ನ ಪಟ್ಟಣಕ್ಕೆ ಹಿಂದಿರುಗಿ ಬಂದನು. ಆದರೆ ಕಾರ್ಪಟಿಕನ ಪರಾಕ್ರಮವನ್ನು ನೋಡಿದರೂ ಅವನಿಗೆ ಏನನ್ನೂ (ರಾಜನು) ಕೊಡಲಿಲ್ಲ.

೨೩. ಈರೀತಿ ಕಷ್ಟದಿಂದ ಜೀವನಮಾಡುತ್ತಾ (ಸಿಂಹದ್ವಾರದಲ್ಲಿ) ನಿಂತಿದ್ದ ಕಾರ್ಪಟಿಕನು ಹೀಗೆಯೇ ಐದು ವರ್ಷಗಳನ್ನು ಕಳೆದನು.

೨೪. ಆರನೆಯ ವರ್ಷವು ಬರಲಾಗಿ ದೈವಯೋಗದಿಂದ ಒಂದು ಬಾರಿ ಆ ಕಾರ್ಪಟಿಕನನ್ನು ನೋಡಿ ಕರುಣೆಯುಂಟಾದ ರಾಜಾ ಲಕ್ಷದತ್ತನು ಚಿಂತಿಸಿದನು.

೨೫. ""ಚಿರಕಾಲ ಕಷ್ಟಪಟ್ಟ ಈ ಕಾರ್ಪಟಿಕನಿಗೆ ಇಂದಿಗೂ ನಾನು ಏನನ್ನೂ ಕೊಟ್ಟಿಲ್ಲ. ಆದುದರಿಂದ ಯುಕ್ತಿಯಿಂದ ಇವನಿಗೆ ಸ್ವಲ್ಪ ಧನವನ್ನು ಕೊಟ್ಟು ನಾನು ನೋಡಬಾರದೇಕೆ ?

೨೬. ಈ ನಿರ್ಭಾಗ್ಯನ ಪಾಪಕ್ಷಯವು ಇನ್ನೂ ಉಂಟಾಗಿದೆಯೋ ಅಥವಾ ಇಲ್ಲವೋ ? ಲಕ್ಷ್ಮಿಯು ಇಂದಿಗೂ ಇವನಿಗೆ ದರ್ಶನವನ್ನು ಕೊಡುತ್ತಾಳೆಯೋ ಇಲ್ಲವೋ ? ”

---

ಕದಾಚಿದೇಕಸೀಮಾಂತಗೋತ್ರಜಾವಜಯಾಯ ಸಃ ।
ಲಕ್ಷದತ್ತೋ ಯಯೌ ರಾಜಾ ಯುದ್ಧಂ ಚಾಸ್ಯಾಭವನ್ಮಹತ್ ॥ ೨೦
ತತ್ರ ಯುದ್ಧೇ ಸ ತಸ್ಯಾಗ್ರೇ ರಾಜ್ಞಃ ಕಾರ್ಪಟಿಕೋ ಬಹೂನ್ ।
ದೃಢಖಾದಿರದಂಡಾಗ್ರಪ್ರಹಾರೈರವಧೀತ್ ಪರಾನ್ ॥ ೨೧
ಜಿತಶತ್ರುಃ ಸ ರಾಜಾ ಚ ನಿಜಂ ಪ್ರತ್ಯಾಯಯೌ ಪುರಮ್ ।
ನ ಚ ತಸ್ಮೈ ದದೌ ಕಿಂಚಿದಪಿ ದೃಷ್ಟಪರಾಕ್ರಮಃ ॥ ೨೨
ಏವಂ ಕಾರ್ಪಟಿಕಸ್ಯಾತ್ರ ಲಬ್ಧದತ್ತಸ್ಯ ತಿಷ್ಠತಃ ।
ವ್ಯತೀಯುಃ ಪಂಚವರ್ಷಾಣಿ ತಸ್ಯ ಕಾಷ್ಠೇನ ಜೀವತಃ ॥ ೨೩
ಷಷ್ಠೇ ಪ್ರವೃತ್ತೇ ದೃಷ್ಟ್ವಾ ತಮೇಕದಾ ದೈವಯೋಗತಃ ।
ಸ ರಾಜಾ ಜಾತಕರುಣೋ ಲಕ್ಷದತ್ತೋ ವ್ಯಚಿಂತಯತ್ ॥ ೨೪
ನಾದ್ಯಾಪ್ಯಸ್ಯ ಮಯಾ ದತ್ತಂ ಚಿರಕ್ಲಿಷ್ಟಸ್ಯ ಕಿಂಚನ ।
ತದ್ಯುಕ್ತ್ಯಾ ಕಿಂಚಿದೇತಸ್ಮೈ ದತ್ತ್ವಾ ಪಶ್ಯಾಮ್ಯಹಂ ನ ಕಿಮ್ ॥ ೨೫
ಕಿಂ ನಾಮಾಸ್ಯ ವರಾಕಸ್ಯ ವೃತ್ತಃ ಪಾಪಕ್ಷಯೋ ನ ವಾ ।
ಕಿಂ ದದಾತಿ ನ ವಾದ್ಯಾಪಿ ಲಕ್ಷ್ಮೀರಸ್ಯ ಚ ದರ್ಶನಮ್ ॥ ೨೬

೨೭. ಹೀಗೆ ಆಲೋಚಿಸಿ ರಾಜನು ಕೋಶಾಗಾರವನ್ನು ಸ್ವತಃ ಪ್ರವೇಶಿಸಿ ಒಂದು ಮಾದಳ ಹಣ್ಣನ್ನು ರತ್ನಗಳಿಂದ ತುಂಬಿಸಿ ಸಂಪುಟದಂತೆ ಮಾಡಿದನು.

೨೮. ಅನಂತರ ರಾಜನು ಹೊರಗಡೆ ಸಮಸ್ತ ಆಸ್ಥಾನವನ್ನೂ ಕರೆದು ಸಭೆಯನ್ನು ಏರ್ಪಡಿಸಿದನು. ಅಲ್ಲಿಗೆ ಪೌರರೂ ಸಾಮಂತರೂ ಮಂತ್ರಿಗಳೂ ಎಲ್ಲರೂ ಬಂದರು.

೨೯. ಅವರ ಮಧ್ಯದಲ್ಲಿ ಪ್ರವೇಶಿಸಿದ ಆ ಕಾರ್ಪಟಿಕನನ್ನು ಕುರಿತು ಸ್ವತಃ ರಾಜನು ""ಇಲ್ಲಿಗೆ ಹತ್ತಿರಕ್ಕೆ ಬಾ" ಎಂದು ಸ್ನೇಹಯುಕ್ತವಾದ ಮಾತಿನಿಂದ ಕರೆದನು.

೩೦. ಆಗ(ಅದನ್ನು) ಕೇಳಿ ಹರ್ಷಗೊಂಡ ಕಾರ್ಪಟಿಕ ಲಬ್ಧದತ್ತನು ರಾಜನ ಬಳಿಗೆ ಬಂದು ಅವನ ಎದುರಿಗೆ ಕುಳಿತುಕೊಂಡನು.

೩೧. ರಾಜನು ಅವನನ್ನು ಕುರಿತು ಹೇಳಿದನು. "ಯಾವುದಾದರೂ ಸುಭಾಷಿತವನ್ನು ಹೇಳು.' ಇದನ್ನು ಕೇಳಿ ಆ ಕಾರ್ಪಟಿಕನು ಈ ಆರ್ಯೆಯನ್ನು ಪಠಿಸಿದನು.

೩೨. "ಇದ್ದವನಿಗೆ ನೀಡುವಳ್ಳೆ ನದಿಗಳೆಲ್ಲವು ಸೇರುವಂತೆ ಜಲಧಿಯನು. ಐಸಿರಿಯು ನೋಡಲಾರಳು ಕಡು ಬಡವನ ಕಣ್ಣೆತ್ತಿಯೂ ಅಕಟಾ." (ನದಿಗಳ ಸಮೂಹವು ಪೂರ್ಣವಾದ ಸಮುದ್ರವನ್ನು ಹೇಗೋ ಹಾಗೆ ಈ ಲಕ್ಷ್ಮಿಯು ಸಮೃದ್ಧವಾದವನನ್ನೇ ಸಮೃದ್ಧಗೊಳಿಸುತ್ತಾಳೆ. ಆದರೆ ಅವಳು ಬಡವನ ದೃಷ್ಟಿಪಥದಲ್ಲಿಯೂ ಬರುವುದಿಲ್ಲ.)

೩೩. ಇದನ್ನು ಕೇಳಿ ಸಂತುಷ್ಟನಾದ ರಾಜನು ಮತ್ತೆ(ಆ ಆರ್ಯಾಪದ್ಯವನ್ನು) ಪಠಿಸುವಂತೆ ಮಾಡಿ ಆ ಕಾರ್ಪಟಿಕನಿಗೆ ಉತ್ತಮ ರತ್ನಗಳಿಂದ ತುಂಬಿದ ಆ ಮಾತುಲುಂಗ ಫಲವನ್ನು ಕೊಟ್ಟನು.

---

ಇತ್ಯಾಲೋಚ್ಯ ನೃಪಃ ಸ್ವೈರಂ ಭಾಂಡಾಗಾರಂ ಪ್ರವಿಶ್ಯ ಸಃ ।
ರತ್ನೈರ್ಭೃತಂ ಮಾತುಲುಂಗಂ ಸಮುದ್ಗಕಮಿವ ವ್ಯಧಾತ್ ॥ ೨೭
ಚಕಾರ ಸರ್ವಾಸ್ಥಾನಂ ಚ ಸ ವಿಧಾಯ ಬಹಿಃ ಸಭಾಮ್ ।
ತತ್ರ ಚ ಪ್ರಾವಿಶನ್ಸರ್ವೇ ಪೌರಸಾಮಂತಮಂತ್ರಿಣಃ ॥ ೨೮
ತನ್ಮಧ್ಯೇ ಚ ಪ್ರವಿಷ್ಟಂ ತಂ ರಾಜಾ ಕಾರ್ಪಟಿಕಂ ಸ್ವಯಂ ।
ಇತೋ ನಿಕಟಮೇಹೀತಿ ಜಗಾದ ಸ್ನಿಗ್ಧಯಾ ಗಿರಾ ॥ ೨೯
ತತಃ ಕಾರ್ಪಟಿಕಃ ಶ್ರುತ್ವಾ ಲಬ್ಧದತ್ತಃ ಪ್ರಹರ್ಷವಾನ್ ।
ಅಗ್ರೇ ಸವಿಧಮಾಗತ್ಯ ರಾಜ್ಞಸ್ತಸ್ಯೋಪವಿಷ್ಟವಾನ್ ॥ ೩೦
ತತಸ್ತಮವದದ್ರಾಜಾ ಬ್ರೂಹಿ ಕಿಂಚಿತ್ಸುಭಾಷಿತಮ್ ।
ತದಾಕರ್ಣ್ಯ ಪಪಾಠೈತಾಮಾರ್ಯಾಂ ಕಾರ್ಪಟಿಕೋಽಥ ಸಃ ॥ ೩೧
ಪೂರಯತಿ ಪೂರ್ಣಮೇಷಾ ತರಂಗಿಣೀಸಂಹತಿಃ ಸಮುದ್ರಮಿವ ।
ಲಕ್ಷ್ಮೀರಧನಸ್ಯ ಪುನರ್ಲೋಚನಮಾರ್ಗೇಽಪಿ ನಾಯಾತಿ ॥ ೩೨
ಶ್ರುತ್ವೈತತ್ ಪಾಠಯಿತ್ವಾ ಚ ಭೂಯಸ್ತುಷ್ಟಃ ಸ ಭೂಪತಿಃ ।
ಸದ್ರತ್ನಪೂರ್ಣಂ ತಸ್ಮೈ ತನ್ಮಾತುಲುಂಗಫಲಂ ದದೌ ॥ ೩೩

೩೪–೩೫. "'ಈ ರಾಜನು ಯಾವನ ವಿಷಯದಲ್ಲಿ ಸಂತುಷ್ಟನಾದರೂ ಅವನ ಬಡತನವನ್ನು ನೀಗಿಸುತ್ತಾನೆ. ಆದರೆ ಈ ಕಾರ್ಪಟಿಕನಿಗೆ ಅದೃಷ್ಟವಿಲ್ಲ. ಅವನನ್ನು ಈ ರೀತಿಯಾಗಿ ಆದರದಿಂದ ಕರೆದು ಸಂತುಷ್ಟನಾದ ರಾಜನು ಅವನಿಗೆ ಈ ಮಾದಳದ ಹಣ್ಣನ್ನು ಕೊಟ್ಟಿದ್ದಾನೆ. ಪ್ರಾಯಃ ಕಲ್ಪವೃಕ್ಷವೂ ದರಿದ್ರರಾದವರಿಗೆ ಮುತ್ತುಗದ ಮರವಾಗಿ ಬಿಡುತ್ತದೆ."

೩೬. ಹೀಗೆ ಅದನ್ನು ನೋಡಿ ಆ ಆಸ್ಥಾನದಲ್ಲಿ ಎಲ್ಲರೂ ವಿಷಾದಗೊಂಡು ಅದರ ಅಂತರಂಗವನ್ನು ತಿಳಿಯಲಾರದೆ ಸ್ವಚ್ಛಂದವಾಗಿ ಪರಸ್ಪರ ಮಾತನಾಡಿಕೊಂಡರು.

೩೭. ಕಾರ್ಪಟಿಕನು ಆ ಮಾದಳದ ಹಣ್ಣನ್ನು ತೆಗೆದುಕೊಂಡು ವಿಷಾದದಿಂದ ಹೊರಟುಹೋದನು. ವಿಷಾದಗೊಂಡ ಅವನ ಎದುರಿಗೆ ಒಬ್ಬ ಭಿಕ್ಷುವು ಬಂದನು.

೩೮. ರಾಜಬಂದಿ ಎಂಬ ಹೆಸರುಳ್ಳ ಆ ಭಿಕ್ಷುವು ಅಧೋವಸ್ತ್ರವೊಂದನ್ನು (ಕೆಳಗೆ ಉಡುವ ಬಟ್ಟೆ) ಕೊಟ್ಟು ಆ ಕಾರ್ಪಟಿಕನಿಂದ ಮನೋಹರವಾದ ಆ ಮಾದಳದ ಹಣ್ಣನ್ನು ತೆಗೆದುಕೊಂಡನು.

೩೯–೪೦. ಮತ್ತು ಆ ಭಿಕ್ಷುವು (ರಾಜನ ಬಳಿಗೆ) ಪ್ರವೇಶಿಸಿ ಆ ಹಣ್ಣನ್ನು ರಾಜನಿಗೆ ಸಮರ್ಪಿಸಿದನು. ರಾಜನು ಅದನ್ನು ಗುರುತಿಸಿ ಆ ಶ್ರಮಣನನ್ನು ಕುರಿತು, "'ಭದಂತನೇ! ನಿನಗೆ (ನಿಮಗೆ) ಈ ಮಾದಳದ ಹಣ್ಣು ಎಲ್ಲಿಂದ ಬಂದಿತು" ? ಎಂದು ಕೇಳಿದನು. ಆ ಭಿಕ್ಷುಕನು (ತನಗೆ) ಆ ಹಣ್ಣನ್ನು ಕೊಟ್ಟವನು ಕಾರ್ಪಟಿಕನೆಂದು ಹೇಳಿದನು.

---

ಯಸ್ಯ ತುಷ್ಯತಿ ರಾಜಾಯಂ ದಾರಿದ್ರ್ಯಂ ತಸ್ಯ ಕೃಂತತಿ ।
ಶೋಚ್ಯಃ ಕಾರ್ಪಟಿಕಸ್ತ್ವೇಷ ಯಮಾಹೂಯೈವಮಾದರಾತ್ ॥ ೩೪
ಮಾತುಲುಂಗಮಿದಂ ದತ್ತಂ ತುಷ್ಟೇನಾನೇನ ಭೂಭೃತಾ ।
ಕಲ್ಪವೃಕ್ಷೋಽಪ್ಯಭವ್ಯಾನಾಂ ಪ್ರಾಯೋ ಯಾತಿ ಪಲಾಶತಾಮ್ ॥ ೩೫
ಇತಿ ಸರ್ವೇಽಪಿ ತದ್ದೃಷ್ಟ್ವಾ ತತ್ರಾಸ್ಥಾನೇ ವಿಷಾದಿನಃ ।
ಅಜ್ಞಾತಪರಮಾರ್ಥತ್ವಾತ್ ಸ್ವೈರಮೂಚುಃ ಪರಸ್ಪರಮ್ ॥ ೩೬
ಸ ತು ಕಾರ್ಪಟಿಕೋ ಮಾತುಲುಂಗಮಾದಾಯ ನಿರ್ಯಯೌ ।
ಆಯಯೌ ಚಾಗ್ರತಸ್ತಸ್ಯ ಭಿಕ್ಷುರೇಕೋ ವಿಷೀದತಃ ॥ ೩೭
ಸ ರಾಜಬಂದಿನಾಮಾ ತದ್ದತ್ತ್ವಾ ಶಾಟಕಮುಗ್ರಹೀತ್ ।
ತಸ್ಮಾತ್ ಕಾರ್ಪಟಿಕಾನ್ಮಾತುಲುಂಗಂ ದೃಷ್ಟ್ವಾ ಮನೋರಮಮ್ ॥ ೩೮
ಪ್ರವಿಶ್ಯ ಚ ಸಭಿಕ್ಷುಸ್ತದ್ರಾಜ್ಞೇ ಫಲಮಢೌಕಯತ್ ।
ರಾಜಾ ಚ ತತ್ಪರಿಜ್ಞಾಯ ಶ್ರಮಣಂ ಪೃಚ್ಛತಿ ಸ್ಮ ತಮ್ ॥ ೩೯
ಮಾತುಲುಂಗಂ ಕುತ ಇದಂ ಭದಂತ ಭವತಾಮಿತಿ ।
ತತಃ ಕಾರ್ಪಟಿಕಂ ಸೋಽಸ್ಮೈ ತದ್ದಾತಾರಂ ಶಶಂಸ ತಮ್ ॥ ೪೦

೪೧. ಅನಂತರ ರಾಜನು ""ಅಯ್ಯೋ ಇನ್ನೂ ಅವನ ಪಾಪವು ಕ್ಷೀಣವಾಗಿಲ್ಲ" ಎಂದು ಚಿಂತಿಸುತ್ತಾ ವಿಷಣ್ಣನಾದನು. ಅವನಿಗೆ ಆಶ್ಚರ್ಯವೂ ಆಯಿತು.

೪೨. ಲಕ್ಷದತ್ತನು ಆ ಮಾಂದಳದ ಹಣ್ಣನ್ನು ತೆಗೆದುಕೊಂಡು ತತ್‌ಕ್ಷಣವೇ ಆಸ್ಥಾನದಿಂದ ಎದ್ದು ಆ ದಿವಸದ ಕರ್ತವ್ಯವನ್ನು ನೆರವೇರಿಸಿದನು.

೪೩. ಕಾರ್ಪಟಿಕನೂ ಆ ವಸ್ತುವನ್ನು ಮಾರಿ ಭೋಜನ ಪಾನಾದಿಗಳನ್ನು ಮಾಡಿ ಸಿಂಹದ್ವಾರಕ್ಕೆ ಹೋಗಿ ಹಿಂದಿನಂತೆಯೇ ನಿಂತಿದ್ದನು.

೪೪. ಎರಡನೆಯ ದಿವಸ ರಾಜನು ಸಂಪೂರ್ಣ ಆಸ್ಥಾನವನ್ನು ಅದೇ ರೀತಿ ಏರ್ಪಡಿಸಿದನು. ಮತ್ತು ಅಲ್ಲಿ ಪೌರಜನಸಹಿತರಾದ ಎಲ್ಲರೂ ಮತ್ತೆ ಪ್ರವೇಶಿಸಿದರು.

೪೫. ಸಭೆಯನ್ನು ಪ್ರವೇಶಿಸಿದ ಆ ಕಾರ್ಪಟಿಕನನ್ನು ನೋಡಿ ರಾಜನು ಮತ್ತೆ ಅದೇ ರೀತಿ ಕರೆದು ಹತ್ತಿರದಲ್ಲಿ ಕುಳ್ಳಿರಿಸಿದನು.

೪೬. ಮತ್ತೆ ಅದೇ ಆರ್ಯಾ ಪದ್ಯವನ್ನು ಪಠಿಸುವಂತೆ ಪ್ರೇರಿಸಿ ಕರುಣೆಯಿಂದ ಆ ರಾಜನು ಗುಪ್ತವಾಗಿ ರತ್ನ ತುಂಬಿದ ಮಾದಳದ ಹಣ್ಣನ್ನು ಆ ಕಾರ್ಪಟಿಕನಿಗೆ ಕೊಟ್ಟನು.

೪೭. ""ಅಯ್ಯೋ ! ಎರಡನೇ ದಿವಸವೂ ಈ ಪ್ರಭುವು ಇವನ ವಿಷಯದಲ್ಲಿ ಸಂತುಷ್ಟನಾದುದು ವ್ಯರ್ಥವಾಯಿತು. ಇದು ಏನಿರಬಹುದು ?" ಎಂದು ಆಶ್ಚರ್ಯದಿಂದ ಎಲ್ಲರೂ ಚಿಂತಿಸಿದರು.

---

ಅಥ ರಾಜಾ ವಿಷಣ್ಣಶ್ಚ ವಿಸ್ಮಿತಶ್ಚ ಬಭೂವ ಸಃ ।
ಅಹೋ ಅದ್ಯಾಪಿ ನ ಕ್ಷೀಣಂ ಪಾಪಂ ತಸ್ಯೇತಿ ಚಿಂತಯನ್ ॥ ೪೧

ಸ್ವೀಕೃತ್ಯ ಮಾತುಲುಂಗಂ ತದುತ್ಥಾಯ ಸ್ಥಾನತಃ ಕ್ಷಣಾತ್ ।
ಚಕಾರ ದಿನಕರ್ತವ್ಯಂ ಲಕ್ಷದತ್ತಃ ಸ ಭೂಪತಿಃ ॥ ೪೨

ಸೋಽಪಿ ಕಾರ್ಪಟಿಕೋ ಗತ್ವಾ ಸಿಂಹದ್ವಾರೇ ಯಥಾಸ್ಥಿತಃ ।
ಕೃತಭೋಜನಪಾನಾದಿರಾಸೀದ್ವಿಕ್ರೀತಶಾಟಕಃ ॥ ೪೩

ದ್ವಿತೀಯೇಽಹ್ನಿ ಸ ರಾಜಾ ಚ ಸರ್ವಾಸ್ಥಾನಂ ತಥೈವ ತತ್ ।
ವಿದಧೇ ತತ್ರ ಸರ್ವೇ ಚ ಸಪೌರಾಃ ಪ್ರಾವಿಶನ್ ಪುನಃ ॥ ೪೪

ದೃಷ್ಟ್ವಾ ಕಾರ್ಪಟಿಕಂ ತಂ ಚ ಪ್ರವಿಷ್ಟಂ ಸೋಽಥ ಭೂಮಿಭೃತ್ ।
ತಥೈವಾಹೂಯ ಪುನರಪ್ಯುಪಾವೇಶಯದಂತಿಕೇ ॥ ೪೫

ಪಾಠಯಿತ್ವಾ ಚ ಭೂಯೋಽಪಿ ತಾಮೇವಾರ್ಯಾಂ ಪ್ರಸಾದತಃ ।
ಗೂಢರತ್ನಂ ದದೌ ತಸ್ಮೈ ಮಾತುಲುಂಗಂ ತದೇವ ಸಃ ॥ ೪೬

ಅಹೋ ದ್ವಿತೀಯೇ ದಿವಸೇ ತುಷ್ಟೋಽಸ್ಯಾಯಂ ವೃಥಾ ಪ್ರಭುಃ ।
ಕಿಂ ತಾವದೇತದಿತ್ಯತ್ರ ಸರ್ವೇ ದಧ್ಯುಃ ಸವಿಸ್ಮಯಾಃ ॥ ೪೭

೪೮. ಆ ಕಾರ್ಪಟಿಕನು ವ್ಯಗ್ರನಾಗಿ ಆ ಫಲವನ್ನು ಕೈಯಲ್ಲಿ ತೆಗೆದುಕೊಂಡು ರಾಜಾನುಗ್ರಹವು ಸಫಲವಾಯಿತೆಂದು (ಫಲದೊಡನೆ ಕೂಡಿದುದು) ಭಾವಿಸಿ ಹೊರಗಡೆಗೆ ಹೋದನು.

೪೯. ಅಷ್ಟರಲ್ಲಿ ಆ ಕಾರ್ಪಟಿಕನ ಮುಂದುಗಡೆ ಯಾವನೋ ಒಬ್ಬ ಆ ರಾಜ್ಯದ ಅಧಿಕಾರಿಯು ಆಸ್ಥಾನವನ್ನು ಪ್ರವೇಶಿಸಿ ರಾಜನನ್ನು ನೋಡಲು ಬಂದನು.

೫೦. ಅವನು ಆ ಮಾದಳದ ಹಣ್ಣನ್ನು ನೋಡಿ ಒಳ್ಳೆಯ ಶಕುನವಾಯಿತೆಂದು ಆ ಕಾರ್ಪಟಿಕನಿಗೆ  ಎರಡು ವಸ್ತ್ರಗಳನ್ನು ಕೊಟ್ಟು ಅದನ್ನು ತೆಗೆದುಕೊಂಡನು.

೫೧. ಮತ್ತು ಅವನು ರಾಜನ ಆಸ್ಥಾನವನ್ನು ಪ್ರವೇಶಿಸಿ ರಾಜನ ಕಾಲಿಗೆ ಬಿದ್ದು ಮೊದಲಿಗೆ ಆ ಮಾದಳದ ಹಣ್ಣನ್ನು ಕೊಟ್ಟನು.  ಅನಂತರ ತನ್ನ ಬೇರೆ ಕಾಣಿಕೆಯನ್ನು ಕೊಟ್ಟನು.

೫೨. ಆ ಹಣ್ಣನ್ನು ಗುರುತಿಸಿ ರಾಜ್ಯದ ಆ ಅಧಿಕಾರಿಯನ್ನು ಕುರಿತು ರಾಜನು ""ನಿನಗೆ ಇದು ಎಲ್ಲಿಂದ ಬಂದಿತು?" ಎಂದು ಪ್ರಶ್ನೆಮಾಡಿದನು.  ಅಧಿಕಾರಿಯು ಕಾರ್ಪಟಿಕನಿಂದ ಎಂದು ಹೇಳಿದನು.

೫೩. ""ಅಯ್ಯೋ ! ಇನ್ನೂ (ಇಂದಿಗೂ ಕೂಡ) ಲಕ್ಷ್ಮಿಯು ಅವನಿಗೆ ಇಲ್ಲಿ ದರ್ಶನವನ್ನು ಕೊಡುತ್ತಿಲ್ಲ" ಎಂದು ಮನಸ್ಸಿನಲ್ಲಿ ಚಿಂತಿಸುತ್ತಾ ಆ ರಾಜನೂ ಬಹಳವಾಗಿ ದುಃಖಿತನಾದನು.

೫೪. ಅನಂತರ ರಾಜನು ಆ ಮಾದಳದ ಹಣ್ಣನ್ನು ತೆಗೆದುಕೊಂಡು ಎದ್ದನು.   ಕಾರ್ಪಟಿಕನು ಆ ಎರಡು ವಸ್ತ್ರಗಳನ್ನು ತೆಗೆದುಕೊಂಡು ಅಂಗಡಿಗೆ ಹೋದನು.

---

ಸ ಚ ಕಾರ್ಪಟಿಕೋ ವಿಗ್ನೋ ಹಸ್ತೇ ಕೃತ್ವಾ ತು ತತ್ಫಲಮ್ ।
ರಾಜಪ್ರಸಾದಂ ಸಫಲಂ ಮನ್ವಾನೋ ನಿರ್ಯಯೌ ಬಹಿಃ ॥ ೪೮
ತಾವತ್ತಸ್ಯಾಯಯೌ ಕೋಽಪಿ ವಿಷಯಾಧಿಕೃತೋಽಗ್ರತಃ ।
ಪ್ರವಿವಿಕ್ಷುಸ್ತದಾಸ್ಥಾನಂ ದ್ರಷ್ಟುಕಾಮೋ ಮಹೀಕ್ಷಿತಮ್ ॥ ೪೯
ಸ ದೃಷ್ಟ್ವಾ ಮಾತುಲುಂಗಂ ತದ್ವಸ್ತ್ರೇ ಕಾರ್ಪಟಿಕಾತ್ತತಃ ।
ಆದದೇ ಶಕುನಾಪೇಕ್ಷೀ ದತ್ತ್ವಾಸ್ಮೈ ವಸ್ತ್ರಯೋರ್ಯುಗಮ್ ॥ ೫೦
ಪ್ರವಿಶ್ಯ ಚ ನೃಪಾಸ್ಥಾನಂ ಪಾದನಮ್ರೋ ನೃಪಾಯ ತತ್ ।
ಮಾತುಲುಂಗಂ ದದಾವಾದೌ ತತೋಽನ್ಯತ್ ಪ್ರಾಭೃತಂ ನಿಜಮ್ ॥ ೫೧
ಪರಿಜ್ಞಾಯ ಚ ತದ್ರಾಜ್ಞಾ ಫಲಂ ಸ ವಿಷಯಾಧಿಪಃ ।
ಕುತ ಏತತ್ತವೇತ್ಯುಕ್ತೋಽವೋಚತ್ ಕಾರ್ಪಟಿಕಾದಿತಿ ॥ ೫೨
ಅಹೋ ದದಾತಿ ನಾದ್ಯಾಪಿ ಲಕ್ಷ್ಮೀಸ್ತಸ್ಯೇಹ ದರ್ಶನಮ್ ।
ಇತ್ಯಂತಶ್ಚಿಂತಯನ್ಸೋಽಥ ರಾಜಾಭೂದ್ವಿಮನಾ ಭೃಶಮ್ ॥ ೫೩
ಉತ್ತಸ್ಥೌ ಮಾತುಲುಂಗಂ ತದ್ಗೃಹೀತ್ವಾಸ್ಥಾನತಶ್ಚ ಸಃ ।
ಸೋಽಥ ಕಾರ್ಪಟಿಕೋ ವಸ್ತ್ರಯುಗ್ಮಂ ಪ್ರಾಪ್ಯಾಪಣಂ ಯಯೌ ॥ ೫೪

೫೫. ಒಂದು ವಸ್ತ್ರವನ್ನು ಮಾರಿ ಭೋಜನ, ಪಾನ ಮುಂತಾದುದನ್ನು ನಿರ್ವಹಿಸಿದನು. ಎರಡನೆಯ ವಸ್ತ್ರವನ್ನು ಎರಡಾಗಿ ಮಾಡಿ ಅವನು ಎರಡು ವಸ್ತ್ರಗಳನ್ನೂ ಧರಿಸಿದನು.

೫೬. ಅನಂತರ ಮೂರನೆಯ ದಿವಸವೂ ಆ ರಾಜನು ಸಮಸ್ತ ಆಸ್ಥಾನವನ್ನೂ ಏರ್ಪಡಿಸಿದನು. ಮತ್ತು ಅದೇ ರೀತಿಯಾಗಿ ಎಲ್ಲ ಜನರೂ ಮತ್ತೆ (ಅಲ್ಲಿಗೆ) ಪ್ರವೇಶಿಸಿದರು.

೫೭. ಮತ್ತೆ (ಅಲ್ಲಿಗೆ) ಪ್ರವೇಶಿಸಿದ ಆ ಕಾರ್ಪಟಿಕನನ್ನು ಮತ್ತೆ ಅದೇ ರೀತಿಯಾಗಿ ರಾಜನು ಕರೆದು ಆ ಆರ್ಯಾಪದ್ಯವನ್ನು ಪಠಿಸುವಂತೆ ಪ್ರೇರಿಸಿ ಒಂದು ಮಾದಳದ ಹಣ್ಣನ್ನು ಕೊಟ್ಟನು.

೫೮. ಎಲ್ಲರಿಗೂ (ಇದನ್ನು ನೋಡಿ) ಆಶ್ಚರ್ಯವಾಯಿತು. ಆ ಕಾರ್ಪಟಿಕನೂ ಕೂಡ ಹೊರಗೆ ಹೋಗಿ ರಾಜನ ವಿಲಾಸಿನಿಗೆ ಆ ಬೀಜಪೂರ ಹಣ್ಣನ್ನು ಕೊಟ್ಟನು.

೫೯. ಸಂಚರಿಸುತ್ತಿರುವ ರಾಜಸಂಮಾನವೆಂಬ ಗಿಡದ ಬಳ್ಳಿಯೋ ಎಂಬಂತಿದ್ದ ಅವಳು ಆ ಕಾರ್ಪಟಿಕನಿಗೆ ಮುಂದಿನ ಫಲದ ಸೂಚಕವೆಂಬಂತಿದ್ದ ಚಿನ್ನದ ಹೂವೊಂದನ್ನು ಕೊಟ್ಟಳು.

೬೦. ಕಾರ್ಪಟಿಕನು ಆ ಸುವರ್ಣಪುಷ್ಪವನ್ನು ಮಾರಿ ಆದಿನ ಸುಖವಾಗಿದ್ದನು. ಆ ವಿಲಾಸಿನಿಯು ಆಗ ರಾಜನ ಬಳಿಗೆ ಬಂದಳು.

---

ಚಕ್ರೇ ಭೋಜನಪಾನಾದಿ ವಿಕ್ರೀಯೈಕಂ ಚ ಶಾಟಕಮ್ ।
ದ್ವಿತೀಯಂ ಚ ದ್ವಿಧಾ ಕೃತ್ವಾ ವಾಸಸೀ ದ್ವೇ ವ್ಯಧತ್ತ ಸಃ ॥ ೫೫

ತತಸ್ತೃತೀಯೇಽಪಿ ದಿನೇ ಸರ್ವಾಸ್ಥಾನಂ ಸ ಪಾರ್ಥಿವಃ ।
ವ್ಯಧಾತ್ತಥೈವ ಸರ್ವಶ್ಚ ಪ್ರವಿವೇಶ ಪುನರ್ಜನಃ ॥ ೫೬

ತಸ್ಮೈ ಪ್ರವಿಷ್ಟಾಯ ಚ ತನ್ಮಾತುಲುಂಗಂ ತಥೈವ ಸಃ ।
ಭೂಯೋಽಪ್ಯಾಹೂಯ ತಾಮಾರ್ಯಾಂ ಪಾಠಯಿತ್ವಾ ನೃಪೋ ದದೌ ॥ ೫೭

ವಿಸ್ಮಿತೇಷ್ವಥ ಸರ್ವೇಷು ಸೋಽಪಿ ಕಾರ್ಪಟಿಕೋ ಬಹಿಃ ।
ಗತ್ವಾ ರಾಜವಿಲಾಸಿನ್ಯೈ ತದದಾದ್ಬೀಜಪೂರಕಮ್ ॥ ೫೮

ಸಾ ತಸ್ಮೈ ರಾಜಸಂಮಾನತರುವಲ್ಲೀವ ಜಂಗಮಾ ।
ಜಾತರೂಪಂ ದದೌ ಪುಷ್ಪಮಿವಾಗ್ರಫಲಸೂಚಕಮ್ ॥ ೫೯

ತತ್ಸ ವಿಕ್ರೀಯ ತದಹಸ್ತಸ್ಥೌ ಕಾರ್ಪಟಿಕಃ ಸುಖಮ್ ।
ವಿಲಾಸಿನ್ಯಪಿ ಸಾ ರಾಜ್ಞಃ ಪ್ರವಿವೇಶಾಂತಿಕಂ ತದಾ ॥ ೬೦

೬೧. ಅವಳು ರಾಜನಿಗೆ ದಪ್ಪವಾಗಿದ್ದ ಆ ರಮಣೀಯವಾದ ಮಾತುಲುಂಗ ಹಣ್ಣನ್ನು ಸಮರ್ಪಿಸಿದಳು. ರಾಜನೂ ಆ ಹಣ್ಣನ್ನು ಗುರುತಿಸಿ ಅದು ಇವಳ ಬಳಿ ಬಂದುದರ ಬಗ್ಗೆ ಅವಳನ್ನು ಕೇಳಿದನು.

೬೨. ಅವಳು "'ಈ ಹಣ್ಣನ್ನು ಕಾರ್ಪಟಿಕನು ನನಗೆ ಕೊಟ್ಟನು" ಎಂದು ಹೇಳಿದಳು. ಅದನ್ನು ಕೇಳಿ ಆ ರಾಜನು "ಇನ್ನೂ ಆ ಕಾರ್ಪಟಿಕನನ್ನು ಲಕ್ಷ್ಮಿಯು ನೋಡಲಿಲ್ಲ' ಎಂದು ಚಿಂತಿಸಿದನು.

೬೩. "ಅವನ ಪುಣ್ಯ ಕಡಿಮೆಯಿದೆ, ನನ್ನ ಅನುಗ್ರಹ ನಿಷ್ಫಲವಾದುದಲ್ಲ ಎಂಬುದು ಅವನಿಗೆ ತಿಳಿಯಲಿಲ್ಲ. ಅಯ್ಯೋ, ಈ ಮಹಾರತ್ನಗಳು ನನ್ನ ಬಳಿಗೇ ಮತ್ತೆ ಮತ್ತೆ ಮರಳಿ ಬರುತ್ತಿವೆ' (ಎಂದು ಚಿಂತಿಸಿದನು).

೬೪. ಹೀಗೆ ಚಿಂತಿಸಿ ಆ ಮಾಂದಳದ ಹಣ್ಣನ್ನು ತೆಗೆದುಕೊಂಡು ಸುರಕ್ಷಿತವಾಗಿ ಇಟ್ಟು ರಾಜನು ಮೇಲೆದ್ದು ಅಹ್ನಿಕವನ್ನು ಆಚರಿಸಿದನು.

೬೫. ನಾಲ್ಕನೆಯ ದಿವಸವೂ ರಾಜನು ಅದೇ ರೀತಿಯಾಗಿ ಆಸ್ಥಾನವನ್ನು ಏರ್ಪಡಿಸಿದನು. ಆ ಆಸ್ಥಾನವನ್ನು ಸಾಮಂತ, ಸಚಿವರೇ ಮೊದಲಾದ ಎಲ್ಲರೂ (ಬಂದು) ತುಂಬಿದರು.

೬೬. ಅನಂತರ ಅಲ್ಲಿಗೆ ಬಂದ ಕಾರ್ಪಟಿಕನನ್ನು ಮತ್ತೆ ಮುಂದುಗಡೆ ಕುಳ್ಳಿರಿಸಿಕೊಂಡು ಆ ರಾಜನು ಹಿಂದಿನಂತೆಯೇ ಆರ್ಯಾಪದ್ಯವನ್ನು ಪಠಿಸಲು ಪ್ರೇರಿಸಿದನು.

---

ತಸ್ಮೈ ಚ ಸ್ಥೂಲರಮ್ಯಂ ತನ್ಮಾತುಲುಂಗಮಢೌಕಯತ್ ।
ಸೋಽಪಿ ತತ್ಪ್ರತ್ಯಭಿಜ್ಞಾಯ ತಾಂ ಪಪ್ರಚ್ಛ ತದಾಗಮಮ್ ॥ ೬೧
ತತೋ ಜಗಾದ ಸಾ ದತ್ತಮಿದಂ ಕಾರ್ಪಟಿಕೇನ ಮೇ ।
ತಚ್ಛ್ರುತ್ವಾ ಸನೃಪೋ ದಧ್ಯೌ ಲಕ್ಷ್ಮ್ಯಾಸೋಽದ್ಯಾಪಿ ನೇಕ್ಷಿತಃ ॥ ೬೨
ಮಂದಪುಣ್ಯೋ ನ ಯೋ ವೇತ್ತಿ ಮತ್ಪ್ರಸಾದಮನಿಷ್ಫಲಮ್ ।
ಮಾಮೇವ ಚೈತಾನ್ಯಾಯಾಂತಿ ಮಹಾರತ್ನಾನ್ಯಹೋ ಮುಹುಃ ॥ ೬೩
ಇತಿ ಧ್ಯಾತ್ವಾ ಗೃಹೀತ್ವಾ ತತ್ಸ್ಥಾಪಯಿತ್ವಾ ಚ ರಕ್ಷಿತಮ್ ।
ಮಾತುಲುಂಗಂ ಸ ಉತ್ಥಾಯ ಚಕ್ರೇ ಭೂಪತಿರಾಹ್ನಿಕಮ್ ॥ ೬೪
ಚತುರ್ಥೇಽಹ್ನಿ ಚ ಸೋಽಕಾರ್ಷೀದ್ರಾಜಾಸ್ಥಾನಂ ತಥೈವ ತತ್ ।
ಪೂರ್ಯತೇ ಸ್ಮ ಚ ತತ್ಸರ್ವೈಃ ಸಾಮಂತಸಚಿವಾದಿಭಿಃ ॥ ೬೫
ತತಸ್ತತ್ರ ಸಮಾಯಾತಂ ಭೂಯಃ ಕಾರ್ಪಟಿಕಂ ನೃಪಃ ।
ಉಪವೇಶ್ಯಾಗ್ರತಃ ಪ್ರಾಗ್ವತ್ ಸ ತಾಮಾರ್ಯಾಮಪಾಠಯತ್ ॥ ೬೬

೬೭. ರಾಜನು ಒಂದು ಮಾತುಲುಂಗಫಲವನ್ನು ಕಾರ್ಪಟಿಕನಿಗೆ ಕೊಟ್ಟನು. ರಾಜನು ಆ ಹಣ್ಣನ್ನು ಬೇಗ ಕೈಗೆ ಹಾಕಿದ್ದರಿಂದ ಅದು ಅವನ ಕೈಯ ಅರ್ಧಭಾಗದಲ್ಲಿ ಬಿದ್ದು ಜಾರಿ ಕೆಳಗೆ ಬಿದ್ದು ಎರಡು ಹೋಳಾಯಿತು.

೬೮. ಮುಚ್ಚಳದ ಸಂಧಿಭಾಗದಲ್ಲಿ ಮುರಿದುಹೋದ ಆ ಮಾತುಲುಂಗಫಲದಿಂದ ರತ್ನಗಳು ಹೊರಬಿದ್ದವು. ಬಹಳ ಸಂಖ್ಯೆಯಲ್ಲಿದ್ದ ಆ ಅಮೂಲ್ಯ ರತ್ನಗಳು ಆಸ್ಥಾನವನ್ನು ಬೆಳಗಿದವು.

೬೯. ಆ ರತ್ನಗಳನ್ನು ನೋಡಿ ಎಲ್ಲರೂ ಹೇಳಿದರು. "ಸತ್ಯವು ನಮಗೆ ತಿಳಿಯದೆ ಮೂರುದಿನಗಳು ಅಸತ್ಯವಾದ ಭ್ರಮೆಯು ಉಂಟಾಯಿತು. ಪ್ರಭುವಿನ ಅನುಗ್ರಹವಾದರೋ ಈ ರೀತಿಯಾದುದು.'

೭೦. ಇದನ್ನು ಕೇಳಿ ರಾಜನು ಹೇಳಿದನು. ""ನಾನು ಈ ಯುಕ್ತಿಯಿಂದ, ಲಕ್ಷ್ಮಿಯು ಇವನಿಗೆ ದರ್ಶನವನ್ನು ಕೊಡುತ್ತಾಳೆಯೋ ಇಲ್ಲವೋ ಎಂದು ಇವನನ್ನು ಪರೀಕ್ಷಿಸಿದೆನಷ್ಟೆ

೭೧. ಈ ಮೂರು ದಿನಗಳಲ್ಲಿ ಇವನ ಪಾಪವು ಮುಗಿಯಲಿಲ್ಲ. ಇವನಿಗೆ ಪಾಪವು ಕೊನೆಯಾದದ್ದು ಇಂದು. ಲಕ್ಷ್ಮಿಯು ಇವನಿಗೆ ಈಗ ದರ್ಶನ ಕೊಟ್ಟಳು."

೭೨. ಹೀಗೆ ಹೇಳಿ ಆ ರಾಜನು ಆ ರತ್ನಗಳ ಜೊತೆಗೆ ಗ್ರಾಮಗಳನ್ನೂ ಆನೆ, ಕುದುರೆ, ಸುವರ್ಣಗಳನ್ನೂ ಕೊಟ್ಟು ಆ ಕಾರ್ಪಟಿಕನನ್ನು ಸಾಮಂತನನ್ನಾಗಿ ಮಾಡಿದನು.

---

ದದೌ ಚ ಮಾತುಲುಂಗಂ ತತ್ತಸ್ಮೈ ತಚ್ಚ ದ್ರುತೋಜ್ಝಿತಮ್ ।
ತಸ್ಯ ಹಸ್ತಾರ್ಧಸಂಪ್ರಾಪ್ತಂ ದ್ವಿಧಾಭೂತ್ಪತಿತಂ ಭುವಿ ॥ ೬೭
ಪಿಧಾನಸಂಧಿಭಗ್ನಾಚ್ಚ ತಸ್ಮಾದ್ರತ್ನಾನಿ ನಿರ್ಯಯುಃ ।
ಭಾಸಯಂತಿ ತದಾಸ್ಥಾನಂ ಮಹಾರ್ಘಾಣಿ ಬಹೂನಿ ಚ ॥ ೬೮
ತಾನಿ ದೃಷ್ಟ್ವಾಬ್ರುವನ್ಸರ್ವೇ ಪರಮಾರ್ಥಮಜಾನತಾಮ್ ।
ತ್ರ್ಯಹಂ ಮೃಷಾ ಭ್ರಮೋಽಭೂನ್ನಃ ಪ್ರಸಾದಸ್ತ್ವೀದೃಶಃ ಪ್ರಭೋಃ ॥ ೬೯
ಏತಚ್ಛ್ರುತ್ವಾಬ್ರವೀದ್ರಾಜಾ ಮಯಾ ಯುಕ್ತ್ಯಾನಯಾ ಹ್ಯಯಮ್ ।
ದರ್ಶನಂ ಶ್ರೀರ್ದದಾತ್ಯಸ್ಯ ಕಿಂ ನ ವೇತಿ ಪರೀಕ್ಷಿತಃ ॥ ೭೦
ಪಾಪಾಂತಶ್ಚ ತ್ರ್ಯಹಂ ನಾಸ್ಯ ಪ್ರಾಪ್ತಃ ಪ್ರಾಪ್ತೋಽಸ್ಯ ಸೋಽದ್ಯ ತು ।
ತೇನೈವ ದರ್ಶನಂ ಲಕ್ಷ್ಮ್ಯಾ ದತ್ತಮೇತಸ್ಯ ಸಾಂಪ್ರತಮ್ ॥ ೭೧
ಇತ್ಯುಕ್ತ್ವಾ ತಾನಿ ರತ್ನಾನಿ ಗ್ರಾಮಾನ್ ಹಸ್ತ್ಯಶ್ವಕಾಂಚನಮ್ ।
ದತ್ತ್ವಾ ಚಕಾರ ಸಾಮಂತಂ ಸ ತಂ ಕಾರ್ಪಟಿಕಂ ಪ್ರಭುಃ ॥ ೭೨

೭೩. ಜನರು ರಾಜನನ್ನು ಸ್ತೋತ್ರಮಾಡುತ್ತಿರಲು ರಾಜನು ಸ್ನಾನಮಾಡಲು ಆಸ್ಥಾನದಿಂದ ಎದ್ದನು. ಕಾರ್ಪಟಿಕನೂ ಕೃತಾರ್ಥನಾಗಿ ತನ್ನ ವಸತಿಗೆ ಹೋದನು.

೭೪. ಹೀಗೆ ಪಾಪದ ಕೊನೆಯು ಎಲ್ಲಿಯವರೆಗೆ ಆಗುವುದಿಲ್ಲವೋ ಅಲ್ಲಿಯವರೆಗೆ ಸೇವಕನು ನೂರಾರು ಕಠಿನ ಪ್ರಯಾಸಗಳನ್ನು ಮಾಡಿದರೂ ಪ್ರಭುವಿನ ಅನುಗ್ರಹವನ್ನು ಪಡೆಯುವುದಿಲ್ಲ."

೭೫. ಹೀಗೆ ಮಂತ್ರಿಮುಖ್ಯವಾದ ಗೋಮುಖನು ಕಥೆಯನ್ನು ಹೇಳಿ ತನ್ನ ಪ್ರಭುವಾದ ನರವಾಹನದತ್ತನನ್ನು ಕುರಿತು ಮತ್ತೆ ಹೇಳಿದನು.

೭೬. "ಆದುದರಿಂದ, ದೇವನೇ ! ನಿನ್ನ ಈ ಕಾರ್ಪಟಿಕನಿಗೆ ನಿಜವಾಗಿಯೂ ಇನ್ನೂ ಪಾಪಕ್ಷಯವು ಉಂಟಾಗಿಲ್ಲ. ಅದರಿಂದಾಗಿ ನೀನು ಇವನ ವಿಷಯದಲ್ಲಿ ಅನುಗ್ರಹಮಾಡುತ್ತಿಲ್ಲ ಎಂದು ಭಾವಿಸುತ್ತೇನೆ.'

೭೭–೭೮. ಗೋಮುಖನ ಈ ಮಾತನ್ನು ಕೇಳಿ ಸರಿಯಾದ ಮಾತು ಎಂದು ಹೇಳಿ ವತ್ಸೇಶ್ವರನ ಪುತ್ರನಾದ ನರವಾಹನದತ್ತನು ಕಾರ್ಪಟಿಕನಿಗೆ ಆಗಲೇ ಗ್ರಾಮ ಸಮೂಹವನ್ನೂ, ಆನೆಕುದುರೆಗಳನ್ನೂ, ಕೋಟಿಸುವರ್ಣವನ್ನೂ ಮತ್ತು ಉತ್ತಮ ವಸ್ತ್ರಗಳನ್ನೂ, ಆಭರಣಗಳನ್ನೂ ವಿಶೇಷವಾಗಿ ಕೊಟ್ಟನು.

---

ಉತ್ತಸ್ಥೌ ಚ ತತಃ ಸ್ನಾತುಮಾಸ್ಥಾನಾತ್ ಸಂಸ್ತುವಜ್ಜನಾತ್ ।
ಯಯೌ ಕಾರ್ಪಟಿಕಃ ಸೋಽಪಿ ಕೃತಾರ್ಥೋ ವಸತಿಂ ನಿಜಾಮ್ ॥ ೭೩
ಏವಂ ಯಾವನ್ನ ಪಾಪಾಂತೋ ವೃತ್ತಸ್ತಾವನ್ನ ಲಭ್ಯತೇ ।
ಪ್ರಭುಪ್ರಸಾದೋ ಭೃತ್ಯೇನ ಕೃತ್ಯೈಃ ಕಷ್ಟಶತೈರಪಿ ॥ ೭೪
ಇತ್ಯಾಖ್ಯಾಯ ಕಥಾಮೇತಾಂ ಮಂತ್ರಿಮುಖ್ಯಃ ಸ ಗೋಮುಖಃ ।
ನರವಾಹನದತ್ತಂ ತಂ ಜಗಾದ ಸ್ವಪ್ರಭುಂ ಪುನಃ ॥ ೭೫
ತದ್ದೇವ ಜಾನೇ ನೈತಸ್ಯ ನೂನಂ ಕಾರ್ಪಟಿಕಸ್ಯ ತೇ ।
ವೃತ್ತಃ ಪಾಪಕ್ಷಯೋಽದ್ಯಾಪಿ ಯೇನ ನಾಸ್ಯ ಪ್ರಸೀದಸಿ ॥ ೭೬
ಶ್ರುತ್ವೈತದ್ಗೋಮುಖವಚೋ ಹಂತ ಸಾಧ್ವಿತ್ಯುದೀರ್ಯ ಚ ।
ತಸ್ಮೈ ಕಾರ್ಪಟಿಕಾಖ್ಯಾಯ ನಿಜಕಾರ್ಪಟಿಕಾಯ ಸಃ ॥ ೭೭
ವತ್ಸೇಶ್ವರಸುತಃ ಸದ್ಯಃ ಪ್ರದದೌ ಗ್ರಾಮಸಂಚಯಮ್ ।
ಹಸ್ತ್ಯಶ್ವಂ ಹೇಮಕೋಟಿಂ ಚ ಸದ್ವಸ್ತ್ರಾಭರಣಾನಿ ಚ ॥ ೭೮

೭೯. ಪುಣ್ಯವಂತನಾದ ಆ ಕಾರ್ಪಟಿಕನು ಒಡನೆಯೇ ರಾಜನಿಗೆ ಸಮಾನನಂತೆ ಆದನು. ಕೃತಜ್ಞನಾದ ಹಾಗೂ ಉತ್ತಮಪರಿವಾರವುಳ್ಳವನಾದ ಪ್ರಭುವಿನಲ್ಲಿ (ಮಾಡಿದ) ಸೇವೆಯು ಹೇಗೆ ನಿಷ್ಫಲವಾಗುವುದು ?

೮೦. ಹೀಗೆಯೇ ಇದ್ದಾಗ ನರವಾಹನದತ್ತನ ಸೇವೆಗಾಗಿ ಯುವಕನಾದ ದಾಕ್ಷಿಣಾತ್ಯ ಬ್ರಾಹ್ಮಣನೊಬ್ಬನು ಬಂದನು.

೮೧. ಪ್ರಲಂಬಬಾಹು ಎಂಬ ಹೆಸರಿನ ಆ ವೀರನು ನರವಾಹನದತ್ತನನ್ನು ಕುರಿತು ವಿಜ್ಞಾಪಿಸಿದನು. "ದೇವ ! ನಿನ್ನ ಕೀರ್ತಿಯಿಂದ ಆಕೃಷ್ಟನಾದ ನಾನು (ನಿನ್ನ) ಪಾದಗಳನ್ನು ಆಶ್ರಯಿಸಿದ್ದೇನೆ.

೮೨. ನಾನು ದೇವನ ಪದಾತಿಯಾಗಿದ್ದುಕೊಂಡು ನೀನು ಆನೆ, ಕುದುರೆ ಮತ್ತು ರಥಗಳಿಂದ ಭೂಮಿಯಲ್ಲಿ ಸಂಚರಿಸುವಾಗಲೂ ಮತ್ತು ಆಕಾಶದಲ್ಲಿ ಸಂಚರಿಸುವಾಗಲೂ ನಿನ್ನ ಹೆಜ್ಜೆಯನ್ನು ಬಿಟ್ಟು ಒಂದು ಹೆಜ್ಜೆಯೂ ಚಲಿಸುವುದಿಲ್ಲ.

೮೩. ಏಕೆಂದರೆ ಪ್ರಭುವಿಗೆ ವಿದ್ಯಾಧರೇಂದ್ರ ಪದವಿಯು ಮುಂದೆ ಉಂಟಾಗುವುದು ಎಂದು ಕೇಳಿದ್ದೇನೆ. ನನ್ನ ವೃತ್ತಿಗಾಗಿ ಪ್ರತಿ ದಿವಸವೂ ನೂರು ಸುವರ್ಣ ನಾಣ್ಯಗಳನ್ನು ಕೊಡಬೇಕು."

೮೪. ಹೀಗೆ ಹೇಳಿದ ಅಸಮಾನವಾದ ತೇಜಸ್ವಿಯಾದ ಆ ದ್ವಿಜನಿಗೆ ನರವಾಹನದತ್ತನು ವೃತ್ತಿಯನ್ನು ನೀಡಿದನು.

---

ತದೈವ ರಾಜಸದೃಶಃ ಸೋಽಭೂತ್ಕಾರ್ಪಟಿಕಃ ಕೃತೀ ।
ಕೃತಜ್ಞೇ ಸತ್ಪರೀವಾರೇ ಪ್ರಭೌ ಸೇವಾಫಲಾ ಕುತಃ ॥ ೭೯
ಏವಂ ಸ್ಥಿತಸ್ಯ ತಸ್ಯಾತ್ರ ಜಾತು ಸೇವಾರ್ಥಮಾಯಯೌ ।
ನರವಾಹನದತ್ತಸ್ಯ ದಾಕ್ಷಿಣಾತ್ಯೋ ಯುವಾ ದ್ವಿಜಃ ॥ ೮೦
ಪ್ರಲಂಬಬಾಹುನಾಮಾ ಚ ಸ ವೀರಸ್ತಂ ವ್ಯಜಿಜ್ಞಪತ್ ।
ಕೀರ್ತ್ಯಾಕೃಷ್ಟಸ್ತವೈಷೋಽಹಂ ಪಾದೌ ದೇವ ಸಮಾಶ್ರಿತಃ ॥ ೮೧
ಪದಾತ್ಪದಂ ಚ ದೇವಸ್ಯ ಪದಾತಿರ್ನ ಚಲಾಮ್ಯಹಮ್ ।
ಗಜವಾಜಿರಥೈರ್ಭೂಮೌ ಗಚ್ಛತೋ ನಾಂಬರೇ ಪುನಃ ॥ ೮೨
ವಿದ್ಯಾಧರೇಂದ್ರತಾ ಯಸ್ಮಾಚ್ಛ್ರೂಯತೇ ಭಾವಿನೀ ಪ್ರಭೋಃ।
ದಿನೇ ದಿನೇ ಸ್ವರ್ಣಶತಂ ದೀಯತಾಂ ವೃತ್ತಯೇ ಮಮ ॥ ೮೩
ಏವಮುಕ್ತವತೇ ತಸ್ಮೈ ತತ್ಕಿಲಾತುಲತೇಜಸೇ ।
ನರವಾಹನದತ್ತಸ್ತಾಂ ದದೌ ವೃತ್ತಿಂ ದ್ವಿಜಾತಯೇ ॥ ೮೪

೮೫. ಆ ಪ್ರಸಂಗದಿಂದ ಗೋಮುಖನು ಹೇಳಿದನು. "ದೇವ! ರಾಜನಿಗೆ ಈ ವಿಧವಾದ ಸೇವಕರು ಇರುತ್ತಾರೆ. ಅಂತೆಯೇ (ಈ) ಕಥೆಯನ್ನು ಕೇಳು.

೮೬. ಈ ಲೋಕದಲ್ಲಿ ವಿಕ್ರಮಪುರವೆಂಬ ಹೆಸರಿನ ದೊಡ್ಡದಾದ ಒಂದು ಶ್ರೇಷ್ಠಪಟ್ಟಣವಿದೆ. ಅಲ್ಲಿ ಹಿಂದೆ ವಿಕ್ರಮತುಂಗನೆಂಬ ರಾಜನು ಇದ್ದನು.

೮೭–೮೮. ನೀತಿವಂತನಾದ ಆ ರಾಜನಲ್ಲಿ ತೀಕ್ಷ್ಣತೆಯು ಕತ್ತಿಯಲ್ಲಿ ಇತ್ತೇ ಹೊರತು ಶಿಕ್ಷೆಯ ವಿಧಾನದಲ್ಲಿರಲಿಲ್ಲ. ಧರ್ಮದಲ್ಲಿ ನಿರಂತರ ಆಸಕ್ತಿಯಿತ್ತೇ ಹೊರತು ಸ್ತ್ರೀಯರಲ್ಲಾಗಲೀ, ಬೇಟೆಯಾಡುವುದಲ್ಲಾಗಲಿ ಇರಲಿಲ್ಲ. ಅವನು ರಾಜ್ಯವಾಳುತ್ತಿದ್ದಾಗ, ನೆಲದಲ್ಲಿ ಬೀಳುವುದು ಧೂಳಿನಲ್ಲಿ ಮಾತ್ರ ಕಂಡುಬರುತ್ತದೆ. (ಕು–ಲಯ ಭೂಮಿಗೆ ಸೇರುವುದು, ಬೀಳುವುದು. ಕು–ಕುತ್ಸಿತರಲ್ಲಿ ಲಯ–ಸೇರುವುದು) ಕುತ್ಸಿತರ ಒಡನಾಟವಿರಲಿಲ್ಲ. ಗುಣದ ಚ್ಯುತಿಯು ಧನಸ್ಸಿನ ಮೌರ್ವಿಯಲ್ಲಿ ಮಾತ್ರ ಇತ್ತು. (ಬಿಲ್ಲಿನದಾರವೂ ಗುಣವೇ. ಹಾಗೆ ಗುಣದ ಜಾರುವಿಕೆ ಅಂದರೆ ಕಳಚುವಿಕೆ ಬಿಲ್ಲಿನಲ್ಲಿತ್ತು ಸದ್ಗುಣಗಳ ಚ್ಯುತಿ ಎಂಬುದು ಇರಲಿಲ್ಲ) ಅವಿಚಾರವು (ಅವಿ –ಕುರಿಗಳ ಸಂಚಾರವು) ಪಶುಪಾಲಕರ ಕೊಟ್ಟಿಗೆಯಲ್ಲಿ ಮಾತ್ರ ಇತ್ತು. ಅವಿವೇಕ (ಅ–ವಿಚಾರ) ಇರಲಿಲ್ಲ.

೮೯. ಒಮ್ಮೆ ಮಾಲವದೇಶದಿಂದ ಭವ್ಯವಾದ ಆಕಾರವುಳ್ಳ ವೀರವರನೆಂಬ ಒಬ್ಬ ಶೂರನಾದ ಬ್ರಾಹ್ಮಣನು ರಾಜನ ಸೇವೆಗಾಗಿ ಬಂದನು.

೯೦. ಅವನ ಮನೆಯಲ್ಲಿ ಧರ್ಮವತೀ ಎಂಬ ಹೆಂಡತಿ, ವೀರವತೀ ಎಂಬ ಮಗಳು ಮತ್ತು ಸತ್ತ್ವವರನೆಂಬ ಪುತ್ರನು, ಹೀಗೆ ಮೂರುಮಂದಿಯ ಪರಿವಾರವಿತ್ತು.

---

ತತ್ಪ್ರಸಂಗಾಚ್ಚ ವಕ್ತಿ ಸ್ಮ ಗೋಮುಖೋ ದೇವ ಸೇವಕಾಃ ।
ಭವಂತ್ಯೇವಂವಿಧಾ ರಾಜ್ಞಾಂ ತಥಾ ಚ ಶ್ರೂಯತಾಂ ಕಥಾ ॥ ೮೫
ಅಸ್ತೀಹ ವಿಕ್ರಮಪುರಂ ನಾಮ್ನಾ ಪುರವರಂ ಮಹತ್ ।
ತತ್ರ ವಿಕ್ರಮತುಂಗಾಖ್ಯೋ ಬಭೂವ ನೃಪತಿಃ ಪುರಾ ॥ ೮೬
ತೈಕ್ಷ್ಣ್ಯಂ ಕೃಪಾಣೇ ಯಸ್ಯಾಭೂನ್ನ ದಂಡೇ ನಯಶಾಲಿನಃ ।
ಧರ್ಮೇ ಚ ಸತತಾಸಕ್ತಿರ್ನ ತು ಸ್ತ್ರೀಮೃಗಯಾದಿಷು ॥ ೮೭
ತಸ್ಮಿಂಶ್ಚ ರಾಜ್ಞಿ ಕುಲಯೋ ರಜಃಸು ಗುಣವಿಚ್ಯುತಿಃ ।
ಸಾಯಕೇಷ್ವವಿಚಾರಶ್ಚ ಗೋಷ್ಠೇಷು ಪಶುರಕ್ಷಿಣಾಮ್ ॥ ೮೮
ತಸ್ಯ ವೀರವರೋನಾಮ ಶೂರೋ ಮಾಲವದೇಶತಃ ।
ಸ್ವಾಕೃತಿಶ್ಚಾಯಯೌ ರಾಜ್ಞೋ ವಿಪ್ರಃ ಸೇವಾರ್ಥಮೇಕದಾ ॥ ೮೯
ಯಸ್ಯ ಧರ್ಮವತೀ ನಾಮ ಭಾರ್ಯಾ ವೀರವತೀ ಸುತಾ ।
ಪುತ್ರಃ ಸತ್ತ್ವವರಶ್ಚೇತಿ ತ್ರಯಂ ಪರಿಕರೋ ಗೃಹೇ ॥ ೯೦

೯೧. ಅವನ ಬಳಿ ಇದ್ದ ಸೇವಾಪರಿಕರಗಳೂ ಮೂರೇ. ಅಂದರೆ ಅವನ ಸೊಂಟದಲ್ಲಿ ಕತ್ತಿ ಒಂದು ಕೈಯಲ್ಲಿ ಚರ್ಮ (ಗುರಾಣಿಯು) ಮತ್ತೊಂದು ಕೈಯಲ್ಲಿ ಉತ್ತಮವಾದ ಕನ್ನಡಿ.

೯೨. ಇಷ್ಟು ಮಾತ್ರ ಪರಿಕರವಿಟ್ಟುಕೊಂಡು ಅವನು ವೃತ್ತಿಗಾಗಿ ಪ್ರತಿದಿನವೂ ಆ ರಾಜನಿಂದ ಐದುನೂರು ದೀನಾರಗಳನ್ನು ಕೇಳಿದನು.

೯೩. ಆ ರಾಜನು ಇವನ ಓಜಸ್ಸು ನೋಡಿ ಇವನ ಕೌಶಲವನ್ನಾದರೂ ನೋಡುತ್ತೇನೆ ಎಂದು ಚಿಂತಿಸುತ್ತಾ ಆ ವೃತ್ತಿಯನ್ನು ಕೊಟ್ಟನು.

೯೪. ಅನಂತರ ರಾಜನು ಎರಡೇ ಕೈಗಳುಳ್ಳ ಇವನು ಇಷ್ಟು ದೀನಾರಗಳಿಂದ ಏನು ಮಾಡುವನು ಎಂದು ವಿಚಾರ ಮಾಡುವುದಕ್ಕಾಗಿ ಅವನ ಹಿಂದೆ ಗುಪ್ತಚಾರರನ್ನು ಕಳುಹಿಸಿದನು.

೯೫. ಆ ವೀರವರನು ಪ್ರತಿದಿನವೂ ಆ ದೀನಾರಗಳ ಪೈಕಿ ನೂರನ್ನು ಭೋಜನಾದಿಗಳಿಗಾಗಿ ತನ್ನ ಹೆಂಡತಿಯ ಕೈಯಲ್ಲಿ ಕೊಡುತ್ತಿದ್ದನು.

೯೬. ನೂರರಿಂದ (ದೀನಾರಗಳಿಂದ) ವಸ್ತ್ರ, ಮಾಲ್ಯ ಮುಂತಾದುದನ್ನು ಕೊಂಡು ಕೊಳ್ಳುತ್ತಿದ್ದನು. ಮತ್ತೆ ನೂರನ್ನು ಸ್ನಾನ ಮಾಡಿ ಹರಿ, ಹರ ಮುಂತಾದವರ ಪೂಜೆಗಾಗಿ ವಿನಿಯೋಗಿಸುತ್ತಿದ್ದನು.

---

ಸೇವಾಪರಿಕರಶ್ಚಾಸ್ಯ ತ್ರಯಂ ಕಟ್ಯಾಂ ಕೃಪಾಣಿಕಾ ।
ಪಾಣೌ ಕರತಲೈಕಸ್ಮಿಂಶ್ಚರ್ಮಾನ್ಯಸ್ಮಿನ್ ಸುದರ್ಪಣಮ್ ॥ ೯೧
ಇಯನ್ಮಾತ್ರೇ ಪರಿಕರೇ ವೃತ್ತಯೇಽರ್ಥಯತೇ ಸ್ಮ ಸಃ ।
ಪ್ರತ್ಯಹಂ ನೃಪತೇಸ್ತಸ್ಮಾದ್ದೀನಾರಶತಪಂಚಕಮ್ ॥ ೯೨
ರಾಜಾ ಚ ಸ ದದೌ ತಸ್ಮೈ ವೃತ್ತಿಂ ತಾಂ ಲಕ್ಷಿತೌಜಸೇ।
ಪಶ್ಯಾಮಿ ತಾವದೇತಸ್ಯ ಪ್ರಕರ್ಷಮಿತಿ ಚಿಂತಯನ್ ॥ ೯೩
ದದೌ ಚ ತಸ್ಯ ಚಾರಾನ್ಸ ಪಶ್ಚಾಜ್ಜಿಜ್ಞಾಸಿತುಂ ನೃಪಃ ।
ಕುರ್ಯಾದಿಯದ್ಭಿರ್ದೀನಾರೈಃ ಕಿಂ ದ್ವಿಬಾಹುರಸಾವಿತಿ ॥ ೯೪
ಸ ಚ ವೀರವರಸ್ತೇಷಾಂ ದೀನಾರಾಣಾಂ ದಿನೇ ದಿನೇ ।
ಶತಂ ಹಸ್ತೇ ಸ್ವಭಾರ್ಯಾಯಾ ಭೋಜನಾದಿಕೃತೇ ದದೌ ॥ ೯೫
ಶತೇನ ವಸ್ತ್ರಮಾಲ್ಯಾದಿ ಕ್ರೀಣಾತಿ ಸ್ಮ ಶತಂ ಪುನಃ ।
ಸ್ನಾತ್ವಾ ಹರಿಹರಾದೀನಾಮರ್ಚನಾರ್ಥಮಕಲ್ಪಯತ್ ॥ ೯೬

೯೭. ಇತರ ಎರಡು ನೂರನ್ನು ಬ್ರಾಹ್ಮಣರು, ದೀನರು ಮೊದಲಾದವರಿಗೆ ದಾನ ಮಾಡುತ್ತಿದ್ದನು. ಅವನು ಈ ರೀತಿಯಾಗಿ ನಿತ್ಯವೂ ಐದುನೂರನ್ನೂ (ದೀನಾರಗಳನ್ನು) ವಿನಿಯೋಗ ಮಾಡುತ್ತಿದ್ದನು.

೯೮. ಮತ್ತು ಪೂರ್ವಾಹ್ಣ ಮತ್ತು ಮಧ್ಯಾಹ್ನಗಳಲ್ಲಿ ಅವನು ರಾಜನ ಸಿಂಹದ್ವಾರದಲ್ಲಿ ನಿಲ್ಲುತ್ತಿದ್ದನು. ಮತ್ತೆ ಆಹ್ನಿಕ ಮೊದಲಾದುದನ್ನು ಮಾಡಿ ರಾತ್ರಿಯಲ್ಲಿ ಅಲ್ಲೇ ಇರುತ್ತಿದ್ದನು.

೯೯. ಗುಪ್ತಚಾರರು ನಿತ್ಯವೂ ಅವನ ಈ ದಿನಚರ್ಯೆಯನ್ನು ರಾಜನಿಗೆ ನಿವೇದಿಸುತ್ತಿದ್ದರು. ಅನಂತರ ಸಂತುಷ್ಟನಾದ ರಾಜನು ಆ ಗುಪ್ತಚಾರರನ್ನು ಹಿಂದಿರುಗಿಸಿದನು.

೧೦೦. ವೀರವರನೂ ಸ್ನಾನಾದಿಸಮಯವನ್ನು ಬಿಟ್ಟು ಹಗಲೂ ರಾತ್ರಿ ಆ ರಾಜನ ಸಿಂಹದ್ವಾರದಲ್ಲಿ ಆಯುಧವನ್ನು ಧರಿಸಿ ನಿಲ್ಲುತ್ತಿದ್ದನು.

೧೦೧. ಅನಂತರ ಶೂರರ ಪ್ರತಾಪವನ್ನು ಸಹಿಸದೆ ವರ್ಷಾಕಾಲವು ಆ ವೀರವರನನ್ನು ಗೆಲ್ಲಲು ಇಚ್ಛಿಸುತ್ತಿರುವುದೋ ಎಂಬಂತೆ ಭಯಂಕರವಾಗಿ ಗರ್ಜಿಸುತ್ತಾ ಬಂದಿತು.

೧೦೨. ಆಗ ಮೇಘವು ಭಯಂಕರವಾದ ಧಾರಾರೂಪವಾದ ಬಾಣಸಮೂಹಗಳನ್ನು ವರ್ಷಿಸುತ್ತಿರಲು ವೀರವರನು ಸಿಂಹದ್ವಾರದಿಂದ ಚಲಿಸದೆ ಕಂಬದಂತೆ ನಿಂತನು.

---

ದ್ವಿಜಾತಿಕೃಪಣಾದಿಭ್ಯೋ ದದಾವನ್ಯಚ್ಛತದ್ವಯಮ್ ।
ಏವಂ ಸ ವಿನಿಯುಂಕ್ತೇ ಸ್ಮ ನಿತ್ಯಂ ಪಂಚಶತೀಮಪಿ ॥ ೯೭
ತಸ್ಥೌ ಚ ಪೂರ್ವಮಧ್ಯಾಹ್ನಂ ಸಿಂಹದ್ವಾರೇಽಸ್ಯ ಭೂಪತೇಃ ।
ಕೃತ್ವಾಹ್ನಿಕಾದಿ ಚಾಗತ್ಯ ತತ್ರೈವಾಸೀನ್ನಿಶಾಂ ಪುನಃ ॥ ೯೮
ಏತಾಂ ತದ್ದಿನಚರ್ಯಾಂ ಚ ನಿತ್ಯಂ ಚಾರಾ ನ್ಯವೇದಯನ್ ।
ರಾಜ್ಞೋ ತಸ್ಮೈ ತತಸ್ತುಷ್ಟಃ ಸ ತಾಂಶ್ಚಾರಾನ್ನ್ಯವರ್ತಯತ್ ॥ ೯೯
ಸೋಽಪಿ ವೀರವರಸ್ತಸ್ಯ ರಾಜ್ಞಸ್ತಸ್ಥೌ ದಿವಾನಿಶಮ್ ।
ಸ್ನಾನಾದಿಸಮಯಂ ಮುಕ್ತ್ವಾ ಸಿಂಹದ್ವಾರೇ ಧೃತಾಯುಧಃ ॥ ೧೦೦
ಅಥಾತ್ರ ತಂ ವೀರವರಂ ಜೇತುಮಿಚ್ಛನ್ನಿವಾಯಯೌ ।
ಶೂರಪ್ರತಾಪಾಸಹನೋ ಗರ್ಜಿತೋಗ್ರೋ ಘನಾಗಮಃ ॥ ೧೦೧
ತದಾ ಚ ವರ್ಷತಿ ಘನೇ ಘೋರಾ ಧಾರಾಶರಾವಲೀಃ ।
ನ ಸ ವೀರವರಃ ಸಿಂಹದ್ವಾರಾತ್ ಸ್ತಂಭ ಇವಾಚಲತ್ ॥ ೧೦೨

೧೧೩. ರಾಜನಾದ ವಿಕ್ರಮತುಂಗನು ಉಪ್ಪರಿಗೆಯಿಂದ ಅವನನ್ನು ಸದಾ ನೋಡುತ್ತಿದ್ದು ಅವನ ಬಗ್ಗೆ ತಿಳಿಯಲು ಇಚ್ಛಿಸಿ ರಾತ್ರಿಯಲ್ಲಿ ಮನೆಯ ಉಪ್ಪರಿಗೆಯನ್ನು ಹತ್ತಿದನು.

೧೧೪. "ಈ ಸಿಂಹದ್ವಾರದಲ್ಲಿ ಇರುವವನು ಯಾರು ?’ ಎಂದು ಮೇಲಿನಿಂದ ರಾಜನು ಕೇಳಿದನು. ಅದನ್ನು ಕೇಳಿ '"ಇಲ್ಲಿರುವವನು ನಾನೇ” ಎಂದು ಆ ವೀರವರನೂ ಉತ್ತರಿಸಿದನು.

೧೧೫. '"ಇಂತಹ ಮೇಘವು ಮಳೆಯನ್ನು ಸುರಿಸುತ್ತಿದ್ದರೂ ಸಿಂಹದ್ವಾರವನ್ನು ಬಿಡದಿರುವ ಇವನು ಮಹಾಧೈರ್ಯವಂತನು. ಅಹೋ ! ಇವನು ಅತ್ಯಂತ ದೊಡ್ಡಪದವಿಗೆ ಅರ್ಹನಾಗಿದ್ದಾನೆ”

೧೧೬. ಹೀಗೆ ರಾಜನು ಚಿಂತಿಸುತ್ತಿರುವಾಗ ಅಷ್ಟರಲ್ಲಿ ದೂರದಲ್ಲಿ ಕರುಣಾಪೂರ್ಣವಾಗಿ ಸ್ತ್ರೀಯೊಬ್ಬಳು ಅಳುತ್ತಿರುವುದು ಕೇಳಿಸಿತು.

೧೧೭. "ನನ್ನ ರಾಷ್ಟ್ರದಲ್ಲಿ ದುಃಖಿತನಾದವನೇ ಇಲ್ಲ. ಆದುದರಿಂದ ಇವಳು ಯಾರು ಅಳುತ್ತಿರುವುದು’ ಎಂದು ಆಲೋಚಿಸಿ ರಾಜನು ಆಗ ವೀರವರನಿಗೆ ಹೇಳಿದನು.

೧೧೮. '"ವೀರವರನೇ ! ಯಾವಳೋ ಸ್ತ್ರೀಯು ದೂರದಲ್ಲಿ ಅಳುತ್ತಿದ್ದಾಳೆ ಕೇಳು. ಯಾರವಳು ಮತ್ತು ಅವಳ ಕಷ್ಟವೇನು ಎಂದು ಅಲ್ಲಿ ಹೋಗಿ ತಿಳಿದುಕೋ”

---

ರಾಜಾ ವಿಕ್ರಮತುಂಗಶ್ಚ ಪ್ರಾಸಾದಾದ್ವೀಕ್ಷ್ಯ ತಂ ಸದಾ ।
ಆರುರೋಹ ಸ ಜಿಜ್ಞಾಸುಃ ಪ್ರಾಸಾದಂ ತಂ ಪುನರ್ನಿಶಿ ॥ ೧೧೩

ಸಿಂಹದ್ವಾರೇ ಸ್ಥಿತಃ ಕೋऽತ್ರೇತ್ಯುಪರಿಷ್ಟಾಜ್ಜಗಾದ ಸಃ ।
ತಚ್ಛ್ರುತ್ವಾಹಂ ಸ್ಥಿತೋऽತ್ರೇತಿ ಸೋऽಪಿ ವೀರವರೋऽಭ್ಯಧಾತ್ ॥ ೧೧೪

ಅಹೋ ಅಯಂ ಮಹಾಸತ್ತ್ವಃ ಸುಮಹತ್ಪದಮರ್ಹತಿ ।
ಸಿಂಹದ್ವಾರಂ ನ ಯೋ ಮುಂಚತ್ಯಂಬುದೇ ವರ್ಷತೀದೃಶೇ ॥ ೧೧೫

ಇತಿ ಯಾವಚ್ಚ ಸ ಶ್ರುತ್ವಾ ವಿಚಿಂತಯತಿ ಭೂಮಿಭೃತ್ ।
ತಾವದ್ದೂರಾತ್ ಸಕರುಣಂ ರುದತೀಮಶೃಣೋತ್ ಸ್ತ್ರಿಯಮ್ ॥ ೧೧೬

ದುಃಖಿತೋ ಮೇ ನ ರಾಷ್ಟ್ರೇऽಸ್ತಿ ತದೇಷಾ ಕಾ ನು ರೋದತಿ ।
ಇತ್ಯಾಲೋಚ್ಯಾಬ್ರವೀದ್ರಾಜಾ ಸತಂ ವೀರವರಂ ತದಾ ॥ ೧೧೭

ಭೋ ವೀರವರ ಕಾಪಿ ಸ್ತ್ರೀ ದೂರೇ ರೋದಿತ್ಯಸೌ ಶೃಣು ।
ಕೈಷಾ ಕಿಂ ದುಃಖಮಸ್ಯಾಶ್ಚೇತ್ಯತ್ರ ಗತ್ವಾ ನಿರೂಪಯ ॥ ೧೧೮

೧೦೯. ಅದನ್ನು ಕೇಳಿ ಹಾಗೆಯೇ ಆಗಲೆಂದು ವೀರವರನು ಅಂಗೈಗಳನ್ನು ಕೊಡವಿಕೊಂಡು ಸಣ್ಣಕತ್ತಿಯನ್ನು ಕಟ್ಟಿಕೊಂಡು ಹೊರಡಲು ಪ್ರವೃತ್ತನಾದನು.

೧೧೦–೧೧೧. ಆಗ ಮಿಂಚುಗಳು ಜ್ವಲಿಸುತ್ತಿದ್ದುವು. ಧಾರಾಕಾರವಾದ ಮಳೆಯಿಂದ ಭೂಮ್ಯಾಕಾಶಗಳ ನಡುವಣ ಸ್ಥಳವು ಮುಚ್ಚಿಹೋಗಿತ್ತು. ಅಂತಹ ಸಮಯದಲ್ಲಿ ಹೊರಟಿದ್ದ ಅವನನ್ನು ನೋಡಿ ಕುತೂಹಲ ಹಾಗೂ ದಯೆಯಿಂದ ಕೂಡಿದ ರಾಜನು ಉಪ್ಪರಿಗೆಯಿಂದ ಕೆಳಗಿಳಿದು ಬಂದು ವೀರವರನ ಹಿಂದುಗಡೆ ಅವನಿಗೆ ಕಾಣಿಸದಂತೆ ಖಡ್ಗಪಾಣಿಯಾಗಿ ಹೊರಟನು.

೧೧೨. ರಾಜನು ಗುಪ್ತವಾಗಿ ಹಿಂಬಾಲಿಸಿ ಬರುತ್ತಿರಲು ವೀರವರನು ಅಳುವಿನ ಧ್ವನಿಯನ್ನು ಅನುಸರಿಸಿ ಹೋಗುತ್ತಾ ನಗರದಿಂದ ಹೊರಗೆ ಹೋಗಿ ಒಂದು ಸರಸ್ಸಿನ ಬಳಿ ಬಂದನು.

೧೧೩. "ಹಾ ! ನಾಥ! ಹಾ ! ಕೃಪಾಲೋ ! ಹಾ ! ಶೂರ ! ನಿನ್ನಿಂದ ತ್ಯಕ್ತಳಾಗಿ ನಾನು ಹೇಗೆ ತಾನೆ ವಾಸಮಾಡಲಿ ?" ಎಂದು ಆ ಸರಸ್ಸಿನ ಮಧ್ಯದಲ್ಲಿ ಅಳುತ್ತಿದ್ದ ಒಬ್ಬ ಸ್ತ್ರೀ ಅವನಿಗೆ ಕಂಡಳು.

೧೧೪. ""ನೀನು ಯಾರು ? ಯಾವನನ್ನು ಕುರಿತು ಶೋಕಿಸುತ್ತಿದ್ದೀಯೆ ?" ಎಂದು ಅವನು ಅವಳನ್ನು ಕೇಳಿದನು. ಅವಳು ಹೇಳಿದಳು. ""ಪುತ್ರ ! ವೀರವರ ! ನಾನೇ ಈ ಭೂಮಿ.

---

ತಚ್ಛ್ರುತ್ವಾ ಸ ತಥೇತ್ಯುಕ್ತ್ವಾ ಗಂತುಂ ಪ್ರವವೃತೇ ತತಃ ।
ಧುನ್ವನ್ ಕರತಲಾಂ ವೀರವರೋ ಬದ್ಧಾಸಿಧೇನುಕಃ ॥ ೧೦೯
ದೃಷ್ಟ್ವಾ ತಂ ಪ್ರಸ್ಥಿತಂ ಮೇಘೇ ಜ್ವಲದ್ವಿದ್ಯುತಿ ತಾದೃಶೇ ।
ಧಾರಾನಿಪಾತಸಂರುದ್ಧರೋದೋರಂಧ್ರೇ ಸಕೌತುಕಃ ॥ ೧೧೦
ಸಕೃಪಶ್ಚಾವತೀರ್ಯೈವ ಪ್ರಾಸಾದಾತ್ತಸ್ಯ ಪೃಷ್ಠತಃ ।
ಅಲಕ್ಷಿತಃ ಖಡ್ಗಪಾಣಿಃ ಪ್ರತಸ್ಥೇ ಸೋಽಪಿ ಭೂಮಿಪಃ ॥ ೧೧೧
ಸ ಚಾನುಸರ್ಪನ್ ರುದಿತಂ ಗುಪ್ತಾನ್ವಾಗತ ಭೂಪತಿಃ ।
ಗತ್ವಾ ಬಹಿಃ ಪುರಾದೇಕಂ ಪ್ರಾಪ ವೀರವರಃ ಸರಃ ॥ ೧೧೨
ಹಾ ನಾಥ ಹಾ ಕೃಪಾಲೋ ಹಾ ಶೂರ ತ್ಯಕ್ತಾ ತ್ವಯಾ ಕಥಮ್ ।
ವತ್ಸ್ಯಾಮೀತಿ ಚ ತನ್ಮಧ್ಯೇ ರುದತೀಂ ಸ್ತ್ರೀಂ ದದರ್ಶ ತಾಮ್ ॥ ೧೧೩
ಕಾ ತ್ವಂ ಶೋಚಸಿ ಕಂ ನಾಥಮಿತಿ ಪೃಷ್ಟಾ ಚ ತೇನ ಸಾ ।
ಉವಾಚ ಪುತ್ರ ಮಾಮೇತಾಂ ವಿದ್ಧಿ ವೀರವರ ಕ್ಷಿತಿಮ್ ॥ ೧೧೪

೧೧೫. ಭೂಮಿಯಾದ ನನಗೆ ಇಂದು ರಾಜನೂ ಧಾರ್ಮಿಕನೂ ಆದ ವಿಕ್ರಮತುಂಗನು ನಾಥನು. ಅವನಿಗೆ ಈ ಮೂರನೆಯ ದಿವಸ ನಿಶ್ಚಿತವಾಗಿ ಮರಣವು ಸಂಭವಿಸುವುದು.

೧೧೬. ಪುತ್ರನೇ ! ಮತ್ತೆ ಇಂತಹ ಪತಿಯು ನನಗೆ ಎಲ್ಲಿಂದ ಸಿಗುವನು ? ಆದುದರಿಂದ ಇವನ ಬಗ್ಗೆ ಹಾಗೂ ನನ್ನ ಬಗ್ಗೆ ಅತ್ಯಂತ ದುಃಖಿತಳಾಗಿ ಶೋಕಿಸುತ್ತಿದ್ದೇನೆ.

೧೧೭. ನಾನು ದಿವ್ಯದೃಷ್ಟಿಯಿಂದ ಮುಂದೆ ಆಗುವ ಶುಭಾಶುಭವನ್ನು ಸ್ವರ್ಗದಲ್ಲಿರುವ ದೇವ ಪುತ್ರಕನಾದ ಸುಪ್ರಭನು ನೋಡಿದಂತೆಯೇ ನೋಡಬಲ್ಲೆ.

೧೧೮. ದಿವ್ಯದೃಷ್ಟಿಯುಳ್ಳ ಆ ಸುಪ್ರಭನು ಪುಣ್ಯಕ್ಷಯದಿಂದ ಮುಂದೆ ಒಂದು ವಾರದ ನಂತರ ಸ್ವರ್ಗದಿಂದ ಚ್ಯುತನಾಗಿ ಹೆಣ್ಣುಹಂದಿಯ ಗರ್ಭದಲ್ಲಿ ತಾನು ಹುಟ್ಟುವುದನ್ನು ಕಂಡನು.

೧೧೯. ಅನಂತರ ಹೆಣ್ಣುಹಂದಿಯ ಗರ್ಭ ವಾಸದ ಕಷ್ಟವನ್ನು ವಿಶೇಷವಾಗಿ ಭಾವಿಸುತ್ತಾ ಆ ದೇವಪುತ್ರನು ತನ್ನ ಜೊತೆಗಿದ್ದ ಆ ದಿವ್ಯ ಭೋಗಗಳನ್ನು ಕುರಿತು ಶೋಕಿಸಿದನು.

೧೨೦. ""ಅಯ್ಯೋ ! ಸ್ವರ್ಗವೇ ! ಅಯ್ಯೋ, ಅಯ್ಯೋ ! ಅಪ್ಸರ ಸ್ತ್ರೀಯರೇ ! ಅಯ್ಯೋ ! ನಂದನವನದ ಲತಾಗೃಹಗಳೇ ! ಅಯ್ಯೋ ! ನಾನು ಹೇಗೆ ತಾನೆ ಹೆಣ್ಣು ಹಂದಿಯ ಗರ್ಭದಲ್ಲಿ ವಾಸಮಾಡುವೆನು ? ಅದಾದ ನಂತರ ಕೆಸರಿನಲ್ಲಿ ! (ಹೇಗೆ ವಾಸ ಮಾಡುವೆನು?)"

---

ತಸ್ಯಾ ವಿಕ್ರಮತುಂಗೋ ಮೇ ರಾಜಾ ನಾಥೋಽದ್ಯ ಧಾರ್ಮಿಕಃ ।
ಮೃತ್ಯುಶ್ಚ ಭವಿತಾ ತಸ್ಯ ತೃತೀಯೇಽಹನಿ ನಿಶ್ಚಿತಮ್ ॥ ೧೧೫
ಏತಾದೃಶಶ್ಚ ಭೂಯೋಽಪಿ ಪತಿಃ ಸ್ಯಾತ್ಪುತ್ರ ಮೇ ಕುತಃ ।
ತೇನೈತಮನುಶೋಚಾಮಿ ಸ್ವಾತ್ಮಾನಂ ಚ ಸುದುಃಖಿತಾ ॥ ೧೧೬
ಅಹಂ ಹಿ ಭಾವಿ ಪಶ್ಯಾಮಿ ದಿವ್ಯದೃಷ್ಟ್ಯಾ ಶುಭಾಶುಭಮ್ ।
ತ್ರಿದಿವಸ್ಥೋ ಯಥಾದ್ರಾಕ್ಷೀತ್ಸುಪ್ರಭೋ ದೇವಪುತ್ರಕಃ ॥ ೧೧೭
ಸ ಹಿ ಪುಣ್ಯಕ್ಷಯಾತ್ಸ್ವರ್ಗಾತ್ಪತನಂ ಭಾವಿ ದಿವ್ಯದೃಕ್ ।
ಸಪ್ತಾಹಾತ್ ಸೂಕರೀಗರ್ಭೇ ಸಂಭವಂ ಚೈಕ್ಷತಾತ್ಮನಃ ॥ ೧೧೮
ತತಃ ಸ ಸೂಕರೀಗರ್ಭವಾಸಕ್ಲೇಶಂ ವಿಭಾವಯನ್ ।
ದೇವಪುತ್ರೋಽನ್ವಶೋಚತ್ತಾನ್ ದಿವ್ಯಾನ್ ಭೋಗಾನ್ ಸಹಾತ್ಮನಾ ॥ ೧೧೯
ಹಾ ಸ್ವರ್ಗ ಹಾ ಹಾಪ್ಸರಸೋ ಹಾ ನಂದನ ಲತಾಗೃಹಾಃ ।
ಹಾ ವತ್ಸ್ಯಾಮಿ ಕಥಂ ಕ್ರೋಡೀಗರ್ಭೇ ತದನು ಕರ್ದಮೇ ॥ ೧೨೦

೧೨೧. ಎಂದು ಮುಂತಾಗಿ ಅವನು ಪ್ರಲಾಪಿಸುತ್ತಿರುವುದನ್ನು ಕೇಳಿ ದೇವೇಂದ್ರನು ಅವನ ಬಳಿಗೆ ಬಂದು ಪ್ರಶ್ನಿಸಿದನು. ಅವನೂ ಇಂದ್ರನಿಗೆ ತನ್ನ ದುಃಖದ ಕಾರಣವನ್ನು ಹೇಳಿದನು.

೧೨೨–೧೨೩. ಆಗ ಇಂದ್ರನು ಅವನನ್ನು ಕುರಿತು ಹೇಳಿದನು. ""ಈ ವಿಷಯದಲ್ಲಿ ಒಂದು ಉಪಾಯವಿದೆ ಕೇಳು. ಹೋಗಿ ಓಂ ನಮಃಶಿವಾಯ ಎಂದು ಜಪಿಸುತ್ತಾ ರಕ್ಷಕನಾದ ಆ ಈಶ್ವರನನ್ನು ಶರಣುಹೋಗಿ ಪಾಪವನ್ನು ಕಳೆದುಕೊಂಡು ಪುಣ್ಯವನ್ನು ಹೊಂದು. ಅದರಿಂದ ನೀನು ಹಂದಿ ಜನ್ಮವನ್ನು ಪಡೆಯುವುದಿಲ್ಲ ಮತ್ತು ಸ್ವರ್ಗದಿಂದ ಚ್ಯುತಿಯನ್ನೂ ಹೊಂದುವುದಿಲ್ಲ."

೧೨೪. ದೇವರಾಜನು ಹೇಳಿದಾಗ ಸುಪ್ರಭನು ಹಾಗೆಯೇ ಆಗಲಿ ಎಂದು ಹೇಳಿ ""ಓಂ ನಮಃಶಿವಾಯ" ಎಂದು ಶಂಭುವನ್ನು ರಕ್ಷಕನನ್ನಾಗಿ ಸ್ವೀಕರಿಸಿದನು.

೧೨೫ ಆರು ದಿನಗಳು ಅವನು ತನ್ಮಯನಾಗಿ ಧ್ಯಾನಿಸಲು ಶಿವನ ಅನುಗ್ರಹದಿಂದ ಹೆಣ್ಣುಹಂದಿಯ ಗರ್ಭದಲ್ಲಿ ಪತನವನ್ನು ಹೊಂದಲಿಲ್ಲ ಮಾತ್ರವಲ್ಲ, ಅವನು ಸ್ವರ್ಗಕ್ಕಿಂತಲೂ ಮೇಲೆ ಹೋದನು.

೧೨೬ ಏಳನೆಯ ದಿವಸ ಇಂದ್ರನು ಅವನನ್ನು ಸ್ವರ್ಗದಲ್ಲಿ ಕಾಣದೆ ಅವನು ಉತ್ತಮವಾದ ಬೇರೆ ಲೋಕಕ್ಕೆ ಹೋಗಿರುವುದನ್ನು ಕಂಡುಕೊಂಡನು.

---

ಇತ್ಯಾದಿ ವಿಲಪಂತಂ ತಂ ಶ್ರುತ್ವಾಭ್ಯೇತ್ಯ ಸುರಾಧಿಪಃ ।
ಪಪ್ರಚ್ಛ ಸೋಽಪಿ ಸ್ವಂ ತಸ್ಮೈ ದುಃಖಹೇತುಮವರ್ಣಯತ್ ॥ ೧೨೧
ತತಃ ಶಕ್ರೋ ಜಗಾದೈನಮಸ್ತ್ಯುಪಾಯೋಽತ್ರ ತೇ ಶೃಣು ।
ವ್ರಜೋಂನಮಃ ಶಿವಾಯೇತಿ ಜಪನ್ ಶರಣಮೀಶ್ವರಮ್ ॥ ೧೨೨
ತಂ ಗತ್ವಾ ಶರಣಂ ಹಿತ್ವಾ ಪಾಪಂ ಪುಣ್ಯಮವಾಪ್ಸ್ಯಸಿ ।
ಯೇನ ಪ್ರಾಪ್ಸ್ಯಸಿ ನ ಕ್ರೋಡಯೋನಿಂ ಸ್ವರ್ಗಾನ್ನ ಚ ಚ್ಯುತಿಮ್ ॥ ೧೨೩
ಇತ್ಯುಕ್ತೋ ದೇವರಾಜೇನ ಸುಪ್ರಭೋಽಥ ತಥೇತಿ ಸಃ ।
ಉಕ್ತ್ವಾ ನಮಃ ಶಿವಾಯೇತಿ ಶಂಭುಂ ಶರಣಮಗ್ರಹೀತ್ ॥ ೧೨೪
ತನ್ಮಯಃ ಸದಿನೈಃ ಷಡ್ಭಿಸ್ತತ್ಪ್ರಸಾದಾನ್ನ ಕೇವಲಮ್ ।
ನಿಕ್ಷಿಪ್ತಃ ಸೂಕರೀಗರ್ಭೇ ಯಾವತ್ ಸ್ವರ್ಗಾದುಪರ್ಯಗಾತ್ ॥ ೧೨೫
ಸಪ್ತಮೇಽಹ್ನಿ ಚ ತಂ ಸ್ವರ್ಗೇ ತತ್ರಾಪಶ್ಯನ್ ಶತಕ್ರತುಃ ।
ವೀಕ್ಷತೇ ಯಾವದಧಿಕಂ ಲೋಕಾಂತರಮಸೌ ಗತಃ ॥ ೧೨೬

೧೨೭ ಈ ರೀತಿಯಾಗಿ ಆ ಸುಪ್ರಭನು ಮುಂದೆ ಉಂಟಾಗುವ ಪಾಪವನ್ನು ಹೇಗೆ ನೋಡಿ ಶೋಕಿಸಿದನೋ ಹಾಗೆಯೇ ರಾಜನಿಗೆ ಮುಂದೆ ಆಗುವ ಮರಣವನ್ನು ನೋಡಿ ನಾನು ಶೋಕಿಸುತ್ತೇನೆ."

೧೨೮-೧೨೯. ಹೀಗೆ ಹೇಳಿದ ಭೂಮಿಯನ್ನು ಕುರಿತು ವೀರವರನು ಹೇಳಿದನು. ""ಅಮ್ಮ ! ಇಂದ್ರನ ಮಾತಿನಿಂದ ಸುಪ್ರಭನಿಗೆ ಹೇಗೆ ಉಪಾಯವು ತಿಳಿಯಿತೋ ಹಾಗೆಯೇ ಈ ರಾಜನ ರಕ್ಷಣೆಯ ಉಪಾಯವು ಇರುವುದಾದರೆ (ಅದನ್ನು) ಹೇಳು." ಹೀಗೆ ವೀರವರನು ಹೇಳಲು ಭೂಮಿಯು ಅವನನ್ನು ಕುರಿತು ಹೇಳಿದಳು.

೧೩೦. ""ಈ ವಿಷಯದಲ್ಲಿ ಒಂದೇ ಒಂದು ಉಪಾಯವಿದೆ. ಮತ್ತು ಅದನ್ನು ನೀನು ಮಾತ್ರ ಸಾಧಿಸಬಲ್ಲೆ" ಅದನ್ನು ಕೇಳಿದ ಮಾತ್ರಕ್ಕೇ ಹರ್ಷಗೊಂಡ ವೀರವರ ದ್ವಿಜನು ಹೇಳಿದನು.

೧೩೧. ""ದೇವಿ ! ಹಾಗಿದ್ದರೆ ಶೀಘ್ರವಾಗಿ ಹೇಳು. ಒಂದು ವೇಳೆ ಪ್ರಭುವಿಗೆ ನನ್ನ ಪ್ರಾಣಗಳಿಂದಾಗಲಿ ಪುತ್ರ, ಹೆಂಡತಿಯರಿಂದಾಗಲಿ ಶ್ರೇಯಸ್ಸು ಆಗುವುದಾದರೆ ನನ್ನ ಜನ್ಮವು ಸಫಲವಾಗುತ್ತದೆ."

---

ಇತ್ಥಂ ಶುಶೋಚ ಸ ಯಥಾ ದೃಷ್ಟ್ವಾಘಂ ಭಾವಿ ಸುಪ್ರಭಃ ।
ತಥೈವ ಭಾವಿನಂ ಮೃತ್ಯುಂ ದೃಷ್ಟ್ವಾ ಶೋಚಾಮಿ ಭೂಭೃತಃ ॥ ೧೨೭
ಏವಮುಕ್ತವತೀಂ ಭೂಮಿಂ ತಾಂ ಸ ವೀರವರೋಽಬ್ರವೀತ್ ।
ಯಥಾಂಬ ಸುಪ್ರಭಸ್ಯಾಭೂದುಪಾಯಃ ಶಕ್ರವಾಕ್ಯತಃ ॥ ೧೨೮
ತಥಾ ಯದ್ಯಸ್ತಿ ರಾಜ್ಞೋಽಸ್ಯ ರಕ್ಷೋಪಾಯಸ್ತದುಚ್ಯತಾಮ್ ।
ಇತಿ ವೀರವರೇಣೋಕ್ತೇ ಪೃಥಿವೀ ತಮುವಾಚ ಸಾ ॥ ೧೨೯
ಏಕ ಏವಾಸ್ತ್ಯುಪಾಯೋಽತ್ರ ಸ್ವಾಧೀನಃ ಸ ತವೈವ ಚ ।
ತಚ್ಛ್ರುತ್ವೈವ ಚ ಸೋಽವಾದೀದ್ಧೃಷ್ಟೋ ವೀರವರೋ ದ್ವಿಜಃ ॥ ೧೩೦
ತರ್ಹಿ ಬ್ರೂಹಿ ದ್ರುತಂ ದೇವಿ ಯದಿ ಶ್ರೇಯೋ ಭವೇತ್ಪ್ರಭೋಃ ।
ಪ್ರಾಣೈರ್ಮೇ ಪುತ್ರದಾರೈರ್ವಾ ತಜ್ಜನ್ಮ ಸಫಲಂ ಮಮ ॥ ೧೩೧

೧೩೨–೧೩೩. ಹೀಗೆ ಹೇಳಿದ ವೀರವರನನ್ನು ಕುರಿತು ಭೂಮಿಯು ಹೇಳಿದಳು. "'ಇಲ್ಲಿ ರಾಜಗೃಹದ ಬಳಿ ಇರುವ ಈ ಚಂಡಿಕಾದೇವಿಗೆ ಪುತ್ರನಾದ ಸತ್ತ್ವವರನನ್ನು ನೀನು ಕಾಣಿಕೆಯಾಗಿ ಒಪ್ಪಿಸುವುದಾದರೆ ಆ ರಾಜನು ಬದುಕುತ್ತಾನೆ. ಮತ್ತೆ ಬೇರೆ ಉಪಾಯವಿಲ್ಲ."

೧೩೪. ಭೂಮಿಯ ಈ ಮಾತನ್ನು ಕೇಳಿ ಧೀರನಾದ ಆ ವೀರವರನು "ದೇವಿ ! ಹೋಗುತ್ತೇನೆ ಇದನ್ನು ಇಂದೇ ಮಾಡುತ್ತೇನೆ" ಎಂದು ಹೇಳಿದನು.

೧೩೫ "'ನಿನ್ನಂತಹ ಸ್ವಾಮಿಹಿತಕಾರಿಯು ಬೇರೆ ಯಾರಿದ್ದಾರೆ ? ನಿನಗೆ ಮಂಗಳವಾಗಲಿ ಹೋಗು" ಎಂದು ಭೂಮಿಯು ಹೇಳಿ ಅಂತರ್ಧಾನವಾದಳು. ಹಿಂಬಾಲಿಸಿ ಬಂದಿದ್ದ ರಾಜನು ಅದೆಲ್ಲವನ್ನು ಕೇಳಿಸಿಕೊಂಡನು.

೧೩೬ ಅನಂತರ ವೀರವರನು ಶೀಘ್ರವಾಗಿ ತನ್ನ ಮನೆಗೆ ಹೊರಟನು. ಆಗ ವಿಕ್ರಮನು ಗುಪ್ತವಾಗಿ ಅವನನ್ನು ಹಿಂಬಾಲಿಸಿದನು.

೧೩೭ ಅಲ್ಲಿ ವೀರವರನು ತನ್ನ ಹೆಂಡತಿ ಧರ್ಮವತಿಯನ್ನು "'ಭೂಮಿಯ ಮಾತಿನಂತೆ ರಾಜನಿಗಾಗಿ ನನ್ನ ಪುತ್ರನನ್ನು ಕಾಣಿಕೆಯಾಗಿ ಕೊಡಬೇಕು" ಎಂದು ಹೇಳಿದನು.

೧೩೮. ಅದನ್ನು ಕೇಳಿ ಅವಳು "'ಅವಶ್ಯವಾಗಿ ಸ್ವಾಮಿಗೆ ಹಿತವಾದುದನ್ನು ಮಾಡಬೇಕು. ಆದುದರಿಂದ ನೀನು ಈಗ ಪುತ್ರನನ್ನು ಎಚ್ಚರಗೊಳಿಸಿ ತಿಳಿಸು" ಎಂದು ಹೇಳಿದಳು.

---

ಇತ್ಯುಕ್ತವಂತಮವದತ್ಸಾ ತಂ ವೀರವರಂ ಕ್ಷಿತಿಃ ।
ಅಸ್ತ್ಯತ್ರ ಚಂಡಿಕಾದೇವೀ ಯೈಷಾ ರಾಜಕುಲಾಂತಿಕೇ ॥ ೧೩೨
ತಸ್ಯೈ ಸತ್ತ್ವವರಂ ಪುತ್ರಮುಪಹಾರೀಕರೋಷಿ ಚೇತ್ ।
ತತೋ ಜೀವತಿ ರಾಜಾಸೌ ನಾಸ್ತ್ಯುಪಾಯೋಽಪರಃ ಪುನಃ ॥ ೧೩೩
ಶ್ರುತ್ವೈತದ್ವಸುಧಾವಾಕ್ಯಂ ಧೀರೋ ವೀರವರಸ್ತದಾ ।
ಯಾಮಿ ದೇವಿ ಕರೋಮ್ಯೇತದದ್ಯೈವೇತ್ಯುವಾಚ ಸಃ ॥ ೧೩೪
ಕೋಽನ್ಯಃ ಸ್ವಾಮಿಹಿತಸ್ತ್ವಾದೃಗ್ಭದ್ರಂ ತೇಽಸ್ತು ವ್ರಜೇತಿ ಭೂಃ ।
ಉಕ್ತ್ವಾ ತಿರೋಽಭೂತ್ತರ್ಚ ಚ ರಾಜಾ ಸೋಽನ್ವಾಗತೋಽಶೃಣೋತ್ ॥
೧೩೫
ತತೋ ವಿಕ್ರಮತುಂಗೇಽಸ್ಮಿನ್ ರಾಜ್ಞಿ ಚ್ಛನ್ನೇಽನುಗಚ್ಛತಿ ।
ದ್ರುತಂ ವೀರವರಸ್ತಸ್ಯಾಂ ರಾತ್ರೌ ಸ ಸ್ವಗೃಹಂ ಯಯೌ ॥ ೧೩೬
ತತ್ರ ಪ್ರಬೋಧ್ಯ ಭಾರ್ಯಾಯೈ ಧರ್ಮವತ್ಯೈ ಶಶಂಸ ಸಃ ।
ಸ್ವಪುತ್ರಮುಪಹರ್ತವ್ಯಂ ರಾಜಾರ್ಥೇ ವಚನಾದ್ಭುವಃ ॥ ೧೩೭
ಸಾ ತಚ್ಛ್ರುತ್ವಾಬ್ರವೀತ್ಕಾರ್ಯಮವಶ್ಯಂ ಸ್ವಾಮಿನೋ ಹಿತಮ್ ।
ತತ್ಪುತ್ರಶ್ಚಾದ್ಯ ಭವತಾ ಪ್ರತಿಬೋಧ್ಯೋಽಚ್ಯತಾಮಿತಿ ॥ ೧೩೮

೧೫೯. ಅನಂತರ ಪುತ್ರನನ್ನು ಎಚ್ಚರಗೊಳಿಸಿ ವೀರವರನು ಆ ಬಾಲಕನಿಗೆ ಭೂಮಿಯು ರಾಜನಿಗಾಗಿ ಹೇಳಿದ ಕಾಣಿಕೆಯ ನಿರ್ಧಾರ ಹೇಳಿದನು.

೧೬೦. ಅದನ್ನು ಕೇಳಿ ಸತ್ತ್ವವರನೆಂಬ ಯಥಾರ್ಥವಾದ ಹೆಸರುಳ್ಳ ಆ ಬಾಲಕನು ಹೇಳಿದನು. "ತಂದೆಯೇ ! ಪ್ರಭುವಿನ ಕಾರ್ಯಕ್ಕಾಗಿ ನನ್ನ ಪ್ರಾಣ ಉಪಯುಕ್ತವಾಗುವುದರಿಂದ ನಾನು ಪುಣ್ಯವಂತನಲ್ಲವೇನು !

೧೬೧. ನಾನು ತಿಂದಿರುವ ಅವನ ಅನ್ನದ ಋಣವನ್ನು ನಾನು ಕೂಡ ತೀರಿಸಬೇಕು. ಆದುದರಿಂದ ನನ್ನನ್ನು ಒಯ್ದು ಆ ರಾಜನಿಗಾಗಿ ದೇವಿಗೆ ಕಾಣಿಕೆಯನ್ನಾಗಿ ಅರ್ಪಿಸು."

೧೬೨. ಹೀಗೆ ಹೇಳಿದ ಶಿಶುವಾದ ಆ ಸತ್ತ್ವವರನ್ನು ಕುರಿತು ವೀರವರನು 'ನಿಜವಾಗಿಯೂ ನೀನು ನನ್ನ ಪುತ್ರನೇ ಸರಿ' ಎಂದು ನಿಶ್ಚಿಂತೆಯಿಂದ ಹೇಳಿದನು.

೧೬೩. ಇದನ್ನು ಕೇಳಿ ಹೊರಗಡೆ ಇದ್ದ ರಾಜ ವಿಕ್ರಮತುಂಗನು "ಅಹೋ ! ಇವರೆಲ್ಲರೂ ಸಮಾನವಾದ ಅಂತಃಸತ್ತ್ವವುಳ್ಳವರು" ಎಂದು ಚಿಂತಿಸಿದನು.

---

ತತಃ ಪ್ರಬೋಧ್ಯ ಬಾಲಾಯ ತಸ್ಮೈ ವೀರವರೇಣ ತತ್ ।
ಊಚೇ ತದುಪಹಾರಾಂತಂ ರಾಜಾರ್ಥೇ ಯದ್ಭುವೋದಿತಮ್ ॥ ೧೫೯
ತಚ್ಛ್ರುತ್ವಾ ಸ ಯಥಾರ್ಥಾಖ್ಯೋ ಬಾಲಃ ಸತ್ತ್ವವರೋಽಭ್ಯಧಾತ್ ।
ಪ್ರಭುಕಾರ್ಯೋಪಯುಕ್ತಾಸುಃ ಪುಣ್ಯವಾಂಸ್ತಾತ ನಾಸ್ಮಿ ಕಿಮ್ ॥ ೧೬೦
ಭುಕ್ತಂ ಮಯಾ ತದನ್ನಂ ಯಚ್ಛೋಧನೀಯಂ ಮಯಾಪಿ ತತ್ ।
ತನ್ನೀತ್ವಾ ತತ್ಕೃತೇ ದೇವ್ಯಾ ಉಪಹಾರೀಕುರುಷ್ವ ಮಾಮ್ ॥ ೧೬೧
ಇತ್ಯೂಚಿವಾಂಸಂ ತಂ ಸತ್ತ್ವವರಂ ವೀರವರಃ ಶಿಶುಮ್ ।
ಸತ್ಯಂ ಭವಸಿ ಮಜ್ಜಾತ ಇತ್ಯವೋಚದವಿಕ್ಲವಮ್ ॥ ೧೬೨
ಏತದ್ವಿಕ್ರಮತುಂಗಃ ಸ ರಾಜಾ ಶ್ರುತ್ವಾ ಬಹಿಃ ಸ್ಥಿತಃ ।
ಅಚಿಂತಯದಹೋ ಸರ್ವೇ ಸಮಸತ್ತ್ವಾ ಅಮೀ ಇತಿ ॥ ೧೬೩

೧೪೪–೧೪೫. ಅನಂತರ ವೀರವರನು ಹೆಗಲಿನ ಮೇಲೆ ಮಗನಾದ ಸತ್ತ್ವವರನನ್ನು ಕುಳ್ಳಿರಿಸಿಕೊಂಡನು. ಹೆಂಡತಿಯಾದ ಧರ್ಮವತಿಯು ತನ್ನ ಬೆನ್ನಿನ ಮೇಲೆ ಮಗಳಾದ ವೀರವತಿಯನ್ನು ಹೊತ್ತುಕೊಂಡಳು. ಅವರಿಬ್ಬರೂ ರಾತ್ರಿಯಲ್ಲಿ ಚಂಡಿಕಾಮಂದಿರಕ್ಕೆ ಹೋದರು. ರಾಜನಾದ ವಿಕ್ರಮತುಂಗನು ಗುಪ್ತವಾಗಿ ಅವರಿಬ್ಬರ ಹಿಂದುಗಡೆ ಹೋದನು.

೧೪೬. ಅಲ್ಲಿ ವೀರವರನು ಸತ್ತ್ವವರನನ್ನು ಹೆಗಲಿನಿಂದ ಇಳಿಸಿದನು. ಧೈರ್ಯರಾಶಿಯಾದ ಬಾಲಕನೂ ಆ ದೇವಿಗೆ ನಮಸ್ಕಾರ ಮಾಡಿ ವಿಜ್ಞಾಪಿಸಿದನು.

೧೪೭. "'ದೇವಿ ! ನನ್ನ ಶಿರಸ್ಸಿನ ಕಾಣಿಕೆಯಿಂದ ನಮ್ಮ ಪ್ರಭುವಾದ ರಾಜಾ ವಿಕ್ರಮತುಂಗನು ಜೀವಿಸಲಿ. ಮತ್ತು ಇಲ್ಲಿ ನಿಷ್ಕಂಟಕವಾಗಿ ಭೂಮಿಯನ್ನು ಆಳಲಿ."

೧೪೮–೧೪೯. ಹೀಗೆ ಹೇಳಿದ ಮಗನ ಕೈಯನ್ನು ಹಿಡಿದೆಳೆದು "'ಮಗನೇ ! ಒಳ್ಳೆಯದು (ಹೇಳಿದೆ)" ಎಂದು ಹೇಳಿ ವೀರವರನು (ಮಗನ) ಶಿರಸ್ಸನ್ನು ಕತ್ತರಿಸಿ "'ರಾಜನಿಗೆ ಶ್ರೇಯಸ್ಸು ಉಂಟಾಗಲಿ" ಎಂದು ಹೇಳುತ್ತಾ ಚಂಡಿಕಾದೇವಿಗೆ ಸಮರ್ಪಿಸಿದನು. ಅಹೋ ! ಸ್ವಾಮಿ ಭಕ್ತರಾದವರಿಗೆ ಪುತ್ರನಲ್ಲಾಗಲಿ (ತನ್ನ) ಶರೀರದಲ್ಲಾಗಲಿ ಆಸೆಯಿರುವುದಿಲ್ಲ.

೧೫೦. ಆಗ "'ವೀರವರನೇ ! ನೀನು ಮಗನ ಪ್ರಾಣಗಳನ್ನೇ ಕೊಟ್ಟು ಸ್ವಾಮಿಗೆ ಜೀವಿತವನ್ನು ಕೊಟ್ಟಿರುವೆ" ಎಂದು ಆಕಾಶದಿಂದ ವಾಣಿಯು ಕೇಳಿಸಿತು.

---

ತತೋ ವೀರವರಃ ಸ್ಕಂಧೇ ಸುತಂ ಸತ್ತ್ವವರಂ ಸ ತಮ್ ।
ಭಾರ್ಯಾ ಧರ್ಮವತೀ ಚಾಸ್ಯ ಪೃಷ್ಠೇ ವೀರವತೀಂ ಸುತಾಮ್ ॥ ೧೪೪
ಗೃಹೀತ್ವಾ ಜಗ್ಮತುಸ್ತೌ ದ್ವೌ ರಾತ್ರೌ ತಚ್ಚಂಡಿಕಾಗೃಹಮ್ ।
ರಾಜಾ ವಿಕ್ರಮತುಂಗಶ್ಚ ಪಶ್ಚಾಚ್ಛನ್ನೋ ಯಯೌ ತಯೋಃ ॥ ೧೪೫
ತತ್ರಾವತಾರಿತಃ ಸ್ಕಂಧಾತ್ ಪಿತ್ರಾ ಸತ್ತ್ವವರೋಽಥ ಸಃ ।
ಬಾಲೋಽಪಿ ಧೈರ್ಯರಾಶಿಸ್ತಾಂ ನತ್ವಾ ದೇವೀಂ ವ್ಯಜಿಜ್ಞಪತ್ ॥ ೧೪೬
ದೇವಿ ಮೂರ್ಧೋಪಹಾರೇಣ ಮಮ ಜೀವತು ನಃ ಪ್ರಭುಃ ।
ನೃಪೋ ವಿಕ್ರಮತುಂಗೋಽತ್ರ ಶಾಸ್ತು ಚ ಕ್ಷ್ಮಾಮಕಂಟಕಾಮ್ ॥ ೧೪೭
ಏವಮುಕ್ತವತಸ್ತಸ್ಯ ಸಾಧು ಪುತ್ರೇತ್ಯುದೀರ್ಯ ಸಃ ।
ಕೃಷ್ಟ್ವಾ ಕರತಲಾಂ ಸೂನೋಶ್ಛಿತ್ವಾ ವೀರವರಃ ಶಿರಃ ॥ ೧೪೮
ಪ್ರದದೌ ಚಂಡಿಕಾದೇವ್ಯೈ ರಾಜ್ಞಃ ಶ್ರೇಯೋಽಸ್ತ್ವಿತಿ ಬ್ರುವನ್ ।
ನಾಸ್ತ್ಯಹೋ ಸ್ವಾಮಿಭಕ್ತಾನಾಂ ಪುತ್ರೇ ವಾತ್ಮನಿ ವಾ ಸ್ಪೃಹಾ ॥ ೧೪೯
ಸಾಧು ವೀರವರ ಪ್ರತ್ತಂ ಸ್ವಾಮಿನೋ ಜೀವಿತಂ ತ್ವಯಾ ।
ಅಪಿ ಪ್ರಾಣೈಃ ಸುತಸ್ಯೇತಿ ಶುಶ್ರುವೇ ವಾಕ್ತದಾ ದಿವಃ ॥ ೧೫೦

೧೫೧–೧೫೨. ಅದನ್ನು ಕೇಳಿ ರಾಜನು ಅತ್ಯಂತ ಆಶ್ಚರ್ಯಗೊಂಡಾಗ ಬಾಲೆಯಾದ ವೀರವರನ ಪುತ್ರಿ ವೀರವತಿಯು ಮೃತನಾದ ಸೋದರನ ಶಿರಸ್ಸನ್ನು ಆಲಿಂಗಿಸಿ, ಪರಿಚುಂಬಿಸಿ "ಹಾ ಸೋದರನೇ !" ಎಂದು ಗೋಳಿಟ್ಟು ಹೃದಯಾಘಾತದಿಂದ ಮೃತಳಾದಳು.

೧೫೩. ಮಗಳೂ ಸತ್ತಿದ್ದನ್ನು ನೋಡಿ ಹೆಂಡತಿಯಾದ ಧರ್ಮವತಿಯು ವೀರವರನನ್ನು ಕುರಿತು ಅಂಜಲಿಯನ್ನು ಜೋಡಿಸಿ ದೈನ್ಯದಿಂದ ಹೇಳಿದಳು.

೧೫೪. ""ರಾಜನಿಗೆ ಮಂಗಳವನ್ನು ಮಾಡಿಯಾಯಿತು. ಆದುದರಿಂದ ನನಗೆ ಅನುಮತಿಯನ್ನು ಕೊಡು. ನಾನೂ ಮೃತರಾದ ಇಬ್ಬರು ಮಕ್ಕಳನ್ನೂ ತೆಗೆದುಕೊಂಡು ಅಗ್ನಿಯನ್ನು ಪ್ರವೇಶಿಸುತ್ತೇನೆ.

೧೫೫. ಇನ್ನೂ ತಿಳಿವಳಿಕೆಯಿಲ್ಲದ ಈ ಬಾಲೆಯೂ ಕೂಡ ಈ ರೀತಿ ಸೋದರನ ಶೋಕದಿಂದ ಮೃತಳಾದಳು. ನನ್ನ ಇಬ್ಬರು ಮಕ್ಕಳೂ ನಾಶ ಹೊಂದಿದುಂತಾಯಿತು. ಈಗ ನನಗೆ ಜೀವಿತದಿಂದ (ಆಗಬೇಕಾದ) ವೈಭವವೇನು ?"

೧೫೬–೧೫೭. ಹೀಗೆ ನಿಶ್ಚಯಿಸಿ ಪ್ರಲಪಿಸುತ್ತಾ ಇದ್ದ ಅವಳನ್ನು ಕುರಿತು ವೀರವರನು ಹೇಳಿದನು. "'ದೋಷರಹಿತಳೇ ! ನಾನು ಏನು ಹೇಳಲಿ ? ಹೀಗೆ ಮಾಡು. ಈಗ ಮಕ್ಕಳ ಶೋಕದಿಂದ ತುಂಬಿದ ಈ ಸಂಸಾರದಲ್ಲಿ ನಿನಗೆ ಸುಖವಿಲ್ಲವಷ್ಟೆ. ಆದುದರಿಂದ ನಾನು ನಿನಗೆ ಚಿತೆಯನ್ನು ಏರ್ಪಡಿಸುವವರೆಗೆ ಕಾದಿರು."

---

ತಚ್ಚಾತಿವಿಸ್ಮಿತೇ ರಾಜ್ಞಿ ಸರ್ವಂ ಪಶ್ಯತಿ ಶೃಣ್ವತಿ ।
ಬಾಲಾ ವೀರವತೀ ತಸ್ಯ ಭ್ರಾತುರ್ವೀರವರಾತ್ಮಜಾ ॥ ೧೫೧
ಹತಸ್ಯೋಪೇತ್ಯ ಮೂರ್ಧಾನಮಾಶ್ಲಿಷ್ಯ ಪರಿಚುಂಬ್ಯ ಚ ।
ಹಾ ಭ್ರಾತರಿತಿ ಚಾಕ್ರುಧ್ಯ ಹೃತ್ಸ್ಫೋಟೇನ ವ್ಯಪಾದಿ ಸಾ ॥ ೧೫೨
ದೃಷ್ಟ್ವಾ ಸುತಾಮಪಿ ಮೃತಾಂ ಸಾ ತಂ ವೀರವರಂ ತದಾ ।
ಭಾರ್ಯಾ ಧರ್ಮವತೀ ದೈನ್ಯೇನಾಬ್ರವೀದ್ರಚಿತಾಂಜಲಿಃ ॥ ೧೫೩
ರಾಜ್ಞಃ ಶಿವಂ ಕೃತಂ ತಾವತ್ತದನುಜ್ಞಾಂ ಪ್ರಯಚ್ಛ ಮೇ ।
ಯಾವದಾತ್ತಮೃತಾಪತ್ಯದ್ವಯಾಗ್ನಿಂ ಪ್ರವಿಶಾಮ್ಯಹಮ್ ॥ ೧೫೪
ಬಾಲಾ ಯತ್ರೇಯಮಜ್ಞಾನಾಪ್ಯೇವಂ ಭ್ರಾತೃಶುಚಾ ಮೃತಾ।
ಕಾ ಶೋಭಾ ಜೀವಿತೇನಾತ್ರ ನಷ್ಟೇಽಪತ್ಯದ್ವಯೇಽಪಿ ಮೇ ॥ ೧೫೫
ನಿಶ್ಚಯೇನೇತಿ ಜಲ್ಪಂತೀಂ ತಾಂ ಸ ವೀರವರೋಽಬ್ರವೀತ್ ।
ಏವಂ ಕುರುಷ್ವ ಕಿಂ ವಚ್ಮಿ ನಹೀದಾನೀಮನಿಂದಿತೇ ॥ ೧೫೬
ಅಪತ್ಯಶೋಕೈಕಮಯೇ ಸಂಸಾರೇಽಸ್ತಿ ಸುಖಂ ತವ ।
ತತ್ಪ್ರತೀಕ್ಷಸ್ವ ಯಾವತ್ತೇ ರಚಯಾಮಿ ಚಿತಾಮಹಮ್ ॥ ೧೫೭

೧೫೮. ಹೀಗೆ ಹೇಳಿ ಅಲ್ಲಿ ಇದ್ದ ದೇವೀಕ್ಷೇತ್ರವನ್ನು ನಿರ್ಮಿಸುವ ಕಟ್ಟಿಗೆಗಳನ್ನು ಇಟ್ಟು ಅವುಗಳನ್ನು ಮಕ್ಕಳ ಶವಗಳನ್ನು ಇಟ್ಟಿರುವ ದೀಪದ ಅಗ್ನಿಯಿಂದ ಉರಿಸಿ ಚಿತೆಯನ್ನು ತಯಾರಿಸಿದನು.

೧೫೯–೧೬೦. ಅನಂತರ ಸಾಧ್ವಿಯಾದ ಧರ್ಮವತಿಯು ವೀರವರನ ಪಾದಗಳಿಗೆ ನಮಸ್ಕಾರ ಮಾಡಿ ""ಆರ್ಯಪುತ್ರ ! ಜನ್ಮಾಂತರದಲ್ಲಿಯೂ ನೀನು ನನಗೆ ಪತಿಯಾಗು. ರಾಜನಿಗೆ ಮಂಗಳವುಂಟಾಗಲಿ !" ಎಂದು ಹೇಳಿ ಜ್ವಾಲಾರೂಪಜಟೆಗಳಿಂದ ಕೂಡಿರುವ ಆ ಚಿತಾಗ್ನಿಯಲ್ಲಿ ಶೀತಲವಾದ ಮಡುವಿನಲ್ಲಿ ಬೀಳುವಂತೆ ಅನಾಯಾಸವಾಗಿ ಬಿದ್ದಳು.

೧೬೧. ಗುಪ್ತವಾಗಿದ್ದ ರಾಜ ವಿಕ್ರಮತುಂಗನು ಅದನ್ನು ನೋಡಿ ""ಇವರ ಋಣವನ್ನು ನಾನು ಹೇಗೆ ತೀರಿಸಲಿ ?" ಎಂದು ಚಿಂತೆಯಿಂದ ಮಂಕಾದನು.

೧೬೨. ಅನಂತರ ವೀರವರನೂ ಧೀರಚಿತ್ತನಾಗಿ ಚಿಂತಿಸಿದನು. ಏಕೆಂದರೆ ಸಾಕ್ಷಾತ್ತಾಗಿ ದಿವ್ಯವಾಣಿಯೇ ಕೇಳಿಸಿದ್ದು ನನ್ನ ಸ್ವಾಮಿ ಕಾರ್ಯವು ನೆರವೇರಿತು.

---

ಇತ್ಯುಕ್ತ್ವಾತ್ರ ಸ್ಥಿತೈರ್ದೇವೀಕ್ಷೇತ್ರನಿರ್ಮಾಣದಾರುಭಿಃ ।
ನ್ಯಸ್ತಾಪತ್ಯಶವಾಂ ಚಕ್ರೇ ದೀಪಾಗ್ನಿಜ್ವಲಿತಾಂ ಚಿತಾಮ್ ॥ ೧೫೮
ತತೋ ಧರ್ಮವತೀ ಭಾರ್ಯಾ ಪಾದೌ ತಸ್ಯ ಪ್ರಣಮ್ಯ ಸಾ ।
ಜನ್ಮಾಂತರೇಽಪಿ ಮೇ ಭೂಯಾದಾರ್ಯಪುತ್ರ ಪತಿರ್ಭವಾನ್ ॥ ೧೫೯
ಶಿವಂ ರಾಜ್ಞೋಽಸ್ತು ಚೇತ್ಯುಕ್ತ್ವಾ ಸಾಧ್ವೀ ತಸ್ಮಿಂಶ್ಚಿತಾನಲೇ ।
ಜ್ವಾಲಾಜಟಾಲೇ ನ್ಯಪತಚ್ಛೀತಲಹ್ರದಲೀಲಯಾ ॥ ೧೬೦
ತತ್ರ ವಿಕ್ರಮತುಂಗಶ್ಚ ದೃಷ್ಟ್ವಾ ಗುಪ್ತಸ್ಥಿತೋ ನೃಪಃ ।
ಕೇನೈಷಾಮನೃಣೋಽಹಂ ಸ್ಯಾಮಿತ್ಯಾಸೀದ್ಧ್ಯಾನಮೋಹಿತಃ ॥ ೧೬೧
ತತೋ ವೀರವರಃ ಸೋಽಪಿ ಧೀರಚೇತಾ ವ್ಯಚಿಂತಯತ್ ।
ಸಂಪನ್ನಂ ಸ್ವಾಮಿಕಾರ್ಯಂ ಮೇ ಸಾಕ್ಷಾದ್ದಿವ್ಯಾ ಹಿ ವಾಕ್ ಶ್ರುತಾ ॥ ೧೬೨

೧೬೩-೧೬೪. "ಪ್ರಭುವಿನ ಅನ್ನ ತಿಂದ ಋಣವು ತೀರಿತು. ಆದುದರಿಂದ ಹಾಗೆ ನೋಡಿದರೆ ಈಗ ನಾನು ಇಷ್ಟವಾದುದೆಲ್ಲವನ್ನೂ ವ್ಯಯ ಮಾಡಿ ಕುಟುಂಬವನ್ನು ಭರಿಸಬೇಕು. ಕೇವಲ ನನ್ನೊಬ್ಬನ ಹೊಟ್ಟೆ ಹೊರೆಯುವಿಕೆಯಿಂದ ಜೀವಿತಕ್ಕೆ ಬೆಲೆಯಿಲ್ಲ. ಆದುದರಿಂದ ನನ್ನನ್ನೇ ಕಾಣಿಕೆಯಾಗಿ ನೀಡಿ ಈ ಅಂಬಿಕೆಯನ್ನು ನಾನು ಏಕೆ ಅರ್ಚಿಸಬಾರದು ?"

೧೬೫. ಹೀಗೆ (ಧೈರ್ಯಶಾಲಿಯಾದ) ಆ ವೀರವರನು ಸಂಕಲ್ಪಮಾಡಿ ವರದಳಾದ ಚಂಡಿಕಾ ದೇವಿಯನ್ನು ಮೊದಲು ಸ್ತೋತ್ರದಿಂದ ಉಪಸ್ಥಾನ ಮಾಡಿದನು.

೧೬೬ "ಪ್ರಣತರಾದವರಿಗೆ ಅಭಯವನ್ನು ನೀಡುವವಳೇ ! ಮಹೇಶ್ವರಿ ! ನಿನಗೆ ನಮಸ್ಕಾರ. ಸಂಸಾರವೆಂಬ ಕೆಸರಿನಲ್ಲಿ ಮುಳುಗಿ ಬಿದ್ದಿರುವ ಹಾಗೂ ನಿನಗೆ ಶರಣಾಗತನಾಗಿರುವ ನನ್ನನ್ನು ಉದ್ಧರಿಸು.

೧೬೭ ನೀನು ಪ್ರಾಣಿಗಳ ಪ್ರಾಣಶಕ್ತಿಯು. ನಿನ್ನಿಂದ ಈ ಜಗತ್ತು ಚಲಿಸುತ್ತದೆ. ಸೃಷ್ಟಿಯ ಮೊದಲಲ್ಲಿ ಸ್ವಯಂಭೂತಳಾದ ನಿನ್ನನ್ನು ಶಂಭುವು ಸ್ವಯಂ ನೋಡಿದನು.

---

ಭುಕ್ತಾನ್ನಪಿಂಡಃ ಸಂಶುದ್ಧಃ ಪ್ರಭೋಸ್ತದಧುನಾ ಮಯಾ ।
ಸರ್ವಮಿಷ್ಟಂ ವ್ಯಯೀಕೃತ್ಯ ಭರಣೀಯಂ ಕುಟುಂಬಕಮ್ ॥ ೧೬೩
ಏಕಸ್ಯಾತ್ಮಂಭರಿತ್ವೇನ ನ ಚಕಾಸ್ತ್ಯೇವ ಜೀವಿತಮ್ ।
ತತ್ಕಿಂ ನಾತ್ಮೋಪಹಾರೇಣಾಪ್ಯರ್ಚಯಾಮ್ಯಂಬಿಕಾಮಿಮಾಮ್ ॥ ೧೬೪
ಇತಿ ವೀರವರಃ ಸತ್ತ್ವನಿಷ್ಠಃ ಸಂಕಲ್ಪ್ಯ ಚಂಡಿಕಾಮ್ ।
ದೇವೀಂ ತಾಂ ವರದಾಂ ಪೂರ್ವಂ ಸ ಸ್ತೋತ್ರೇಣೋಪತಸ್ಥಿವಾನ್ ॥
೧೬೫

ಮಹೇಶ್ವರಿ ನಮಸ್ತುಭ್ಯಂ ಪ್ರಣತಾಭಯದಾಯಿನಿ ।
ಸಂಸಾರಪಂಕಮಗ್ನಂ ಮಾಂ ಶರಣಾಗತಮುದ್ಧರ ॥ ೧೬೬
ತ್ವಂ ಪ್ರಾಣಶಕ್ತಿರ್ಭೂತಾನಾಂ ತ್ವಯೇದಂ ಚೇಷ್ಟತೇ ಜಗತ್ ।
ಸೃಷ್ಟೇರಾದೌ ಸ್ವಸಂಭೂತಾ ಸ್ವಯಂ ದೃಷ್ಟಾಸಿ ಶಂಭುನಾ ॥ ೧೬೭

೧೬೮–೧೬೯–೧೭೦–೧೭೧–೧೭೨. ನೀನು ಅಕಸ್ಮಾತ್ತಾಗಿ ಮೇಲೆದ್ದ ಕೋಟಿ ಬಾಲಸೂರ್ಯರ ಸಾಲಿನಂತೆ ಉದ್ಭವಿಸಿ ನೋಡಲು ಕಷ್ಟಸಾಧ್ಯವಾದ ತೇಜಸ್ಸಿನಿಂದ ವಿಶ್ವವನ್ನು ಬೆಳಗಿಸಿ ಜ್ವಲಿಸುತ್ತಿರುವೆ. ನೀನು ಕತ್ತಿ, ಗುರಾಣಿ, ಕೋದಂಡ, ಬಾಣ, ಶೂಲ ಮೊದಲಾದವುಗಳನ್ನು ಬಾಹುಗಳಲ್ಲಿ ಧರಿಸಿ ದಿಗಂತಗಳನ್ನು ವ್ಯಾಪಿಸಿರುವವಳಾಗಿ ತ್ರಿಶೂಲಧಾರಿಯಾದ ಶಂಭುವಿನಿಂದ ಈ ರೀತಿ ಸ್ತುತಳಾಗಿದ್ದೀಯೆ. ""ನಿನಗೆ ನಮಸ್ಕಾರ. ಚಂಡಿ ! ಚಾಮುಂಡೇ ! ಮಂಗಳೇ ! ತ್ರಿಪುರಳೇ ! ಜಯಾದೇವಿಯೇ ! ಅದ್ವಿತೀಯಳಾಗಿ ಅಂಶರಹಿತಳಾದವಳೇ ! ಶಿವೆಯೇ । ದುರ್ಗೆಯೇ ! ನಾರಾಯಣಿ ! ಸರಸ್ವತಿ ! ಭದ್ರಕಾಲಿ ! ಮಹಾಲಕ್ಷ್ಮಿ ! ಸಿದ್ಧೇ ! ಮೃಗಸಂಹಾರಿಣಿ ! ನೀನು ಗಾಯತ್ರಿಯು. ಮಹಾರಾಜ್ಞಿಯು. ರೇವತಿಯು. ವಿಂಧ್ಯವಾಸಿನಿಯು, ಉಮೆಯು, ಕಾತ್ಯಾಯನಿಯು ಮತ್ತು ನೀನು ಶಿವನ ಪರ್ವತದಲ್ಲಿ ವಾಸಿಸುವವಳು.

೧೭೩. ದೇವಿ ! ಈ ಮೊದಲಾದ ನಾಮಗಳಿಂದ ನಿನ್ನನ್ನು ಕುರಿತು ಶಿವನು ಸ್ತುತಿಸುತ್ತಿರುವುದನ್ನು ಕೇಳಿ ಸ್ಕಂದನು, ವಸಿಷ್ಠನು ಮತ್ತು ಬ್ರಹ್ಮಾದಿಗಳು ನಿನ್ನನ್ನು ಸ್ತುತಿಸಿದರು.

---

ಜ್ವಲಂತೀ ವಿಶ್ವಮುದ್ಭಾಸ್ಯ ದುರ್ನಿರೀಕ್ಷೇಣ ತೇಜಸಾ ।
ಉಚ್ಚಂಡಾಕಾಂಡಬಾಲಾರ್ಕಕೋಟಿಪಂಕ್ತಿರಿವೋದಿತಾ ॥ ೧೬೮
ಭುಜಾನಾಂ ಚಕ್ರವಾಲೇನ ಸಂಛಾದಿತದಿಗಂತರಾ ।
ಖಡ್ಗಖೇಟಕಕೋದಂಡಶರಶೂಲಾದಿಧಾರಿಣಾ ॥ ೧೬೯
ಸಂಸ್ತುತಾಸಿ ಚ ತೇನೈವ ದೇವೇನೈವಂ ತ್ರಿಶೂಲಿನಾ ॥
ನಮಸ್ತೇ ಚಂಡಿ ಚಾಮುಂಡೇ ಮಂಗಲೇ ತ್ರಿಪುರೇ ಜಯೇ ॥ ೧೭೦
ಏಕಾನಂಶೇ ಶಿವೇ ದುರ್ಗೇ ನಾರಾಯಣಿ ಸರಸ್ವತಿ ।
ಭದ್ರಕಾಲಿ ಮಹಾಲಕ್ಷ್ಮಿ ಸಿದ್ಧೇ ರುರುವಿದಾರಿಣಿ ॥ ೧೭೧
ತ್ವಂ ಗಾಯತ್ರೀ ಮಹಾರಾಜ್ಞೀ ರೇವತೀ ವಿಂಧ್ಯವಾಸಿನೀ ।
ಉಮಾ ಕಾತ್ಯಾಯನೀ ಚ ತ್ವಂ ಶರ್ವಪರ್ವತವಾಸಿನೀ ॥ ೧೭೨
ಇತ್ಯಾದಿಭಿರ್ನಾಮಭಿಸ್ತ್ವಾಂ ದೇವಿ ಸ್ತುತಿಪರಂ ಹರಮ್ ।
ಶ್ರುತ್ವಾ ಸ್ಕಂದೋ ವಸಿಷ್ಠಶ್ಚ ಬ್ರಹ್ಮಾದ್ಯಾಸ್ತ್ವಾಂ ಚ ತುಷ್ಟುವುಃ ॥ ೧೭೩

೧೭೪. ಭಗವತಿ ! ನಿನ್ನನ್ನು ಕುರಿತು ಸ್ತೋತ್ರಮಾಡುವ ದೇವತೆಗಳು, ಋಷಿಗಳು, ನರರು ಇಷ್ಟವಾದುದಕ್ಕಿಂತಲೂ ಹೆಚ್ಚಾದ ಕಾಮನೆಗಳನ್ನು ಹೊಂದಿದರು ಮತ್ತು ಈಗಲೂ ಹೊಂದುತ್ತಾರೆ.

೧೭೫. ಆದುದರಿಂದ ವರದಳೇ ! ನನ್ನ ವಿಷಯದಲ್ಲಿ ಪ್ರಸನ್ನಳಾಗು. ನೀನು ನನ್ನ ಈ ಶರೀರ ರೂಪವಾದ ಕಾಣಿಕೆಯ ಪೂಜೆಯನ್ನೂ ಸ್ವೀಕರಿಸು. ನನ್ನ ಪ್ರಭುವಾದ ರಾಜನಿಗೆ ಶ್ರೇಯಸ್ಸು ಉಂಟಾಗಲಿ."

೧೭೬ ಹೀಗೆ ಹೇಳಿ ಅವನು ತನ್ನ ಶಿರಸ್ಸನ್ನು ಕತ್ತರಿಸಲು ಇಚ್ಛಿಸುವಷ್ಟರಲ್ಲಿ ಅಂತರಿಕ್ಷದಿಂದ ಅಶರೀರವಾಣಿಯು ಉದ್ಭವಿಸಿತು.

೧೭೭ ""ಪುತ್ರನೇ ! ಸಾಹಸವನ್ನು ಮಾಡಬೇಡ. ನಾನು ನಿನ್ನ ಈ ಧೈರ್ಯದಿಂದಲೇ ನಿನ್ನ ವಿಷಯದಲ್ಲಿ ಸುಪ್ರೀತಳಾಗಿದ್ದೇನೆ. ಆದುದರಿಂದ ಇಷ್ಟವಾದ ವರವನ್ನು ನನ್ನಿಂದ ಪ್ರಾರ್ಥಿಸಿಕೊ."

೧೭೮. ಅದನ್ನು ಕೇಳಿ ಆ ವೀರವರನು ಹೇಳಿದನು. "ದೇವಿಯೇ ! ನೀನು ಸಂತುಷ್ಟಳಾಗಿದ್ದರೆ ರಾಜನಾದ ವಿಕ್ರಮ ತುಂಗನು ಇನ್ನೂ ನೂರು ವರ್ಷಗಳು ಜೀವಿಸಿರಲಿ.

೧೭೯. ಮತ್ತು ನನ್ನ ಹೆಂಡತಿ ಮಕ್ಕಳು ಜೀವಿತರಾಗಲಿ". ಹೀಗೆ ಅವನು ವರವನ್ನು ಪ್ರಾರ್ಥಿಸಲಾಗಿ ಮತ್ತೆ ಅಂತರಿಕ್ಷದಿಂದ ವಾಣಿಯು ""ಹಾಗೆಯೇ ಆಗಲಿ" ಎಂದು ಹೇಳಿತು.

---

ಸ್ತುವಂತಸ್ತ್ವಾಂ ಚ ಭಗವತ್ಯಮರಾ ಋಷಯೋ ನರಾಃ ।
ಈಪ್ಸಿತಾಭ್ಯಧಿಕಾನ್ಕಾಮಾನ್ ಪ್ರಾಪ್ತಾಶ್ಚ ಪ್ರಾಪ್ನುವಂತಿ ಚ ॥ ೧೭೪
ತನ್ಮೇ ಪ್ರಸೀದ ವರದೇ ಗೃಹಾಣ ತ್ವಮಿಮಾಮಪಿ ।
ಮಚ್ಛರೀರೋಪಹಾರಾರ್ಚಾಂ ಶ್ರೇಯೋ ರಾಜ್ಞೋಽಸ್ತು ಮತ್ಪ್ರಭೋಃ ॥ ೧೭೫
ಇತ್ಯುದೀರ್ಯ ಶಿರಶ್ಛೇತ್ತುಂ ಯಾವದಿಚ್ಛತಿ ಸ ಸ್ವಕಮ್ ।
ಉದಭೂದ್ಭಾರತೀ ತಾವದಶರೀರಾ ನಭಸ್ತಲಾತ್ ॥ ೧೭೬
ಮಾ ಕಾರ್ಷೀಃ ಸಾಹಸಂ ಪುತ್ರ ಸತ್ತ್ವೇನೈವಾಮುನಾ ಹ್ಯಹಮ್ ।
ಸುಪ್ರೀತಾ ತವ ತನ್ಮತ್ತಃ ಪ್ರಾರ್ಥಯಸ್ವೇಪ್ಸಿತಂ ವರಮ್ ॥ ೧೭೭
ತಚ್ಛ್ರುತ್ವಾ ಸೋಽಬ್ರವೀದ್ವೀರವರಸ್ತುಷ್ಟಾಸಿ ದೇವಿ ಚೇತ್ ।
ರಾಜಾ ವಿಕ್ರಮತುಂಗಸ್ತಜ್ಜೀವತ್ವನ್ಯತ್ ಸಮಾಶತಮ್ ॥ ೧೭೮
ಭಾರ್ಯಾಪತ್ಯಾನಿ ಜೀವಂತು ಮಮ ಚೇತಿ ವರೇಽರ್ಥಿತೇ ।
ತೇನ ಭೂಯಃ ಸಮುದಭೂದೇವಮಸ್ತ್ವಿತಿ ವಾಗ್ದಿವಃ ॥ ೧೭೯

೧೮೦. ಆ ಕ್ಷಣದಲ್ಲಿಯೇ ಧರ್ಮವತೀ, ಸತ್ತ್ವವರ ಮತ್ತು ವೀರವತೀ ಎಂಬ ಆ ಮೂವರೂ ದೇಹದಲ್ಲಿ ಏನೂ ಗಾಯವಿಲ್ಲದವರಾಗಿ ಬದುಕಿ ಮೇಲೆದ್ದರು.

೧೮೧. ಅನಂತರ ಹರ್ಷಗೊಂಡ ವೀರವರನು ದೇವಿಯ ಅನುಗ್ರಹದಿಂದ ಎಚ್ಚರಗೊಂಡ ಅವರೆಲ್ಲರನ್ನೂ ತನ್ನ ಮನೆಗೆ ಕರೆದುಕೊಂಡು ಹೋಗಿ ಮತ್ತೆ ರಾಜನ ದ್ವಾರಕ್ಕೆ ಹೋದನು.

೧೮೨. ರಾಜನಾದ ವಿಕ್ರಮತುಂಗನಿಗೆ ಅದನ್ನು ನೋಡಿ ಆನಂದವೂ ಆಶ್ಚರ್ಯವೂ ಉಂಟಾಗಿ ಅಲ್ಲಿಂದ ಹೊರಟು ಪುನಃ (ಯಾರಿಗೂ) ತಿಳಿಯದಂತೆ ಉಪ್ಪರಿಗೆಮನೆಯನ್ನು ಹತ್ತಿದನು.

೧೮೩. ಮತ್ತು ""ಸಿಂಹದ್ವಾರದಲ್ಲಿ ಇಲ್ಲಿ ಇರುವವನು ಯಾರು ?" ಎಂದು ಮೇಲಿನಿಂದ ಕೇಳಿದನು. ಅದನ್ನು ಕೇಳಿ ಕೆಳಗೆ ಇದ್ದ ವೀರವರನು ರಾಜನನ್ನು ಕುರಿತು ಪ್ರತ್ಯುತ್ತರ ಹೇಳಿದನು.

೧೮೪. ""ನಾನು ಇಲ್ಲಿ ಇದ್ದೇನೆ. ಆ ಸ್ತ್ರೀಯನ್ನು ನೋಡಲು ನಾನು ಹೋದೆನು. ಅವಳು ದೇವತೆಯಂತೆ ನನಗೆ ಕಾಣಿಸಿಕೊಂಡು ಅದೃಶ್ಯಳಾಗಿ ಎಲ್ಲಿಯೋ ಮಾಯವಾದಳು."

೧೮೫. ಇದನ್ನು ಕೇಳಿ ಅತ್ಯಂತ ಅದ್ಭುತವಾದುದನ್ನು ಸ್ವತಃ ನೋಡಿದ್ದ ವಿಕ್ರಮತುಂಗನು ರಾತ್ರಿಯ ಏಕಾಂತದಲ್ಲಿ ಯೋಚಿಸಿದನು.

---

ತತ್ಕ್ಷಣಂ ತೇ ಚ ಜೀವಂತಸ್ತ್ರಯೋಽಪ್ಯುತ್ತಸ್ಥುರಕ್ಷತೈಃ ।
ದೇಹೈರ್ಧರ್ಮವತೀ ಸತ್ತ್ವವರೋ ವೀರವತೀ ಚ ಸಾ ॥ ೧೮೦
ತತೋ ವೀರವರೋ ಹೃಷ್ಟೋ ಬೋಧಿತಾನ್ ದೇವ್ಯನುಗ್ರಹಾತ್ ।
ನೀತ್ವಾ ತಾನ್ ಸ್ವಗೃಹಂ ಸರ್ವಾನ್ ರಾಜ್ಞೋ ದ್ವಾರಮಗಾತ್ ಪುನಃ ॥
೧೮೧
ನೃಪೋ ವಿಕ್ರಮತುಂಗಶ್ಚ ತದ್ದೃಷ್ಟ್ವಾ ಹೃಷ್ಟವಿಸ್ಮಿತಃ ।
ಗತ್ವಾ ಪುನಸ್ತಂ ಪ್ರಾಸಾದಮಾರೋಹತ್ ಸ್ವಮಲಕ್ಷಿತಃ ॥ ೧೮೨
ಸಿಂಹದ್ವಾರೇ ಸ್ಥಿತಃ ಕೋಽತ್ರೇತ್ಯುಪರಿಷ್ಟಾದುವಾಚ ಚ ।
ತಚ್ಛ್ರುತ್ವಾಧಃಸ್ಥಿತೋ ವೀರವರಸ್ತಂ ಪ್ರತ್ಯುವಾಚ ಸಃ ॥ ೧೮೩
ಅಹಂ ಸ್ಥಿತೋಽತ್ರ ತಾಂ ಚ ಸ್ತ್ರೀಂ ವೀಕ್ಷಿತುಂ ಗತವಾನಹಮ್ ।
ದೇವ ತೇ ವಚಸಾ ಕ್ವಾಪಿ ದೃಷ್ಟನಷ್ಟೇವ ಮೇ ಗತಾ ॥ ೧೮೪
ಶ್ರುತ್ವೈತತ್ ಕೃತ್ಸ್ನವೃತ್ತಾಂತಂ ದೃಷ್ಟ್ವಾ ಸೋಽತ್ಯಂತಮದ್ಭುತಮ್ ।
ಭೂಭೃದ್ವಿಕ್ರಮತುಂಗೋಽತ್ರ ರಾತ್ರಾವೇಕೋ ವ್ಯಚಿಂತಯತ್ ॥ ೧೮೫

೧೮೬ ""ಅಹೋ ! ಆಶ್ಚರ್ಯ ! ಇವನು ಅಪೂರ್ವವಾದ ಅನಿರ್ವಚನೀಯವಾದ ಪುರುಷಶ್ರೇಷ್ಠನು. ಇವನು ಪ್ರಶಂಸನೀಯವಾದ ಕಾರ್ಯವನ್ನು ಮಾಡುತ್ತಾನೆ. ಆದರೆ ಅದನ್ನು ಹೇಳಿಕೊಳ್ಳುವುದಿಲ್ಲ.

೧೮೭ ಮಹಾಸಾಗರವು ಗಂಭೀರವಾಗಿದ್ದರೂ (ಆಳವಾಗಿದ್ದರೂ) ವಿಶಾಲವಾಗಿದ್ದರೂ ಮಹಾಸತ್ವ (ದೊಡ್ಡ ಪ್ರಾಣಿಗಳು)ವುಳ್ಳವಾಗಿದ್ದರೂ ಚಂಡಮಾರುತಕ್ಕೂ ಅಲುಗಾಡದ ಅಚಲದೊಡನೆ ಸ್ಪರ್ಧಿಸಲು ಸಾಧ್ಯವಿಲ್ಲದಂತೆ ಅಚಲನಾದ ಇವನೊಡನೆಯೂ ಸಾಧ್ಯವಿಲ್ಲ.

೧೮೮. ರಾತ್ರಿಯಲ್ಲಿ ಪರೋಕ್ಷವಾಗಿ ಈ ರೀತಿಯಲ್ಲಿ ಪುತ್ರ ಮತ್ತು ಹೆಂಡತಿಯನ್ನು ಕಳೆದುಕೊಂಡು ನನಗೆ ಪ್ರಾಣಗಳನ್ನು ಕೊಟ್ಟ ಇವನಿಗೆ ನಾನು ಏನು ಪ್ರತ್ಯುಪಕಾರವನ್ನು ಮಾಡಲಿ ?”

೧೮೯. ಎಂದು ಮುಂತಾಗಿ ಯೋಚಿಸುತ್ತಾ ರಾಜನು ಉಪ್ಪರಿಗೆಯ ಮನೆಯಿಂದ ಕೆಳಗೆ ಇಳಿದು ಮನೆಯ ಒಳಗೆ ಪ್ರವೇಶಿಸಿ ವಿಸ್ಮಯದಿಂದ ಮಿಕ್ಕ ರಾತ್ರಿಯನ್ನು ಕಳೆದನು.

೧೯೦. ಬೆಳಿಗ್ಗೆ ಅವನ ಮಹಾ ಆಸ್ಥಾನದಲ್ಲಿ ವೀರವರನ ಮುಂದೆಯೇ ರಾಜನು ವೀರವರನಿಗೆ ಸಂಬಂಧಿಸಿದ ಆ ರಾತ್ರಿ ನಡೆದ ಆಶ್ಚರ್ಯವನ್ನು ಎಲ್ಲರಿಗೂ ಹೇಳಿದನು.

೧೯೧. ಎಲ್ಲರೂ ಅವನನ್ನು ಹೊಗಳುತ್ತಿದ್ದಂತೆ ಮಗನೊಡನಿದ್ದ ವೀರವರನಿಗೆ ರಾಜನು ಪಟ್ಟಾಧಿಕಾರವನ್ನು ಕೊಟ್ಟನು.

---

ಅಹೋ ಅಪೂರ್ವಃ ಕೋऽಪ್ಯೇಷ ಪುರುಷಾತಿಶಯೋ ಬತ ।
ಯಃ ಕರೋತೀದೃಶಂ ಶ್ಲಾಘ್ಯಮುಲ್ಲೇಖಂ ನ ಚ ಶಂಸತಿ ॥ ೧೮೬
ಗಂಭೀರೋऽಪಿ ವಿಶಾಲೋऽಪಿ ಮಹಾಸತ್ತ್ವೋऽಪಿ ನಾಂಬುಧಿಃ ।
ಅಚಲೇನ ಮಹಾವಾತಸ್ಪರ್ಶೇऽಪಿ ಸ್ಪರ್ಧತೇऽಮುನಾ ॥ ೧೮೭
ಪರೋಕ್ಷಂ ನಿಶಿ ಯೇನೈವಂ ಪುತ್ರದಾರವ್ಯಯೇನ ಮೇ ।
ಪ್ರಾಣಾಃ ಪ್ರದತ್ತಾಸ್ತಸ್ಯಾಸ್ಯ ಕುರ್ಯಾಂ ಕಾಂ ಪ್ರತ್ಯುಪಕ್ರಿಯಾಮ್ ॥ ೧೮೮
ಇತ್ಯಾದ್ಯಾಕಲಯನ್ ರಾಜಾ ಪ್ರಾಸಾದಾದವತೀರ್ಯ ಸಃ ।
ಪ್ರವಿಶ್ಯಾಭ್ಯಂತರಂ ರಾತ್ರಿಂ ಸ್ಮಯಮಾನೋ ನಿನಾಯ ತಾಮ್ ॥ ೧೮೯
ಪ್ರಾತಶ್ಚ ಸ ಮಹಾಸ್ಥಾನೇ ತಸ್ಮಿನ್ ವೀರವರೇ ಸ್ಥಿತೇ ।
ತದೀಯಂ ಕಥಯಾಮಾಸ ತದ್ರಾತ್ರಿಚರಿತಾದ್ಭುತಮ್ ॥ ೧೯೦
ತತಃ ಸಂಸ್ತೂಯಮಾನಸ್ಯ ಸರ್ವೈರ್ವೀರವರಸ್ಯ ಸಃ ।
ಬಬಂಧ ತಸ್ಯ ಸಸುತಸ್ಯಾಪಿ ಪಟ್ಟಂ ನರಾಧಿಪಃ ॥ ೧೯೧

೧೯೨. (ಅವನಿಗೆ) ಅನೇಕ ದೇಶಗಳನ್ನೂ ಕುದುರೆಗಳನ್ನೂ ರತ್ನಗಳನ್ನೂ ಆನೆಗಳನ್ನೂ ಹತ್ತುಕೋಟಿ ಸುವರ್ಣ ನಾಣ್ಯಗಳನ್ನೂ ಅರವತ್ತುಪಟ್ಟು ವೃತ್ತಿಯನ್ನೂ ಕೊಟ್ಟನು.

೧೯೩. ಶ್ವೇತಚ್ಛತ್ರವು ತಲೆಯಮೇಲೆ ಎದ್ದ ವೀರವರ ದ್ವಿಜನು ಸಕುಟುಂಬನಾಗಿ ಕೃತಾರ್ಥನಾಗಿ ರಾಜನಿಗೆ ಸಮಾನನಾದನು.

೧೯೪. ಹೀಗೆ ಮಂತ್ರಿಯಾದ ಗೋಮುಖನು ಕಥೆಯನ್ನು ಹೇಳಿ ಪ್ರಸ್ತುತವಾದ ವಿಷಯವನ್ನು ಮುಗಿಸುತ್ತಾ ಮತ್ತೆ ನರವಾಹನದತ್ತನನ್ನು ಕುರಿತು ಹೇಳಿದನು.

೧೯೫. "ದೇವ ! ರಾಜರಿಗೆ ಹೀಗೆ ಕೇವಲ ವೀರರಾದ ಕೆಲವು ಮಂದಿ ಸೇವಕರು ಪುಣ್ಯಯೋಗದಿಂದ ದೊರಕುತ್ತಾರೆ. ಅವರು ಸ್ವಾಮಿಗೋಸ್ಕರ ದೇಹ ಮುಂತಾದುದರ ಆಸೆಯನ್ನು ತೊರೆದು ಮಹಾ ಧೈರ್ಯವಂತರಾಗಿ ಎರಡು ಲೋಕಗಳನ್ನೂ ಜಯಿಸುತ್ತಾರೆ.

೧೯೬. ಹೊಸದಾಗಿ ಬಂದಿರುವ ಈ ಪ್ರಲಂಬಬಾಹುವೆಂಬ ನಿನ್ನ ಸೇವಕನಾದ ಬ್ರಾಹ್ಮಣವರನೂ ಅಂತಹವನಾಗಿಯೇ ಕಾಣುತ್ತಾನೆ. ಏಕೆಂದರೆ ಇವನ ಧೈರ್ಯ ಅಧಿಕರಿಗಿಂತಲೂ ಅಧಿಕ. ಇವನ ಆಕಾರ ದೃಢವಾಗಿದೆ ಮತ್ತು ಅಂಗ ಸೌಷ್ಠವದಿಂದ ಕೂಡಿದೆ.

---

ಪ್ರಾದಾದ್ಬಹೂಂಶ್ಚ ವಿಷಯಾನಶ್ವಾನ್ರತ್ನಾನಿ ವಾರಣಾನ್ ।
ದಶಕಾಂಚನಕೋಟೀಶ್ಚ ವೃತ್ತಿಂ ಷಷ್ಟಿಗುಣಾಮಪಿ ॥ ೧೯೨

ತತ್ಕ್ಷಣಾದ್ರಾಜತುಲ್ಯಶ್ಚ ಸೋಽಭೂದ್ವೀರವರೋ ದ್ವಿಜಃ ।
ಉಚ್ಛ್ರಿತೇನಾತಪತ್ರೇಣ ಕೃತಾರ್ಥಃ ಸಕುಟುಂಬಕಃ ॥ ೧೯೩

ಇತಿ ಸ ಕಥಾಂ ಕಥಯಿತ್ವಾ ವಿದಧಾನಃ ಪ್ರಸ್ತುತೋಪಸಂಹಾರಮ್ ।
ನರವಾಹನದತ್ತಂ ತಂ ಪುನರವದದ್ಗೋಮುಖೋ ಮಂತ್ರೀ ॥ ೧೯೪

ಏವಂ ದೇವ ಕ್ಷ್ಮಾಭೃತಾಮೇಕವೀರಾ ಭೃತ್ಯಾಃ ಕೇಚಿತ್ ಪುಣ್ಯಯೋಗಾನ್ಮಿಲಂತಿ ।
ಯೇ ಸ್ವಾಮ್ಯರ್ಥೇ ತ್ಯಕ್ತದೇಹಾದ್ಯಪೇಕ್ಷಾಃ ಸಮ್ಯಗ್ಲೋಕೌ ದ್ವೌ
ಸುಸತ್ತ್ವಾ ಜಯಂತಿ ॥ ೧೯೫

ತದೇಷ ತಾದೃಗ್ವಿಧ ಏವ ದೃಶ್ಯತೇ ದ್ವಿಜಪ್ರವೀರಸ್ತವ ದೇವ ಸೇವಕಃ ।
ನವಾಗತಃ ಸತ್ತ್ವಗುಣಾಧಿಕಾಧಿಕಃ ಪ್ರಲಂಬಬಾಹುಃ ಸ್ಥಿರಸೌಷ್ಠವಾಕೃತಿಃ ॥
೧೯೬

೧೯೭ ಹೀಗೆ ವಿಪುಲಮತಿಯಾದ ಗೋಮುಖನಿಂದ ಕೇಳಿ ಮಹಾಸತ್ವನಾದ ನರವಾಹನದತ್ತನ ಹೃದಯವು ಪರಮಾನಂದದಿಂದ ತುಂಬಿಕೊಂಡಿತು.

**ಇಲ್ಲಿಗೆ ಮಹಾಕವಿ ಶ್ರೀ ಸೋಮದೇವಭಟ್ಟನು ವಿರಚಿಸಿದ**

**ಕಥಾಸರಿತ್ಸಾಗರದ**

**ಅಲಂಕಾರವತೀಲಂಬಕದಲ್ಲಿ ಮೂರನೆಯ ತರಂಗವು ಮಗಿಯಿತು.**

---

ಇತಿ ನಿಜಸಚಿವಾದುದಾರಸತ್ತ್ವೋ
ವಿಪುಲಮತೇರವಧಾರ್ಯ ಗೋಮುಖಾತ್ಸ ।
ನರವಾಹನದತ್ತರಾಜಪುತ್ರೋ
ಹೃದಿ ಪರಿತೋಷಮನುತ್ತಮಂ ಬಭಾರ ॥ ೧೯೭

**ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ**

**ಕಥಾಸರಿತ್ಸಾಗರೇ**

**ಅಲಂಕಾರವತೀಲಂಬಕೇ ತೃತೀಯಸ್ತರಂಗಃ**

# ನಾಲ್ಕನೆಯ ತರಂಗ

೧ ಈ ರೀತಿ ನರವಾಹನದತ್ತನು ಅನುರಾಗವಂತರಾದ ಗೋಮುಖ ಮೊದಲಾದ ತನ್ನ ಸಚಿವರಿಂದ ಸೇವಿತನಾಗಿ ತಂದೆಯಾದ ವತ್ಸರಾಜನ ಅರಮನೆಯಲ್ಲಿ ವಾಸಿಸುತ್ತಿದ್ದನು.

೨–೩. ಅಭಿಮಾನವು ಅಡ್ಡಬರುವುದನ್ನು ಸಹಿಸಲಾಗದ ಗಾಢವಾದ ಅವನ ಪ್ರೇಮದಿಂದ ಅಸೂಯೆಯನ್ನು ಬಿಟ್ಟು ಅವನಲ್ಲಿ ಅನುರಕ್ತೆಯಾದ ಅಲಂಕಾರವತಿಯೊಡನೆ ವಿಹರಿಸುತ್ತಾ ಒಮ್ಮೆ ಅವನು ಗೋಮುಖನನ್ನು ರಥದ ಹಿಂದೆ ಹತ್ತಿಸಿಕೊಂಡು ಬೇಟೆಯಾಡಲು ಮೃಗಗಳಿರುವ ಕಾಡಿಗೆ ಹೊರಟನು.

೪. ಆ ಕಾಡಿನಲ್ಲಿ ವಿಪ್ರವೀರನಾದ ಪ್ರಲಂಬಬಾಹುವು ಮುಂದೆ ಮುಂದೆ ಹೋಗುತ್ತಿರಲು ನರವಾಹನದತ್ತನು ತನ್ನ ಅನುಚರನೊಡನೆ ಬೇಟೆಯನ್ನು ಆಡಲು ತೊಡಗಿದನು.

೫. ನರವಾಹನದತ್ತನ ರಥದ ಕುದುರೆಗಳು ಶಕ್ತಿಮೀರಿ ಮುಂದೆ ಓಡುತ್ತಿದ್ದರೂ ಪ್ರಲಂಬ ಬಾಹುವು ಆ ಕುದುರೆಗಳ ವೇಗವನ್ನು ಮೀರಿ ಮುಂದೆ ಹೋದನು.

---

# ಚತುರ್ಥಸ್ತರಂಗಃ

ಏವಂ ಸ ನಿವಸಂಸ್ತತ್ರ ವತ್ಸೇಶಸ್ಯ ಪಿತುರ್ಗೃಹೇ ।
ಗೋಮುಖಾದ್ಯೈಃ ಸ್ವಸಚಿವೈಃ ಸೇವ್ಯಮಾನೋಽನುರಾಗಿಭಿಃ ॥ ೧
ವಿಹರಂಶ್ಚಾಪ್ಯಲಂಕಾರವತ್ಯಾ ದೇವ್ಯಾನುರಕ್ತಯಾ ।
ಮಾನವಿಘ್ನಾಸಹೋದ್ಗಾಢತತ್ಪ್ರೇಮಮುಷಿತೇರ್ಷ್ಯಯಾ ॥ ೨
ನರವಾಹನದತ್ತೋಽಥ ಕದಾಚಿನ್ಮೃಗಕಾನನಮ್ ।
ಜಗಾಮ ರಥಮಾರುಹ್ಯ ಪಶ್ಚಾದಾರೂಢಗೋಮುಖಃ ॥ ೩
ಪ್ರಲಂಬಬಾಹೌ ತಸ್ಮಿಂಶ್ಚ ವಿಪ್ರವೀರೇಽಗ್ರಯಾಯಿನಿ ।
ಚಕಾರಾಖೇಟಕಕ್ರೀಡಾಂ ಸ ತತ್ರ ಸಹಿತೋಽನುಗೈಃ ॥ ೪
ಸರ್ವಪ್ರಾಣೇನ ಧಾವತ್ಸು ರಥಾಶ್ವೇಷ್ವಪಿ ತಸ್ಯ ಸಃ ।
ಪ್ರಲಂಬಬಾಹುಸ್ತದ್ವೇಗಂ ವಿಜಿತ್ಯ ಪರತೋ ಯಯೌ ॥ ೫

೬ ನರವಾಹನದತ್ತನು ರಥದಲ್ಲಿದ್ದು ಸಿಂಹ, ಹುಲಿ ಮುಂತಾದವುಗಳನ್ನು ಬಾಣಗಳಿಂದ ಕೊಲ್ಲುತ್ತಿದ್ದನು. ಆದರೆ ಪ್ರಲಂಬಬಾಹುವಾದರೋ ಪಾದಚಾರಿಯಾಗಿ ಖಡ್ಗದಿಂದ ಮೃಗಗಳನ್ನು ಕೊಲ್ಲುತ್ತಿದ್ದನು.

೭ ನರವಾಹನದತ್ತನು ಆ ದ್ವಿಜನನ್ನು ಮತ್ತೆ ಮತ್ತೆ ನೋಡಿ "'ಅಹೋ ! ಏನಿವನ ಕಾಲುಗಳ ವೇಗ" ಎಂದು ಆಶ್ಚರ್ಯಪಟ್ಟನು.

೮-೯. ನರವಾಹನದತ್ತನು ಬೇಟೆಯಾಡಿ ಆಯಾಸಗೊಂಡು ಸಾರಥಿ ಮತ್ತು ಗೋಮುಖರೊಡನೆ ರಥವನ್ನು ಹತ್ತಿದನು. ಉತ್ತಮ ಭಟನಾದ ಪ್ರಲಂಬಬಾಹುವು ಮುಂದೆ ಮುಂದೆ ಹೋಗುತ್ತಿದ್ದನು. ಆಗ ವತ್ಸೇಶಪುತ್ರನಿಗೆ ಬಾಯಾರಿಕೆಯಾಗಿ ನೀರನ್ನು ಹುಡುಕುತ್ತಾ ದೂರದಲ್ಲಿದ್ದ ಮತ್ತೊಂದು ಕಾಡನ್ನು ಪ್ರವೇಶಿಸಿದನು.

೧೦. ಅಲ್ಲಿ ಅವನು ಸೂರ್ಯನ ಅನೇಕ ಪ್ರತಿಬಿಂಬಗಳಿಂದ ಭೂಮಿಗೆ ಇಳಿದು ಬಂದಿರುವ ಎರಡನೆಯ ಅಂತರಿಕ್ಷವೋ ಎಂಬಂತಿದ್ದ, ವಿಕಸಿತವಾದ ಸುವರ್ಣ ಕಮಲಗಳುಳ್ಳ ದಿವ್ಯವಾದ ಒಂದು ದೊಡ್ಡ ಸರಸ್ಸನ್ನು ಸಮೀಪಿಸಿದನು.

೧೧. ಅಲ್ಲಿ ಅವನು ಸ್ನಾನ ಮುಂತಾದುದನ್ನು ಅನುಚರರೊಡನೆ ಮಾಡಿ ನೀರನ್ನು ಕುಡಿದ ನಂತರ ಆ ಸರಸ್ಸಿನ ಒಂದು ಭಾಗದಲ್ಲಿ ದೂರದಲ್ಲಿ ನಾಲ್ಕು ಮಂದಿ ಪುರುಷರು ಇದ್ದುದು ಕಂಡು ಬಂದಿತು.

---

ಸೋಽವಧೀತ್ಸಾಯಕೈಃ ಸಿಂಹವ್ಯಾಘ್ರಾದೀನ್ ಸ್ಯಂದನೇ ಸ್ಥಿತಃ ।
ಪ್ರಲಂಬಬಾಹುಸ್ತ್ವಸಿನಾ ಪಾದಚಾರೀ ಜಘಾನ ತಾನ್ ॥ ೬
ಅಹೋ ಶೌರ್ಯಮಹೋ ಜಂಘಾಜವೋಽಸ್ಯೇತಿ ವಿಸಿಸ್ಮಿಯೇ ।
ನರವಾಹನದತ್ತಶ್ಚ ದೃಷ್ಟ್ವಾ ದೃಷ್ಟ್ವಾ ಸ ತಂ ದ್ವಿಜಮ್ ॥ ೭
ಕೃತಾಖೇಟಃ ಪರಿಶ್ರಾಂತಃ ಸ ಸಸಾರಥಿಗೋಮುಖಃ ।
ಪ್ರಲಂಬಾಹೌ ಸುಭಟೇ ತಸ್ಮಿನ್ನಗ್ರಸರೇ ತತಃ ॥ ೮
ರಥಾರೂಢಸ್ತೃಷಾಕ್ರಾಂತಃ ಸಲಿಲಾನ್ವೇಷಣಕ್ರಮಾತ್ ।
ವತ್ಸೇಶ್ವರಾತ್ಮಜೋ ದೂರಂ ವಿವೇಶಾನ್ಯನ್ಮಹಾವನಮ್ ॥ ೯
ತತ್ರೋತ್ಫುಲ್ಲಹಿರಣ್ಯಾಬ್ಜಂ ದಿವ್ಯಂ ಪ್ರಾಪ ಮಹತ್ಸರಃ ।
ದ್ವಿತೀಯಮಿವ ಬಹ್ವರ್ಕಬಿಂಬಂ ಭೂಮಿಗತಂ ನಭಃ ॥ ೧೦
ತತ್ರ ಸ ಸ್ನಾತಪೀತಾಂಭಾಃ ಕೃತಸ್ನಾನಾದಿಸಾನುಗಃ ।
ತದೇಕದೇಶೇ ಚತುರೋ ದೂರಾದ್ದೈಕ್ಷತ ಪೂರುಷಾನ್ ॥ ೧೧

೧೨. ಅವರು ದಿವ್ಯವಾದ ಆಕಾರವನ್ನು ಹೊಂದಿದ್ದರು. ದಿವ್ಯವಾದ ವಸ್ತ್ರ ಆಭರಣಗಳಿಂದ ಅಲಂಕೃತರಾಗಿದ್ದರು. ಅವರು ಆ ಸರಸ್ಸಿನಿಂದ ಚಿನ್ನದ ಕಮಲಗಳನ್ನು ಕಿತ್ತು ತೆಗೆದುಕೊಳ್ಳುತ್ತಿದ್ದರು.

೧೩. ಕುತೂಹಲದಿಂದ ನರವಾಹನದತ್ತನು ಅವರ ಬಳಿಗೆ ಹೋದನು. ಅವರು ಅವನನ್ನು ನೋಡಿ "ನೀನು ಯಾರು ?' ಎಂದು ಕೇಳಿದರು. ನರವಾಹನದತ್ತನು ತನ್ನ ಹೆಸರನ್ನೂ, ವಂಶವನ್ನೂ ತನ್ನ ವೃತ್ತಾಂತವನ್ನೂ ಹೇಳಿದನು.

೧೪-೧೫. ಅವರೂ ಅವನ ದರ್ಶನದಿಂದ ಸಂತೋಷಗೊಂಡು ತಮ್ಮ ಬಗ್ಗೆ ಅವನು ಕೇಳಿದ ಪ್ರಶ್ನೆಗೆ ಈ ರೀತಿ ಉತ್ತರಿಸಿದರು. "ಮಹಾಸಮುದ್ರದ ಮಧ್ಯದಲ್ಲಿ ಐಶ್ವರ್ಯದಿಂದ ಸಮೃದ್ಧವಾದ ಒಂದು ದೊಡ್ಡ ದ್ವೀಪ ಶ್ರೇಷ್ಠವಿದೆ. ಅದು ಜಗತ್ತಿನಲ್ಲಿ ನಾರಿಕೇಲದ್ವೀಪ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಅದರಲ್ಲಿ ದಿವ್ಯವಾದ ಭೂಪ್ರದೇಶಗಳನ್ನುಳ್ಳ ನಾಲ್ಕು ಪರ್ವತಗಳಿವೆ.

೧೬. ಅವು ಮೈನಾಕ, ವೃಷಭ, ಚಕ್ರ ಮತ್ತು ಬಲಾಹಕ ಎಂದು ಪ್ರಸಿದ್ಧವಾಗಿವೆ. ಆ ನಾಲ್ಕು ಪ್ರದೇಶಗಳಲ್ಲಿ ನಾವು ನಾಲ್ಕು ಮಂದಿ ವಾಸಮಾಡುತ್ತೇವೆ.

೧೭. ನಮ್ಮಲ್ಲಿ ಈ ರೂಪಸಿದ್ಧಿ ಎಂಬ ಹೆಸರಿನವನು ವಿವಿಧವಾದ ರೂಪಗಳನ್ನು ಧರಿಸುತ್ತಾನೆ. ಪ್ರಮಾಣಸಿದ್ಧಿ ಎಂದು ಮತ್ತೊಬ್ಬನು ಅತಿ ದೊಡ್ಡದಾದ ಮತ್ತು ಅತಿ ಸಣ್ಣದಾದ ಅಳತೆಯುಳ್ಳವುಗಳನ್ನು ನೋಡಬಲ್ಲನು.

---

ದಿವ್ಯಾಕೃತೀನ್ ದಿವ್ಯವಸ್ತ್ರಾನ್ ದಿವ್ಯಾಭರಣಭೂಷಿತಾನ್ ।
ಹೇಮಾಂಬುಜಾನಿ ಸರಸಸ್ತಸ್ಮಾದುಚ್ಚಿತ್ಯ ಗೃಹ್ಣತಃ ॥ ೧೨
ಉಪಾಗಾತ್ಕೌತುಕಾತ್ತಾಂಶ್ಚ ಪೃಷ್ಟಃ ಕೋಽಸೀತಿ ತೈರಪಿ ।
ಅನ್ವಯಂ ನಾಮ ವೃತ್ತಾಂತಂ ನಿಜಂ ತೇಭ್ಯಃ ಶಶಂಸ ಸಃ ॥ ೧೩
ತೇಽಪ್ಯೇವಂ ದರ್ಶನಪ್ರೀತಾಃ ಪೃಷ್ಟವಂತಂ ತಮಬ್ರುವನ್ ।
ಅಸ್ತಿ ಮಧ್ಯೇ ಮಹಾಂಭೋಧೇಃ ಶ್ರೀಮದ್ದ್ವೀಪವರಂ ಮಹತ್ ॥ ೧೪
ಯನ್ನಾರಿಕೇಲದ್ವೀಪಾಖ್ಯಂ ಖ್ಯಾತಂ ಜಗತಿ ಸುಂದರಮ್ ।
ತತ್ರ ಸಂತಿ ಚ ಚತ್ವಾರಃ ಪರ್ವತಾ ದಿವ್ಯಭೂಮಯಃ ॥ ೧೫
ಮೈನಾಕೋ ವೃಷಭಶ್ಚಕ್ರೋ ಬಲಾಹಕ ಇತಿ ಸ್ಮೃತಾಃ ।
ಚತುರ್ಷು ತೇಷು ಚತ್ವಾರೋ ನಿವಸಾಮ ಇಮೇ ವಯಮ್ ॥ ೧೬
ಏಕೋಽಸ್ಮಾಕಂ ರೂಪಸಿದ್ಧಿರ್ನಾಮ್ನಾ ವಿವಿಧರೂಪಧೃತ್ ।
ಪ್ರಮಾಣಸಿದ್ಧಿರಪರೋ ಬೃಹತ್ಸೂಕ್ಷ್ಮಪ್ರಮಾಣದೃಕ್ ॥ ೧೭

೧೮. ಮತ್ತು ಮೂರನೆಯವನಾದ ಜ್ಞಾನಸಿದ್ಧಿಯು ಭವಿಷ್ಯತ್ತು, ಭೂತ ಮತ್ತು ವರ್ತಮಾನಗಳನ್ನು ತಿಳಿಯಬಲ್ಲನು. ನಾಲ್ಕನೆಯವನಾದ ದೇವಸಿದ್ಧಿಯೂ ಕೂಡ ಸಮಸ್ತ ದೇವತಾ ಸಿದ್ಧಿಗಳನ್ನೂ ಹೊಂದಿದ್ದಾನೆ.

೧೯. ನಾವು ಈಗ ಈ ಸುವರ್ಣ ಕಮಲಗಳನ್ನು ತೆಗೆದುಕೊಂಡು ಶ್ವೇತದ್ವೀಪದಲ್ಲಿ ದೇವನಾದ ಶ್ರೀಪತಿಯನ್ನು ಪೂಜಿಸಲು ಹೋಗುತ್ತೇವೆ.

೨೦. ನಾವೆಲ್ಲರೂ ಆ ಶ್ರೀಪತಿಯ ಭಕ್ತರಷ್ಟೆ. ಆ ದೇವನ ಅನುಗ್ರಹದಿಂದ ನಮಗೆ ನಮ್ಮ ಪರ್ವತಗಳಲ್ಲಿ ಆಧಿಪತ್ಯವೂ ಸಿದ್ಧಿಯಿಂದ ಕೂಡಿದ ಸಂಪತ್ತುಗಳೂ ಉಂಟಾಗಿವೆ.

೨೧. ಆದುದರಿಂದ ಬಾ. ಶ್ವೇತ ದ್ವೀಪದಲ್ಲಿ ನಿನಗೆ ಪ್ರಭುವಾದ ಹರಿಯನ್ನು ತೋರಿಸುತ್ತೇವೆ ಮಿತ್ರನೇ ! ನಿನಗೆ ರುಚಿಸುವುದಾದರೆ ಅಂತರಿಕ್ಷದಿಂದಲೇ (ನಿನ್ನನ್ನು) ಒಯ್ಯುತ್ತೇವೆ."

೨೨–೨೩. ಹೀಗೆ ಹೇಳಿದ ಆ ದೇವ ಪುತ್ರರೊಡನೆ ""ಹಾಗೆಯೇ ಆಗಲಿ" ಎಂದು ಹೇಳಿ ನರವಾಹನದತ್ತನು ಅಲ್ಲಿ ತನ್ನ ಅಧೀನದಲ್ಲಿದ್ದ ನೀರು, ಹಣ್ಣು ಮುಂತಾದುವುಗಳನ್ನು ಗೋಮುಖ ಮುಂತಾದವರ ಸ್ವಾಧೀನದಲ್ಲಿ ಇರುವಂತೆ ಮಾಡಿ ಅನಂತರ ಆ ದೇವಪುತ್ರರು ಮಧ್ಯೆ ಇದ್ದ ದೇವಸಿದ್ಧಿಯ ಮಡಿಲಿನಲ್ಲಿ ಕುಳಿತುಕೊಂಡು ಅಂತರಿಕ್ಷದ ಮೂಲಕ ಶ್ವೇತದ್ವೀಪಕ್ಕೆ ಹೋದನು.

---

ಜ್ಞಾನಸಿದ್ಧಿಸ್ತೃತೀಯಶ್ಚ ಭವಿಷ್ಯದ್ಭೂತಭಾವ್ಯವಿತ್ ।
ದೇವಸಿದ್ಧಿಶ್ಚತುರ್ಥೋಽಪಿ ಸರ್ವದೈವತಸಿದ್ಧಿಭೃತ್ ॥ ೧೮

ತೇ ವಯಂ ಹೇಮಕಮಲಾನ್ಯೇತಾನ್ಯಾದಾಯ ಸಾಂಪ್ರತಮ್ ।
ದೇವಂ ಪೂಜಯಿತುಂ ಯಾಮಃ ಶ್ವೇತದ್ವೀಪೇ ಶ್ರಿಯಃ ಪತಿಮ್ ॥ ೧೯

ತದ್ಭಕ್ತಾ ಹಿ ವಯಂ ಸರ್ವೇ ತತ್ಪ್ರಸಾದೇನ ಚಾದ್ರಿಷು ।
ತೇಷು ಸ್ವೇಷ್ವಾಧಿಪತ್ಯಂ ನಃ ಸಿದ್ಧಿಯುಕ್ತಾಶ್ಚ ಸಂಪದಃ ॥ ೨೦

ತದೇಹಿ ದರ್ಶಯಾಮಸ್ತೇ ಶ್ವೇತದ್ವೀಪೇ ಹರಿಂ ಪ್ರಭುಮ್ ।
ನಯಾಮಸ್ತ್ವಾಂತರಿಕ್ಷೇಣ ಯದಿ ತೇ ರೋಚತೇ ಸಖೇ ॥ ೨೧

ಇತ್ಯುಕ್ತವದ್ಭಿಸ್ತೈಃ ಸಾಕಂ ದೇವಪುತ್ರೈಸ್ತಥೇತಿ ಸಃ ।
ನರವಾಹನದತ್ತೋಽತ್ರ ಸ್ವಾಧೀನಾಂಬುಫಲಾದಿಕೇ ॥ ೨೨

ಗೋಮುಖಾದೀನವಸ್ಥಾಪ್ಯ ಶ್ವೇತದ್ವೀಪಂ ವಿಹಾಯಸಾ ।
ಯಯೌ ಗೃಹೀತಃ ಸ್ರೋತ್ಸಂಗೇ ತನ್ಮಧ್ಯಾದ್ದೇವಸಿದ್ಧಿನಾ ॥ ೨೩

೨೪–೨೬. ಅಲ್ಲಿ ಆಕಾಶದಿಂದ ದೂರದಲ್ಲೇ ಕೆಳಗಿಳಿದು ಆ ನಾಲ್ಕು ದೇವಪುತ್ರರೊಡನೆ ಶ್ರೀಹರಿಯ ಬಳಿ ಸಾರಿದನು. ಅಲ್ಲಿ ಶ್ರೀಹರಿಯು ಶೇಷಶಯ್ಯೆಯಲ್ಲಿ ಪವಡಿಸಿದ್ದು ಮುಂದೆ ಗರುಡನು ಕುಳಿತಿದ್ದನು. ಸಮುದ್ರಕನ್ಯೆಯಾದ ಲಕ್ಷ್ಮಿಯು ಪಕ್ಕದಲ್ಲಿದ್ದು ಭೂದೇವಿಯು ಪಾದದ ಬಳಿ ಸೇವಿಸುತ್ತಿದ್ದಳು. ಶಂಖಚಕ್ರ ಗದಾಪದ್ಮಗಳು ಶರೀರಗಳನ್ನು ಧರಿಸಿ ಸೇವೆ ಮಾಡುತ್ತಿದ್ದು ಗಂಧರ್ವರೂ ನಾರದರು ಮೊದಲಾದವರೂ ಭಕ್ತಿಯಿಂದ ಸ್ತುತಿಸುತ್ತಿದ್ದರು. ದೇವತೆಗಳೂ, ಸಿದ್ಧರೂ, ವಿದ್ಯಾಧರರೂ ಸುತ್ತ ಇದ್ದು ನಮಸ್ಕರಿಸುತ್ತಿದ್ದರು.

೨೭. ಇಂತಹ ಶ್ರೀಹರಿಯ ಬಳಿಗೆ ಆ ನಾಲ್ಕುಮಂದಿ ದೇವಪುತ್ರರು ಅವನನ್ನು ಒಯ್ದಾಗ ಅವನು ಶ್ರೀಹರಿಯ ದರ್ಶನ ಮಾಡಿದನು. ಸಜ್ಜನರ ಸಮಾಗಮವು ಯಾವನ ಅಭಿವೃದ್ಧಿಗೆ ತಾನೆ ಕಾರಣವಾಗುವುದಿಲ್ಲ ?

೨೮. ಅನಂತರ ದೇವಪುತ್ರರಿಂದ ಪೂಜಿತನಾದ ಕಶ್ಯಪ ಮೊದಲಾದವರಿಂದ ಚೆನ್ನಾಗಿ ಸ್ತುತಿಸಲ್ಪಟ್ಟ ಆ ಪ್ರಭುವನ್ನು ನರವಾಹನದತ್ತನು ಕೈಜೋಡಿಸಿ ಸ್ತೋತ್ರಮಾಡಿದನು.

೨೯. "ಭಗವಂತನೇ ! ಭಕ್ತರ ಕಲ್ಪವೃಕ್ಷವೇ ! ಲಕ್ಷ್ಮಿಯೆಂಬ ಕಲ್ಪಲತೆಯಿಂದ ಆಲಿಂಗಿತನಾದವನೇ ! ಅಭೀಷ್ಟವಾದುದನ್ನು ನೀಡುವವನೇ ! ನಿನಗೆ ನಮಸ್ಕಾರ.

೩೦. ಸತ್ಪುರುಷರ ಮನಸ್ಸೆಂಬ ಸರೋವರದಲ್ಲಿ ವಾಸಮಾಡುವ ದಿವ್ಯಹಂಸ ಸ್ವರೂಪನೂ ನಿರಂತರವಾಗಿ ಪ್ರಕಾಶಿತವಾದ ಓಂಕಾರಸ್ವರೂಪನೂ (ಹೃದಯಾಕಾಶವೆಂಬ) ಪರಮಾಕಾಶದಲ್ಲಿ ವಿಹರಿಸುವವನೂ ಆದ ನಿನಗೆ ನಮಸ್ಕಾರ.

---

ತತ್ರಾವತೀರ್ಯ ಗಗನಾದ್ದೂರಾದೇವೋಪಸೃತ್ಯ ಚ ।
ಪಾರ್ಶ್ವಸ್ಥಿತಾಬ್ಧಿತನಯಂ ಪಾದಾಂತಸ್ಥವಸುಂಧರಮ್ ॥ ೨೪
ಶಂಖಚಕ್ರಗದಾಪದ್ಮೈಃ ಸೇವ್ಯಮಾನಂ ಸವಿಗ್ರಹೈಃ ।
ಭಕ್ತ್ಯೋಪಗೀಯಮಾನಂ ಚ ಗಂಧರ್ವೈರ್ನಾರದಾದಿಭಿಃ ॥ ೨೫
ಪ್ರಣಮ್ಯಮಾನಂ ದೇವೈಶ್ಚ ಸಿದ್ಧೈರ್ವಿದ್ಯಾಧರೈಸ್ತಥಾ ।
ಅಗ್ರೋಪವಿಷ್ಟಗರುಡಂ ಶೇಷಶಯ್ಯಾಗತಂ ಹರಿಮ್ ॥ ೨೬
ಸ ದದರ್ಶ ಚತುರ್ಭಿಸ್ತೈಃ ಪ್ರಾಪಿತೋ ದೇವಪುತ್ರಕೈಃ ।
ಕಸ್ಯ ನಾಭ್ಯುದಯೇ ಹೇತುರ್ಭವೇತ್ಸಾಧುಸಮಾಗಮಃ ॥ ೨೭
ತತೋಽರ್ಚಿತಂ ದೇವಪುತ್ರೈಃ ಕಶ್ಯಪಾದ್ಯೈಶ್ಚ ಸಂಯುತಮ್ ।
ನರವಾಹನದತ್ತಸ್ತಮಸ್ತೌಷೀತ್ಕೃತಾಂಜಲಿಃ ಪ್ರಭುಮ್ ॥ ೨೮
ನಮೋಽಸ್ತು ತುಭ್ಯಂ ಭಗವನ್ ಭಕ್ತಕಲ್ಪಮಹೀರುಹ ।
ಲಕ್ಷ್ಮೀಕಲ್ಪಲತಾಶ್ಲಿಷ್ಟವಪುಷೇಽಭೀಷ್ಟದಾಯಿನೇ ॥ ೨೯
ನಮಸ್ತೇ ದಿವ್ಯಹಂಸಾಯ ಸನ್ಮಾನಸನಿವಾಸಿನೇ ।
ಸತತೋದಿತನಾದಾಯ ಪರಾಕಾಶವಿಹಾರಿಣೇ ॥ ೩೦

೩೧. ಎಲ್ಲವನ್ನೂ ಮೀರಿದವನೂ ಎಲ್ಲದರೊಳಗೆ ಇರುವವನೂ (ಸತ್ತ್ವ, ರಜಸ್ಸು, ತಮಸ್ಸು ಎಂಬ) ಗುಣಗಳನ್ನು ಮೀರಿದ ಸ್ವರೂಪವುಳ್ಳವನೂ ಪರಿಪೂರ್ಣವಾದ ಆರು ಗುಣ (ಜ್ಞಾನ, ಐಶ್ವರ್ಯ, ಶಕ್ತಿ, ಬಲ, ವೀರ್ಯ ಮತ್ತು ತೇಜಸ್ಸು) ಗಳುಳ್ಳ ಸ್ವರೂಪನೂ ಆದ ನಿನಗೆ ನಮಸ್ಕಾರ.

೩೨. ಈ ಬ್ರಹ್ಮದೇವನು ಮಾಡುತ್ತಿರುವ ವೇದಾಧ್ಯಯನದಿಂದ ಮೃದುವಾದ ಧ್ವನಿಯು (ಝೇಂಕಾರ) ಹುಟ್ಟುತ್ತಿದ್ದು , ಆ ವೇದಗಳಿಂದ ಅನೇಕ ಚರಣಗಳು ಹುಟ್ಟಿದ್ದರೂ ನಿನ್ನ ನಾಭಿಕಮಲದಲ್ಲಿ ಷಟ್‌ಚರಣದಂತೆ (ಆರು ಕಾಲುಗಳುಳ್ಳ ದುಂಬಿಯಂತೆ) ಇದ್ದಾನೆ

೩೩. ಭೂಮಿಯೇ ನಿನ್ನ ಪಾದಗಳು. ದ್ಯುಲೋಕವೇ ನಿನ್ನ ಶಿರಸ್ಸು. ದಿಕ್ಕುಗಳೇ ನಿನ್ನ ಶ್ರೋತ್ರಗಳು. ಸೂರ್ಯ ಮತ್ತು ಚಂದ್ರರೇ ನಿನ್ನ ಕಣ್ಣುಗಳು. ಬ್ರಹ್ಮಾಂಡವೇ ನಿನ್ನ ಉದರ. ಇಂತಹ ಅನಿರ್ವಚನೀಯನಾದ ಪುರುಷ ನೀನೆಂದು ಜ್ಞಾನಿಗಳು ಸ್ತುತಿಸುತ್ತಾರೆ.

೩೪. ಪ್ರಭುವೇ ! ಪರಮಧಾಮವೇ ಆಶ್ರಮವಾಗಿ ಉಳ್ಳ (ಪರಮ ತೇಜಸ್ಸೇ ಸ್ವರೂಪವಾಗಿ ವುಳ್ಳ) ನಿನ್ನ ದೆಸೆಯಿಂದ ಈ ಪ್ರಾಣಿ ಸಮೂಹವು ಪ್ರಜ್ವಲಿಸುವ ಬೆಂಕಿಯ ದೆಸೆಯಿಂದ ಕಿಡಿಗಳ ಸಮೂಹದಂತೆ ಹೊರಬಂದು ವಿಜೃಂಭಿಸುತ್ತದೆ.

೩೫. ಮತ್ತೆ ಪ್ರಳಯಕಾಲದಲ್ಲಿ ಈ ಭೂತ ಸಮೂಹವು ದಿನದ ಕೊನೆಯಲ್ಲಿ ಪಕ್ಷಿಗಳ ಸಮೂಹವು ಮಹಾ ವೃಕ್ಷವನ್ನು ಸೇರುವಂತೆ ನಿನ್ನನ್ನೇ ಬಂದು ಪ್ರವೇಶಿಸುತ್ತದೆ.

---

ತುಭ್ಯಂ ನಮೋಽತಿಸರ್ವಾಯ ಸರ್ವಾಭ್ಯಂತರವರ್ತಿನೇ ।
ಗುಣಾತಿಕ್ರಾಂತರೂಪಾಯ ಪೂರ್ಣಷಾಡ್ಗುಣ್ಯಮೂರ್ತಯೇ ॥ ೩೧

ಬ್ರಹ್ಮಾ ತೇ ನಾಭಿಕಮಲೇ ಸ್ವಾಧ್ಯಾಯೋದ್ಯನ್ಮೃದುಧ್ವನಿಃ ।
ತದ್ಭೂತಾನೇಕಚರಣೋಽಪ್ಯೇಷ ಷಟ್ಚರಣಾಯತೇ ॥ ೩೨

ಭೂಮಿಪಾದೋ ದ್ಯುಮೂರ್ಧಾ ತ್ವಂ ದಿಕ್‌ಶ್ರೋತ್ರೋಽರ್ಕೇಂದುಲೋಚನಃ ।
ಬ್ರಹ್ಮಾಂಡಜಠರಃ ಕೋಽಪಿ ಪುರುಷೋ ಗೀಯತೇ ಬುಧೈಃ ॥ ೩೩

ತ್ವತ್ತೋ ಧಾಮನಿಧೇಶ್ಚಾಸೌ ಭೂತಗ್ರಾಮೋ ವಿಜೃಂಭತೇ ।
ನಾಥ ಸ್ಫುಲಿಂಗಸಂಘಾತ ಇವ ಪ್ರಜ್ವಲತೋಽನಲಾತ್ ॥ ೩೪

ಪುನಶ್ಚ ಪ್ರವಿಶತ್ಯೇಷ ತ್ವಾಮೇವ ಪ್ರಲಯಾಗಮೇ ।
ದಿನಾಂತೇ ವಿಗ್ರಹವ್ರಾತ ಇವ ವಾಸಮಹಾದ್ರುಮಮ್ ॥ ೩೫

೩೬. ಅನಂತವಾದ ತೀರಗಳಿಗೆ ಬಡಿದು ಕ್ಷೋಭೆಗೊಂಡ ಸಮುದ್ರವು ತರಂಗಗಳನ್ನು ಸೃಷ್ಟಿಸುವಂತೆ ಉಲ್ಲಸಿತನಾದ ನೀನು ನಿನ್ನದೇ ಅಂಶಗಳಾದ ಈ ಲೋಕಾಧಿಪರನ್ನು ಸೃಷ್ಟಿಸುತ್ತೀಯೆ.

೩೭. ನೀನು ವಿಶ್ವರೂಪಿಯಾಗಿದ್ದರೂ ರೂಪರಹಿತನಾಗಿದ್ದೀಯೆ. ಸಮಸ್ತ ಕರ್ಮವ್ಯಾಪ್ತನಾದರೂ ಕರ್ಮರಹಿತನಾಗಿದ್ದೀಯೆ. ನೀನು ವಿಶ್ವಾಧಾರನಾಗಿದ್ದರೂ ಆಧಾರ ರಹಿತನಾಗಿದ್ದೀಯೆ. (ಆದುದರಿಂದ) ನಿನ್ನ ತತ್ತ್ವವನ್ನು ಯಾವನು ತಾನೆ ತಿಳಿಯುತ್ತಾನೆ !

೩೮. ನಿನ್ನ ಪ್ರಸನ್ನವಾದ ದೃಷ್ಟಿಯಿಂದ ನೀನು ನೋಡಿದುದರಿಂದಲೇ ದೇವತೆಗಳು ಸಮೃದ್ಧಿಗಳನ್ನು ಹೊಂದಿದರು. ಆದುದರಿಂದ ಪ್ರಸನ್ನನಾಗು. ಶರಣಾಗತನಾದ ನನ್ನನ್ನು ಆರ್ದ್ರ ದೃಷ್ಟಿಯಿಂದ ನೋಡು."

೩೯. ಈ ರೀತಿ ಸ್ತುತಿಯನ್ನು ಮಾಡಿದ ನರವಾಹನದತ್ತನನ್ನು ಅನುಗ್ರಹಸಹಿತವಾದ ದೃಷ್ಟಿಯಿಂದ ನೋಡಿ ಹರಿಯು ನಾರದನನ್ನು ಕುರಿತು ಹೇಳಿದನು.

೪೦–೪೧. "ಮಹಾಮುನಿಯೇ ! ಹೋಗು. ಹಿಂದೆ ಕ್ಷೀರ ಸಮುದ್ರದಲ್ಲಿ ಹುಟ್ಟಿದ ಶ್ರೇಷ್ಠರಾದ ಅಪ್ಸರ ಸ್ತ್ರೀಯರನ್ನು ಇಂದ್ರನ ಬಳಿ ನ್ಯಾಸವಾಗಿ ಇಟ್ಟಿದ್ದೆ. ಅವರನ್ನೆಲ್ಲ ನಾನು ಹೇಳಿದೆನೆಂದು ಹೋಗಿ ಹುಡುಕಿಸಿ ಇಂದ್ರನ ರಥದಲ್ಲಿ ಕುಳ್ಳಿರಿಸಿಕೊಂಡು ಇಲ್ಲಿಗೆ ಶೀಘ್ರವಾಗಿ ಕರೆದುಕೊಂಡು ಬಾ."

---

ಸೃಜಸ್ಯುಲ್ಲಸಿತಃ ಸ್ವಾಂಶಾಂಸ್ತ್ವಮೇತಾನ್ಭುವನೇಶ್ವರಾನ್ ।
ಅನಂತವೇಲಾಕ್ಷುಭಿತಸ್ತರಂಗಾನಿವ ವಾರಿಧಿಃ ॥ ೩೬

ವಿಶ್ವರೂಪೋಽಪ್ಯರೂಪಸ್ತ್ವಂ ವಿಶ್ವಕರ್ಮಾಪಿ ಚಾಕ್ರಿಯಃ ।
ವಿಶ್ವಾಧಾರೋಽಪ್ಯನಾಧಾರಃ ಕಃ ಸ ತತ್ತ್ವಮವೈತಿ ತೇ ॥ ೩೭

ತಾಂ ತಾಮೃದ್ಧಿಂ ಸುರಾಃ ಪ್ರಾಪ್ತಾಸ್ತ್ವತ್ಪ್ರಸನ್ನೇಕ್ಷಣೇಕ್ಷಿತಾಃ ।
ತತ್ಪ್ರಸೀದ ಪ್ರಪನ್ನಂ ಮಾಂ ಪಶ್ಯ ಪಶ್ಯಾರ್ದ್ರಯಾ ದೃಶಾ ॥ ೩೮

ಏವಂ ಕೃತಸ್ತುತಿಂ ದೃಷ್ಟ್ವಾ ಸಪ್ರಸಾದೇನ ಚಕ್ಷುಷಾ ।
ನರವಾಹನದತ್ತಂ ತಂ ಹರಿರ್ನಾರದಮಭ್ಯಧಾತ್ ॥ ೩೯

ಗಚ್ಛ ಕ್ಷೀರೋದಸಂಭೂತಾ ಯಾ ವರಾಪ್ಸರಸಃ ಪುರಾ ।
ನ್ಯಾಸೀಕೃತ್ಯ ಮಯಾ ಹಸ್ತೇ ಶಕ್ರಸ್ಯ ಸ್ಥಾಪಿತಾಃ ಸ್ವಕಾಃ ॥ ೪೦

ತಾಸ್ತಸ್ಮಾನ್ಮಮ ವಾಕ್ಯೇನ ಮೃಗಯಿತ್ವಾ ಮಹಾಮುನೇ ।
ಆರೋಪ್ಯ ತದ್ರಥೇ ಸರ್ವಾಃ ಸತ್ವರಂ ತ್ವಮಿಹಾನಯ ॥ ೪೧

೪೨. ಹರಿಯು ಹೀಗೆ ಹೇಳಿದಾಗ ನಾರದನು ಹಾಗೆಯೇ ಆಗಲೆಂದು ಹೋಗಿ ಇಂದ್ರನ ಬಳಿಯಿಂದ ಅವನ ರಥದಲ್ಲಿ ಮಾತಲಿಯೊಡನೆ ಅಪ್ಸರ ಸ್ತ್ರೀಯರೆಲ್ಲರನ್ನೂ ಕರೆತಂದನು.

೪೩. ಅವರನ್ನು ಕರೆತಂದು ನಾರದನು ನಮಸ್ಕಾರ ಮಾಡಲಾಗಿ ಭಗವಂತನು ವತ್ಸರಾಜ ಪುತ್ರನಾದ ನರವಾಹನದತ್ತನನ್ನು ಕುರಿತು ಆದೇಶಮಾಡಿದನು.

೪೪. "ನರವಾಹನದತ್ತನೇ ? ವಿದ್ಯಾಧರೇಂದ್ರನಿಗೆ ಮುಂದೆ ಚಕ್ರವರ್ತಿಯಾಗಲಿರುವ ನಿನಗೆ ನಾನು ಈ ಅಪ್ಸರ ಸ್ತ್ರೀಯರನ್ನು ಕೊಟ್ಟಿದ್ದೇನೆ.

೪೫. ನೀನು ಇವರಿಗೆ ಯೋಗ್ಯನಾದ ಪತಿಯು ಮತ್ತು ಇವರು ನಿನಗೆ ಯೋಗ್ಯರಾದ ಭಾರ್ಯೆಯರು. ನಿನ್ನನ್ನು ಪುರಾರಿಯಾದ ಪರಮೇಶ್ವರನು ಕಾಮದೇವನ ಅವತಾರವಾಗಿ ಸೃಷ್ಟಿಸಿರುವನಷ್ಟೆ"

೪೬. ಅದನ್ನು ಕೇಳಿ ವರವು ಲಭಿಸಿದ ಸಂತೋಷದಿಂದ ನರವಾಹನದತ್ತನು ಹರಿಯ ಕಾಲಿಗೆ ಬಿದ್ದನು. ಆಗ ಹರಿಯು ಮಾತಲಿಗೆ ಆಜ್ಞೆ ಮಾಡಿದನು.

೪೭. "ಈ ನರವಾಹನದತ್ತನನ್ನು ಅಪ್ಸರಃ ಸ್ತ್ರೀಸಮೇತನಾಗಿ ಇವನು ಇಚ್ಛಿಸುವ ಮಾರ್ಗದಲ್ಲಿ ಇವನ ಮನೆಗೆ ತಲುಪಿಸು."

---

ಇತ್ಯುಕ್ತೋ ಹರಿಣಾ ಗತ್ವಾ ನಾರದಃ ಸ ತಥೇತಿ ತಾಃ ।
ಆನಿನ್ಯೇಽಪ್ಸರಸಃ ಶಕ್ರಾತ್ತದ್ರಥೇನ ಸಮಾತಲಿಃ ॥ ೪೨
ತೇನ ತಾಸೂಪನೀತಾಸು ಪ್ರಣತೇನಾಪ್ಸರಸ್ಸ್ವಥ ।
ವತ್ಸರಾಜತನೂಜಂ ತಂ ಭಗವಾನಾದಿದೇಶ ಸಃ ॥ ೪೩
ನರವಾಹನದತ್ತೈತಾಸ್ತುಭ್ಯಮಪ್ಸರಸೋ ಮಯಾ ।
ದತ್ತಾ ವಿದ್ಯಾಧರೇಂದ್ರಾಣಾಂ ಭವಿಷ್ಯಚ್ಚಕ್ರವರ್ತಿನೇ ॥ ೪೪
ತ್ವಮಾಸಾಮುಚಿತೋ ಭರ್ತಾ ಭಾರ್ಯಾಶ್ಚೈತಾಸ್ತವೋಚಿತಾಃ ।
ಕಾಮದೇವಾವತಾರೋ ಹಿ ನಿರ್ಮಿತಸ್ತ್ವಂ ಪುರಾರಿಣಾ ॥ ೪೫
ತಚ್ಛ್ರುತ್ವಾ ಪಾದಪತಿತೇ ತಸ್ಮಿನ್ವತ್ಸೇಶ್ವರಾತ್ಮಜೇ ।
ಲಬ್ಧಪ್ರಸಾದಮುದಿತೇ ಹರಿರ್ಮಾತಲಿಮಾದಿಶತ್ ॥ ೪೬
ನರವಾಹನದತ್ತೋಽಸಾವಪ್ಸರಃಸಹಿತಸ್ತ್ವಯಾ ।
ಪ್ರಾಪ್ಯತಾಂ ಸ್ವಗೃಹಂ ಯಾವತ್ಪಥಾ ಯೇನಾಯಮಿಚ್ಛತಿ ॥ ೪೭

೪೮–೫೨. ಈ ರೀತಿಯಾಗಿ ಭಗವಂತನು ಆದೇಶ ನೀಡಲು ನರವಾಹನದತ್ತನು ಶ್ರೀಹರಿಗೆ ನಮಸ್ಕರಿಸಿ ಅಪ್ಸರಸ್ತ್ರೀಯರೊಡನೆ ಮಾತಲಿಯ ಸಾರಥ್ಯದ ರಥವನ್ನು ಹತ್ತಿ ನಿಮಂತ್ರಣ ನೀಡಿದ ದೇವಪುತ್ರರೊಡನೆ ನಾರಿಕೇಲ ದ್ವೀಪಕ್ಕೆ ಹೋದನು. ದೇವತೆಗಳೂ ಮೆಚ್ಚಿಕೊಂಡಿದ್ದ ಆ ಪುಣ್ಯಶಾಲಿಯು ರೂಪಸಿದ್ಧಿಯೇ ಮೊದಲಾದ ನಾಲ್ಕು ದಿವ್ಯಪುರುಷರಿಂದ ಪೂಜಿತನಾಗಿ ಇಂದ್ರನ ಸಾರಥಿಯೊಡನೆ ಸ್ವರ್ಗದೊಡನೆ ಸ್ಪರ್ಧಿಸುವ ಮೈನಾಕ, ವೃಷಭ ಮೊದಲಾದ ದೇವತೆಗಳ ನಿವಾಸವಾದ ಪರ್ವತಗಳಲ್ಲಿ ಅಪ್ಸರೆಯರೊಡನೆ ಕ್ರೀಡಿಸಿದನು. ಅವನು ಚೈತ್ರಮಾಸದ ಆಗಮನದಿಂದ ಪುಷ್ಪಗಳು ಅರಳಿದ ವಿವಿಧ ವೃಕ್ಷಗಳ ಕಾಡುಗಳಿಂದ ತುಂಬಿದ್ದ ಅವರ ಉದ್ಯಾನವನ ಪ್ರದೇಶಗಳಲ್ಲಿ ಕುತೂಹಲದಿಂದ ವಿಹರಿಸಿದನು.

೫೩. "'ಕಾಂತನಾದ ವಸಂತನು ಬರುತ್ತಿರುವುದನ್ನು ಅರಳಿದ ಪುಷ್ಪಗಳೆಂಬ ವಿಶಾಲವಾದ ಕಣ್ಣುಗಳಿಂದ ಈ ಮರ ಬಳ್ಳಿಗಳು ನೋಡುತ್ತಿವೆಯೋ ಎಂಬಂತಿರುವುದನ್ನು ನೋಡು.

೫೪. ನಮ್ಮ ಈ ಜನ್ಮಕ್ಷೇತ್ರದಲ್ಲಿ ನಮ್ಮನ್ನು ಸೂರ್ಯನ ಕಿರಣಗಳ ಬಿಸಿಯು ಸುಡದಿರಲಿ ಎಂಬಂತೆ ವಿಕಸಿತವಾದ ಕಮಲಗಳು ಸರಸ್ಸನ್ನು ಮುಚ್ಚಿರುವುದನ್ನು ನೋಡು.

---

ಏವಂ ಭಗವತಾದಿಷ್ಟೋ ಸಾಪ್ಸರಸ್ಕಃ ಪ್ರಣಮ್ಯ ತಮ್ ।
ನರವಾಹನದತ್ತಃ ಸ ರಥಂ ಮಾತಲಿಸಾರಥಿಮ್ ॥ ೪೮
ಆರುಹ್ಯ ದೇವಪುತ್ರೈಸ್ತೈಃ ಸಾಕಂ ಕೃತನಿಮಂತ್ರಣೈಃ ।
ನಾರಿಕೇಲಮಗಾದ್ದ್ವೀಪಂ ದೇವೈಶ್ಚೈವ ಕೃತಸ್ಪೃಹಃ ॥ ೪೯
ತತ್ರ ತೈರರ್ಚಿತೋ ರೂಪಸಿದ್ಧಿಪ್ರಭೃತಿಭಿಃ ಕೃತೀ ।
ಚತುರ್ಭಿರ್ದಿವ್ಯಪುರುಷೈಃ ಶಕ್ರಸಾರಥಿನಾ ಯುತಃ ॥ ೫೦
ಮೈನಾಕವೃಷಭಾದ್ಯೇಷು ತನ್ನಿವಾಸಾದ್ರಿಷು ಕ್ರಮಾತ್ ।
ಅಪ್ಸರೋಭಿಃಸಮಂ ತಾಭಿಃ ಸ್ವರ್ಗಸ್ಪರ್ಧಿಷ್ವರಂಸ್ತ ಸಃ ॥ ೫೧
ಮಧುಮಾಸಾಗಮೋತ್ಫುಲ್ಲನಾನಾತರುವನಾಸು ಚ ।
ವಿಜಹಾರ ತದುದ್ಯಾನವನಭೂಮಿಷು ಕೌತುಕೀ ॥ ೫೨
ಪಶ್ಯೈತಾಸ್ತರುಮಂಜರ್ಯಃ ಪೃಥುಪುಷ್ಪವಿಲೋಚನೈಃ ।
ಕಾಂತಂ ವಸಂತಮಾಯಾಂತಂ ಪಶ್ಯಂತೀವ ವಿಕಸ್ವರೈಃ ॥ ೫೩
ಜನ್ಮಕ್ಷೇತ್ರೇಽತ್ರ ಮಾ ಭೂನ್ನಃ ಸಂತಾಪೋಽರ್ಕಕರೋಷ್ಮಜಃ ।
ಇತೀವಾಚ್ಛಾದಿತಂ ಪಶ್ಯ ಫುಲ್ಲೈಃ ಸರಸಿಜೈಃ ಸರಃ ॥ ೫೪

೫೫. ನೋಡು, ಕಾಂತಿಯುಕ್ತವಾದರೂ ಪರಿಮಳವಿಲ್ಲದಿರುವ ಈ ಕಣಗಿಲೆಯನ್ನು, ಐಶ್ವರ್ಯವಂತನಾದರೂ ನೀಚನಾಗಿರುವವನನ್ನು ಸಜ್ಜನರು ತ್ಯಜಿಸುವಂತೆ ಭ್ರಮರಗಳು ಬಿಟ್ಟು ಹೋಗುತ್ತವೆ.

೫೬. ಇಲ್ಲಿ ಕಿನ್ನರಿಯರ ಗೀತಗಳಿಂದಲೂ ಕೋಗಿಲೆಗಳ ಕೂಜಿತಗಳಿಂದಲೂ ಭ್ರಮರಗಳ ಝೇಂಕಾರಗಳಿಂದಲೂ ಋತುರಾಜನಾದ ವಸಂತನಿಗೆ ಸಂಗೀತವು ವ್ಯವಸ್ಥೆಯಾಗುತ್ತಿರುವುದನ್ನು ನೋಡು."

೫೭. ಆ ದೇವಪುತ್ರರು ಇದೇ ಮುಂತಾಗಿ ಹೇಳುತ್ತಾ ನರವಾಹನದತ್ತನಿಗೆ ತಮ್ಮ ಉಪವನ ಸಮೂಹವನ್ನು ತೋರಿಸಿದರು.

೫೮. ನರವಾಹನದತ್ತನು ವಸಂತೋತ್ಸವದಿಂದ ನಿರಂಕುಶವಾಗಿ ನರ್ತನ ಮಾಡುತ್ತಿರುವ ಪೌರರ ಹಾಡುಗಳನ್ನು ಕೇಳುತ್ತಾ ಅವರ ಪಟ್ಟಣಗಳಲ್ಲಿಯೂ ಕ್ರೀಡಿಸಿದನು.

೫೯. ಮತ್ತು ಅಪ್ಸರೆಯರೊಡನೆ ಅವನು ದೇವತೆಗಳಿಗೆ ಯೋಗ್ಯವಾದ ಭೋಗಗಳನ್ನು ಅನುಭವಿಸಿದನು. ಪುಣ್ಯ ಮಾಡಿದವರು ಎಲ್ಲಿ ಹೋದರೂ ಅಲ್ಲಿ ಅವರ ಎದುರಿಗೆ ಸಮೃದ್ಧಿಗಳು ಇರುತ್ತವೆ.

೬೦. ಈ ರೀತಿಯಾಗಿ ಮೂರುನಾಲ್ಕು ದಿವಸಗಳು ಇದ್ದು ನರವಾಹನದತ್ತನು ಮಿತ್ರರಾದ ಆ ದೇವಪುತ್ರರನ್ನು ಕುರಿತು ಹೇಳಿದನು:

---

ಪಶ್ಯೋಜ್ಜ್ವಲಂ ಕರ್ಣಿಕಾರಮುಪೇತ್ಯಾಪಿ ವಿಸೌರಭಮ್ ।
ವಿಮುಂಚಂತ್ಯಲಯೋ ನೀಚಂ ಶ್ರೀಮಂತಮಿವ ಸಾಧವಃ ॥ ೫೫
ಪಶ್ಯೇಹ ಕಿಂನರೀಗೀತೈಃ ಕೋಕಿಲಾನಾಂ ಚ ಕೂಜಿತೈಃ ।
ರುತೈರಲೀನಾಂ ಸಂಗೀತಮೃತುರಾಜಸ್ಯ ತನ್ಯತೇ ॥ ೫೬
ಇತ್ಯಾದಿ ದೇವಪುತ್ರಾಸ್ತೇ ಬ್ರುವಾಣಾಸ್ತಾಮದರ್ಶಯನ್ ।
ನರವಾಹನದತ್ತಾಯ ತಸ್ಮೈ ಸ್ವೋಪವನಾವಲೀಮ್ ॥ ೫೭
ತತ್ಪುರೇಷ್ವಪಿ ಚಿಕ್ರೀಡ ಪಶ್ಯನ್ ವತ್ಸೇಶ್ವರಾತ್ಮಜಃ ।
ಸ ವಸಂತೋತ್ಸವೋದ್ದಾಮಪ್ರನೃತ್ಯತ್ಪೌರಚರ್ಚರೀಃ ॥ ೫೮
ಬುಭುಜೇ ಸಾಪ್ಸರಸ್ಕಶ್ಚ ಭೋಗಾನತ್ರಾಮರೋಚಿತಾನ್ ।
ಸುಕೃತೋ ಯತ್ರ ಗಚ್ಛಂತಿ ತತ್ರೈಷಾಮೃದ್ಧಯೋಽಗ್ರತಃ ॥ ೫೯
ಏವಂ ಸ್ಥಿತ್ವಾ ತ್ರಿಚತುರಾನ್ ದಿವಸಾನ್ ದೇವಪುತ್ರಕಾನ್ ।
ನರವಾಹನದತ್ತಸ್ತಾನ್ ಸುಹೃದೋ ನಿಜಗಾದ ಸಃ ॥ ೬೦

೬೧. "ನಾನು ತಂದೆಯನ್ನು ನೋಡಲು ಉತ್ಸುಕನಾಗಿರುವುದರಿಂದ ನನ್ನ ಪಟ್ಟಣಕ್ಕೆ ಹೋಗುತ್ತೇನೆ. ಆದುದರಿಂದ ನೀವು ಆ ಪಟ್ಟಣಕ್ಕೆ ಬಂದು ನೋಡಿರಿ, ಕೃತಾರ್ಥರಾಗಿರಿ."

೬೨. ಅದನ್ನು ಕೇಳಿ ಅವರು ಹೇಳಿದರು: "ಆ ಪಟ್ಟಣದ ಸಾರರೂಪನಾದ ನಿನ್ನನ್ನು ನೋಡಿದೆವು. ಬೇರೆ ಇನ್ನೇನು ? ವಿದ್ಯೆಯನ್ನು ಹೊಂದಿರುವ ನೀನು ನಮ್ಮನ್ನು ನೆನಪಿನಲ್ಲಿಡಬೇಕಷ್ಟೆ"

೬೩. ಅವರು ಹಾಗೆ ಹೇಳಿದ ಮೇಲೆ ಅವರಿಂದ ಬೀಳ್ಕೊಡುಗೆಯನ್ನು ಪಡೆದ ನರವಾಹನದತ್ತನು ಇಂದ್ರನ ಶ್ರೇಷ್ಠವಾದ ರಥವನ್ನು ಬಳಿಗೆ ತಂದ ಮಾತಲಿಯನ್ನು ಕುರಿತು ಹೇಳಿದನು.

೬೪. "ಗೋಮುಖ ಮೊದಲಾದ ನಮ್ಮವರು ಯಾವ ದಿವ್ಯಸರಸ್ಸಿನ ತೀರದಲ್ಲಿ ಇದ್ದಾರೆಯೋ ಆ ಮಾರ್ಗದಿಂದ ನನ್ನನ್ನು ಕೌಶಾಂಬೀ ಪಟ್ಟಣಕ್ಕೆ ಸೇರಿಸು."

೬೫. ಹಾಗೆಯೇ ಆಗಲೆಂದು ಮಾತಲಿಯು ಹೇಳಿದ ಮೇಲೆ ನರವಾಹನದತ್ತನು ಅಪ್ಸರಃ ಸ್ತ್ರೀಯರ ಸಹಿತನಾಗಿ ರಥದಲ್ಲಿ ಹತ್ತಿ ಕುಳಿತು ಆ ಸರಸ್ಸನ್ನು ಸೇರಿದನು ಮತ್ತು ಗೋಮುಖ ಮೊದಲಾದವರನ್ನು ನೋಡಿದನು.

೬೬. 'ನಿಮ್ಮ ದಾರಿಯಿಂದ ಶೀಘ್ರವಾಗಿ ಬನ್ನಿರಿ. ಮನೆಯಲ್ಲಿ ಎಲ್ಲವನ್ನೂ ನಿಮಗೆ ಹೇಳುವೆನು.' ಹೀಗೆ ಅವರನ್ನು ಕುರಿತು ಹೇಳಿ ನರವಾಹನದತ್ತನು ಮತ್ತೆ ಇಂದ್ರನ ರಥದಲ್ಲಿ ಕೌಶಾಂಬಿಯನ್ನು ಸೇರಿದನು.

---

ಗಚ್ಛಾಮ್ಯಹಂ ಸ್ವನಗರೀಂ ತಾತಸಂದರ್ಶನೋತ್ಸುಕಃ ।
ತದ್ಭೂಯಂ ತಾಂ ಪುರೀಮೇತ್ಯ ಕೃತಾರ್ಥಯತ ಪಶ್ಯತ ॥ ೬೧

ತಚ್ಛ್ರುತ್ವಾ ತೇಽಬ್ರುವನ್‌ದೃಷ್ಟಃ ಸಾರಸ್ತಸ್ಯಾಃ ಪುರೋ ಭವಾನ್ ।
ಕಿಮನ್ಯತ್‌ಪ್ರಾಪ್ತವಿದ್ಯೇನ ಸ್ಮರ್ತವ್ಯಾಸ್ತು ವಯಂ ತ್ವಯಾ ॥ ೬೨

ಇತ್ಯುಕ್ತ್ವಾ ಪ್ರತಿಮುಕ್ತಸ್ತೈರುಪನೀತೇಂದ್ರಸದ್ರಥಮ್ ।
ನರವಾಹನದತ್ತೋಽಸೌ ಮಾತಲಿಂ ತಮಭಾಷತ ॥ ೬೩

ಯತ್ರ ದಿವ್ಯಸರಸ್ತೀರೇ ಸ್ಥಿತಾ ಮೇ ಗೋಮುಖಾದಯಃ ।
ತೇನ ಮಾರ್ಗೇಣ ಕೌಶಾಂಬೀಂ ಪುರೀಂ ಪ್ರಾಪಯ ಮಾಮಿತಿ ॥ ೬೪

ತತಸ್ತಥೇತಿ ತೇನೋಕ್ತಃ ಸಾಪ್ಸರಸ್ಕಃ ಸ ತದ್ರಥೇ ।
ಆರುಹ್ಯ ತತ್ಸರಃ ಪ್ರಾಪ ಗೋಮುಖಾದೀನ್ ದದರ್ಶ ಚ ॥ ೬೫

ಆಯಾತ ಸ್ವಪಥಾ ಶೀಘ್ರಂ ಸರ್ವಂ ವಕ್ಷ್ಯಾಮಿ ವೋ ಗೃಹೇ ।
ಇತ್ಯುಕ್ತ್ವಾ ತಾಂಶ್ಚ ಕೌಶಾಂಬೀಂ ಯಯೌ ಶಕ್ರರಥೇನ ಸಃ ॥ ೬೬

೬೭. ಅಲ್ಲಿ ಅಂತರಿಕ್ಷದಿಂದ ಕೆಳಗೆ ಇಳಿದು ಮಾತಲಿಯನ್ನು ಸತ್ಕರಿಸಿ ಕಳುಹಿಸಿ ಅಪ್ಸರೆಯರೊಡನೆ ನರವಾಹನದತ್ತನು ತನ್ನ ಮಂದಿರವನ್ನು ಪ್ರವೇಶಿಸಿದನು.

೬೮–೬೯. ಆ ಅಪ್ಸರೆಯರನ್ನು ಅಲ್ಲಿ ಇರಗೊಳಿಸಿ (ಅಲ್ಲಿಂದ) ಹೋಗಿ, ಅವನ ಆಗಮನದಿಂದ ಹರ್ಷಗೊಂಡ ತಂದೆ ವತ್ಸರಾಜನ, ತಾಯಿ ವಾಸವದತ್ತೆಯ ಮತ್ತು ಪದ್ಮಾವತಿಯ ಪಾದಗಳಿಗೆ ನರವಾಹನದತ್ತನು ನಮಸ್ಕಾರ ಮಾಡಿದನು. ಅವನನ್ನು ನೋಡಿ ಅವರ ಕಣ್ಣುಗಳಿಗೆ ತೃಪ್ತಿಯಾಗಲೇ ಇಲ್ಲ. ಅವರೆಲ್ಲರೂ ಅವನನ್ನು ಅಭಿನಂದಿಸಿದರು.

೭೦. ಅಷ್ಟರಲ್ಲಿ ಅಲ್ಲಿಗೆ ಗೋಮುಖನು ರಥದಲ್ಲಿ ಸಾರಥಿಯೊಡನೆ ಹಾಗೂ ವಿಪ್ರನಾದ ಪ್ರಲಂಬಬಾಹುವಿನೊಡನೆ ಬಂದನು.

೭೧. ಅನಂತರ ಮಂತ್ರಿಗಳೆಲ್ಲರ ಸಮ್ಮುಖದಲ್ಲಿ ತಂದೆಯು ಕೇಳಿದ ಮಾತಿಗೆ ನರವಾಹನದತ್ತನು ತಂದೆಗೆ ಅತ್ಯಂತ ಆಶ್ಚರ್ಯಕರವಾದ ತನ್ನ ವೃತ್ತಾಂತವನ್ನು ಹೇಳಿದನು.

೭೨. "ಈಶ್ವರನು ಪುಣ್ಯಕರ್ಮವುಳ್ಳವನಿಗೆ ಅನುಗ್ರಹವನ್ನು ಮಾಡಲು ಇಚ್ಛಿಸಿದಾಗ ಅವನಿಗೆ ಮಂಗಳದಾಯಕವಾದ ವಿವಾಹ ಮತ್ತು ಮಿತ್ರರ ಸಂಬಂಧವನ್ನು ನೀಡುತ್ತಾನೆ."

೭೩. ಎಂದು ಎಲ್ಲರೂ ಪ್ರಶಂಸೆ ಮಾಡುತ್ತಿರಲಾಗಿ ರಾಜನಾದ ವತ್ಸೇಶ್ವರನು ಸಂತುಷ್ಟನಾಗಿ ಮಗನಿಗೆ ಉಂಟಾದ ಅಚ್ಯುತನ ಅನುಗ್ರಹೋತ್ಸವವನ್ನು ಮಾಡಿದನು.

---

ತತ್ರಾವತೀರ್ಯ ನಭಸಃ ಪೂಜಿತಂ ಪ್ರೇಷ್ಯ ಮಾತಲಿಮ್ ।
ಅಪ್ಸರೋಭಿರ್ಯುತಸ್ತಾಭಿಃ ಸ ವಿವೇಶ ಸ್ವಮಂದಿರಮ್ ॥ ೬೭
ಸ್ಥಾಪಯಿತ್ವಾ ಚ ತಾಸ್ತತ್ರ ಗತ್ವಾ ವತ್ಸೇಶ್ವರಸ್ಯ ಸಃ ।
ತದಾಗಮನಹೃಷ್ಟಸ್ಯ ವವಂದೇ ಚರಣೌ ಪಿತುಃ ॥ ೬೮
ಮಾತುರ್ವಾಸವದತ್ತಾಯಾಃ ಪದ್ಮಾವತ್ಯಾಸ್ತಥೈವ ಚ ।
ಅಭ್ಯನಂದಂಶ್ಚ ತೇಽಪ್ಯೇನಂ ದರ್ಶನಾತೃಪ್ತಚಕ್ಷುಷಃ ॥ ೬೯
ತಾವಚ್ಚ ಸ ರಥಾರೂಢೋ ಗೋಮುಖೋಽತ್ರ ಸಸಾರಥಿಃ ।
ಪ್ರಲಂಬಬಾಹುನಾ ತೇನ ವಿಪ್ರೇಣ ಸಮಮಾಯಯೌ ॥ ೭೦
ಅಥ ಸ್ಥಿತೇ ಮಂತ್ರಿವರ್ಗೇ ಪಿತ್ರಾ ಪೃಷ್ಟಃ ಶಶಂಸ ಸಃ ।
ನರವಾಹನದತ್ತಸ್ತಂ ಸ್ವವೃತ್ತಾಂತಂ ಮಹಾದ್ಭುತಮ್ ॥ ೭೧
ದದಾತಿ ತಸ್ಯ ಕಲ್ಯಾಣಮಿತ್ರಸಂಯೋಗಮೀಶ್ವರಃ ।
ಇಚ್ಛತ್ಯನುಗ್ರಹಂ ಯಸ್ಯ ಕರ್ತುಂ ಸುಕೃತಕರ್ಮಣಃ ॥ ೭೨
ಇತಿ ಶಂಸತ್ಸು ಸರ್ವೇಷು ರಾಜಾ ವತ್ಸೇಶ್ವರೋಽಥ ಸಃ ।
ಚಕಾರ ತುಷ್ಟಸ್ತನಯಸ್ಯಾಚ್ಯುತಾನುಗ್ರಹೋತ್ಸವಮ್ ॥ ೭೩

೭೪–೭೫. ಗೋಮುಖನು ಹರಿಯ ಅನುಗ್ರಹದಿಂದ ಲಭಿಸಿದ ವತ್ಸರಾಜನ ನಾಲ್ವರು ಸೊಸೆಯಂದಿರನ್ನು ಪಾದ ನಮಸ್ಕಾರಕ್ಕಾಗಿ ಕರೆತಂದನು. ದಾಸಿಯರು ಕೇಳಿದಾಗ ಅವರು ತಮ್ಮ ಹೆಸರುಗಳನ್ನು ದೇವರೂಪಾ, ದೇವರತಿ, ದೇವಮಾಲಾ, ದೇವಪ್ರಿಯಾ ಎಂದು ತಿಳಿಸಿದರು. ಆ ಅಪ್ಸರೆಯರನ್ನು ಭಾರ್ಯೆಯರೊಡನೆ ವತ್ಸರಾಜನು ನೋಡಿದನು.

೭೬–೭೭. 'ನಾನೆಲ್ಲಿ, ನನ್ನಲ್ಲಿ ಅಪ್ಸರಸ್ತ್ರೀಯರಾದರೂ ಎಲ್ಲಿ? ಅದೃಷ್ಟವಶಾತ್ ರಾಜಪುತ್ರನಾದ ನರವಾಹನದತ್ತನು ಭೂಲೋಕದಲ್ಲೇ ಸ್ವರ್ಗಲೋಕವನ್ನು ಸೃಷ್ಟಿ ಮಾಡಿದನು' ಎಂಬುದಾಗಿ ಆ ಕೌಶಾಂಬೀ ನಗರವು ಸಂಭ್ರಮದಿಂದ ಸಿಂದೂರವನ್ನು ಎರಚುತ್ತಿದೆಯೋ ಎಂಬಂತೆ ಅಲ್ಲಿ ನಡೆಯುತ್ತಿದ್ದ ಮಹೋತ್ಸವಕ್ಕಾಗಿ ಹಾಕಿದ್ದ ಕೆಂಪುವರ್ಣದ ಧ್ವಜಗಳ ಹಾರಾಟವು ಕಾಣಿಸುತ್ತಿದ್ದು ಅದರಿಂದ ಆ ನಗರ ಕಂಗೊಳಿಸುತ್ತಿತ್ತು.

೭೮. ನರವಾಹನದತ್ತನು ತಾಯಿತಂದೆಯರ ನೇತ್ರಗಳಿಗೆ ಸಂತೋಷವನ್ನುಂಟುಮಾಡುತ್ತಾ ಮಾರ್ಗದಲ್ಲಿ ಉತ್ಸುಕರಾಗಿ ಮುಖವನ್ನು ಮೇಲೆತ್ತಿ ನೋಡುತ್ತಿದ್ದ ತನ್ನ ಇತರ ಭಾರ್ಯೆಯರನ್ನು ಆದರದಿಂದ ವಿಚಾರಿಸಿದನು.

೭೯. ನಾಲ್ಕು ದಿನಗಳು ನಾಲ್ಕು ವರ್ಷಗಳೋ ಎಂಬಂತೆ ಕೃಶರಾಗಿದ್ದ ಅವರು ತಮ್ಮ ವಿರಹ ವೇದನೆಯನ್ನು ವರ್ಣಿಸುತ್ತಾ ನರವಾಹನದತ್ತನನ್ನು ಸಂತೋಷಗೊಳಿಸಿದರು.

೮೦. ಗೋಮುಖನು ವನವಾಸದಲ್ಲಿ ರಥ ಮತ್ತು ಕುದುರೆಗಳನ್ನು ರಕ್ಷಿಸುತ್ತಿದ್ದ ಪ್ರಲಂಬಬಾಹುವು ಸಿಂಹಾದಿಗಳನ್ನು ಕೊಂದ ಶೌರ್ಯವನ್ನು ವರ್ಣಿಸಿದನು.

---

ದದರ್ಶ ಪಾದಪತನಾಯಾನೀತಾ ಗೋಮುಖೇನ ಚ ।
ಹರಿಪ್ರಸಾದಲಬ್ಧಾಸ್ತಾಃ ಸದಾರೋಽಪ್ಸರಸಃ ಸ್ನುಷಾಃ ॥ ೭೪
ದೇವರೂಪಾಂ ದೇವರತಿಂ ದೇವಮಾಲಾಂ ತಥೈವ ಚ ।
ದೇವಪ್ರಿಯಾಂ ಚತುರ್ಥೀಂ ಚ ಚೇಟೀಭಿಃ ಪೃಷ್ಟನಾಮಕಾಃ ॥ ೭೫
ಕ್ವಾಹಂ ಕ್ವ ಮಯ್ಯಪ್ಸರಸೋ ದಿಷ್ಟ್ಯಾಹಂ ರಾಜಸೂನುನಾ ।
ನರವಾಹನದತ್ತೇನ ಭುವಿ ಸ್ವರ್ಗರೀ ಕೃತಾ ॥ ೭೬
ಇತೀವಾವಕಿರಂತೀ ಸಾ ಸಿಂದೂರಂ ವಿತತೋತ್ಸವಾ ।
ಚಲದ್ರಕ್ತಪತಾಕಾಭಿಃ ಕೌಶಾಂಬೀ ದದೃಶೇ ತದಾ । ೭೭
ನರವಾಹನದತ್ತಶ್ಚ ಪಿತ್ರೋರ್ದತ್ತೋತ್ಸವೋ ದೃಶೋಃ ।
ಅನ್ಯಾ ಸಂಭಾವಯಾಮಾಸ ಭಾರ್ಯಾ ಮಾರ್ಗೋನ್ಮುಖೀರ್ನಿಜಾಃ ॥ ೭೮
ತಾಶ್ಚತುರ್ಭಿರ್ದಿನೈರ್ವರ್ಷೈರಿವ ತಂ ಚ ಕೃಶೀಕೃತಾಃ ।
ಅನಂದಯನ್ವರ್ಣಯಂತ್ಯಸ್ತಾಂ ತಾಂ ವಿರಹವೇದನಾಮ್ ॥ ೭೯
ಗೋಮುಖೋ ವನವಾಸೇ ಚ ರಕ್ಷತೋ ರಥವಾಜಿನಃ ।
ಪ್ರಲಂಬಬಾಹೋಃ ಸಿಂಹಾದಿವಧಶೌರ್ಯಮವರ್ಣಯತ್ ॥ ೮೦

೮೧–೮೨. ಈ ರೀತಿಯಾಗಿ ಕರ್ಣಸುಖದಾಯಕವಾಗಿ ನಿರಂತರವಾಗಿ ಕಥಾಲಾಪಗಳನ್ನು ಕೇಳುತ್ತಾ ಹಾಗೂ ಕಾಂತೆಯರ ನಯನಾಮೃತರೂಪವಾದ ಸೌಂದರ್ಯವನ್ನು ನೋಡುತ್ತಾ ಚಾಟುವಚನಗಳನ್ನು ಆಡುತ್ತಾ ಮಾದಕಪಾನೀಯಗಳನ್ನು ಸೇವಿಸುತ್ತಾ ನರವಾಹನದತ್ತನು ಸಚಿವರೊಡಗೂಡಿ ಕೌಶಾಂಬಿಯಲ್ಲಿ ಸುಖವಾಗಿ ವಾಸಿಸಿದನು.

೮೩. ಒಮ್ಮೆ ಅಲಂಕಾರವತಿಯ ವಾಸಗೃಹದಲ್ಲಿ ಒಳಗೆ ಮಿತ್ರಸಮೇತನಾಗಿ ಇದ್ದಾಗ ಅವನಿಗೆ ಹೊರಗೆ ವಾದ್ಯಗಳ ಕೋಲಾಹಲವು ಕೇಳಿಸಿತು.

೮೪. ಆಗ ತನ್ನ ಸೇನಾಪತಿಯಾದ ಹರಿಶಿಖನನ್ನು ನರವಾಹನದತ್ತನು ಕೇಳಿದನು: "ಇಲ್ಲಿ ಇದ್ದಕ್ಕಿದ್ದಂತೆ ದೊಡ್ಡ ತೂರ್ಯನಾದ ಎಲ್ಲಿಂದ (ಏಕೆ) ಇರಬಹುದು" ?

೮೫. ಇದನ್ನು ಕೇಳಿದ ಒಡನೆಯೇ ಆ ಸೇನಾಪತಿ ಹರಿಶಿಖನು ಹೊರಗೆ ಹೋಗಿ ಕ್ಷಣಮಾತ್ರದಲ್ಲಿ ಪುನಃ ಪ್ರವೇಶಿಸಿ ವತ್ಸರಾಜಪುತ್ರನಾದ ಪ್ರಭುವನ್ನು ಕುರಿತು ವಿಜ್ಞಾಪಿಸಿದನು.

೮೬. "ದೇವ ! ರುದ್ರನೆಂಬ ವರ್ತಕನು ಈ ನಗರದಲ್ಲಿ ಇದ್ದನು. ಅವನು ಇಲ್ಲಿಂದ ವ್ಯಾಪಾರದ ನಿಮಿತ್ತದಿಂದ ಸುವರ್ಣದ್ವೀಪಕ್ಕೆ ಹೋದನು.

೮೭. ಅವನು ಧನರಾಶಿಯನ್ನು ಸಂಪಾದಿಸಿ ಬರುತ್ತಿರುವಾಗ ಸಮುದ್ರದಲ್ಲಿ ಹಡಗು ಮುರಿದುದರಿಂದ ಅವನ ಧನಸಂಪತ್ತು ಮುಳುಗಿಹೋಗಿ ನಾಶವಾಯಿತು.

---

ಏವಂ ಶ್ರುತಿಸುಖಾನ್ಶೃಣ್ವನ್ ಕಥಾಲಾಪಾನಯಂತ್ರಣಾನ್ ।
ನಿರ್ವರ್ಣಯಂಶ್ಚ ಕಾಂತಾನಾಂ ರೂಪಂ ಸ ನಯನಾಮೃತಮ್ ॥ ೮೧
ಕುರ್ವಂಶ್ಚಾಟೂನಿ ಚ ಪಿಬನ್ಮಧೂನಿ ಸಚಿವೈರ್ಯುತಃ ।
ನರವಾಹನದತ್ತೋಽತ್ರ ತಂ ಕಾಲಮವಸತ್ಸುಖೀ ॥ ೮೨
ಏಕದಾಂತರಲಂಕಾರವತೀವಾಸಗೃಹೇ ಸ್ಥಿತಃ ।
ಸವಯಸ್ಯಃ ಸ ಶುಶ್ರಾವ ತೂರ್ಯಕೋಲಾಹಲಂ ಬಹಿಃ ॥ ೮೩
ತತೋ ಹರಿಶಿಖಂ ಸೇನಾಪತಿಂ ನಿಜಮುವಾಚ ಸಃ ।
ಅಕಸ್ಮಾತ್ ಕುತ ಏತತ್ಸ್ಯಾತ್ತೂರ್ಯನಾದೋ ಮಹಾನಿಹ ॥ ೮೪
ಏತಚ್ಛ್ರುತ್ವೈವ ನಿರ್ಗತ್ಯ ಪ್ರವಿಶ್ಯ ಚ ಸ ತಂ ಕ್ಷಣಾತ್ ।
ವ್ಯಜಿಜ್ಞಪದ್ಧರಿಶಿಖೋ ವತ್ಸರಾಜಸುತಂ ಪ್ರಭುಮ್ ॥ ೮೫
ರುದ್ರೋ ನಾಮ ವಣಿಗ್ದೇವ ನಗರ್ಯಾಮಿಹ ವಿದ್ಯತೇ ।
ಇತಃ ಸುವರ್ಣದ್ವೀಪಂ ಚ ಸ ಜಗಾಮ ವಣಿಜ್ಯಯಾ ॥ ೮೬
ಆಗಚ್ಛತೋ ನಿಜಸ್ತಸ್ಯ ಸಂಪ್ರಾಪ್ತೋಽಪ್ಯರ್ಥಸಂಚಯಃ ।
ಅಬ್ಧೌ ವಹನಭಂಗೇನ ನಿಮಗ್ನೋ ನಾಶಮಾಗತಃ ॥ ೮೭

೮೮. ದೇವ ! ಅವನು ಮಾತ್ರ ಒಬ್ಬಂಟಿಗನಾಗಿ ಆ ಆಪತ್ತಿನಿಂದ ಬದುಕಿ ಸಮುದ್ರವನ್ನು (ಹೇಗೋ) ದಾಟಿ ಆರನೆಯ ದಿವಸ ಇಲ್ಲಿ ತನ್ನ ಮನೆಗೆ ಬಂದನು.

೮೯. ದುಃಖಿತನಾದ ಅವನು ಕೆಲವು ದಿನಗಳು ಇಲ್ಲಿ ಇರುವಾಗ ದೈವವಶಾತ್ ಅವನ ತೋಟದಲ್ಲಿ ದೊಡ್ಡನಿಧಿಯು ಅವನಿಗೆ ಸಿಕ್ಕಿತು.

೯೦. ಅವನ ವಂಶದಲ್ಲಿ ಹುಟ್ಟಿದವರಿಂದ ವತ್ಸೇಶ್ವರನು ಅದನ್ನು ತಿಳಿದುಕೊಂಡನು. ಆದುದರಿಂದ ಇಂದು ಆ ವರ್ತಕನು ಬಂದು ಪ್ರಭುವಿಗೆ ವಿಜ್ಞಾಪಿಸಿದನು.

೯೧. "ರತ್ನರಾಶಿಗಳ ಸಹಿತವಾಗಿ ನಾಲ್ಕುಕೋಟಿ ಸುವರ್ಣನಾಣ್ಯಗಳು ನನಗೆ ಸಿಕ್ಕಿದೆ. ಪ್ರಭುವು ಅಪ್ಪಣೆ ಮಾಡುವುದಾದರೆ ಅವುಗಳನ್ನು ಅರ್ಪಿಸುವೆನು".

೯೨. ""ಸಮುದ್ರವು ಅವನ ಸಂಪತ್ತನ್ನು ಅಪಹರಿಸಿದುದರಿಂದ ದೀನನಾದ ವರ್ತಕನನ್ನು ನೋಡಿಯೋ ಎಂಬಂತೆ ಬ್ರಹ್ಮದೇವನು ದಯೆಯಿಂದ ಸಮಪಾಲು ಸಂಪತ್ತನ್ನು ಕೊಟ್ಟಿದ್ದಾನೆ. ಅಂತಹ ನಿನ್ನನ್ನು ತಿಳುವಳಿಕೆಯಿರುವ ಯಾವನು ತಾನೆ ಲೂಟಿ ಮಾಡುತ್ತಾನೆ ?

೯೩. ಹೋಗು. ನಿನ್ನ ಭೂಮಿಯಲ್ಲಿ ಸಿಕ್ಕಿದ ಧನವನ್ನು ಯಥೇಚ್ಛವಾಗಿ ಅನುಭವಿಸು." ಹೀಗೆ ವತ್ಸರಾಜನು ಆ ವರ್ತಕನಿಗೆ ವಿಶೇಷವಾಗಿ ಆದೇಶಿಸಿದನು.

---

ಉತ್ತೀರ್ಣಶ್ಚಾತ್ರ್ಯೈವೈಕೋ ದೇವ ಜೀವನ್ಸ ವಾರಿಧೇಃ ।
ಪ್ರಾಪ್ತಶ್ಚಾದ್ಯ ದಿನಂ ಷಷ್ಠಮಿಹಾಪನ್ನೋ ನಿಜಂ ಗೃಹಮ್ ॥ ೮೮
ದಿನಾನಿ ಕತಿಚಿದ್ಯಾವದಿಹ ತಿಷ್ಠತಿ ದುಃಖಿತಃ ।
ತಾವತ್ಸ್ವಾರಾಮತೋ ದೈವಾತ್ ಪ್ರಾಪ್ತ್ತೇನ ನಿಧಿರ್ಮಹಾನ್ ॥ ೮೯
ತದ್ಗೋತ್ರಜಾನಾಂ ಚ ಮುಖಾಜ್ಜ್ಞಾತಂ ವತ್ಸೇಶ್ವರೇಣ ತತ್ ।
ತತೋಽದ್ಯಾಗತ್ಯ ತೇನಾಸೌ ವಿಜ್ಞಪ್ತೋ ವಣಿಜಾ ಪ್ರಭುಃ ॥ ೯೦
ಸರತ್ನೌಘಾ ಮಯಾ ಲಬ್ಧಾಶ್ಚತಸ್ರೋ ಹೇಮಕೋಟಯಃ ।
ತದಾದಿಶತಿ ದೇವಶ್ಚೇದರ್ಪಯಿಷ್ಯಾಮಿ ತಾ ಇತಿ ॥ ೯೧
ಜಲಾಶಯೇನ ಮುಷಿತಂ ದೀನಂ ದೃಷ್ಟ್ವೇವ ವೇಧಸಾ ।
ಕೃಪಯಾ ಸಂವಿಭಕ್ತಂ ತ್ವಾಂ ಕೋ ಮುಷ್ಣಾತ್ಯಜಡಾಶಯಃ ॥ ೯೨
ಗಚ್ಛ ಭುಂಕ್ಷ್ವ ಯಥಾಕಾಮಂ ಧನಂ ಪ್ರಾಪ್ತಂ ಸ್ವಭೂಮಿತಃ ।
ಇತಿ ವತ್ಸೇಶ್ವರೇಣಾಪಿ ವ್ಯಾದಿಷ್ಟೋಽಸೌ ವಣಿಕ್ತತಃ ॥ ೯೩

೯೪. ಆ ವರ್ತಕನು ರಾಜನ ಕಾಲುಗಳಿಗೆ ನಮಸ್ಕರಿಸಿ ಸಂತೋಷಾತಿಶಯದಿಂದ ಕಹಳೆಗಳನ್ನು ಊದಿಸುತ್ತಾ ಅನುಚರಸಹಿತನಾಗಿ ತನ್ನ ಮನೆಗೆ ಹೋಗುತ್ತಿರುವನು.

೯೫. ಹೀಗೆ ಹರಿಶಿಖನು ಹೇಳಿದುದನ್ನು ಕೇಳಿ ತಂದೆಯ ಧಾರ್ಮಿಕತೆಯ ಬಗ್ಗೆ ತಿಳಿದು ನರವಾಹನದತ್ತನು ಆಶ್ಚರ್ಯಗೊಂಡವನಾಗಿ ತನ್ನ ಸಚಿವರನ್ನು ಕುರಿತು ಹೇಳಿದನು:

೯೬. "ಒಂದು ವೇಳೆ ವಿಧಿಯು ಹಣವನ್ನು ಅಪಹರಿಸಿದರೆ ಅದರ ಹಿಂದೆಯೇ ಮತ್ತೆ ಕೊಡುತ್ತದೆಯೇನು ? ಆಶ್ಚರ್ಯವು. ಮನುಷ್ಯರ ಉನ್ನತಿ ಮತ್ತು ಪತನಗಳೊಡನೆ ವಿಧಿಯು ಆಟವಾಡುತ್ತದೆಯೋ ಎಂಬಂತಿದೆ."

೯೭. ಅದನ್ನು ಕೇಳಿ ಗೋಮುಖನು ಹೇಳಿದನು: "ವಿಧಿಯ ಗತಿಯು ಇಂತಹುದೇ ಆಗಿರುತ್ತದೆ. ಈ ವಿಷಯದಲ್ಲಿ ಸಮುದ್ರಶೂರನ ಕಥೆಯನ್ನು ಕೇಳು.

೯೮. ಹಿಂದೆ ಹರ್ಷವರ್ಮನೆಂಬ ರಾಜನಿಗೆ ಸೇರಿದ್ದ ಹರ್ಷಪುರವೆಂಬ ಪಟ್ಟಣವು ಇತ್ತು. ಅದರಲ್ಲಿ ಉತ್ತಮವಾದ ರಾಜ್ಯಭಾರದಿಂದ ಅವನು ತನ್ನ ಪ್ರಜೆಗಳನ್ನು ಸುಖವಾಗಿ ಇಟ್ಟಿದ್ದನು.

೯೯. ಆ ಪಟ್ಟಣದಲ್ಲಿ ಉತ್ತಮ ವಂಶದಲ್ಲಿ ಹುಟ್ಟಿದವನೂ ಧಾರ್ಮಿಕನೂ ಧೀರಸತ್ತ್ವನೂ ಮಹಾಧನಿಕನೂ ಆದ ಸಮುದ್ರಶೂರನೆಂಬ ದೊಡ್ಡವರ್ತಕನೊಬ್ಬನು ಇದ್ದನು.

---

ಸ ಏಷ ಪಾದಯೋ ರಾಜ್ಞಃ ಪತಿತ್ವಾ ಹರ್ಷನಿರ್ಭರಃ ।
ತೂರ್ಯಾಣಿ ವಾದಯನ್‌ಯಾತಿ ಸ್ವಗೃಹಂ ಸಾನುಗೋ ವಣಿಕ್ ॥ ೯೪
ಏವಂ ಹರಿಶಿಖೇನೋಕ್ತು ಶ್ರುತ್ವಾ ಧಾರ್ಮಿಕತಾಂ ಪಿತುಃ ।
ನರವಾಹನದತ್ತಃ ಸ್ವಾನ್ ಸಚಿವಾನ್ ವಿಸ್ಮಿತೋऽಬ್ರವೀತ್ ॥ ೯೫
ಯದಿತಾವದ್ಧರತ್ಯರ್ಥಾಂಸ್ತದನ್ವೇವ ದದಾತಿ ಕಿಮ್ ।
ಚಿತ್ರಮುಚ್ಛ್ರಾಯಪಾತಾಭ್ಯಾಂ ಕ್ರೀಡತೀವ ವಿಧಿರ್ನೃಣಾಮ್ ॥ ೯೬
ತಚ್ಛ್ರುತ್ವಾ ಗೋಮುಖೋऽವಾದೀದೀದೃಶ್ಯೇವ ಗತಿರ್ವಿಧೇಃ ।
ಸಮುದ್ರಶೂರಸ್ಯ ಕಥಾ ತಥಾ ಚಾತ್ರ ನಿಶಮ್ಯತಾಮ್ ॥ ೯೭
ಬಭೂವ ನಗರಂ ಪೂರ್ವಂ ನೃಪತೇರ್ಹರ್ಷವರ್ಮಣಃ ।
ಸ್ಥಿತಂ ಹರ್ಷಪುರಂ ನಾಮ ಸೌರಾಜ್ಯಸುಖಿತಪ್ರಜಮ್ ॥ ೯೮
ತಸ್ಮಿನ್ ಸಮುದ್ರಶೂರಾಖ್ಯೋ ನಗರೇऽಭೂನ್ಮಹಾವಣಿಕ್ ।
ಕುಲಜೋ ಧಾರ್ಮಿಕೋ ಧೀರಸತ್ತ್ವೋ ಬಹುಧನೇಶ್ವರಃ ॥ ೯೯

೧೧೦. ಒಂದು ಬಾರಿ ಆ ವರ್ತಕನು ವ್ಯಾಪಾರದ ನಿಮಿತ್ತ ಸುವರ್ಣದ್ವೀಪಕ್ಕೆ ಹೊರಟು ಮಹಾಸಮುದ್ರದ ತೀರವನ್ನು ಸೇರಿ ಹಡಗನ್ನು ಹತ್ತಿದನು.

೧೧೧–೧೧೨. ಸಮುದ್ರದಲ್ಲಿ ಆ ಹಡಗಿನಲ್ಲಿ ಅವನು ಹೋಗುತ್ತಿರುವಾಗ ದೂರವು ಸ್ವಲ್ಪವೇ ಉಳಿದಿದ್ದಾಗ ಭಯಂಕರವಾದ ಮೋಡವೂ ಚಂಡಮಾರುತವೂ ಹುಟ್ಟಿ ಸಮುದ್ರವು ಅಲ್ಲೋಲಕಲ್ಲೋಲವಾಯಿತು. ವೇಗವಾದ ಅಲೆಗಳು ಎದ್ದು ಹಡಗನ್ನು ದೂರ ಎಸೆದುದರಿಂದ ಹಾಗೂ ಮೊಸಳೆಯು ಅದರ ಮೇಲೆ ಆಕ್ರಮಣ ಮಾಡಿದುದರಿಂದ ಹಡಗು ಮುರಿದು ಹೋಯಿತು. ಆಗ ವರ್ತಕನು ತನ್ನ ಸಾಮಗ್ರಿಗಳನ್ನು ಕಟ್ಟಿಕೊಂಡು ಸಮುದ್ರಕ್ಕೆ ಧುಮುಕಿದನು.

೧೧೩. ಕೈಗಳನ್ನು ಬೀಸಿ ಅವನು ಈಜತೊಡಗಿದಾಗ ಅದೇ ಕ್ಷಣದಲ್ಲಿ ಬಹಳ ಹಿಂದೆ ಮೃತನಾದ ಒಬ್ಬ ಪುರುಷನ ಶವವು ಅವನ ಬಳಿಗೆ ಬಂದಿತು.

೧೧೪. ಕೈಗಳಿಂದ ಆ ಪುರುಷ ಶವವನ್ನು ಹತ್ತಿ ವಿಧಿಯ ಬೆಂಬಲದಿಂದ ಸಮುದ್ರವನ್ನು ದಾಟಿದ ಅವನನ್ನು ಅನುಕೂಲವಾದ ಗಾಳಿಯು ಸುವರ್ಣದ್ವೀಪಕ್ಕೆ ಒಯ್ದಿತು.

೧೧೫. ಅಲ್ಲಿ ಆ ಮೃತಮನುಷ್ಯನ ಶವದಿಂದ ಮರಳಿನ ರಾಶಿಯ ಮೇಲೆ ಇಳಿದ ಅವನು ಆ ಮನುಷ್ಯನ ಸೊಂಟದಲ್ಲಿ ಒಂದು ಬಟ್ಟೆಗಳ ಗಂಟು ಕಟ್ಟಿದ್ದುದನ್ನು ನೋಡಿದನು.

---

ಸ ವಣಿಜ್ಯಾವಶಾದ್ಗಚ್ಛನ್ ಸುವರ್ಣದ್ವೀಪಮೇಕದಾ ।
ಆರುರೋಹ ಪ್ರವಹಣಂ ತಟಂ ಪ್ರಾಪ್ಯ ಮಹಾಂಬುಧೇಃ ॥ ೧೧೦

ಗಚ್ಛತಸ್ತಸ್ಯ ತೇನಾಬ್ಧೌ ಕಿಂಚಿಚ್ಛೇಷೇ ತದಧ್ವನಿ ।
ಘೋರಃ ಸಮುದಭೂನ್ಮೇಘೋ ವಾಯುಶ್ಚ ಕ್ಷೋಭಿತಾರ್ಣವಃ ॥ ೧೧೧

ತೇನೋರ್ಮಿವೇಗವಿಕ್ಷಿಪ್ತೇ ವಹನೇ ಮಕರಾಹತೇ ।
ಭಗ್ನೇ ಪರಿಕರಂ ಬದ್ಧ್ವಾ ಸೋಽಂಬುಧಾವಪತದ್ವಣಿಕ್ ॥ ೧೧೨

ಯಾವಚ್ಚ ಬಾಹುವಿಕ್ಷೇಪೈರ್ವೀರೋಽತ್ರ ತರತಿ ಕ್ಷಣಮ್ ।
ತಾವಚ್ಚಿರಮೃತಂ ಪ್ರಾಪ ಪುರುಷಂ ಪವನೇರಿತಮ್ ॥ ೧೧೩

ತದಾರೂಢಶ್ಚ ಬಾಹುಭ್ಯಾಂ ಕ್ಷಿಪ್ತಾಂಬುರ್ವಿಧಿನೈವ ಸಃ ।
ನೀತಃ ಸುವರ್ಣದ್ವೀಪಂ ತದನುಕೂಲೇನ ವಾಯುನಾ ॥ ೧೧೪

ತತ್ರಾವತೀರ್ಣಃ ಪುಲಿನೇ ಸ ತಸ್ಮಾನ್ಮೃತಮಾನುಷಾತ್ ।
ಕಟೀನಿಬದ್ಧಂ ಸಗ್ರಂಥಿಂ ತಸ್ಯಾಪ್ಯೈಕ್ಷತ ಶಾಟಕಮ್ ॥ ೧೧೫

೧೦೬. ಆ ಪುರುಷನ ಸೊಂಟದಿಂದ ಆ ಬಟ್ಟೆಯನ್ನು ಬಿಚ್ಚಿ ನೋಡಿದಾಗ ಅದರೊಳಗೆ ದಿವ್ಯವೂ ರತ್ನಸಮೃದ್ಧವೂ ಆದ ಒಂದು ಕಂಠಹಾರವು ಕಂಡಿತು.

೧೦೭. ಅಮೂಲ್ಯವಾದ ಆ ಕಂಠಹಾರವನ್ನು ತೆಗೆದುಕೊಂಡು ನಂತರ ಸ್ನಾನ ಮಾಡಿದ ಅವನು ಸಮುದ್ರದಲ್ಲಿ ಹಾಳಾದ ತನ್ನ ಧನವು ಆ ಕಂಠಹಾರದ ಮುಂದೆ ಹುಲ್ಲುಕಡ್ಡಿಯೆಂದು ಭಾವಿಸುತ್ತಾ ಸಂತೋಷಪಟ್ಟನು.

೧೦೮. ಅನಂತರ ಕ್ರಮೇಣ ಕಲಶಪುರವೆಂಬ ಪಟ್ಟಣಕ್ಕೆ ಹೋಗಿ ಕಂಠಹಾರವನ್ನು ಕೈಯಲ್ಲಿಟ್ಟುಕೊಂಡು ದೇವಾಲಯವೊಂದನ್ನು ಪ್ರವೇಶಿಸಿದನು.

೧೦೯. ನೀರಿನಲ್ಲಿ ಈಜಿದುದರಿಂದ ಬಹಳ ಬಳಲಿದ್ದ ಅವನು ನೆರಳಿನಲ್ಲಿ ಕುಳಿತುಕೊಂಡು ವಿಧಿಯಿಂದ ಮೋಹಿತನಾಗಿ ಮೆಲ್ಲಗೆ ನಿದ್ರೆಗೆ ಜಾರಿದನು.

೧೧೦. ಅಲ್ಲಿಗೆ ಅಕಸ್ಮಾತ್ತಾಗಿ ಬಂದ ಪುರರಕ್ಷಕರು ನಿದ್ರೆ ಮಾಡುತ್ತಿದ್ದ ಆ ವರ್ತಕನ ಕೈಯಲ್ಲಿ ಹೊರಗಡೆಗೆ ಕಾಣುತ್ತಿದ್ದ ಆ ಕಂಠಹಾರವನ್ನು ನೋಡಿದರು.

೧೧೧. "ರಾಜಪುತ್ರಿಯಾದ ಚಕ್ರಸೇನೆಯ ಕಂಠದಿಂದ ಕಳವಾದ ಆ ಕಂಠಹಾರವೇ ಇದು. ನಿಜವಾಗಿಯೂ ಇವನೇ ಆ ಕಳ್ಳನು.'

೧೧೨. ಹೀಗೆ ಚಿಂತಿಸಿ ಅವರು ಆ ವರ್ತಕನನ್ನು ಎಚ್ಚರಗೊಳಿಸಿ ರಾಜಗೃಹಕ್ಕೆ ಒಯ್ದರು. ಅಲ್ಲಿ ರಾಜನೇ ಸ್ವತಃ ಕೇಳಿದಾಗ ವರ್ತಕನು ನಡೆದ ವೃತ್ತಾಂತವನ್ನು ನಡೆದಂತೆಯೇ ಹೇಳಿದನು.

---

ಉನ್ಮುಚ್ಯ ವೀಕ್ಷತೇ ಯಾವಚ್ಚಾಟಕಂ ಕಟಿತೋಽಸ್ಯ ತತ್ ।
ತಾವತ್ತದಂತರಾದ್ದಿವ್ಯಂ ರತ್ನಾಢ್ಯಂ ಪ್ರಾಪ ಕಂಠಕಮ್ ॥ ೧೦೬
ತಂ ದೃಷ್ಟ್ವಾನರ್ಘಮಾದಾಯ ಕೃತಸ್ನಾನಸ್ತುತೋಷ ಸಃ ।
ಮನ್ವಾನೋಽಬ್ಧೌ ವಿನಷ್ಟಂ ತದ್ಧನಂ ತಸ್ಯಾಗ್ರತಸ್ತೃಣಮ್ ॥ ೧೦೭
ತತೋ ಗತ್ವಾತ್ರಕಲಶಪುರಾಖ್ಯಂ ನಗರಂ ಕ್ರಮಾತ್ ।
ಹಸ್ತಸ್ಥಕಂಠಕೋ ದೇವಕುಲಮೇಕಂ ವಿವೇಶ ಸಃ ॥ ೧೦೮
ತತ್ರ ಚ್ಛಾಯೋಪವಿಷ್ಟಃ ಸ ವಾರಿವ್ಯಾಯಾಮತೋ ಭೃಶಮ್ ।
ಪರಿಶ್ರಾಂತಃ ಶನೈರ್ನಿದ್ರಾಂ ಯಯೌ ವಿಧಿವಿಮೋಹಿತಃ ॥ ೧೦೯
ಸುಪ್ತಸ್ಯ ತತ್ರ ಚಾಕಸ್ಮಾದಾಗತಾಃ ಪುರರಕ್ಷಿಣಃ ।
ದದೃಶುಸ್ತಸ್ಯ ಹಸ್ತಸ್ಥಂ ಕಂಠಕಂ ತಮಸಂವೃತಮ್ ॥ ೧೧೦
ಅಯಂ ಸ ಕಂಠಕೋ ರಾಜಸುತಾಯಾ ಇಹ ಕಂಠತಃ ।
ಹಾರಿಶ್ಚಕ್ರಸೇನಾಯಾ ಧ್ರುವಂ ಚೌರೋಽಯಮೇವ ಸಃ ॥ ೧೧೧
ಇತ್ಯುಕ್ತ್ವಾ ತೈಃ ಪ್ರಬೋಧ್ಯಾಸೌ ನಿನ್ಯೇ ರಾಜಕುಲಂ ವಣಿಕ್ ।
ತತ್ರ ಪೃಷ್ಟಃ ಸ್ವಯಂ ರಾಜ್ಞಾ ಸ ಯಥಾವೃತ್ತಮಭ್ಯಧಾತ್ ॥ ೧೧೨

೧೧೩–೧೧೪. “ಇವನು ಸುಳ್ಳು ಹೇಳುತ್ತಾನೆ. ಇವನು ಕಳ್ಳನು. ಈ ಕಂಠಹಾರವನ್ನು ನೋಡಿರಿ.” ಎಂದು ಆ ಕಂಠಹಾರವನ್ನು ಚಾಚಿ ಆ ರಾಜನು ಸಭಾಜನರನ್ನು ಕುರಿತು ಹೇಳುವಷ್ಟರಲ್ಲಿ ಪ್ರಕಾಶಿಸುತ್ತಿದ್ದ ಆ ಹಾರವನ್ನು ನೋಡಿ ಅಂತರಿಕ್ಷದಿಂದ ವೇಗವಾಗಿ ಕೆಳಗೆ ಹಾರಿಬಂದ ಒಂದು ಹದ್ದು ಆ ಹಾರವನ್ನು ಅಪಹರಿಸಿ ಎಲ್ಲಿಗೋ ಕಾಣದೆ ಹೊರಟುಹೋಯಿತು.

೧೧೫ ನಂತರ ಅತ್ಯಂತ ದುಃಖಿತನಾಗಿ ಶಿವನನ್ನು ರಕ್ಷಿಸೆಂದು ಕೂಗಿಕೊಳ್ಳುತ್ತಿದ್ದ ಆ ವರ್ತಕನನ್ನು ವಧಿಸಲು ಕ್ರೋಧಾವಿಷ್ಟನಾದ ರಾಜನು ಉದ್ಯುಕ್ತನಾಗಿರುವಾಗ ಅವನಿಗೆ ಅಂತರಿಕ್ಷದಿಂದ ಒಂದು ವಾಣಿಯು ಕೇಳಿಸಿತು.

೧೧೬ “ರಾಜನೇ ! ಇವನನ್ನು ಕೊಲ್ಲಬೇಡ. ಇವನು ಹರ್ಷಪುರದಿಂದ (ಬಂದಿರುವ) ವರ್ತಕನು. ಸಮುದ್ರಶೂರನೆಂಬ ಹೆಸರುಳ್ಳ ಇವನು ಸಾಧುಸ್ವಭಾವದವನು. ನಿನ್ನ ರಾಜ್ಯಕ್ಕೆ ಬಂದಿದ್ದಾನೆ

೧೧೭ ಕಂಠಹಾರವನ್ನು ಅಪಹರಿಸಿದ ಕಳ್ಳನು ಪುರರಕ್ಷಕರ ಭಯದಿಂದ ವಿಹ್ವಲನಾಗಿ ತಪ್ಪಿಸಿಕೊಂಡು ರಾತ್ರಿಯಲ್ಲಿ ಸಮುದ್ರದಲ್ಲಿ ಬಿದ್ದು ಸತ್ತನು.

೧೧೮. ಈ ವರ್ತಕನ ಹಡಗು ಮುರಿದಾಗ ಆ ಕಳ್ಳನ ಶರೀರವು ಸಿಕ್ಕಿ ಇವನು ಅದನ್ನು ಹತ್ತಿ ಸಮುದ್ರವನ್ನು ದಾಟಿ ಇಲ್ಲಿಗೆ ಬಂದಿದ್ದಾನೆ.

---

ಮಿಥ್ಯಾ ವಕ್ತ್ಯೇಷ ಚೌರೋಽಯಮಿಮಂ ಪಶ್ಯತ ಕಂಠಕಮ್ ।
ಇತಿ ಪ್ರಸಾರ್ಯ ತಂ ರಾಜಾ ಯಾವತ್ಸಭ್ಯಾನ್ ಬ್ರವೀತಿ ಸಃ ॥ ೧೧೩
ತಾವತ್ ಪ್ರಭಾಸ್ವರಂ ದೃಷ್ಟ್ವಾ ನಿಪತ್ಯ ನಭಸೋ ಜವಾತ್ ।
ಗೃಧ್ರಸ್ತಂ ಕಂಠಕಂ ಹೃತ್ವಾ ಜಗಾಮ ಕ್ವಾಪ್ಯದರ್ಶನಮ್ ॥ ೧೧೪
ಅಥಾತ್ಯಾರ್ತಸ್ಯ ವಣಿಜಃ ಕ್ರುದತಃ ಶರಣಂ ಶಿವಮ್ ।
ವಧೇ ರಾಜ್ಞಾ ಕ್ರುಧಾವಿಷ್ಟೇ ಶುಶ್ರುವೇ ಭಾರತೀ ದಿವಃ ॥ ೧೧೫
ಮಾ ಸ್ಮ ರಾಜನ್ವಧೀರೇನಮಸೌ ಹರ್ಷಪುರಾದ್ವಣಿಕ್ ।
ಸಾಧುಃ ಸಮುದ್ರಶೂರಾಖ್ಯೋ ವಿಷಯೇಽಭ್ಯಾಗತಸ್ತವ ॥ ೧೧೬
ಕಂಠಕೋ ಯೇನ ನೀತೋಽಭೂತ್ ಸ ಚೌರಃ ಪುರರಕ್ಷಿಣಾಮ್ ।
ಭಯೇನ ವಿಹ್ವಲೋ ನಶ್ಯನ್ನಿಪತ್ಯಾಬ್ಧೌ ಮೃತೋ ನಿಶಿ ॥ ೧೧೭
ಅಯಂ ತು ತಸ್ಯ ಚೌರಸ್ಯ ಕಾಯಂ ಪ್ರಾಪ್ಯಾಧಿರುಹ್ಯ ಚ ।
ವಣಿಗ್ಭಗ್ನಪ್ರವಹಣಸ್ತೀರ್ತ್ವಾಂಭೋಧಿಮಿಹಾಗತಃ ॥ ೧೧೮

೧೯. ಆ ಕಳ್ಳನ ಸೊಂಟದಲ್ಲಿ ಕಟ್ಟಿದ್ದ ಬಟ್ಟೆಯ ಗಂಟಿನಲ್ಲಿ ಈ ವರ್ತಕನಿಗೆ ಈ ಕಂಠಹಾರವು ಸಿಕ್ಕಿತು. ನಿಮ್ಮ ಮನೆಯಿಂದ ಇವನು ಈ ಕಂಠಹಾರವನ್ನು ಅಪಹರಿಸಲಿಲ್ಲ.

೨೦. ಆದುದರಿಂದ ರಾಜನೇ ! ಕಳ್ಳನಲ್ಲದವನೂ ಧಾರ್ಮಿಕನೂ ಆದ ಈ ವರ್ತಕನನ್ನು ಬಿಟ್ಟುಬಿಡು. ಇವನನ್ನು ಸತ್ಕರಿಸಿ ಕಳುಹಿಸಿಕೊಡು" ಎಂದು ಹೇಳಿ ವಾಣಿಯು ಸುಮ್ಮನಾಯಿತು.

೨೧. ಇದನ್ನು ಕೇಳಿ ರಾಜನು ಸಂತೋಷಗೊಂಡು ವರ್ತಕನಾದ ಸಮುದ್ರಶೂರನನ್ನು ವಧದಿಂದ ಬಿಡುಗಡೆ ಮಾಡಿ ಹಣದಿಂದ ಸತ್ಕರಿಸಿ ಕಳುಹಿಸಿಕೊಟ್ಟನು.

೨೨. ಧನವನ್ನು ಪಡೆದ ವರ್ತಕನು ಸಾಮಾನುಗಳನ್ನು ತುಂಬುವ ಚೀಲಗಳನ್ನು ಕೊಂಡುಕೊಂಡು ತನ್ನ ದೇಶಕ್ಕೆ ಹೊರಟು ಮತ್ತೆ ಭಯಂಕರವಾದ ಆ ಸಮುದ್ರವನ್ನು ಹಡಗಿನಿಂದ ದಾಟಿದನು.

೨೩. ಸಮುದ್ರವನ್ನು ದಾಟಿದ ನಂತರ ಆ ವರ್ತಕನು ವರ್ತಕರ ಸಮೂಹದೊಡನೆ ಹೊರಟು ಒಂದು ದಿವಸ ಕಳೆದು ಸಾಯಂಕಾಲ ಒಂದು ಕಾಡನ್ನು ಸೇರಿದನು.

೨೪. ರಾತ್ರಿಯಲ್ಲಿ ವರ್ತಕರ ಸಮೂಹವನ್ನು ನೆಲೆಗೊಳಿಸಿ ಸಮುದ್ರಶೂರನು ತಾನು ಮಾತ್ರ ಎಚ್ಚರವಾಗಿದ್ದನು. ಆಗ ಅಲ್ಲಿಗೆ ಅಜೇಯವಾದ ಒಂದು ಕಳ್ಳರಸೇನೆಯು ಬಂದು ಎರಗಿತು.

---

ತದಾ ಚ ತತ್ಕಟೀಬದ್ಧಶಾಟಕಗ್ರಂಥಿತೋಽಮುನಾ ।
ವಣಿಜಾ ಕಂಠಕಃ ಪ್ರಾಪ್ತೋ ನ ನೀತೋಽನೇನ ವೋ ಗೃಹಾತ್ ॥ ೧೯
ತದಚೌರಮಿಮಂ ರಾಜನ್ ವಣಿಜಂ ಮುಂಚ ಧಾರ್ಮಿಕಮ್ ।
ಸಂಮಾನ್ಯ ಪ್ರೇಷಯೇತ್ಯುಕ್ತ್ವಾ ವಿರರಾಮ ವಾಕ್ ॥ ೨೦
ಏತಚ್ಛ್ರುತ್ವಾ ಸ ಸಂತುಷ್ಯ ಮುಕ್ತ್ವಾ ತಂ ವಣಿಜಂ ವಧಾತ್ ।
ಸಮುದ್ರಶೂರಂ ಸಂಮಾನ್ಯ ಧನೈ ರಾಜಾ ವಿಸೃಷ್ಟವಾನ್ ॥ ೨೧
ಸ ಚ ಪ್ರಾಪ್ತಧನಃ ಕ್ರೀತಭಾಂಡೋ ಭೂಯೋ ಭಯಂಕರಮ್ ।
ಸ್ವದೇಶಮೇಷ್ಯನ್ವಹನೇನೋತ್ತತಾರಾಂಬುಧಿಂ ವಣಿಕ್ ॥ ೨೨
ಕೀರ್ಣಾಬ್ಧಿಶ್ಚ ತತೋ ಗತ್ವಾ ಸಾರ್ಥೇನ ಸಹ ಸ ಕ್ರಮಾತ್ ।
ಅಟವೀಂ ಪ್ರಾಪದೇಕಸ್ಮಿನ್ವಾಸರೇ ದಿವಸಾತ್ಯಯೇ ॥ ೨೩
ತಸ್ಯಾಮಾವಸಿತೇ ಸಾರ್ಥೇ ರಾತ್ರೌ ತಸ್ಮಿಂಶ್ಚ ಜಾಗ್ರತಿ ।
ಸಮುದ್ರಶೂರೇ ನ್ಯಪತಚ್ಚೌರಸೇನಾತ್ರ ದುರ್ಜಯಾ ॥ ೨೪

೧೨೫. ಆ ಸೇನೆಯು ವರ್ತಕರ ಸಮೂಹವನ್ನು ಕೊಲ್ಲುತ್ತಿರಲು ತನ್ನ ಸಾಮಾನಿನ ಚೀಲಗಳನ್ನು ಬಿಟ್ಟು ಓಡಿಹೋದ ಸಮುದ್ರಶೂರನು ಮರೆಯಾಗಿ ಒಂದು ಆಲದ ಮರವನ್ನು ಹತ್ತಿದನು.

೧೨೬. ಸಮಸ್ತ ಧನವನ್ನೂ ಅಪಹರಿಸಿದ ಮೇಲೆ ಆ ಕಳ್ಳರ ಸೈನ್ಯವು ಹೊರಟುಹೋಯಿತು. ಭಯದಿಂದ ತತ್ತರಿಸಿದ ವರ್ತಕನು ದುಃಖಾರ್ತನಾಗಿ ಅದೇ ಮರದಲ್ಲಿ ಆ ರಾತ್ರಿಯನ್ನು ಕಳೆದನು.

೧೨೭–೧೨೮. ಬೆಳಿಗ್ಗೆ ಆ ವೃಕ್ಷದ ಹಿಂಭಾಗದಲ್ಲಿ ಎಲೆಗಳ ಮಧ್ಯದಲ್ಲಿ ದೈವವಶಾತ್ ದೀಪದಕಾಂತಿಯಂತೆ ಪ್ರಕಾಶಿಸುತ್ತಿದ್ದ ಏನೋ ಒಂದು ಕಾಣಿಸಿತು. ಆಶ್ಚರ್ಯದಿಂದ ಅವನು ಆ ಭಾಗಕ್ಕೆ ಹತ್ತಿ ನೋಡಿದಾಗ ಅಲ್ಲಿ ಒಂದು ಹದ್ದಿನ ಗೂಡು ಇದ್ದು ಅದರೊಳಗೆ ಅಮೂಲ್ಯವಾದ ರತ್ನಾಭರಣಗಳು ಪ್ರಕಾಶಿಸುತ್ತಿದ್ದವು.

೧೨೯. ಅವನು ಆ ಗೂಡಿನಿಂದ ಎಲ್ಲವನ್ನೂ ತೆಗೆದುಕೊಂಡು ನೋಡಿದಾಗ ಅದರ ಮಧ್ಯೆ ಅವನಿಗೆ ಸ್ವರ್ಣದ್ವೀಪದಲ್ಲಿ ಸಿಕ್ಕಿದ್ದ ಹಾಗೂ ನಂತರ ಹದ್ದು ಅಪಹರಿಸಿದ್ದ ಕಂಠಹಾರವೂ ಇದ್ದಿತು.

೧೩೦. ಹೀಗೆ ಅಪರಿಮಿತವಾದ ಧನವನ್ನು ಪಡೆದ ಅವನು ಆಲದಮರದಿಂದ ಕೆಳಗೆ ಇಳಿದು ಸಂತುಷ್ಟನಾಗಿ ಹೊರಟು ತನ್ನ ಹರ್ಷಪುರ ಪಟ್ಟಣವನ್ನು ಸೇರಿದನು.

---

ಹನ್ಯಮಾನೇ ತಯಾ ಸಾರ್ಥೇ ಭಾಂಡಾಂಸ್ತ್ಯಕ್ತ್ವಾ ಪಲಾಯ್ಯ ಸಃ ।
ಸಮುದ್ರಶೂರೋ ನ್ಯಗ್ರೋಧಮಾರೂಢೋಽಭೂದಲಕ್ಷಿತಃ ॥ ೧೨೫

ಹೃತಾಶೇಷಧನೇ ಯಾತೇ ಚೌರಸೈನ್ಯೇ ಭಯಾಕುಲಃ ।
ತತ್ರೈವ ತಾಂ ತರೌ ರಾತ್ರಿಂ ದುಃಖಾರ್ತಶ್ಚ ನಿನಾಯ ಸಃ ॥ ೧೨೬

ಪ್ರಾತಸ್ತಸ್ಯ ತರೋಃ ಪೃಷ್ಠೇ ಗತದೃಷ್ಟಿಃ ಸ ದೈವತಃ ।
ದೀಪಪ್ರಭಾಮಿವಾಪಶ್ಯತ್ ಸ್ಫುರಂತೀಂ ಪತ್ರಮಧ್ಯಗಾಮ್ ॥ ೧೨೭

ವಿಸ್ಮಯಾತ್ತತ್ರ ಚಾರೂಢೋ ಗೃಧ್ರನೀಡಮವೈಕ್ಷತ ।
ಅಂತಃಸ್ಥಭಾಸ್ವರಾನರ್ಘರತ್ನಾಭರಣಸಂಚಯಮ್ ॥ ೧೨೮

ಜಗ್ರಾಹ ತಸ್ಮಾತ್ ಸರ್ವಂ ತತ್ತನ್ಮಧ್ಯೇ ಪ್ರಾಪ ಕಂಠಕಮ್ ।
ತಂ ಸ ಯಂ ಪ್ರಾಪ್ತವಾನ್ ಸ್ವರ್ಣದ್ವೀಪೇ ಗೃಧ್ರೋಽಹರಚ್ಚ ಯಮ್ ॥
೧೨೯

ತತಃ ಪ್ರಾಪ್ತಾಮಿತಧನೋ ನ್ಯಗ್ರೋಧಾದವರುಹ್ಯ ಸಃ ।
ಹೃಷ್ಟೋ ಗಚ್ಛನ್ ಕ್ರಮಾತ್ ಪ್ರಾಪ ನಿಜಂ ಹರ್ಷಪುರಂ ಪುರಮ್ ॥ ೧೩೦

೧೩೧. ಅಲ್ಲಿ ಆ ಸಮುದ್ರಶೂರನು ಬೇರೆ ಧನಸಂಪತ್ತಿನಲ್ಲಿ ಆಸೆಯನ್ನು ತೊರೆದು ತನ್ನ ಜನರೊಡನೆ ಯಥೇಚ್ಛವಾಗಿ ಆನಂದವನ್ನು ಅನುಭವಿಸುತ್ತಾ ಇದ್ದನು.

೧೩೨–೧೩೩–೧೩೪–೧೩೫. ಸಮುದ್ರದಲ್ಲಿ ಬಿದ್ದದ್ದು, ಧನನಾಶ, ಅನಂತರ ಸಮುದ್ರವನ್ನು ದಾಟಿದುದು, ಕಂಠಹಾರ ಸಿಕ್ಕಿದುದು, ಮತ್ತೆ ಅದೇ ಕಂಠಹಾರವು ಹೋದದ್ದು, ಕಾರಣವಿಲ್ಲದೆ ಬಂಧನಕ್ಕೆ ಒಳಗಾದದ್ದು, ಆ ಕ್ಷಣದಲ್ಲೇ ಸಂತುಷ್ಟನಾದ ದ್ವೀಪದ ಒಡೆಯನಿಂದ ಉಂಟಾದ ಲಾಭ, ಮತ್ತೆ ಸಮುದ್ರವನ್ನು ದಾಟಿದುದು, ನಂತರ ದಾರಿಯಲ್ಲಿ ಚೋರರಿಂದ ಸರ್ವಸ್ವಾಪಹರಣ, ಕೊನೆಯಲ್ಲಿ ವೃಕ್ಷದ ಹಿಂಭಾಗದಲ್ಲಿ ದೊರಕಿದ ಧನಪ್ರಾಪ್ತಿ ಇದೆಲ್ಲವೂ ವಿಧಿಯ ವಿಚಿತ್ರವಾದ ವ್ಯಾಪಾರ. ಸುಕೃತಿಯಾದವನು ದುಃಖವನ್ನು ಅನುಭವಿಸಿಯೇ ಸುಖವನ್ನು ಹೊಂದುತ್ತಾನೆ."

೧೩೬. ಹೀಗೆ ಗೋಮುಖನಿಂದ ಕೇಳಿ, ಅದರಲ್ಲಿ ನಂಬಿಕೆಯಿಟ್ಟು ನರವಾಹನದತ್ತನು ನಂತರ ಮೇಲೆದ್ದು ಸ್ನಾನ ಮುಂತಾದ ದಿನದ ವ್ಯಾಪಾರವನ್ನು ಆಚರಿಸಿದನು.

೧೩೭. ಮಾರನೆಯ ದಿವಸ ನರವಾಹನದತ್ತನು ಆಸ್ಥಾನದಲ್ಲಿದ್ದಾಗ ಅವನ ಬಾಲಸೇವಕನೂ ಶೂರನೂ ಆದ ಸಮರತುಂಗನೆಂಬ ಒಬ್ಬ ರಾಜಪುತ್ರನು ಬಂದು ವಿಜ್ಞಾಪಿಸಿದನು.

---

ತತ್ರ ತಸ್ಥೌ ವಣಿಕ್ಸೋಽಥ ವೀತಾನ್ಯದ್ರವಿಣಸ್ಪೃಹಃ ।
ಸಮುದ್ರಶೂರಃ ಸ್ವಜನೈಃ ಸಹ ನಂದನ್ ಯಥೇಚ್ಛಯಾ ॥ ೧೩೧
ಅಬ್ಧೌ ತತ್ಪತನಂ ಸೋಽರ್ಥನಾಶಸ್ತತ್ತರಣಂ ತತಃ ।
ಸಾ ಕಂಠಕಸ್ಯ ಚ ಪ್ರಾಪ್ತಿಸ್ತಸ್ಯೈವಾಪಗಮಃ ಸ ಚ ॥ ೧೩೨
ಸಾ ನಿಷ್ಕಾರಣನಿಗ್ರಾಹ್ಯದಶಾವಾಪ್ತಿಃ ಸ ತತ್ಕ್ಷಣಮ್ ।
ತುಷ್ಟಾದ್ದ್ವೀಪೇಶ್ವರಾಲ್ಲಾಭಸ್ತದಬ್ಧೇಸ್ತರಣಂ ಪುನಃ ॥ ೧೩೩
ಸೋಽಥ ಸರ್ವಾಪಹಾರಶ್ಚ ಪಥಿ ಚೌರೈಃ ಸಮಾಗಮಾತ್ ।
ಪರ್ಯಂತೇ ತಸ್ಯ ವಣಿಜಸ್ತರುಪೃಷ್ಠಾದ್ಧನಾಗಮಃ ॥ ೧೩೪
ತದೇವಮೀದೃಶಂ ದೇವ ವಿಚಿತ್ರಂ ಚೇಷ್ಟಿತಂ ವಿಧೇಃ ।
ಸುಕೃತೀ ಚಾನುಭೂಯೈವ ದುಃಖಮಪ್ಯಶ್ನುತೇ ಸುಖಮ್ ॥ ೧೩೫
ಇತಿ ಗೋಮುಖತಃ ಶ್ರುತ್ವಾ ಶ್ರದ್ಧಾಯೋತ್ಥಾಯ ಚ ವ್ಯಧಾತ್ ।
ನರವಾಹನದತ್ತೋಽತ್ರ ಸ್ನಾನಾದಿದಿವಸಕ್ರಿಯಾಮ್ ॥ ೧೩೬
ಅನ್ಯೇದ್ಯುರೇತ್ಯ ಚಾಸ್ಥಾನಗತಂ ತಂ ಬಾಲಸೇವಕಃ ।
ಶೂರಃ ಸಮರತುಂಗಾಖ್ಯೋ ರಾಜಪುತ್ರೋ ವ್ಯಜಿಜ್ಞಪತ್ ॥ ೧೩೭

೧೩೮. "ದೇವ ! ವೀರಜಿತ ಮೊದಲಾದ ನಾಲ್ಕು ಮಂದಿ ಪುತ್ರರೊಡನೆ ಸೇರಿಕೊಂಡು ನನ್ನ ವಂಶದಲ್ಲೇ ಹುಟ್ಟಿದ ಸಂಗ್ರಾಮವರ್ಷನು ನನ್ನ ದೇಶವನ್ನು ನಾಶ ಪಡಿಸಿದನು.

೧೩೯. ಆದುದರಿಂದ ನಾನು ಹೋಗಿ ಆ ಐದುಮಂದಿಯನ್ನೂ ಬಂಧಿಸಿ ತರುವೆನು. ಪ್ರಭುವಿಗೆ ಇದು ತಿಳಿದಿರಲಿ" ಎಂದು ಹೇಳಿ ಅವನು ಅಲ್ಲಿಗೆ ಹೋದನು.

೧೪೦. ಸಮರತುಂಗನ ಸೈನ್ಯ ಕಿರಿದಾದುದೆಂದೂ ಆ ಇತರರ ಸೈನ್ಯ ದೊಡ್ಡದೆಂದೂ ವತ್ಸೇಶ್ವರನ ಪುತ್ರನು ತಿಳಿದು ಅವನ ಹಿಂದುಗಡೆ ಹೋಗುವಂತೆ ತನ್ನ ಸೈನ್ಯಕ್ಕೆ ಆದೇಶಮಾಡಿದನು.

೧೪೧. ಸಮರತುಂಗನು ಅಭಿಮಾನಿಯಾಗಿ ಆ ಸೈನ್ಯವನ್ನು ಸ್ವೀಕರಿಸದೆಯೇ ಹೋಗಿ ತನ್ನ ಬಾಹುಗಳಿಂದಲೇ ಯುದ್ಧದಲ್ಲಿ ಆ ಐದು ಮಂದಿ ಶತ್ರುಗಳನ್ನು ಗೆದ್ದು ಕಟ್ಟಿ ಹಾಕಿ ಒಟ್ಟಿಗೆ ತಂದನು.

೧೪೨. ಪ್ರಭುವಾದ ನರವಾಹನದತ್ತನು ವಿಜಯಶೀಲನಾಗಿ ಬಂದ ತನ್ನ ಸೇವಕನಾದ ಆ ವೀರನನ್ನು ಸತ್ಕರಿಸಿ ಪ್ರಶಂಸೆ ಮಾಡಿದನು.

೧೪೩. 'ಏನಾಶ್ಚರ್ಯ ! ದೇಶವನ್ನು ಆಕ್ರಮಣ ಮಾಡಿದವರೂ ಬಲಿಷ್ಠರೂ ಪಂಚೇಂದ್ರಿಯಗಳಂತೆ ಇರುವವರೂ ಆದ ಆ ಐದುಮಂದಿ ಶತ್ರುಗಳನ್ನು ಗೆದ್ದು ಇವನು ಪುರುಷಾರ್ಥವನ್ನು ಸಾಧಿಸಿದನು'.

---

ದೇವ ಸಂಗ್ರಾಮವರ್ಷೇಣ ನಾಶಿತೋ ಗೋತ್ರಜೇನ ಮೇ ।
ದೇಶಶ್ಚತುರ್ಭಿರ್ಯುಕ್ತೇನ ಪುತ್ರೈರ್ವೀರಜಿತಾದಿಭಿಃ ॥ ೧೩೮

ತದೇಷ ಗತ್ವಾ ಪಂಚಾಪಿ ಬದ್ಧ್ವಾ ತಾನಾನಯಾಮ್ಯಹಮ್ ।
ಪ್ರಭೋರ್ವಿದಿತಮಸ್ತ್ವೇತದಿತ್ಯುಕ್ತ್ವಾ ತತ್ರ ಸೋಽಗಮತ್ ॥ ೧೩೯

ತಮಲ್ಪಸೈನ್ಯಂ ತಾನನ್ಯಾನ್ ಭೂರಿಸೈನ್ಯಾನವೇತ್ಯ ಸಃ ।
ವತ್ಸೇಶ್ವರಸುತಸ್ತಸ್ಯ ದಿದೇಶಾನು ಬಲಂ ನಿಜಮ್ ॥ ೧೪೦

ಸೋಽಗೃಹೀತ್ವೈವ ತನ್ಮಾನೀ ಗತ್ವಾ ಪಂಚಾಪಿ ತಾನ್‌ರಿಪೂನ್ ।
ಸ್ವಬಾಹುಭ್ಯಾಂ ರಣೇ ಜಿತ್ವಾ ಸಂಯಮ್ಯಾನೀತವಾನ್ ಸಮಮ್ ॥ ೧೪೧

ತಥಾ ಜಯಿನಮಾಯಾಂತಂ ವೀರಂ ಸಂಮಾನ್ಯ ಸ ಪ್ರಭುಃ ।
ನರವಾಹನದತ್ತಸ್ತಂ ಪ್ರಶಶಂಸ ಸ್ವಸೇವಕಮ್ ॥ ೧೪೨

ಚಿತ್ರಮಾಕ್ರಾಂತವಿಷಯಾನ್ ಸಬಲಾನಿಂದ್ರಿಯೋಪಮಾನ್ ।
ಜಿತ್ವಾನೇನ ರಿಪೂನ್‌ಪಂಚ ಪುರುಷಾರ್ಥಃ ಪ್ರಸಾಧಿತಃ ॥ ೧೪೩

೧೩೪. ಅದನ್ನು ಕೇಳಿ ಗೋಮುಖನು ಹೇಳಿದನು: "ದೇವ ! ನೀನು ರಾಜನಾದ ಚಮರವಾಲನ ಕಥೆಯೂ ಇಂತಹುದೇ. ಕೇಳಿಲ್ಲದಿದ್ದರೆ ಇದನ್ನು ಹೇಳುತ್ತೇನೆ. ಕೇಳು."

೧೩೫. ಹಸ್ತಿನಾಪುರವೆಂಬ ಒಂದು ಪಟ್ಟಣವಿದೆ. ಅಲ್ಲಿ ಕೋಶ, ಕೋಟೆ ಮತ್ತು ಸೈನ್ಯಗಳಿಂದ ಕೂಡಿದ ಚಾಮರವಾಲನೆಂಬ ರಾಜನಿದ್ದನು.

೧೩೬. ಅವನ ಭೂಮಿಗೆ ಪಕ್ಕದಲ್ಲೇ ಸಮರಬಲ ಮೊದಲಾದ ಗೋತ್ರಜರಾದ ರಾಜರು ಇದ್ದರು. ಅವರು ಒಟ್ಟಿಗೆ ಸೇರಿ ಹೀಗೆ ಯೋಚಿಸಿದರು.

೧೩೭. "ಈ ಚಮರವಾಲನು ನಮ್ಮನ್ನು ಒಬ್ಬೊಬ್ಬರನ್ನಾಗಿ ಯಾವಾಗಲೂ ಬಾಧಿಸುತ್ತಾನೆ. ಆದುದರಿಂದ ನಾವೆಲ್ಲರೂ ಒಟ್ಟಿಗೆ ಸೇರಿ ಇವನನ್ನು ಸೋಲಿಸೋಣ."

೧೩೮. ಹೀಗೆ ಸಮಾಲೋಚನೆ ಮಾಡಿ ಈ ಐದು ಮಂದಿಯೂ ಅವನನ್ನು ಗೆಲ್ಲಲು ಬಯಸಿ ರಹಸ್ಯವಾಗಿ ಜ್ಯೌತಿಷಿಕನನ್ನು ಕರೆದು ಪ್ರಸ್ಥಾನದ ಮುಹೂರ್ತವನ್ನು ಕೇಳಿದರು.

೧೩೯. ಶುಭವಾದ ಲಗ್ನವನ್ನು ಕಾಣದೆ ಅಶುಭಶಕುನಗಳನ್ನು ಕಂಡ ಆ ಗಣಕನು ಹೇಳಿದನು: "ಈ ವರ್ಷದಲ್ಲಿ ನಿಮಗೆ (ಉತ್ತಮವಾದ) ಮುಹೂರ್ತವಿಲ್ಲ.

೧೪೦. ನಿಮ್ಮಷ್ಟಕ್ಕೆ ಹೋದರೆ ನಿಮಗೆ ಜಯವು ಉಂಟಾಗುವುದಿಲ್ಲ. ಈ ವಿಚಾರದಲ್ಲಿ ಅವನ ಅಭಿವೃದ್ಧಿಯನ್ನು ನೋಡಿ ನೀವು ಕರುಬುವುದೇಕೆ ?

---

ತಚ್ಛ್ರುತ್ವಾ ಗೋಮುಖೋಽವಾದೀಚ್ಛ್ರುತಾ ಚೇದ್ದೇವ ನೇದೃಶೀ ।
ರಾಜ್ಞಶ್ಚಮರವಾಲಸ್ಯ ಕಥಾ ತಚ್ಛೃಣು ವಚ್ಮಿ ತಾಮ್ ॥ ೧೩೪
ಹಸ್ತಿನಾಪುರಮಿತ್ಯಸ್ತಿ ನಗರಂ ತತ್ರ ಚಾಭವತ್ ।
ರಾಜಾ ಚಾಮರವಾಲಾಖ್ಯಃ ಕೋಷದುರ್ಗಬಲಾನ್ವಿತಃ ॥ ೧೩೫
ಬಭೂವುಸ್ತಸ್ಯ ಸಮರಬಲಾದ್ಯಾ ಭೂಮ್ಯನಂತರಾಃ ।
ರಾಜಾನೋ ಗೋತ್ರಜಾಸ್ತೇ ಚ ಸಂಭೂಯೈವಮಚಿಂತಯನ್ ॥ ೧೩೬
ಅಯಂ ಚಮರವಾಲೋಽಸ್ಮಾನೇಕೈಕಂ ಬಾಧತೇ ಸದಾ ।
ತದೇತೇ ಮಿಲಿತಾಃ ಸರ್ವೇ ವಿದಧ್ಮೋಽಸ್ಯ ಪರಾಭವಮ್ ॥ ೧೩೭
ಇತಿ ಸಂಮಂತ್ರ್ಯ ಪಂಚೈತೇ ತಜ್ಜಯಾಯ ಯಿಯಾಸವಃ ।
ಪ್ರಸ್ಥಾನಲಗ್ನಂ ಕ್ಷಿತಿಪಾಃ ಪಪ್ರಚ್ಛುರ್ಗಣಕಂ ರಹಃ ॥ ೧೩೮
ಅಪಶ್ಯನ್ ಸ ಶುಭಂ ಲಗ್ನಂ ಪಶ್ಯನ್ನಶಕುನಾನಿ ಚ ।
ಜಗಾದ ಗಣಕೋ ನಾಸ್ತಿ ಲಗ್ನಂ ಸಂವತ್ಸರೇಽತ್ರ ವಃ ॥ ೧೩೯
ಯಥಾ ತಥಾ ಚ ಯಾತಾನಾಂ ನ ಯುಷ್ಮಾಕಂ ಭವೇಜ್ಜಯಃ ।
ಕಿಂ ಚಾತ್ರ ವೋಽನುಬಂಧೇನ ಸಮೃದ್ಧಿಂ ತಸ್ಯ ಪಶ್ಯತಾಮ್ ॥ ೧೪೦

೧೫೧. ಭೋಗವೆಂಬುದೇ ಐಶ್ವರ್ಯದ ಫಲ. ಅಂತಹ ಭೋಗವು ಅವನಿಗಿಂತಲೂ ನಿಮಗೆ ಅಧಿಕವಾಗಿದೆ. ನೀವು ಕೇಳಿಲ್ಲದಿದ್ದರೆ ಈ ವಿಷಯದಲ್ಲಿ ಇಬ್ಬರು ವರ್ತಕರ ಕಥೆಯನ್ನು ಹೇಳುತ್ತೇನೆ ಕೇಳಿರಿ.

೧೫೨. ಈ ಲೋಕದಲ್ಲಿ ಹಿಂದೆ ಕೌತುಕಪುರವೆಂಬ ಪಟ್ಟಣವು ಇತ್ತು. ಆ ಪಟ್ಟಣದಲ್ಲಿ ಅನ್ವರ್ಥವಾದ ಹೆಸರುಳ್ಳ ಬಹುಸುವರ್ಣಕನೆಂಬ ರಾಜನು ಇದ್ದನು.

೧೫೩. ಯಶೋವರ್ಮನೆಂಬ ಯುವಕನಾದ ಕ್ಷತ್ರಿಯ ಸೇವಕನೊಬ್ಬನು ಅವನಿಗೆ ಇದ್ದನು. ದಾನಿಯಾಗಿದ್ದರೂ ಕೂಡ ಆ ರಾಜನು ಅವನಿಗೆ ಎಂದೂ ಏನನ್ನೂ ಕೊಡಲಿಲ್ಲ.

೧೫೪. ಅವನು ದುಃಖದಿಂದ ಆ ರಾಜನನ್ನು ಯಾಚಿಸುತ್ತಿದ್ದಾಗಲೆಲ್ಲ ಸೂರ್ಯನನ್ನು ತೋರಿಸುತ್ತಾ ಆ ರಾಜನು ಆ ಸೇವಕನಿಗೆ ಈ ರೀತಿ ಹೇಳುತ್ತಿದ್ದನು.

೧೫೫. "ನಾನು ನಿನಗೆ ಕೊಡಲು ಬಯಸುತ್ತೇನೆ. ಆದರೆ ಈ ಸೂರ್ಯ ಭಗವಂತನು ನಾನು ನಿನಗೆ ಕೊಡುವುದನ್ನು ಇಚ್ಛಿಸುವುದಿಲ್ಲ. ನಾನೇನು ಮಾಡಲಿ ? ಹೇಳು."

೧೫೬. ದುಃಖಿತನಾದ ಆ ಸೇವಕನು ಸರಿಯಾದ ಸಮಯಕ್ಕೆ ಕಾಯುತ್ತಿದ್ದನು. ಆಗ ಸೂರ್ಯಗ್ರಹಣದ ಸಮಯವು ಬಂದಿತು.

೧೫೭. ಆ ಸಮಯದಲ್ಲಿ ನಿರಂತರ ಸೇವಕನಾದ ಆ ಯಶೋವರ್ಮನು ಸುವರ್ಣ ಮಹಾದಾನವನ್ನು ಮಾಡುತ್ತಿದ್ದ ಆ ರಾಜನ ಬಳಿ ಹೋಗಿ ವಿಜ್ಞಾಪಿಸಿದನು.

---

ಭೋಗೋ ನಾಮ ಫಲಂ ಲಕ್ಷ್ಮ್ಯಾಃ ಸ ತಸ್ಮಾದಧಿಕೋಽಸ್ತಿ ವಃ ।
ನ ಚೇಚ್ಛ್ರುತಾ ಶ್ರೂಯತಾಂ ತತ್ಕಥಾತ್ರ ವಣಿಜೋರ್ದ್ವಯೋಃ ॥ ೧೫೧
ಬಭೂವ ಕೌತುಕಪುರಂ ನಾಮೇಹ ನಗರಂ ಪುರಾ ।
ತಸ್ಮಿನ್ನನ್ವರ್ಥನಾಮಾಭೂದ್ರಾಜಾ ಬಹುಸುವರ್ಣಕಃ ॥ ೧೫೨
ಯಶೋವರ್ಮೇತಿ ತಸ್ಯಾಸೀತ್ ಸೇವಕಃ ಕ್ಷತ್ರಿಯೋ ಯುವಾ ।
ತಸ್ಮೈ ದಾತಾಪಿ ಸ ನೃಪೋ ನಾದಾತ್ಕಿಂಚಿತ್ಕದಾಚನ ॥ ೧೫೩
ಯದಾ ಯದಾ ಚ ನೃಪತಿಸ್ತೇನಾರ್ತ್ಯಾ ಯಾಚ್ಯತೇ ಸ್ಮ ಸಃ ।
ಆದಿತ್ಯಂ ದರ್ಶಯನ್ನೇವಂ ತಮುವಾಚ ತದಾ ತದಾ ॥ ೧೫೪
ಅಹಮಿಚ್ಛಾಮಿ ತೇ ದಾತುಂ ಕಿಂ ಪುನರ್ಭಗವಾನಯಮ್ ।
ತುಭ್ಯಂ ನೇಚ್ಛತಿ ಮೇ ದಾತುಂ ಕಿಂ ಕರೋಮ್ಯುಚ್ಯತಾಮಿತಿ ॥ ೧೫೫
ತತಃ ಸೋಽವಸರಂ ಚಿನ್ವನ್ ಯಾವತ್ತಿಷ್ಠತಿ ದುಃಖಿತಃ ।
ಸೂರ್ಯೋಪರಾಗಸಮಯಸ್ತಾವದತ್ರಾಗತೋಽಭವತ್ ॥ ೧೫೬
ತತ್ಕಾಲಂ ಸ ಯಶೋವರ್ಮಾ ಗತ್ವಾ ಸತತಸೇವಕಃ ।
ನೃಪಂ ಭೂರಿಮಹಾದಾನಪ್ರವೃತ್ತಂ ತಂ ವ್ಯಜಿಜ್ಞಪತ್ ॥ ೧೫೭

೧೫೮. "ಪ್ರಭುವೇ ! ನಿನಗೆ ದಾನ ಮಾಡಲು ಬಿಡದ ಆ ಸೂರ್ಯ ಇಂದು ಶತ್ರುವಿನಿಂದ ಗ್ರಸ್ತನಾಗಿರುವುದರಿಂದ (ಈಗ) ನೀನು ನನಗೆ ಏನನ್ನಾದರೂ ಕೊಡು."

೧೫೯. ಅದನ್ನು ಕೇಳಿ ರಾಜನಾದ ಬಹುಸುವರ್ಣಕನು ನಕ್ಕು ಆ ಯಶೋವರ್ಮನಿಗೆ ವಸ್ತ್ರ ಸುವರ್ಣ ಮುಂತಾದುದನ್ನು ದಾನವಾಗಿ ಕೊಟ್ಟನು.

೧೬೦. ಅವನು ಕ್ರಮೇಣ ಆ ಧನವನ್ನು ಭೋಗಿಸಿ ಮುಗಿಸಿದನು. ಪ್ರಭುವೂ ಮತ್ತೆ ಕೊಡಲಿಲ್ಲ. ಖೇದಗೊಂಡ ಯಶೋವರ್ಮನ ಹೆಂಡತಿಯು ಸತ್ತು ಹೋದಳು. ಆಗ ಅವನು ವಿಂಧ್ಯವಾಸಿನಿಯನ್ನು ದರ್ಶಿಸಲು ಹೋದನು.

೧೬೧. 'ಬದುಕಿದ್ದರೂ ಸತ್ತಿರುವಂತಿರುವ ಪ್ರಯೋಜನವಿಲ್ಲದ ಈ ದೇಹದಿಂದ ನನಗೆ ಏನು ಆಗಬೇಕು ? ದೇವಿಯ ಎದುರುಗಡೆ ಈ ದೇಹವನ್ನು ತ್ಯಾಗ ಮಾಡುವೆನು. ಅಥವಾ ಇಷ್ಟವಾದ ವರವನ್ನು ಪಡೆಯುವೆನು.'

೧೬೨. ಹೀಗೆ ವಿಂಧ್ಯವಾಸಿನಿಯ ಎದುರಿಗೆ ದರ್ಭಾಸನದಲ್ಲಿ ಕುಳಿತುಕೊಂಡ ಯಶೋವರ್ಮನು ದೇವಿಯಲ್ಲಿ ಮನಸ್ಸಿಟ್ಟು ನಿರಾಹಾರನಾಗಿ ಮಹತ್ತಾದ ತಪಸ್ಸನ್ನು ಆಚರಿಸಿದನು.

೧೬೩. ಆಗ ದೇವಿಯು ಸ್ವಪ್ನದಲ್ಲಿ ಯಶೋವರ್ಮನಿಗೆ ಆದೇಶ ಮಾಡಿದಳು. "ಪುತ್ರನೇ ! ನಿನ್ನ ವಿಷಯದಲ್ಲಿ ಸಂತುಷ್ಟಳಾಗಿದ್ದೇನೆ. ನಿನಗೆ ಧನ ಸಂಪತ್ತನ್ನು ಕೊಡಲೇ, ಅಥವಾ ಭೋಗಸಂಪತ್ತನ್ನು (ಕೊಡಲೇ ?) ಹೇಳು."

---

ಯೋ ದದಾತಿ ನ ತೇ ತುಭ್ಯಂ ದಾತುಂ ಸೈಷ ರವಿಃ ಪ್ರಭೋ ।
ಗ್ರಸ್ತೋಽದ್ಯ ವೈರಿಣಾ ಯಾವತ್ತಾವತ್ಕಿಂಚಿತ್ತ್ವಯಚ್ಛ ಮೇ ॥ ೧೫೮
ತಚ್ಛ್ರುತ್ವಾ ಸ ಹಸಿತ್ವಾ ಚ ದತ್ತದಾನೋ ಮಹೀಪತಿಃ ।
ದದೌ ವಸ್ತ್ರಹಿರಣ್ಯಾದಿ ತಸ್ಮೈ ಬಹುಸುವರ್ಣಕಃ ॥ ೧೫೯
ಕ್ರಮಾತ್ತಸ್ಮಿನ್ಧನೇ ಭುಕ್ತೇ ಖಿನ್ನಃ ಸೋಽದದತಿ ಪ್ರಭೌ ।
ಮೃತಜಾನಿರ್ಯಶೋವರ್ಮಾ ಪ್ರಯಯೌ ವಿಂಧ್ಯವಾಸಿನೀಮ್ ॥ ೧೬೦
ಕಿಂ ನಿರರ್ಥೇನ ದೇಹೇನ ಜೀವತಾಪಿ ಮೃತೇನ ಮೇ ।
ತ್ಯಕ್ಷ್ಯಾಮ್ಯೇತಂ ಪುರೋ ದೇವ್ಯಾ ವರಂ ಪ್ರಾಪ್ಸ್ಯಾಮಿ ವೇಪ್ಸಿತಮ್ ॥ ೧೬೧
ಇತ್ಯಗ್ರೇ ವಿಂಧ್ಯವಾಸಿನ್ಯಾಃ ಸಂವಿಷ್ಟೋ ದರ್ಭಸಂಸ್ತರೇ ।
ತನ್ಮನಾಃ ಸ ನಿರಾಹಾರಸ್ತಪೋಮಹದತಪ್ಯತ ॥ ೧೬೨
ಆದಿಶತ್ತಂ ಚ ಸಾ ಸ್ವಪ್ನೇ ದೇವೀ ತುಷ್ಟಾಸ್ಮಿ ಪುತ್ರ ತೇ ।
ದದಾಮ್ಯರ್ಥಶ್ರಿಯಂ ಕಿಂ ತೇ ಕಿಂ ವಾ ಭೋಗಶ್ರಿಯಂ ವದ ॥ ೧೬೩

೧೬೪. ಅದನ್ನು ಕೇಳಿ ಆ ಯಶೋವರ್ಮನು "ಈ ಎರಡು ಸಂಪತ್ತುಗಳ ಭೇದವು ನನಗೆ ಚೆನ್ನಾಗಿ ತಿಳಿಯದು" ಎಂದು ಆ ದೇವಿಗೆ ಪ್ರತ್ಯುತ್ತರ ಹೇಳಿದನು.

೧೬೫–೧೬೬. ಆಗ ಯಶೋವರ್ಮನನ್ನು ಕುರಿತು ದೇವಿಯು "ಹಾಗಿದ್ದರೆ ನಿನ್ನ ಸ್ವಂತ ದೇಶದಲ್ಲಿ ಭೋಗವರ್ಮಾ ಮತ್ತು ಅರ್ಥವರ್ಮಾ ಎಂಬ ಇಬ್ಬರು ವರ್ತಕರು ಇದ್ದಾರೆ. ಅವರ ಐಶ್ವರ್ಯವನ್ನು ಇಲ್ಲಿಂದ ಹೋಗಿ ನೋಡು. ಅನಂತರ ಎಂತಹ ಸಂಪತ್ತು ನಿನಗೆ ರುಚಿಸುವುದೋ ಅದನ್ನು ನೀನು ಬಂದು ಬೇಡು" ಎಂದು ಹೇಳಿದಳು.

೧೬೭. ಇದನ್ನು ಕೇಳಿ ಯಶೋವರ್ಮನು ಕೂಡಲೇ ಎಚ್ಚತ್ತುಗೊಂಡು ಬೆಳಿಗ್ಗೆ ಪಾರಣೆಯನ್ನು ಮಾಡಿ ತನ್ನ ದೇಶವಾದ ಕೌತುಕಪುರಕ್ಕೆ ಹೋದನು.

೧೬೮. ಅಲ್ಲಿ ಅವನು ಮೊದಲು ಅಸಂಖ್ಯಾಕವಾದ ಸುವರ್ಣ, ರತ್ನ ಮೊದಲಾದವುಗಳ ವ್ಯವಹಾರದಿಂದ ಸಂಪತ್ತನ್ನು ಸಂಪಾದಿಸಿದ್ದ ಅರ್ಥವರ್ಮನ ಮನೆಗೆ ಹೋದನು.

೧೬೯. ಅವನ ಸಂಪತ್ತನ್ನು ಯಥಾವತ್ತಾಗಿ ನೋಡಿ ಅವನ ಬಳಿಗೆ ಹೋದನು. ಅರ್ಥವರ್ಮನು ಅತಿಥಿಸತ್ಕಾರವನ್ನು ಮಾಡಿ ಯಶೋವರ್ಮನನ್ನು ಭೋಜನಕ್ಕೆ ಆಮಂತ್ರಿಸಿದನು.

---

ತಚ್ಛ್ರುತ್ವಾ ಸ ಯಶೋವರ್ಮಾ ದೇವೀಂ ತಾಂ ಪ್ರತ್ಯಭಾಷತ ।
ಏತಯೋರ್ನಿಪುಣಂ ವೇದ್ಮಿ ನಾಹಂ ಭೇದಂ ಶ್ರಿಯೋರಿತಿ ॥ ೧೬೪
ತತಸ್ತಮವದದ್ದೇವೀ ಸ್ವದೇಶೇ ತರ್ಹಿ ಯೌ ತವ ।
ಭೋಗವರ್ಮಾರ್ಥವರ್ಮಾಣೌ ವಿದ್ಯೇತೇ ವಣಿಜಾವುಭೌ ॥ ೧೬೫
ತಯೋರ್ಗತ್ವಾ ಶ್ರಿಯಂ ಪಶ್ಯ ತತೋ ಯತ್ಸದೃಶೀ ಚ ತೇ ।
ರೋಚಿಷ್ಯತೇ ತತ್ಸದೃಶೀ ತ್ವಯಾಗತ್ಯಾರ್ಥ್ಯತಾಮಿತಿ ॥ ೧೬೬
ಏತಚ್ಛ್ರುತ್ವಾ ಪ್ರಬುಧ್ಯೈವ ಸ ಪ್ರಾತಃ ಕೃತಪಾರಣಃ ।
ಸ್ವದೇಶಂ ಕೌತುಕಪುರಂ ಯಶೋವರ್ಮಾ ತತೋ ಯಯೌ ॥ ೧೬೭
ತತ್ರಾಗಾತ್ಪ್ರಥಮಂ ತಾವತ್ಸ ಗೃಹಾನರ್ಥವರ್ಮಣಃ ।
ಅಸಂಖ್ಯಹೇಮರತ್ನಾದಿವ್ಯವಹಾರಾರ್ಜಿತಶ್ರಿಯಃ ॥ ೧೬೮
ಪಶ್ಯಂಸ್ತಾಂ ಸಂಪದಂ ತಸ್ಯ ಯಥಾವತ್ತಮುಪಾಯಯೌ ।
ಕೃತಾತಿಥ್ಯಶ್ಚ ತೇನಾಸೌ ಭೋಜನಾಯ ನ್ಯಮಂತ್ರ್ಯತ ॥ ೧೬೯

೧೭೦. ಅನಂತರ ಯಶೋವರ್ಮನು ಅಲ್ಲಿ ಅರ್ಥವರ್ಮನ ಪಕ್ಕದಲ್ಲಿ ಅತಿಥಿಗೆ ಯೋಗ್ಯವಾಗಿ ಇದ್ದ ತುಪ್ಪ ಮತ್ತು ಮಾಂಸ ವ್ಯಂಜನ ಸಹಿತವಾಗಿ ಇದ್ದ ಆಹಾರವನ್ನು ಭೋಜನ ಮಾಡಿದನು.

೧೭೧. ಆದರೆ ಅರ್ಥವರ್ಮನು ಅರ್ಧತೊಲ (ತೂಕ) ತುಪ್ಪದಿಂದ ಕೂಡಿದ ಹಿಟ್ಟನ್ನೂ ಸ್ವಲ್ಪ ಅನ್ನವನ್ನೂ ಸ್ವಲ್ಪವೇ ಮಾಂಸ ವ್ಯಂಜನವನ್ನೂ ತಿಂದನು.

೧೭೨. ಆಗ ಯಶೋವರ್ಮನು "ವರ್ತಕನೇ ! ಏನು ಇಷ್ಟೇ ಊಟ ಮಾಡುತ್ತೀಯಲ್ಲ" ಎಂದು ಕುತೂಹಲದಿಂದ ಆ ವರ್ತಕನನ್ನು ಕೇಳಲು ಅವನು ಹೀಗೆ ಹೇಳಿದನು.

೧೭೩. "ಇಂದು ನಿನ್ನ ಬಲಾತ್ಕಾರದಿಂದ ನಾನು ಮಾಂಸವ್ಯಂಜನ ಸಹಿತವಾಗಿ ಸ್ವಲ್ಪ ಊಟ ಮಾಡಿದೆ. ತುಪ್ಪದ ಅರ್ಧ ತೊಲ (ತೂಕ)ವನ್ನು ತಿಂದೆ. ಹಿಟ್ಟುಗಳನ್ನೂ ಊಟ ಮಾಡಿದೆ.

೧೭೪. ಆದರೆ ಯಾವಾಗಲೂ ಕೇವಲ ತುಪ್ಪದ ಹದಿನಾರು ಮಾಷಗಳ ತೂಕವನ್ನೂ ಹಿಟ್ಟುಗಳನ್ನೂ ಊಟ ಮಾಡುತ್ತೇನೆ. ಅದಕ್ಕಿಂತಲೂ ಅಧಿಕವಾದುದು ಜೀರ್ಣಶಕ್ತಿಯಿಲ್ಲದ ನನ್ನ ಹೊಟ್ಟೆಯಲ್ಲಿ ಜೀರ್ಣವಾಗುವುದೇ ಇಲ್ಲ ."

೧೭೫. ಅದನ್ನು ಕೇಳಿ ಯಶೋವರ್ಮನು ಯೋಚಿಸುತ್ತಾ ಆ ಅರ್ಥವರ್ಮನ ನಿಷ್ಫಲವಾದ ಸಂಪತ್ತನ್ನು ಮನಸ್ಸಿನಲ್ಲೇ ಜರಿದನು.

---

ತತೋಽತ್ರಾಭುಂಕ್ತ ಸಘೃತಂ ಸಮಾಂಸವ್ಯಂಜನಂ ಚ ಸಃ ।
ಪ್ರಾಘುಣೋಚಿತಮಾಹಾರಂ ಪಾರ್ಶ್ವೇ ತಸ್ಯಾರ್ಥವರ್ಮಣಃ ॥ ೧೭೦
ಅರ್ಥವರ್ಮಾ ತು ಭುಂಕ್ತೇ ಸ್ಮ ಘೃತಾರ್ಧಪಲಸಂಯುತಾನ್ ।
ಸಕ್ತೂನ್‌ಭಕ್ತಮಪಿ ಸ್ತೋಕಂ ಮಾಂಸವ್ಯಂಜನಮಲ್ಪಕಮ್ ॥ ೧೭೧
ಸಾರ್ಥವಾಹ ಕಿಮೇತಾವದಶ್ನಾಸೀತಿ ಸಕೌತುಕಮ್ ।
ಸ ಯಶೋವರ್ಮಣಾ ಪೃಷ್ಟೋ ವಣಿಗೇವಮಭಾಷತ ॥ ೧೭೨
ಅದ್ಯ ತ್ವದುಪರೋಧೇನ ಸಮಾಂಸವ್ಯಂಜನಂ ಮಯಾ ।
ಭುಕ್ತಂ ಸ್ತೋಕಂ ಘೃತಸ್ಯಾರ್ಧಪಲಂ ಭುಕ್ತಾ ಚ ಸಕ್ತವಃ ॥ ೧೭೩
ಸದಾ ತು ಘೃತಕರ್ಷಂ ಚ ಸಕ್ತೂಂಶ್ಚಾಶ್ನಾಮಿ ಕೇವಲಾನ್ ।
ಅತೋಽಧಿಕಂ ಮೇ ಮಂದಾಗ್ನೇರುದರೇ ನೈವ ಜೀರ್ಯತೇ ॥ ೧೭೪
ತಚ್ಛ್ರುತ್ವಾ ಸ ಯಶೋವರ್ಮಾ ವಿಚಿಕಿತ್ಸನ್ನಿನಿಂದ ತಾಮ್ ।
ಹೃದಯೇನ ಶ್ರಿಯಂ ತಸ್ಯ ವಿಫಲಾಮರ್ಥವರ್ಮಣಃ ॥ ೧೭೫

೧೭೬. ಅನಂತರ ರಾತ್ರಿಯಾದಾಗ ಮತ್ತೆ ವರ್ತಕ ಅರ್ಥವರ್ಮನು ಯಶೋವರ್ಮನಿಗಾಗಿ ಅನ್ನವನ್ನೂ ಕ್ಷೀರವನ್ನೂ ತರಿಸಿದನು.

೧೭೭. ಅನಂತರ ಯಶೋವರ್ಮನು ಮತ್ತೆ ಅದನ್ನು ಯಥೇಚ್ಛವಾಗಿ ಭೋಜನ ಮಾಡಿದನು. ಅರ್ಥವರ್ಮ ಮಾತ್ರ ಆಗ ಒಂದು ಪಲ ಕ್ಷೀರವನ್ನು (ಮಾತ್ರ) ಕುಡಿದನು.

೧೭೮. ಅನಂತರ ಅಲ್ಲಿಯೇ ಒಂದು ಸ್ಥಳದಲ್ಲಿ ಯಶೋವರ್ಮ ಮತ್ತು ಅರ್ಥವರ್ಮರಿಬ್ಬರೂ ಹಾಸಿಗೆಯನ್ನು ಹಾಸಿಕೊಂಡು ನಿಧಾನವಾಗಿ ನಿದ್ರೆಗೆ ಜಾರಿದರು.

೧೭೯. ರಾತ್ರಿಯಲ್ಲಿ ಯಶೋವರ್ಮನು ಖಚಿತವಾದ ಒಂದು ಸ್ವಪ್ನದಲ್ಲಿ ದಂಡ ಹಿಡಿದು ಭಯಂಕರರಾಗಿದ್ದ ಪುರುಷರು ಪ್ರವೇಶಿಸಿದ್ದನ್ನು ಕಂಡನು.

೧೮೦–೧೮೧–೧೮೨. "ಧಿಕ್ಕಾರ ಘೃತಕರ್ಷವನ್ನೂ ಮಾಂಸದ ಅನ್ನವನ್ನೂ ಸ್ವಲ್ಪ ಅಧಿಕವಾಗಿ ನೀನು ಏತಕ್ಕೆ ಇಂದು ಭಕ್ಷಿಸಿದೆ ? ಪಲಪ್ರಮಾಣದ ಹಾಲನ್ನೂ ಏಕೆ ಕುಡಿದೆ ?' ಹೀಗೆ ಕ್ರೋಧದಿಂದ ಹೇಳುತ್ತಾ ಆ ಪುರುಷರು ಅರ್ಥವರ್ಮನನ್ನು ಕಾಲಿನಿಂದ ಎಳೆದು ದೊಣ್ಣೆಗಳಿಂದ ಚೆನ್ನಾಗಿ ಹೊಡೆದರು. ಮತ್ತು ಅಧಿಕ ತಿಂದಿದ್ದ ತುಪ್ಪದರ್ಷ, ಹಾಲು, ಮಾಂಸದ ಅನ್ನವನ್ನೆಲ್ಲ ಅವರು ಅಥವರ್ಮನ ಹೊಟ್ಟೆಯಿಂದ ಈಚೆಗೆ ಎಳೆದು ಹಾಕಿದರು.

---

ತತೋ ನಿಶಾಗಮೇ ಭಕ್ತಂ ಕ್ಷೀರಂ ಚಾನಾಯಯತ್ಪುನಃ ।
ಅರ್ಥವರ್ಮಾ ವಣಿಕ್ತಸ್ಯ ಸ ಯಶೋವರ್ಮಣಃ ಕೃತೇ ॥ ೧೭೬
ಯಶೋವರ್ಮಾ ಚ ಭೂಯಸ್ತದ್ಯಥಾಕಾಮಮಭುಂಕ್ತ ಸಃ ।
ಅರ್ಥವರ್ಮಾಪಿ ಸ ತದಾ ಕ್ಷೀರಸ್ಯೈಕಂ ಪಲಂ ಪಪೌ ॥ ೧೭೭
ತತ್ರೈವ ಚೈಕಸ್ಥಾನೇ ತಾವಾಸ್ತೀರ್ಣಶಯನಾವುಭೌ ।
ಯಶೋವರ್ಮಾರ್ಥವರ್ಮಾಣೌ ಶನೈರ್ನಿದ್ರಾಮುಪೇಯತುಃ ॥ ೧೭೮
ನಿಶೀಥೇ ಚ ಯಶೋವರ್ಮಾ ಸ್ವಪ್ನೇಽಪಶ್ಯದಶಂಕಿತಮ್ ।
ಪ್ರವಿಷ್ಟಾನತ್ರ ಪುರುಷಾನ್‌ದಂಡಹಸ್ತಾನ್ ಭಯಂಕರಾನ್ ॥ ೧೭೯
ಧಿಗಲ್ಪಾಭ್ಯಧಿಕಃ ಕರ್ಷೋ ಘೃತಸ್ಯ ಕಿಮಿತಿ ತ್ವಯಾ ।
ಮಾಂಸೌದನಶ್ಚ ಭುಕ್ತೋಽದ್ಯ ಪೀತಂ ಚ ಪಯಸಃ ಪಲಮ್ ॥ ೧೮೦
ಇತಿ ಕ್ರೋಧಾದ್ಬ್ರುವಾಣೈಸ್ತೈರಾಕೃಷ್ಯೈವಾಥ ಪಾದತಃ ।
ಪುರುಷೈರರ್ಥವರ್ಮಾ ಸಲಗುಡೈಃ ಪರ್ಯತಾಡ್ಯತ ॥ ೧೮೧
ಘೃತಕರ್ಷಪಯೋಮಾಂಸಭಕ್ತಮಭ್ಯಧಿಕಂ ಚ ಯತ್ ।
ಭುಕ್ತಂ ತತ್ಸರ್ವಮುದರಾದಾಚಕರ್ಷುಶ್ಚ ತಸ್ಯ ತೇ ॥ ೧೮೨

೧೮೩. ಅದನ್ನು ನೋಡಿ ಯಶೋವರ್ಮನು ಎಚ್ಚರಗೊಂಡು ನೋಡುವಷ್ಟರಲ್ಲಿ ಎಚ್ಚರಗೊಂಡಿದ್ದ ಅರ್ಥವರ್ಮನಿಗೆ ಹೊಟ್ಟೆಯಲ್ಲಿ ನೋವುಂಟಾಗಿತ್ತು.

೧೮೪. ಕಿರುಚುತ್ತಾ ಇದ್ದ ಅವನ ಹೊಟ್ಟೆಯನ್ನು ಪರಿಜನರು ಹಿಸುಕಿದರು. ಆಗ ಅರ್ಥವರ್ಮನು ಅಧಿಕವಾಗಿ ತಿಂದುದ್ದನ್ನು ವಾಂತಿ ಮಾಡಿದನು.

೧೮೫. ಅನಂತರ ಅವನ ವೇದನೆಯು ಶಾಂತವಾಗಲು ಯಶೋವರ್ಮನು ಯೋಚಿಸಿದನು. "ಯಾವುದರ ಭೋಗವು ಈ ರೀತಿಯಾಗಿರುವುದೋ ಅಂತಹ ಈ ಧನಸಂಪತ್ತಿಗೆ ಧಿಕ್ಕಾರ.

೧೮೬. ಇಂತಹ ಸಂಪತ್ತಿನಿಂದ ಈ ಭೂಮಿಯು ಕೆಟ್ಟ ಜಾಗವಾದೀತು." ಹೀಗೆ ಮನಸ್ಸಿನಲ್ಲಿ ಯೋಚಿಸುತ್ತಾ ಆ ಯಶೋವರ್ಮನು ಅಲ್ಲಿ ಆ ರಾತ್ರಿಯನ್ನು ಕಳೆದನು.

೧೮೭. ಬೆಳಿಗ್ಗೆ ಅರ್ಥವರ್ಮನಿಂದ ಬೀಳ್ಕೊಂಡು ಯಶೋವರ್ಮನು ಅಲ್ಲಿಂದ ವರ್ತಕನಾದ ಭೋಗವರ್ಮನ ಮನೆಗೆ ಹೋದನು.

೧೮೮. ಅಲ್ಲಿ ಯಥಾವತ್ತಾಗಿ ಅಭ್ಯಾಗತನಾಗಿ ಭೋಗವರ್ಮನ ಬಳಿಗೆ ಹೋದಾಗ ಅವನೂ ಆದರ ಮಾಡಿ ಆ ದಿವಸ ಭೋಜನಕ್ಕಾಗಿ ಯಶೋವರ್ಮನನ್ನು ಕರೆದನು.

---

ತದ್ದೃಷ್ಟ್ವಾ ಸ ಯಶೋವರ್ಮಾ ಪ್ರಬುದ್ಧೋ ಯಾವದೀಕ್ಷತೇ ।
ತಾವತ್ತಸ್ಯಾಯಯೌ ಶೂಲಂ ವಿಬುದ್ಧಸ್ಯಾರ್ಥವರ್ಮಣಃ ॥ ೧೮೩

ತತಃ ಕ್ರುದನ್ ಪರಿಜನೈರ್ಮರ್ದ್ಯಮಾನೋದರಶ್ಚ ಸಃ ।
ವಮತಿ ಸ್ಮಾರ್ಥವರ್ಮಾ ತದಧಿಕಂ ಯತ್ಸ ಭುಕ್ತವಾನ್ ॥ ೧೮೪

ಶಾಂತಶೂಲೇ ತತಸ್ತಸ್ಮಿನ್ಯಶೋವರ್ಮಾ ವ್ಯಚಿಂತಯತ್ ।
ಧಿಗ್ಧಿಗರ್ಥಶ್ರಿಯಮಿಮಾಂ ಯಸ್ಯಾ ಭೋಗೋಽಯಮೀದೃಶಃ ॥ ೧೮೫

ಖಲೀಕೃತೇಯಮೀದೃಶ್ಯಾ ಭೂಯಾದಭುವನಿಃ ಶ್ರಿಯಃ ।
ಇತ್ಯಂತಶ್ಚಿಂತಯನ್ ಸೋಽತ್ರ ರಾತ್ರಿಂ ತಾಮತ್ಯವಾಹಯತ್ ॥ ೧೮೬

ಪ್ರಾತಸ್ತಮರ್ಥವರ್ಮಾಣಮಾಮಂತ್ರ್ಯ ಸ ಯಯೌ ತತಃ ।
ಯಶೋವರ್ಮಾ ಗೃಹಂ ತಸ್ಯ ವಣಿಜೋ ಭೋಗವರ್ಮಣಃ ॥ ೧೮೭

ತತ್ರಾಭ್ಯಾಗಾದ್ಯಥಾವತ್ತು ತೇನಾಪಿ ಚ ಕೃತಾದರಃ ।
ನಿಮಂತ್ರಿತೋಽಭೂದ್ವಣಿಜಾ ತದಹರ್ಭೋಜನಾಯ ಸಃ ॥ ೧೮೮

೧೮೯. ಯಶೋವರ್ಮನಿಗೆ ಈ ವರ್ತಕನ ಯಾವ ಧನಸಂಪತ್ತೂ ಕಾಣಲಿಲ್ಲ. ಆದರೆ ಅವನ ಮನೆ ಮಂಗಳಕರವಾಗಿದ್ದು ಅವನಲ್ಲಿ ವಸ್ತ್ರಗಳೂ ಆಭರಣಗಳೂ ಇದ್ದವು.

೧೯೦. ಅನಂತರ ಯಶೋವರ್ಮನು ಅಲ್ಲಿ ಇರಲಾಗಿ ವರ್ತಕನಾದ ಭೋಗವರ್ಮನು ತಾನು ಮಾಡಬೇಕಾದ ವ್ಯವಹಾರವನ್ನು ನಡೆಸಲು ತೊಡಗಿದನು.

೧೯೧. ಬೇರೆಯವನಿಂದ ವ್ಯಾಪಾರದ ಸಾಮಾನನ್ನು ತೆಗೆದುಕೊಂಡು ಆ ಕ್ಷಣದಲ್ಲೇ ಅದನ್ನು ಮತ್ತೊಬ್ಬನಿಗೆ ಕೊಟ್ಟನು. ತನ್ನ ಹಣವಿಲ್ಲದೆಯೇ ಮಧ್ಯದವನಿಂದ (ದಲ್ಲಾಳಿತನದಿಂದ) ದೀನಾರಗಳನ್ನು ಸಂಪಾದಿಸಿಕೊಂಡನು.

೧೯೨. ಆ ವರ್ತಕನು ತತ್ಕ್ಷಣವೇ ಆ ದೀನಾರಗಳನ್ನು (ಸುವರ್ಣ ನಾಣ್ಯಗಳನ್ನು) ಸೇವಕನ ಕೈಯಲ್ಲಿ ನಾನಾವಿಧವಾದ ಅನ್ನಪಾನಗಳನ್ನು ತಯಾರಿಸುವುದಕ್ಕಾಗಿ ತನ್ನ ಹೆಂಡತಿಗೆ ಕಳುಹಿಸಿಕೊಟ್ಟನು.

೧೯೩. ಕ್ಷಣಮಾತ್ರದಲ್ಲಿ ಇಚ್ಛಾಭರಣನೆಂಬ ಹೆಸರುಳ್ಳ ಒಬ್ಬ ಮಿತ್ರನು ಆ ವರ್ತಕನ ಬಳಿಗೆ ವೇಗವಾಗಿ ಬಂದು ಭೋಗವರ್ಮನನ್ನು ಕುರಿತು ಹೇಳಿದನು:

೧೯೪. "ಭೋಜನವು ಸಿದ್ಧವಾಗಿದೆ. ಏಳು, ಬಾ. ಭೋಜನ ಮಾಡೋಣ. ಇತರ ಸ್ನೇಹಿತರೂ ಒಟ್ಟಿಗೆ ಸೇರಿ ನಿನಗೋಸ್ಕರ ಕಾಯುತ್ತಿದ್ದಾರೆ."

೧೯೫. "ಇಂದು ನಾನು ಬರುವುದಿಲ್ಲ. ನನ್ನೊಡನೆ ಈ ಅತಿಥಿಯು ಇದ್ದಾನೆಯಷ್ಟೆ" ಎಂದು ವರ್ತಕನು ಹೇಳಿದಾಗ ಮತ್ತೆ ಆ ಸ್ನೇಹಿತನು ಹೇಳಿದನು.

---

ನ ಚಾಸ್ಯ ವಣಿಜೋಽಪಶ್ಯತ್ತ್ರ ಕಾಂಚಿದ್ಧನಸಂಪದಮ್ ।
ಅಪಶ್ಯತ್ತು ಶುಭಂ ವೇಶ್ಮವಾಸಾಂಸ್ಯಾಭರಣಾನಿ ಚ ॥ ೧೮೯
ತತಃ ಸ್ಥಿತೇ ಯಶೋವರ್ಮಣ್ಯಸ್ಮಿನ್ಪ್ರಾವರ್ತತಾತ್ರ ಸಃ ।
ಭೋಗವರ್ಮಾ ವಣಿಕ್ಕರ್ತುಂ ವ್ಯವಹಾರಂ ನಿಜೋಚಿತಮ್ ॥ ೧೯೦
ಅನ್ಯಸ್ಮಾದ್ಭಾಂಡಮಾದಾಯ ದದಾವನ್ಯಸ್ಯ ತತ್ಕ್ಷಣಮ್ ।
ವಿನೈವ ಸ್ವಧನಂ ಮಧ್ಯಾದ್ದೀನಾರಾನುದಪಾದಯತ್ ॥ ೧೯೧
ತ್ವರಿತಂ ತಾನ್ಸ ದೀನಾರಾನ್ಭೃತ್ಯಹಸ್ತೇ ವಿಸೃಷ್ಟವಾನ್ ।
ಸ್ವಭಾರ್ಯಾಯೈ ವಿಚಿತ್ರಾನ್ನಪಾನಸಂಪಾದನಾಯ ಚ ॥ ೧೯೨
ಕ್ಷಣಾಚ್ಚ ಸುಹೃದೇಕಸ್ತಮಿಚ್ಛಾಭರಣನಾಮಕಃ ।
ಉಪಾಗತ್ಯೈವ ರಭಸಾದ್ಭೋಗವರ್ಮಾಣಮಭ್ಯಧಾತ್ ॥ ೧೯೩
ಸಿದ್ಧಂ ಭೋಜನಮಸ್ಮಾಕಮುತ್ತಿಷ್ಠಾಗಚ್ಛ ಭುಞ್ಜ್ಮಹೇ ।
ಸುಹೃದೋ ಮಿಲಿತಾ ಹ್ಯನ್ಯೇ ತ್ವತ್ಪ್ರತೀಕ್ಷಾಃ ಸ್ಥಿತಾ ಇತಿ ॥ ೧೯೪
ಅದ್ಯಾಹಂ ನಾಗಮಿಷ್ಯಾಮಿ ಪ್ರಾಘುಣೋಽಯಂ ಸ್ಥಿತೋ ಹಿ ಮೇ ।
ಇತಿ ಬ್ರುವಾಣಂ ಪುನರಪ್ಯೇನಂ ಸ ಸುಹೃದಬ್ರವೀತ್ ॥ ೧೯೫

೧೯೬ "ಹಾಗಿದ್ದರೆ ಈ ಅತಿಥಿಯೂ ಕೂಡ ನಿನ್ನ ಜೊತೆಯಲ್ಲಿ ಬರಲಿ. ಇವನೂ ನಮ್ಮ ಮಿತ್ರನಲ್ಲವೇನು ? ಶೀಘ್ರವಾಗಿ ಏಳು."

೧೯೭ ಹೀಗೆ ಆಗ್ರಹದಿಂದ ಆ ಮಿತ್ರನು ಜೊತೆಯಲ್ಲಿ ಭೋಗವರ್ಮನನ್ನೂ ಕರೆದೊಯ್ದನು. ವರ್ತಕನು ಯಶೋವರ್ಮನ ಜೊತೆಗೂಡಿ ಹೋಗಿ ಉತ್ತಮವಾದ ಆಹಾರವನ್ನು ಊಟ ಮಾಡಿದನು.

೧೯೮. ಮತ್ತು ಆಸವಪಾನವನ್ನು ಮಾಡಿ ಬಂದು ಮತ್ತೆ ಸಾಯಂಕಾಲ ತನ್ನ ಗೃಹದಲ್ಲಿ ಆ ವರ್ತಕನು ಯಶೋವರ್ಮನೊಡನೆ ನಾನಾವಿಧವಾದ ಪಾನ, ಭೋಜನವನ್ನು ಸೇವಿಸಿದನು.

೧೯೯. ರಾತ್ರಿಯು ಬಂದಾಗ ವರ್ತಕನು ತನ್ನ ಸೇವಕನನ್ನು ಕುರಿತು ಕೇಳಿದನು. "ಇಂದು ನಮಗೆ ರಾತ್ರಿಗೆ ಬೇಕಾದಷ್ಟು ಮದ್ಯವು ಇದೆಯೋ ಇಲ್ಲವೋ ?"

೨೦೦. "ಸ್ವಾಮಿ ! ಇಲ್ಲ " ಎಂದು ಅವನು ಹೇಳಲು ಆ ವರ್ತಕನು "ಇಂದು ರಾತ್ರಿಯ ಅಪರಕಾಲದಲ್ಲಿ ನಾವು ಜಲವನ್ನು ಹೇಗೆ ಕುಡಿಯುವುದು ?" ಎಂದು ಹೇಳುತ್ತಾ ಶಯನವನ್ನು ಸೇರಿದನು.

೨೦೧. ರಾತ್ರಿ ಆ ವರ್ತಕನ ಪಕ್ಕದಲ್ಲಿ ಮಲಗಿದ್ದ ಯಶೋವರ್ಮನಿಗೆ ಒಂದು ಸ್ವಪ್ನವಾಯಿತು. ಅದರಲ್ಲಿ ಇಬ್ಬರು ಮೂವರು ಪುರುಷರು ಬಂದುದನ್ನು ಅವನು ನೋಡಿದನು. ಅವರ ಹಿಂದೆ ಮತ್ತೆ ಕೆಲವರು ಬಂದರು.

---

ಭವತಾ ಸಮಮಾಯಾತು ತರ್ಹಿ ಪ್ರಾಘುಣಕೋಽಪ್ಯಯಮ್ ।
ಏಷೋಽಪಿ ನ ಕಿಮಸ್ಮಾಕಂ ಮಿತ್ರಮುತ್ತಿಷ್ಠ ಸತ್ವರಮ್ ॥ ೧೯೬
ಇತ್ಯಾಗ್ರಹಾದ್ಭೋಗವರ್ಮಾ ನೀತೋ ಮಿತ್ರೇಣ ತೇನ ಸಃ ।
ಯಶೋವರ್ಮಯುತೋ ಗತ್ವಾ ಭುಂಕ್ತೇ ಸ್ಮಾಹಾರಮುತ್ತಮಮ್ ॥
೧೯೭
ಪೀತ್ವಾ ಚ ಪಾನಮಾಗತ್ಯ ಸಾಯಂ ಸ ಸ್ವಗೃಹೇ ಪುನಃ ।
ಸ ಯಶೋವರ್ಮಕೋ ಭೇಜೇ ವಿಚಿತ್ರಂ ಪಾನಭೋಜನಮ್ ॥ ೧೯೮
ಪ್ರಾಪ್ತಾಯಾಂ ನಿಶಿ ಪಪ್ರಚ್ಛ ನಿಜಂ ಪರಿಜನಂ ಚ ಸಃ ।
ಕಿಮದ್ಯ ರಾತ್ರಿಪರ್ಯಾಪ್ತಮಸ್ತಿ ನಃ ಸರಕಂ ನ ವಾ ॥ ೧೯೯
ಸ್ವಾಮಿನ್ನಾಸ್ತೀತಿ ತೇನೋಕ್ತೇ ಸ ಭೇಜೇ ಶಯನಂ ವಣಿಕ್ ।
ಪಾಸ್ಯಾಮೋಽಪರರಾತ್ರೇಽದ್ಯ ಕಥಂ ಜಲಮಿತಿ ಬ್ರುವನ್ ॥ ೨೦೦
ಯಶೋವರ್ಮಾಥ ತತ್ಪಾರ್ಶ್ವೇ ಸುಪ್ತಃ ಸ್ವಪ್ನೇಽತ್ರ ದೃಷ್ಟವಾನ್ ।
ಪ್ರವಿಷ್ಟಾನ್ ಪುರುಷಾನ್ ದ್ವಿತ್ರಾನನ್ಯಾಂಸ್ತೇಷಾಂ ಚ ಪೃಷ್ಠತಃ ॥ ೨೦೧

೨೦೨–೨೦೩. ಅನಂತರ ಪ್ರವೇಶಿಸಿದ ಆ ಪುರುಷರು ಕೈಯಲ್ಲಿ ದೊಣ್ಣೆಗಳನ್ನು ಹಿಡಿದಿದ್ದರು. ಅವರು "ಭೋಗವರ್ಮನಿಗಾಗಿ ಅಪರರಾತ್ರಿಯಲ್ಲಿ ಮದ್ಯದ ಬಗ್ಗೆ ನೀವೇಕೆ ಯೋಚಿಸಲಿಲ್ಲ? ಮೂರ್ಖರೇ, ನೀವು ಎಲ್ಲಿದ್ದಿರಿ ?' ಎನ್ನುತ್ತಾ ಅವರು ಮೊದಲು ಪ್ರವೇಶಿಸಿದ ಪುರುಷರನ್ನು ಕ್ರೋಧದಿಂದ ದಂಡಗಳಿಂದ ಥಳಿಸಿದರು.

೨೦೪. "ನಮ್ಮ ಈ ಒಂದು ಅಪರಾಧವನ್ನು ಕ್ಷಮಿಸಬೇಕು" ಎಂದು ಹೇಳುತ್ತಾ ದೊಣ್ಣೆಯ ಪೆಟ್ಟನ್ನು ತಿಂದ ಪುರುಷರು ಅಲ್ಲಿಂದ ನಿರ್ಗಮಿಸಿದರು. ಆಗ ಇತರ ಪುರುಷರೂ ಹೊರಟರು.

೨೦೫–೨೦೬. ಯಶೋವರ್ಮನು ಅದನ್ನು ನೋಡಿ ಎಚ್ಚರಗೊಂಡು ಚಿಂತಿಸಿದನು. "ಭೋಗವರ್ಮನಿಗೆ ಚಿಂತಿಸದೆಯೇ ಪ್ರಾಪ್ತವಾದ ಭೋಗಸಂಪತ್ತು ಪ್ರಂಶಸನೀಯವಾದುದು. ಸಮೃದ್ಧವಾದುದಾದರೂ ಭೋಗಹೀನವಾದ ಅರ್ಥವರ್ಮನದು ಅರ್ಥಸಂಪತ್ತೇ ಅಲ್ಲ." ಹೀಗೆ ಯೋಚಿಸುತ್ತಾ ಅವನು ಆ ರಾತ್ರಿಯನ್ನು ಕಳೆದನು.

೨೦೭ ಪ್ರಾತಃಕಾಲದಲ್ಲಿ ಯಶೋವರ್ಮನು ಆ ವರ್ತಕ ಶ್ರೇಷ್ಠನಿಂದ ಬೀಳ್ಕೊಂಡು ಅಲ್ಲಿಂದ ಮತ್ತೆ ವಿಂಧ್ಯವಾಸಿನಿಯ ಪಾದಮೂಲಕ್ಕೆ ಹೋದನು.

---

ಕಸ್ಮಾದಪರರಾತ್ರಾರ್ಥಂ ಸರಕಂ ಭೋಗವರ್ಮಣಃ ।
ಚಿಂತಿತಂ ನಾದ್ಯ ಯುಷ್ಮಾಭಿಃ ಕ್ವ ಭವದ್ಭಿಃ ಸ್ಥಿತಂ ಶಠಾಃ ॥ ೨೦೨
ಇತಿ ಪಶ್ಚಾತ್ಪ್ರವಿಷ್ಟಾಸ್ತೇ ಪುರುಷಾ ದಂಡಪಾಣಯಃ ।
ಪೂರ್ವಪ್ರವಿಷ್ಟಾನ್ ಕ್ರೋಧಾತ್ತಾನ್ ದಂಡಾಘಾತೈರತಾಡಯನ್ ॥ ೨೦೩
ಅಪರಾಧೋಽಯಮೇಕೋ ನಃ ಕ್ಷಮ್ಯತಾಮಿತಿ ವಾದಿನಃ ।
ದಂಡಾಹತಾಸ್ತೇ ಪುರುಷಾಸ್ತೇಚಾನ್ಯೇ ನಿರಗುಸ್ತತಃ ॥ ೨೦೪
ಯಶೋವರ್ಮಾಥ ತದ್ದೃಷ್ಟ್ವಾ ಪ್ರಬುದ್ಧಃ ಸಮಚಿಂತಯತ್ ।
ಅಚಿಂತ್ಯೋಪನತಿಃ ಶ್ಲಾಘ್ಯಾ ಭೋಗಶ್ರೀರ್ಭೋಗವರ್ಮಣಃ ॥ ೨೦೫
ಭೋಗಹೀನಾ ಸಮೃದ್ಧಾಪಿ ನಾರ್ಥಶ್ರೀರರ್ಥವರ್ಮಣಃ ।
ಇತಿ ಚಿಂತಯತಸ್ತಸ್ಯ ಸಾತಿಚಕ್ರಾಮ ಯಾಮಿನೀ ॥ ೨೦೬
ಪ್ರಾತಶ್ಚ ಸ ಯಶೋವರ್ಮಾ ತಮಾಮಂತ್ರ್ಯ ವಣಿಗ್ವರಮ್ ।
ಜಗಾಮ ವಿಂಧ್ಯವಾಸಿನ್ಯಾಃ ಪಾದಮೂಲಂ ಪುನಸ್ತತಃ ॥ ೨೦೭

೨೦೮. ಅಲ್ಲಿ ತಪಸ್ಸಿನಲ್ಲಿದ್ದು ಅವನು ಸ್ವಪ್ನದಲ್ಲಿ ಕಂಡ ಆ ದೇವಿಯನ್ನು ಹಿಂದೆ ಅವಳು ತಿಳಿಸಿದ್ದ ಎರಡು ಸಂಪತ್ತುಗಳ ಪೈಕಿ ಭೋಗಸಂಪತ್ತನ್ನು ವರವಾಗಿ ಯಾಚಿಸಿದನು. ಆ ದೇವಿಯು ಅವನಿಗೆ ಭೋಗಸಂಪತ್ತನ್ನೇ ಕೊಟ್ಟಳು.

೨೦೯. ಅನಂತರ ಯಶೋವರ್ಮನು ಮನೆಗೆ ಬಂದು ದೇವಿಯ ಅನುಗ್ರಹದಿಂದ ಚಿಂತಿಸದೆಯೇ ದೊರಕಿದ ಭೋಗ ಸಂಪತ್ತಿನಿಂದ ಸುಖವಾಗಿ ಇದ್ದನು.

೨೧೦. ಆದುದರಿಂದ ಈ ರೀತಿಯಾಗಿ ಭೋಗಸಮೃದ್ಧವಾದ ಸಂಪತ್ತು ಅತ್ಯಲ್ಪವಾಗಿದ್ದರೂ ಒಳ್ಳೆಯದು. ಆದರೆ ಭೋಗರಹಿತವಾಗಿ ಅಪಾರವಾಗಿದ್ದರೂ ನಿಷ್ಪ್ರಯೋಜನವಾಗಿರುವ ಸಂಪತ್ತು ಒಳ್ಳೆಯದಲ್ಲ.

೨೧೧. ಆದುದರಿಂದ ರಾಜನಾದ ಚಮರವಾಲನ ಲೋಭದಿಂದ ಕೂಡಿದ ಸಂಪತ್ತನ್ನು ನೋಡಿ ಏಕೆ (ಆ ಸಂಪತ್ತು ನಮಗಿಲ್ಲವೆಂದು) ಕರುಬುತ್ತೀರಿ ? ದಾನ ಮತ್ತು ಭೋಗಗಳಿಂದ ಸಮೃದ್ಧವಾದ ನಿಮ್ಮ ಸಂಪತ್ತನ್ನು ಏಕೆ ನೋಡುತ್ತಿಲ್ಲ ?

೨೧೨. ಆದುದರಿಂದ ಆ ಚಮರವಾಲನ ಮೇಲೆ ನಿಮ್ಮ ಆಕ್ರಮಣವು ಶುಭವಾದುದಲ್ಲ. ಮತ್ತು ಯಾತ್ರೆಯ ಮುಹೂರ್ತವು ಇಲ್ಲವೇ ಇಲ್ಲ. (ನಿಮಗೆ) ಜಯವೂ ಕಾಣಿಸುವುದಿಲ್ಲ."

೨೧೩. ಹೀಗೆ ಆ ಜ್ಯೌತಿಷಿಕನು ಹೇಳಿದರೂ ಆ ಐದು ಮಂದಿ ರಾಜರು ಅಸಹನೆಯಿಂದ ರಾಜನಾದ ಚಮರವಾಲನ ಮೇಲೆ ಎರಗಿದರು.

---

ತಪಃಸ್ಥಃ ಸ್ವಪ್ನದೃಷ್ಟಾಯಾಸ್ತಸ್ಯಾಃ ಪೂರ್ವೋಕ್ತಯೋರ್ದ್ವಯೋಃ ।
ಶ್ರಿಯೋರ್ಭೋಗಶ್ರಿಯಂ ತತ್ರ ವವ್ರೇ ಸಾಸ್ಮೈ ದದೌ ಚ ತಾಮ್ ॥ ೨೦೮
ಅಥಾಗತ್ಯ ಯಶೋವರ್ಮಾ ಗೃಹಂ ದೇವೀಪ್ರಸಾದತಃ ।
ಅಚಿಂತಿತೋಪಗಾಮಿನ್ಯಾ ತಸ್ಥೌ ಭೋಗಶ್ರಿಯಾ ಸುಖಮ್ ॥ ೨೦೯
ತದೇವಂ ಭೋಗಸಂಪನ್ನಾ ಶ್ರೀರಪ್ಯಲ್ಪತರಾ ವರಮ್ ।
ನ ಪುನರ್ಭೋಗರಹಿತಾ ಸುವಿಸ್ತೀರ್ಣಾಪ್ಯಪಾರ್ಥಕಾ ॥ ೨೧೦
ತತ್ಕಿಂ ಚಮರವಾಲಸ್ಯ ರಾಜ್ಞಃ ಕಾರ್ಪಣ್ಯಸಂಪದಾ ।
ತಪ್ಯಧ್ವೇ ದಾನಭೋಗಾಢ್ಯಾಂ ವೀಕ್ಷಧ್ವೇ ಸ್ವಾಂ ಶ್ರಿಯಂ ನ ಕಿಮ್ ॥ ೨೧೧
ಅತಸ್ತಂ ಪ್ರತಿಯುಷ್ಮಾಕಮವಸ್ಕಂದೋ ನ ಭದ್ರಕಃ ।
ಯಾತ್ರಾಲಗ್ನಶ್ಚ ನಾಸ್ತ್ಯೇವ ನಾಪಿ ವಾ ದೃಶ್ಯತೇ ಜಯಃ ॥ ೨೧೨
ಇತ್ಯುಕ್ತಾ ಅಪಿ ತೇ ತೇನ ಪಂಚ ಜ್ಯೋತಿರ್ವಿದಾ ನೃಪಾಃ ।
ಯಯುಶ್ಚಮರವಾಲಂ ತಂ ನೃಪಂ ಪ್ರತ್ಯಸಹಿಷ್ಣವಃ ॥ ೨೧೩

೨೧೪. ಗಡಿಯಲ್ಲಿ ಅವರು ಬಂದಿದ್ದಾರೆಂದು ತಿಳಿದು ಯುದ್ಧಕ್ಕೆ ಹೋಗಲು ರಾಜನಾದ ಚಮರವಾಲನು ಮೊದಲು ಸ್ನಾನ ಮಾಡಿ ಶಿವನನ್ನು ಪೂಜಿಸಿದನು.

೨೧೫. ಪಾಪನಾಶಕವೂ ಸಮಸ್ತಕಾಮಪ್ರದವೂ ಮಂಗಳಕರವೂ ಅರವತ್ತೆಂಟು ಉತ್ತಮಸ್ಥಾನಗಳಿಗೆ ನಿಯತವಾದವೂ ಆದ ನಾಮಗಳಿಂದ ಆ ಶಿವನನ್ನು ಯಥಾವತ್ತಾಗಿ ಸ್ತೋತ್ರ ಮಾಡಿದನು.

೨೧೬ "ರಾಜನೇ ! ನಿಶ್ಚಿಂತೆಯಿಂದ ಯುದ್ಧ ಮಾಡು. ಯುದ್ಧದಲ್ಲಿ ಶತ್ರುಗಳನ್ನು ಗೆಲ್ಲುವೆ." ಹೀಗೆ ಆಕಾಶದಿಂದ ವಾಣಿಯು ಚಮರವಾಲನಿಗೆ ಕೇಳಿಸಿತು.

೨೧೭ ಆಗ ಬಹಳ ಸಂತೋಷದಿಂದ ರಾಜ ಚಮರವಾಲನು ಸಜ್ಜುಗೊಂಡು ಸೈನ್ಯಸಮೇತನಾಗಿ ಶತ್ರುಗಳ ಮೇಲೆ ಯುದ್ಧಕ್ಕಾಗಿ ಹೊರಟನು.

೨೧೮. ಆ ರಾಜನ ಶತ್ರುಗಳ ಸೈನ್ಯದಲ್ಲಿ ಮೂವತ್ತು ಸಾವಿರ ಆನೆಗಳು, ಮೂರು ಲಕ್ಷ ಕುದುರೆಗಳು ಮತ್ತು ಒಂದು ಕೋಟಿ ಪದಾತಿಭಟರು ಇದ್ದರು.

೨೧೯. ಆದರೆ ಚಮರವಾಲನ ಸೈನ್ಯದಲ್ಲಿ ಇಪ್ಪತ್ತುಲಕ್ಷಪದಾತಿಗಳು, ಹತ್ತು ಸಾವಿರ ಆನೆಗಳು ಮತ್ತು ಒಂದು ಲಕ್ಷ ಕುದುರೆಗಳು ಮಾತ್ರ ಇದ್ದವು.

---

ಸೀಮಾಪ್ರಾಪ್ತಾಂಶ್ಚ ತಾನ್‌ಬುದ್ಧ್ವಾ ನಿರ್ಯಾಸ್ಯನ್ ಸಮರಾಯ ಸಃ ।
ರಾಜಾ ಚಮರವಾಲಃ ಪ್ರಾಕ್‌ಸ್ನಾತ್ವಾ ಹರಮಪೂಜಯತ್ ॥ ೨೧೪

ಅಷ್ಟಷಷ್ಟ್ಯುತ್ತಮಸ್ಥಾನನಿಯತೈರ್ನಾಮಭಿಃ ಶುಭೈಃ ।
ಯಥಾವತ್ತುಂ ಚ ತುಷ್ಟಾವ ಪಾಪಘ್ನೈಃ ಸರ್ವಕಾಮದೈಃ ॥ ೨೧೫

ರಾಜನ್ ಯುಧ್ಯಸ್ವ ನಿಃಶಂಕಃ ಶತ್ರೂನ್ ಜೇಷ್ಯಸಿ ಸಂಗರೇ ।
ಇತ್ಯುದ್ಗತಾಂ ಚ ಗಗನಾತ್ ಸೋಽಥ ಶುಶ್ರಾವ ಭಾರತೀಮ್ ॥ ೨೧೬

ತತಃ ಪ್ರಹೃಷ್ಟಃ ಸಂನಹ್ಯ ತೇಷಾಂ ನಿಜಬಲಾನ್ವಿತಃ ।
ರಾಜಾ ಚಮರವಾಲೋಽಗ್ರೇ ಯುದ್ಧಾಯ ನಿರಗಾದ್ದ್ವಿಷಾಮ್ ॥ ೨೧೭

ತ್ರಿಂಶದ್ಗಜಸಹಸ್ರಾಣಿ ತ್ರೀಣಿ ಲಕ್ಷಾಣಿ ವಾಜಿನಾಮ್ ।
ಕೋಟಿಃ ಪಾದಭಟಾನಾಂ ಚ ತಸ್ಯಾಸೀದ್ವೈರಿಣಾಂ ಬಲೇ ॥ ೨೧೮

ಸ್ವಬಲೇ ಚ ಪದಾತೀನಾಂ ತಸ್ಯ ಲಕ್ಷಾಣಿ ವಿಂಶತಿಃ ।
ದಶ ದಂತಿಸಹಸ್ರಾಣಿ ಹಯಾನಾಂ ಲಕ್ಷಮಪ್ಯಭೂತ್ ॥ ೨೧೯

೨೨೦–೨೨೧. ಆ ಎರಡು ಸೈನ್ಯಗಳಿಗೂ ದೊಡ್ಡ ಯುದ್ಧವು ಆರಂಭವಾಯಿತು. ಅನ್ವರ್ಥವಾದ ಹೆಸರುಳ್ಳ ವೀರನೆಂಬ ಪ್ರತೀಹಾರನು ಮುಂದೆ ಹೋಗುತ್ತಿರಲು ರಾಜನಾದ ಚಮರವಾಲನು ಸ್ವತಃ ಸಮರಭೂಮಿಯನ್ನು ಭಗವಂತನಾದ ಮಹಾವರಾಹನು ಮಹಾಸಮುದ್ರವನ್ನು ಪ್ರವೇಶಿಸಿದಂತೆ ಹೊಕ್ಕನು.

೨೨೨. ಅಲ್ಪ ಸೈನ್ಯದಿಂದಲೇ ದೊಡ್ಡದಾದ ಶತ್ರುಸೈನ್ಯವನ್ನು ಸಂಹರಿಸಿ ಚಮರವಾಲನು ಕುದುರೆಗಳ, ಆನೆಗಳ, ಪದಾತಿಗಳ ಮತ್ತು ರಥಗಳ ರಾಶಿಯನ್ನೇ ಹಾಕಿದನು.

೨೨೩. ಮತ್ತು ಎದುರಿಗೆ ಬಂದ ರಾಜನಾದ ಸಮರಬಲನ ಬಳಿಗೆ ಧಾವಿಸಿ ಶಕ್ತ್ಯಾಯುಧದಿಂದ ಅವನನ್ನು ಹೊಡೆದು ಎಳೆದು ಪಾಶದಿಂದ ಕಟ್ಟಿಹಾಕಿದನು.

೨೨೪. ಅನಂತರ ಹೃದಯದಲ್ಲಿ ಬಾಣದಿಂದ ಪೆಟ್ಟು ತಿಂದ ಸಮರಶೂರನೆಂಬ ಎರಡನೆಯ ರಾಜನನ್ನು ಚಮರವಾಲನು ಅದರಂತೆಯೇ ಎಳೆದು ಪಾಶದಿಂದಲೇ ಕಟ್ಟಿ ಹಾಕಿದನು.

೨೨೫. ಮತ್ತು ಅವರೊಳಗೆ ಮೂರನೆಯವನಾದ ಸಮರಜಿತನೆಂಬ ರಾಜನನ್ನು ಕಟ್ಟಿಹಾಕಿ ವೀರನಾದ ಪ್ರತೀಹಾರನು ಚಮರವಾಲನ ಬಳಿಗೆ ಕರೆತಂದನು.

---

ಪ್ರವೃತ್ತೇ ತು ಮಹಾಯುದ್ಧೇ ತಯೋರುಭಯಸೇನಯೋಃ ।
ಯಥಾರ್ಥನಾಮ್ನಿ ವೀರಾಖ್ಯೇ ಪ್ರತೀಹಾರೇಽಗ್ರಯಾಯಿನಿ ॥ ೨೨೦
ಸ್ವಯಂ ಚಮರವಾಲೋಽಸೌ ರಾಜಾ ತತ್ಸಮರಾಂಗಣಮ್ ।
ಮಹಾವರಾಹೋ ಭಗವಾನ್ ಮಹಾರ್ಣವಮಿವಾವಿಶತ್ ॥ ೨೨೧
ಮಮರ್ದ ಚಾಲ್ಪಸೈನ್ಯೋಽಪಿ ಪರಸೈನ್ಯಂ ಮಹತ್ತಥಾ ।
ಯಥಾಶ್ವಗಜಪತ್ತೀನಾಂ ಹಯಾನಾಂ*ರಾಶಯೋಽಭವನ್ ॥ ೨೨೨
ಧಾವಿತ್ವಾ ಚಾತ್ರ ಸಮರಬಲಂ ತಂ ಸಂಮುಖಾಗತಮ್ ।
ಆಹತ್ಯ ಶಕ್ತ್ಯಾ ರಾಜಾನಂ ಪಾಶೇನಾಕೃಷ್ಯ ಬದ್ಧವಾನ್ ॥ ೨೨೩
ತತಃ ಸಮರಶೂರಂ ಚ ಹೃದಿ ಬಾಣಹತಂ ನೃಪಮ್ ।
ದ್ವಿತೀಯಂ ತದ್ವದಾಕೃಷ್ಯ ಪಾಶೇನೈವ ಬಬಂಧ ಸಃ ॥ ೨೨೪
ತೃತೀಯಂ ಚಾತ್ರ ಸಮರಜಿತಂ ನಾಮ ಮಹೀಪತಿಮ್ ।
ವೀರಾಖ್ಯಸ್ತತ್ಪ್ರತೀಹಾರೋ ಬದ್ಧ್ವಾ ತತ್ಪಾರ್ಶ್ವಮಾನಯತ್ ॥ ೨೨೫

---

* ರಥಾನಾಂ ಎಂದಿರಬಹುದು.

೨೨೬. ಸೇನಾಪತಿಯಾದ ದೇವಬಲನು ಬಾಣದಿಂದ ಪೆಟ್ಟು ತಿಂದಿದ್ದ ಪ್ರತಾಪಚಂದ್ರನೆಂಬ ನಾಲ್ಕನೆಯ ರಾಜನನ್ನು ತಂದು ಚಮರವಾಲನಿಗೆ ಸಮರ್ಪಿಸಿದನು.

೨೨೭. ಪ್ರತಾಪಸೇನ ಎಂಬ ಹೆಸರಿದ್ದ ಐದನೆಯ ರಾಜನು ಅದನ್ನು ನೋಡಿ ಕ್ರೋಧದಿಂದ ಯುದ್ಧದಲ್ಲಿ ಚಮರವಾಲರಾಜನನ್ನು ಎದುರಿಸಿ ಅವನ ಮೇಲೆ ಎರಗಿದನು.

೨೨೮. ಆದರೆ ಚಮರವಾಲನು ಪ್ರತಾಪಸೇನನ ಬಾಣಗಳನ್ನು ತನ್ನ ಬಾಣಗಳ ಸಮೂಹದಿಂದ ಕೊಡವಿ ಹಾಕಿ ಅವನ ಹಣೆಯಲ್ಲಿ ಮೂರು ಬಾಣಗಳಿಂದ ಇರಿದು ಗಾಯಗೊಳಿಸಿದನು.

೨೨೯. ಅನಂತರ ಚಮರವಾಲನು ಯಮನಂತೆ ಪಾಶವನ್ನು ಕತ್ತಿಗೆ ಎಸೆದು ಎಳೆದು ಬಾಣಗಳ ಹೊಡೆತದಿಂದ ಹೊರಳಾಡುತ್ತಿದ್ದ ಪ್ರತಾಪಸೇನನನ್ನು ತನ್ನ ವಶಕ್ಕೆ ತೆಗೆದುಕೊಂಡನು.

೨೩೦. ಈ ರೀತಿ ಕ್ರಮವಾಗಿ ಆ ಐದುಮಂದಿ ರಾಜರೂ ಬಂಧನಕ್ಕೊಳಗಾಗಲು ಹತರಾದ ಮೇಲೆ ಉಳಿದ ಅವರ ಸೈನ್ಯಗಳು ದಿಕ್ಕು ದಿಕ್ಕುಗಳಿಗೆ ಓಡಿ ಹೋದುವು.

೨೩೧. ಆ ರಾಜರುಗಳಿಗೆ ಸಂಬಂಧಪಟ್ಟ ಅಮಿತವಾದ ಸುವರ್ಣ ರತ್ನ ಮುಂತಾದುದನ್ನೂ ಬಹಳ ಮಂದಿ ಅಂತಃಪುರ ಸ್ತ್ರೀಯರನ್ನೂ ರಾಜನಾದ ಚಮರವಾಲನು ವಶಕ್ಕೆ ತೆಗೆದುಕೊಂಡನು.

---

ಸೇನಾಪತಿರ್ದೇವಬಲಸ್ತಸ್ಯಾನೀಯ ಸಮರ್ಪಯತ್ ।
ನೃಪಂ ಪ್ರತಾಪಚಂದ್ರಾಖ್ಯಂ ಚತುರ್ಥಂ ಸಾಯಕಾಹತಮ್ ॥ ೨೨೬
ತತಃ ಪ್ರತಾಪಸೇನಾಖ್ಯಸ್ತದ್ದೃಷ್ಟ್ವಾ ಪಂಚಮೋ ನೃಪಃ ।
ಕ್ರೋಧಾಚ್ಚಮರವಾಲಂ ತಂ ಭೂಪಮಭ್ಯಪತದ್ರಣೇ ॥ ೨೨೭
ಸ ತು ನಿರ್ಧೂಯ ತದ್ಬಾಣಾನ್ಸ್ವಶರೌಘೇಣ ವಿದ್ಧವಾನ್ ।
ರಾಜಾ ಚಮರವಾಲಸ್ತಂ ಲಲಾಟೇ ತ್ರಿಭಿರಾಶುಗೈಃ ॥ ೨೨೮
ಕಂಠಕ್ಷಿಪ್ತೇನ ಪಾಶೇನ ತಂ ಚ ಕಾಲ ಇವಾಥ ಸಃ ।
ಆಕೃಷ್ಯ ಸ್ವವಶೇ ಚಕ್ರೇ ಶರಾಘಾತವಿಘೂರ್ಣಿತಮ್ ॥ ೨೨೯
ಏವಂ ರಾಜಸು ಬದ್ಧೇಷು ತೇಷು ಪಂಚಸ್ವಪಿ ಕ್ರಮಾತ್ ।
ಹತಶೇಷಾಣಿ ಸೈನ್ಯಾನಿ ದಿಶಸ್ತೇಷಾಂ ಪ್ರದುದ್ರುವುಃ ॥ ೨೩೦
ಅಮಿತಂ ಹೇಮರತ್ನಾದಿ ಬಹೂನ್ಯಂತಃಪುರಾಣಿ ಚ ।
ರಾಜ್ಞಾ ಚಮರವಾಲೇನ ಪ್ರಾಪ್ತಾನ್ಯೇಷಾಂ ಮಹೀಭುಜಾಮ್ ॥ ೨೩೧

೨೩೨. ಆ ಅಂತಪುರ ಸ್ತ್ರೀಯರ ಮಧ್ಯೆ ಇದ್ದ ಉತ್ತಮ ಸ್ತ್ರೀಯಾದ ಯಶೋಲೇಖಾ ಎಂಬ ಪ್ರತಾಪಸೇನ ರಾಜನ ಪಟ್ಟ ಮಹಿಷಿಯು ಚಮರವಾಲನಿಗೆ ಸಿಕ್ಕಿದಳು.

೨೩೩. ಅನಂತರ ನಗರವನ್ನು ಪ್ರವೇಶಿಸಿ ಚಮರವಾಲನು ಪ್ರತೀಹಾರ ಮತ್ತು ಸೇನಾಪತಿಯರಾದ ವೀರ ಮತ್ತು ದೇವಬಲರನ್ನು ಪಟ್ಟಾಧಿಕಾರದಲ್ಲಿ ಕಟ್ಟಿ ರತ್ನಗಳಿಂದ ತುಂಬಿದನು.

೨೩೪. ಕ್ಷತ್ರಧರ್ಮದಿಂದ ಜಿತಳಾದವಳು ಎಂದು ಪ್ರತಾಪಸೇನನ ಮಹಿಷಿಯಾದ ಯಶೋಲೇಖೆಯನ್ನು ಚಮರವಾಲನು ತನ್ನ ಅಂತಃಪುರದ ಸ್ತ್ರೀಯನ್ನಾಗಿ ಮಾಡಿಕೊಂಡನು.

೨೩೫. ಚಂಚಲಳಾದ ಯಶೋಲೇಖೆಯು ಚಮರವಾಲನಿಗೆ ನಾನು ಭುಜ (ಬಲ)ದಿಂದ ಸಂಪಾದಿತಳಾದವಳು ಎಂದು ಅವನನ್ನು ಸೈರಿಸಿಕೊಂಡಳು. ಕಾಮ ಮತ್ತು ಮೋಹದಿಂದ ಪ್ರವೃತ್ತರಾದವರ ಧರ್ಮಭಾವನೆಯು ವಿಚಿತ್ರವಾಗಿರುತ್ತದೆ.

೨೩೬–೨೩೭. ಕೆಲವು ದಿನಗಳ ನಂತರ ಆ ಐದು ಮಂದಿ ಶತ್ರುರಾಜರು ವಿನೀತರಾಗಿ ಶರಣಾಗತರಾದುದರಿಂದ ರಾಣಿಯಾದ ಯಶೋಲೇಖೆಯ ಪ್ರಾರ್ಥನೆಯ ಮೇರೆಗೆ, ಬಂಧನದಲ್ಲಿದ್ದ ಅವರನ್ನು ಬಿಡುಗಡೆ ಮಾಡಿದನು, ಹಾಗೂ ಅವರನ್ನು ಸತ್ಕರಿಸಿ ಅವರ ರಾಜ್ಯಗಳಿಗೆ ಕಳುಹಿಸಿಕೊಟ್ಟನು.

---

ತನ್ಮಧ್ಯೇ ಚ ಮಹಾದೇವೀ ಯಶೋಲೇಖೇತಿ ವಿಶ್ರುತಾ ।
ರಾಜ್ಞಃ ಪ್ರತಾಪಸೇನಸ್ಯ ಪ್ರಾಪ್ತಾ ತೇನಾಂಗನೋತ್ತಮಾ ॥ ೨೩೨
ತತಃ ಪ್ರವಿಶ್ಯ ನಗರಂ ವೀರದೇವಬಲೌ ಚ ಸಃ ।
ಕ್ಷತ್ತೃಸೇನಾಪತೀ ಪಟ್ಟಂ ಬದ್ಧ್ವಾ ರತ್ನೈರಪೂರಯತ್ ॥ ೨೩೩
ಪ್ರತಾಪಸೇನಮಹಿಷೀಂ ಕ್ಷತ್ರಧರ್ಮಜಿತೇತಿ ತಾಮ್ ।
ಯಶೋಲೇಖಾಂ ಸ ನೃಪತಿಃ ಸ್ವಾವರೋಧವಧೂಂ ವ್ಯಧಾತ್ ॥ ೨೩೪
ಭುಜಾರ್ಜಿತಾಹಮಸ್ಯೇತಿ ಸೇಹೇ ಸಾ ಚಪಲಾಪಿ ತಮ್ ।
ಕಾಮಮೋಹಪ್ರವೃತ್ತಾನಾಂ ಶಬಲಾ ಧರ್ಮವಾಸನಾ ॥ ೨೩೫
ದಿನೈಶ್ಚಾಭ್ಯರ್ಥಿತೋ ರಾಜ್ಞ್ಯಾ ಸ ಯಶೋಲೇಖಯಾ ತಯಾ ।
ರಾಜಾ ಚಮರವಾಲಸ್ತಾನ್ ಬದ್ಧಾನ್ ಪಂಚಾಪಿ ಭೂಪತೀನ್ ॥ ೨೩೬
ಪ್ರತಾಪಸೇನಪ್ರಭೃತೀನ್ ಗೃಹೀತವಿನಯಾನ್ನತಾನ್ ।
ಮುಮೋಚ ನಿಜರಾಜ್ಯೇಷು ಸತ್ಕೃತ್ಯ ವಿಸಸರ್ಜ ಚ ॥ ೨೩೭

೨೩೮. ಅನಂತರ ಚಮರವಾಲ ಭೂಪತಿಯು ಶತ್ರುಗಳನ್ನು ಗೆದ್ದು ನಿಷ್ಕಂಟಕವಾಗಿದ್ದ ತನ್ನ ಸಮೃದ್ಧವಾದ ರಾಜ್ಯವನ್ನು ಬಹಳ ಕಾಲ ಆಳಿದನು. ಮತ್ತು ಶತ್ರುಗಳನ್ನು ಗೆದ್ದ ವಿಜಯಧ್ವಜದಂತಿದ್ದ, ಶ್ರೇಷ್ಠರಾದ ಅಪ್ಸರೆಯರಿಗಿಂತಲೂ ಅಧಿಕವಾದ ಸೌಂದರ್ಯ ಮತ್ತು ಲಾವಣ್ಯವುಳ್ಳ ಯಶೋಲೇಖೆಯೊಡನೆ ರಮಿಸಿದನು.

೨೩೯. ಹೀಗೆ ಶತ್ರುಗಳ ಹಾಗೂ ತಮ್ಮ ಬಲಾಬಲಗಳನ್ನು ಅಳೆಯದೆ ಕೇವಲ ದ್ವೇಷವನ್ನು ಸಾಧಿಸುತ್ತಾ ದುಡುಕುತನದಿಂದ ಮೇಲೆರಗುವ ಶತ್ರುಗಳನ್ನು ಅವರ ಸಂಖ್ಯೆ ಅಪಾರವಾಗಿದ್ದರೂ ಧೀರನಾದವನು ಒಬ್ಬನೇ ತನ್ನ ಅನನ್ಯವಾದ ಪೌರುಷದಿಂದ ಸೋಲಿಸಿ ಅವರ ದರ್ಪಜ್ವರವನ್ನು ಇಳಿಸಿ ಯುದ್ಧದಲ್ಲಿ ಗೆಲ್ಲುತ್ತಾನೆ.

೨೪೦. ಹೀಗೆ ಗೋಮುಖನು ಹೇಳಿದ ಅರ್ಥಯುಕ್ತವಾದ ಕಥೆಯನ್ನು ಕೇಳಿ ಪ್ರಶಂಸೆ ಮಾಡಿದ ನರವಾಹನದತ್ತನು ನಂತರ ಸ್ನಾನ ಮುಂತಾದ ದಿವಸಕೃತ್ಯವನ್ನು ನೆರವೇರಿಸಿದನು.

---

ತತಃ ಸ ತದಕಂಟಕಂ ವಿಜಿತಶತ್ರುರಾಜ್ಯಂ ನಿಜಂ
ಸಮೃದ್ಧಮಶಿಷಚ್ಚಿರಂ ಚಮರವಾಲಪೃಥ್ವೀಪತಿಃ ।
ಅರಂಸ್ತ ಚ ವರಾಪ್ಸರೋಽಭ್ಯಧಿಕರೂಪಲಾವಣ್ಯಯಾ
ದ್ವಿಷಜ್ಜಯಪತಾಕಯಾ ಸಹ ತಯಾ ಯಶೋಲೇಖಯಾ ॥ ೨೩೮
ಏವಂ ಬಹೂನಪಿ ರಿಪೂನ್ ರಭಸಪ್ರವೃತ್ತಾನ್
ದ್ವೇಷಾಕುಲಾನಗಣಿತಸ್ವಪರಸ್ವರೂಪಾನ್ ।
ಏಕೋಽಪ್ಯನನ್ಯಸಮಪೌರುಷಭಗ್ನಸಾರ
ದರ್ಪಜ್ವರಾನ್ ಜಯತಿ ಸಂಯುಗಮೂರ್ಧ್ನಿ ಧೀರಃ ॥ ೨೩೯
ಇತಿ ಗೋಮುಖೇನ ಕಥಿತಾಮರ್ಥ್ಯಾಂ ಶ್ರುತ್ವಾ ಕಥಾಂ ಕೃತಶ್ಲಾಘಃ ।
ಅಕರೋದಥ ನರವಾಹನದತ್ತಃ ಸ್ನಾನಾದಿ ದಿನಕಾರ್ಯಮ್ ॥
೨೪೦

೨೫೧. ಅಂತರಿಕ್ಷದಲ್ಲಿದ್ದ ಸರಸ್ವತಿಯು ಅವನ ಪ್ರಿಯೆಯರೊಡನೆ ಚಿರಕಾಲ ಇರಲಿ ಎಂಬ ವರವನ್ನು ನರವಾಹನದತ್ತನಿಗೆ ಕೊಟ್ಟಳೋ ಎಂಬಂತೆ, ಅವನು ಸ್ವತಃ ಹಾಡುತ್ತಾ ಅಂಗನೆಯರೊಡನೆ ಆ ರಾತ್ರಿಯನ್ನು ಸಂಗೀತರಸದಲ್ಲಿ ಕಳೆದನು.

**ಇಲ್ಲಿಗೆ ಮಹಾಕವಿ ಶ್ರೀ ಸೋಮದೇವಭಟ್ಟನು ವಿರಚಿಸಿದ**

**ಕಥಾಸರಿತ್ಸಾಗರದ**

**ಅಲಂಕಾರವತೀಲಂಬಕದಲ್ಲಿ ನಾಲ್ಕನೆಯ ತರಂಗವು ಮುಗಿಯಿತು.**

---

ನಿನಾಯ ಸಂಗೀತರಸಾಚ್ಚ ತಾಂ ತಥಾ
ನಿಶಾಂ ಸ ಗಾಯನ್ ಸ್ವಯಮಂಗನಾಸಖಃ ।
ಸರಸ್ವತೀ ತಸ್ಯ ನಭಃಸ್ಥಿತಾ ಯಥಾ
ದದೌ ಪ್ರಿಯಾಭಿಶ್ಚಿರಸಂಸ್ತವಂ ವರಮ್ ॥ ೨೫೧

**ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ**

**ಕಥಾಸರಿತ್ಸಾಗರೇ**

**ಅಲಂಕಾರವತೀಲಂಬಕೇ ಚತುಸ್ತರಂಗಃ**

---

## ಐದನೆಯ ತರಂಗ

೧–೨. ಮಾರನೆಯ ದಿವಸ ನರವಾಹನದತ್ತನ ಅಂತಃಪುರವನ್ನು ರಕ್ಷಿಸುವ ಕಂಚುಕಿಯ ಒಡಹುಟ್ಟಿದವನಾದ ಮರುಭೂತಿಯ ಸೇವಕನು ಅಲಂಕಾರವತಿಯ ವಾಸಗೃಹದಲ್ಲಿ ಇದ್ದ ನರವಾಹನದತ್ತನ ಬಳಿಗೆ ಬಂದು ಎಲ್ಲ ಮಂತ್ರಿಗಳ ಸಮ್ಮುಖದಲ್ಲಿ ಹೀಗೆ ವಿಜ್ಞಾಪಿಸಿದನು.

೩. "ದೇವ ! ನಾನು ಮರುಭೂತಿಯ ಸೇವೆಯನ್ನು ಎರಡು ವರ್ಷ ಮಾಡಿದೆ. ನನಗೂ ನನ್ನ ಹೆಂಡತಿಗೂ ಆಗುವಷ್ಟು ಅವನು ಭೋಜನ ಹಾಗೂ ವಸ್ತ್ರವನ್ನು ಕೊಟ್ಟನು.

೪. ಆದರೆ ಹಿಂದೆ (ಜೊತೆಗೆ) ಪ್ರತಿವರ್ಷ ಐವತ್ತು ದೀನಾರಗಳನ್ನು (ಸುವರ್ಣನಾಣ್ಯಗಳನ್ನು) ನನಗೆ ಕೊಡುವುದಾಗಿ ಇವನು ಮಾತು ಕೊಟ್ಟಿದ್ದನು. ಅವುಗಳನ್ನು ಇವನು ನನಗೆ ಕೊಡುತ್ತಿಲ್ಲ.

೫. ಹುಡುಕಿ ಕೇಳಿದಾಗ ಇವನು ನನ್ನನ್ನು ಕಾಲಿನಿಂದ ಒದೆದನು. ಈ ಕಾರಣದಿಂದಾಗಿ ನಾನು ನಿನ್ನ ಸಿಂಹದ್ವಾರದಲ್ಲಿ ಪ್ರಾಯೋಪವೇಶ ಮಾಡುತ್ತಿದ್ದೇನೆ.

---

## ಪಂಚಮಸ್ತರಂಗಃ

ತತೋಽನ್ಯೇದ್ಯುರಲಂಕಾರವತೀ ವಾಸಗೃಹೇ ಸ್ಥಿತಮ್ ।
ನರವಾಹನದತ್ತಂ ತಂ ಸಂನಿಧೌ ಸರ್ವಮಂತ್ರಿಣಾಮ್ ॥ ೧
ಏತ್ಯ ವಿಜ್ಞಾಪಯಾಮಾಸ ಮರುಭೂತಿಕಸೇವಕಃ ।
ಸೋದರ್ಯಃ ಸೌವಿದಲ್ಲಸ್ಯ ತದಂತಃಪುರರಕ್ಷಿಣಃ ॥ ೨
ಮರುಭೂತೇರ್ಮಯಾ ದೇವ ಸೇವಾ ವರ್ಷದ್ವಯಂ ಕೃತಾ ।
ಭೋಜನಾಚ್ಛಾದನಂ ದತ್ತಂ ಸಭಾರ್ಯಸ್ಯಾಮುನಾ ಮಮ ॥ ೩
ಆಭಾಷಿತಾಸ್ತು ತತ್ಪೃಷ್ಠೇ ದೀನಾರಾಃ ಪ್ರತಿವತ್ಸರಮ್ ।
ಪಂಚಾಶದ್ಯೇ ಮಮಾನೇನ ತಾನೇಷ ನ ದದಾತಿ ಮೇ ॥ ೪
ಮೃಗ್ಯಮಾಣೇನ ಚೈತೇನ ಚರಣೇನಾಹಮಾಹತಃ ।
ತೇನೋಪವಿಷ್ಟಃ ಪ್ರಾಯೇಽಹಂ ಸಿಂಹದ್ವಾರೇಽಸ್ಯ ತಾವಕೇ ॥ ೫

೬ ಈ ವಿಷಯದಲ್ಲಿ ದೇವನು ನನ್ನ ವಿಚಾರವನ್ನು ಮಾಡದಿದ್ದರೆ ನಾನು ಅಗ್ನಿಪ್ರವೇಶವನ್ನು ಮಾಡುತ್ತೇನೆ. ಹೆಚ್ಚು ಏನನ್ನು ತಾನೆ ಹೇಳಲಿ ? ಏಕೆಂದರೆ ಇವನು ನನ್ನ ಸ್ವಾಮಿಯು."

೭ ಹೀಗೆ ಹೇಳಿ ಆ ಸೇವಕನು ಸುಮ್ಮನಾಗಲು ಮರುಭೂತಿಯು ಹೇಳಿದನು: "ನಾನು ಇವನಿಗೆ ದೀನಾರಗಳನ್ನು ಕೊಡಬೇಕು. ಆದರೆ ಈಗ ನನ್ನ ಬಳಿ ಇಲ್ಲ."

೮ ಮರುಭೂತಿಯ ಮಾತುಗಳನ್ನು ಕೇಳಿ ಎಲ್ಲರೂ ನಕ್ಕರು. ಆಗ ರಾಜನು ಮರುಭೂತಿಗೆ ಹೀಗೆ ಹೇಳಿದನು:

೯. "ಏನಿದು ನಿನ್ನ ಈ ರೀತಿಯ ಮೂರ್ಖತನ ? ನಿನ್ನ ಈ ಬುದ್ಧಿ ಒಳ್ಳೆಯದಲ್ಲ. ಏಳು, ಬೇಗ ಇವನಿಗೆ ನೂರು ದೀನಾರಗಳನ್ನು ಕೊಡು.'

೧೦. ಪ್ರಭುವಿನ ಈ ಮಾತುಗಳನ್ನು ಕೇಳಿ ಮರುಭೂತಿಯು ನಾಚಿಕೆಗೊಂಡು ಆಗಲೇ ನೂರು ದೀನಾರಗಳನ್ನು ತೆಗೆದುಕೊಂಡು ಬಂದು ಅವನಿಗೆ ಕೊಟ್ಟನು.

೧೧-೧೨. ನಂತರ ಗೋಮುಖನು ಹೇಳಿದನು: "ಮರುಭೂತಿಯನ್ನು ನಿಂದಿಸಬಾರದು. ಏಕೆಂದರೆ, ದೇವ ! ಬ್ರಹ್ಮನ ಸೃಷ್ಟಿಯು ವಿಚಿತ್ರವಾದ ಚಿತ್ತವೃತ್ತಿಯುಳ್ಳದ್ದು. ಮತ್ತು ಈ ವಿಷಯದಲ್ಲಿ ಯಾವುದನ್ನೂ ವಿಲಂಬ ಮಾಡಿ ಕೊಡುತ್ತಿದ್ದ ಒಬ್ಬ ರಾಜನ ಹಾಗೂ ಪ್ರಸಂಗನೆಂಬ ಅವನ ಸೇವಕನ ಈ ಕಥೆಯನ್ನು ತಾವು ಕೇಳಿಲ್ಲ.

---

ವಿಚಾರಯತಿ ಚೇನ್ನಾತ್ರ ದೇವೋ ಮೇ ತತ್ಕರೋಮ್ಯಹಮ್ ।
ಅಗ್ನಿಪ್ರವೇಶಮಧಿಕಂ ಕಿಂ ವಕ್ಷ್ಯೇಷ ಹಿ ಮೇ ಪ್ರಭುಃ ॥ ೬
ಇತ್ಯುಕ್ತ್ವಾ ವಿರತೇ ತಸ್ಮಿನ್ ಮರುಭೂತಿರಭಾಷತ ।
ದೇಯಾ ಮಯಾಸ್ಮೈ ದೀನಾರಾಃ ಸಾಂಪ್ರತಂ ತು ನ ಸಂತಿ ಮೇ ॥ ೭
ಇತ್ಯುಕ್ತವಂತಂ ಸರ್ವೇಷು ಪ್ರಹಸತ್ಸು ಸ್ವಮಂತ್ರಿಣಮ್ ।
ನರವಾಹನದತ್ತಸ್ತಂ ಮರುಭೂತಿಮಭಾಷತ ॥ ೮
ಕಿಮೇವಂ ಮೂರ್ಖಭಾವಸ್ತೇ ನಾಧೀಯೇಯಂ ಮತಿಸ್ತವ ।
ಉತ್ತಿಷ್ಠ ದೀನಾರಶತಂ ದೇಹ್ಯಸ್ಮಾ ಅವಿಲಂಬಿತಮ್ ॥ ೯
ಏತತ್ಪ್ರಭೋರ್ವಚಃ ಶ್ರುತ್ವಾ ಮರುಭೂತಿರ್ವಿಲಜ್ಜಿತಃ ।
ತದೈವಾನೀಯ ತತ್ತಸ್ಮೈ ಸ ದೀನಾರಶತಂ ದದೌ ॥ ೧೦
ತತೋಽತ್ರ ಗೋಮುಖೋಽವಾದೀನ್ನವಾಚ್ಯೋ ಮರುಭೂತಿಕಃ ।
ವಿಚಿತ್ರಚಿತ್ತವೃತ್ತಿರ್ಯತ್ಸರ್ಗೋ ದೇವ ಪ್ರಜಾಪತೇಃ ॥ ೧೧
ಯುಷ್ಮಾಭಿರೇಷಾ ಕಿಂ ಚಾತ್ರ ಚಿರದಾತುರ್ಮಹೀಪತೇಃ ।
ತತ್ಸೇವಕಸ್ಯ ಚ ಕಥಾ ಪ್ರಸಂಗಾಖ್ಯಸ್ಯ ನ ಶ್ರುತಾ ॥ ೧೨

೧೩. ಹಿಂದೆ ಚಿರಪುರದ ಒಡೆಯನಾದ ಚಿರದಾತಾ ಎಂಬ ರಾಜನು ಇದ್ದನು. ಅವನು ಸೌಜನ್ಯವುಳ್ಳವನಾಗಿದ್ದರೂ ಅವನ ಪರಿವಾರವು ಅತ್ಯಂತ ದುಷ್ಟವಾಗಿತ್ತು.

೧೪. ಆ ರಾಜನಿಗೆ ದೇಶಾಂತರದಿಂದ ಬಂದ ಪ್ರಸಂಗನೆಂಬ ಸೇವಕನು ಇದ್ದನು. ಆ ಸೇವಕನು ತನ್ನ ಸಂಗಡ ಇಬ್ಬರು ಸ್ನೇಹಿತರನ್ನು ಕರೆತಂದಿದ್ದನು.

೧೫. ಅವನು ಆ ರಾಜನ ಸೇವೆಯನ್ನು ಮಾಡುತ್ತಾ ಐದು ವರ್ಷಗಳು ಕಳೆದುಹೋದವು. ಆದರೆ ರಾಜನು ಅವನಿಗೆ ಉತ್ಸವದ ಸಂದರ್ಭಗಳಲ್ಲಿ ಕೂಡ ಏನನ್ನೂ ಕೊಡಲಿಲ್ಲ.

೧೬. ಆ ಪ್ರಸಂಗನನ್ನು ಮಿತ್ರರಿಬ್ಬರೂ ಸದಾ ಪ್ರೇರಿಸುತ್ತಿದ್ದರೂ ಪರಿವಾರದ ದುಷ್ಟತನದಿಂದಾಗಿ ಪ್ರಭುವಿಗೆ ವಿಜ್ಞಾಪಿಸುವ ಅವಕಾಶವು ಅವನಿಗೆ ದೊರಕಲಿಲ್ಲ.

೧೭. ಒಂದು ದಿವಸ ಆ ರಾಜನ ಬಾಲಪುತ್ರನು ಮೃತನಾದನು. ಎಲ್ಲ ಸೇವಕರೂ ದುಃಖಿತನಾದ ರಾಜನ ಬಳಿಗೆ ಬಂದು ಅವನನ್ನು ಸುತ್ತುವರಿದರು.

೧೮. ಅವರ ಮಧ್ಯದಲ್ಲಿ ಪ್ರಸಂಗನು, ಅವನ ಮಿತ್ರರು ಅವನನ್ನು ನಿವಾರಿಸುತ್ತಿದ್ದರೂ ಶೋಕದಿಂದಲೇ ಆ ರಾಜನನ್ನು ಕುರಿತು ವಿಜ್ಞಾಪಿಸಿದನು.

---

ಚಿರದಾತೇತ್ಯಭೂತ್ಪೂರ್ವಂ ರಾಜಾ ಚಿರಪುರೇಶ್ವರಃ ।
ಸುಜನಸ್ಯಾಪಿ ತಸ್ಯಾಸೀತ್ ಪರಿವಾರೋಽತಿದುರ್ಜನಃ ॥ ೧೩
ದೇಶಾಂತರಾಗತಸ್ತಸ್ಯ ಪ್ರಸಂಗೋ ನಾಮ ಭೂಪತೇಃ ।
ಮಿತ್ರಾಭ್ಯಾಂ ಸಹಿತೋ ದ್ವಾಭ್ಯಾಂ ಬಭೂವ ಕಿಲ ಸೇವಕಃ ॥ ೧೪
ಸೇವಾಂಚ ಕುರ್ವತಸ್ತಸ್ಯ ವ್ಯತೀತಂ ವರ್ಷಪಂಚಕಮ್ ।
ನ ಸ ರಾಜಾ ದದೌ ಕಿಂಚಿನ್ನಿಮಿತ್ತೇಽಪ್ಯುತ್ಸವಾದಿಕೇ ॥ ೧೫
ಸ ಚ ತಸ್ಯ ನ ಸಂಪ್ರಾಪ ವಿಜ್ಞಪ್ತ್ಯವಸರಂ ಪ್ರಭೋಃ ।
ಪರಿವಾರಸ್ಯ ದೌರಾತ್ಮ್ಯಾತ್ ಸಖ್ಯೋಃ ಪ್ರೇರಯತೋಃ ಸದಾ ॥ ೧೬
ಏಕದಾ ತಸ್ಯ ರಾಜ್ಞಶ್ಚ ಬಾಲಃ ಪುತ್ರೋ ವ್ಯಪದ್ಯತ ।
ದುಃಖಿತಂ ಚೈತ್ಯ ಸರ್ವೇಽಪಿ ಭೃತ್ಯಾಸ್ತಂ ಪರ್ಯವಾರಯನ್ ॥ ೧೭
ತನ್ಮಧ್ಯೇ ಚ ಪ್ರಸಂಗಾಖ್ಯಃ ಶೋಕಾದೇವ ಸ ಸೇವಕಃ ।
ಸಖಿಭ್ಯಾಂ ವಾರ್ಯಮಾಣೋಽಪಿ ರಾಜಾನಂ ತಂ ವ್ಯಜಿಜ್ಞಪತ್ ॥ ೧೮

೧೯-೨೦-೨೧. ದೇವ ! ನಾವು ಬಹಳ ಕಾಲ ನಿನ್ನ ಸೇವಕರಾಗಿರುವವರು. ಆದರೆ ನೀನು ನಮಗೆ ಏನನ್ನೂ ಕೊಟ್ಟಿಲ್ಲ. ಹಾಗಿದ್ದರೂ ನೀನು ಕೊಡದಿದ್ದರೂ ನಿನ್ನ ಪುತ್ರನು ನಮಗೆ ಕೊಡುವನು ಎಂದು ನಿನ್ನ ಪುತ್ರನ ಮೇಲಿನ ನಂಬಿಕೆಯಿಂದ ನಾವು ಇಲ್ಲಿ ಇದ್ದೆವು. ಆದರೆ ಅವನನ್ನು ದೈವವು ಒಯ್ದಿತು. ನಮಗೆ ಈಗ ಇನ್ನೇನು ಪ್ರಯೋಜನ ? ನಾವು ಹೊರಟು ಹೋಗುತ್ತೇವೆ' ಎಂದು ಪ್ರಲಾಪಿಸಿ ಆ ಪ್ರಸಂಗನು ರಾಜನ ಕಾಲುಗಳಿಗೆ ಎರಗಿ ಅವನ ಇಬ್ಬರು ಮಿತ್ರರ ಸಹಿತ ಹೊರಟು ಹೋದನು.

೨೨-೨೩. "ಅಹೋ ! ನನ್ನ ಪುತ್ರನಲ್ಲಿಯೂ ಈ ಸೇವಕರು ದೃಢವಾದ ವಿಶ್ವಾಸವುಳ್ಳವರಾಗಿದ್ದಾರೆ. ಆದುದರಿಂದ ನಾನು ಇವರನ್ನು ಬಿಡಬಾರದು." ಹೀಗೆ ಯೋಚಿಸಿ ಆ ಕ್ಷಣದಲ್ಲೇ ಆ ರಾಜನು ಪ್ರಸಂಗ ಮೊದಲಾದವರನ್ನು ಕರೆತರಿಸಿ ಅವರಿಗೆ ಮತ್ತೆ ದಾರಿದ್ರ್ಯವು ತಟ್ಟದಿರುವಂತೆ ಧನಗಳಿಂದ (ಅವರನ್ನು) ಶ್ರೀಮಂತಗೊಳಿಸಿದನು.

೨೪. "ದೇವ ! ಈ ರೀತಿ ಮನುಷ್ಯರ ಸ್ವಭಾವಗಳು ವಿಚಿತ್ರವಾಗಿ ಕಂಡು ಬರುತ್ತವೆ. ಏಕೆಂದರೆ ಆ ರಾಜನು ಯುಕ್ತವಾದ ಸಮಯದಲ್ಲಿ ಕೊಡಲಿಲ್ಲ. ಆದರೆ (ಪುತ್ರಶೋಕರೂಪವಾದ) ಅಸಮಯದಲ್ಲಿ ಕೊಟ್ಟನು."

---

ಬಹುಕಾಲಂ ವಯಂ ದೇವ ಸೇವಕಾ ನ ಚ ನಸ್ತ್ವಯಾ ।
ದತ್ತಂ ಕಿಂಚಿತ್ತಥಾಪೀಹ ಸ್ಥಿತಾಃ ಸ್ಮಸ್ತ್ವತ್ಸುತಾಶಯಾ ॥ ೧೯
ತ್ವಯಾ ಯದಿ ನ ದತ್ತಂ ತತ್ತ್ವತ್ಪುತ್ರೋಽಸ್ಮಾಸು ದಾಸ್ಯತಿ ।
ಸೋಽಪಿ ದೈವೇನ ನೀತಶ್ಚೇತ್ತನ್ನಃ ಕಿಮಿಹ ಸಾಂಪ್ರತಮ್ ॥ ೨೦
ವ್ರಜಾಮ ಇತಿ ಜಲ್ಪಿತ್ವಾ ಪತಿತ್ವಾ ಸೋಽಸ್ಯ ಪಾದಯೋಃ ।
ರಾಜ್ಞಃ ಪ್ರಸಂಗೋ ನಿರಗಾತ್ಸಖಿದ್ವಯಯುತಸ್ತತಃ ॥ ೨೧
ಅಹೋ ಪುತ್ರೇಽಪಿ ಬದ್ಧಾಸ್ಥಾಃ ಸೇವಕಾ ಮೇ ದೃಢಾ ಇಮೇ ।
ತದೇತೇ ಮಮ ನ ತ್ಯಾಜ್ಯಾ ಇತಿ ಸಂಚಿಂತ್ಯ ತತ್ಕ್ಷಣಮ್ ॥ ೨೨
ಸ ರಾಜಾ ತಾನ್ಪ್ರಸಂಗಾದೀನಾನಾಯ್ಯೈವ ತಥಾ ಧನೈಃ ।
ಅಪೂರಯದ್ಯಥಾ ಭೂಯೋ ನೈತಾನ್ದಾರಿದ್ರ್ಯಮಸ್ಪೃಶತ್ ॥ ೨೩
ಏವಂ ವಿಚಿತ್ರಾ ದೃಶ್ಯಂತೇ ಸ್ವಭಾವಾದೇವ ದೇಹಿನಾಮ್ ।
ಯತ್ಕಾಲೇ ಸ ನೃಪೋ ನಾದಾದಕಾಲೇ ತು ದದೌ ತಥಾ ॥ ೨೪

೨೫. ಹೀಗೆ ಹೇಳಿ ಕಥೆಯನ್ನು ಹೇಳುವುದರಲ್ಲಿ ನಿಪುಣನಾದ ಗೋಮುಖನು ಮತ್ತೆ ವತ್ಸೇಶ್ವರನ ಪುತ್ರನ ಆಜ್ಞೆಯಂತೆ ಈ ಕಥೆಯನ್ನು ಹೇಳಿದನು.

೨೬ ""ಹಿಂದೆ ಗಂಗಾತೀರದಲ್ಲಿ ಕನಕಪುರವೆಂಬ ಹೆಸರುಳ್ಳ ಶ್ರೇಷ್ಠವಾದ ನಗರವಿತ್ತು. ಆ ರಾಜ್ಯದ ಪೌರರು ಗಂಗಾನದಿಯ ಜಲದಿಂದ ಪವಿತ್ರರಾಗಿದ್ದರು. ಆ ರಾಜ್ಯವೂ ಉತ್ತಮ ಆಡಳಿತದಿಂದ ರಮಣೀಯವಾಗಿತ್ತು.

೨೭ ಆ ರಾಜ್ಯದಲ್ಲಿ ಕವಿಗಳ ವಚನಗಳಲ್ಲಿ ಮಾತ್ರ ಬಂಧವಿತ್ತು. (ಜನಗಳ ಬಂಧನವಾಗುತ್ತಿರಲಿಲ್ಲ) ಕತ್ತರಿಸುವುದು ಎಲೆಗಳಲ್ಲಿ ಮಾತ್ರ ಕಂಡುಬರುತ್ತಿತ್ತು. (ಯಾರ ಕೈ ಕಾಲುಗಳ ಕತ್ತರಿಸುವ ಅಪರಾಧ ಕಾಣುತ್ತಿರಲಿಲ್ಲ). ಸ್ತ್ರೀಯರ ಮುಂಗುರುಳುಗಳಲ್ಲಿ ಮಾತ್ರ ವಕ್ರತೆಯು ಕಾಣುತ್ತಿತ್ತು. (ಜನರ ಸ್ವಭಾವಗಳಲ್ಲಿ ವಕ್ರತೆಯು ಕಾಣುತ್ತಿರಲಿಲ್ಲ.) ಸಸ್ಯಸಂಗ್ರಹದಲ್ಲಿ ಮಾತ್ರ ಖಲ ಅಂದರೆ ಕಣವು ಕಾಣುತ್ತಿತ್ತು. (ಸಮಾಜದಲ್ಲಿ ಖಲ– ಅಂದರೆ ದುರ್ಜನ ಕಾಣುತ್ತಿರಲಿಲ್ಲ.)

---

ಇತ್ಯಾಖ್ಯಾಯ ಕಥಾಖ್ಯಾನಪಟುರ್ಭೂಯಃ ಸ ಗೋಮುಖಃ ।
ವತ್ಸೇಶ್ವರಸುತಾದೇಶಾದಿಮಾಮಕಥಯತ್ಕಥಾಮ್ ॥ ೨೫
ಆಸೀದ್ಗಂಗಾತಟೇ ಪೂರ್ವಂ ಪೂತಪೌರು ತದಂಬುಭಿಃ ।
ಸೌರಾಜ್ಯರಮ್ಯಂ ಕನಕಪುರಾಖ್ಯಂ ನಗರೋತ್ತಮಮ್ ॥ ೨೬
ಯತ್ರ ಬಂಧಃ ಕವಿಗಿರಾಂ ಛೇದಃ ಪತ್ರೇಷ್ವದೃಶ್ಯತ ।
ಭಂಗೋಽಲಕೇಷು ನಾರೀಣಾಂ ಸಸ್ಯಸಂಗ್ರಹಣೇ ಖಲಃ ॥ ೨೭

೨೮-೨೯-೩೦. ವಾಸುಕಿ ನಾಗೇಂದ್ರನ ಮಗನಾದ ಪ್ರಿಯದರ್ಶನನಿಂದ ಯಶೋಧರಾ ಎಂಬ ರಾಜಪುತ್ರಿಯಲ್ಲಿ ಹುಟ್ಟಿದ ಮಹಾಕೀರ್ತಿವಂತನಾದ ಕನಕವರ್ಷನೆಂಬ ರಾಜನು ಹಿಂದೆ ಆ ಪಟ್ಟಣದಲ್ಲಿ ಇದ್ದನು. ಅವನು ಸಮಸ್ತ ಭೂಭಾಗವನ್ನು ಹೊತ್ತವನಾಗಿದ್ದರೂ ಅಶೇಷ ಸದ್ಗುಣಗಳಿಂದ ಭೂಷಿತನಾಗಿದ್ದನು. (ಭೂಮಿಯನ್ನು ಹೊರುವವನು ಶೇಷ. ರಾಜನೂ ಭೂಭಾರ ಹೊತ್ತರೂ ಇವನು ಅಶೇಷ ಸದ್ಗುಣ ಭೂಷಣಗಳಿಂದ ಕೂಡಿದ್ದನು. ಅಂದರೆ ಅಶೇಷ = ಸಮಸ್ತ, ಸದ್ಗುಣಗಳಿಂದ ಕೂಡಿದ್ದನು) ಅವನಿಗೆ ಲೋಭವಿದ್ದದ್ದು ಕೀರ್ತಿಯಲ್ಲಿ ಮಾತ್ರ (ಧನದಲ್ಲಿ ಅಲ್ಲ). ಅವನಿಗೆ ಹೆದರಿಕೆಯಿದ್ದದ್ದು ಪಾಪದ ಬಗ್ಗೆ ಮಾತ್ರವೇ ವಿನಾ ಶತ್ರುಗಳ ವಿಷಯದಲ್ಲಿ ಅಲ್ಲ. ಅವನು ಅಜ್ಞನಾಗಿದ್ದದ್ದು ಬೇರೆಯವರನ್ನು ನಿಂದಿಸುವುದರಲ್ಲಿ ಮಾತ್ರ, ಶಾಸ್ತ್ರಗಳಲ್ಲಿ ಅಲ್ಲ.

೩೧. ಮಹಾತ್ಮನಾದ ಅವನಿಗೆ ಅಲ್ಪತೆಯಿದ್ದದ್ದು ಕೋಪದಲ್ಲೇ ವಿನಾ ಅನುಗ್ರಹ ಮಾಡುವುದರಲ್ಲಿ ಅಲ್ಲ. ಧೀರಚಿತ್ತನಾದ ಅವನಿಗೆ ಬಿಗಿ ಮುಷ್ಟಿಯಿದ್ದದ್ದು ಬಿಲ್ಲಿನಲ್ಲಿ ಮಾತ್ರವೇ ವಿನಾ ದಾನದ ವಿಷಯದಲ್ಲಿ ಅಲ್ಲ.

೩೨. ಸಮಸ್ತ ಜಗತ್ತನ್ನೂ ರಕ್ಷಿಸುತ್ತಾ ಅತ್ಯಂತ ಆಶ್ಚರ್ಯಕರವಾದ ಸೌಂದರ್ಯವುಳ್ಳ ಅವನು ನೋಡಿದ ಕೂಡಲೇ ಸ್ತ್ರೀಯರನ್ನು ಮನ್ಮಥ ವ್ಯಥೆಯಿಂದ ವ್ಯಾಕುಲರನ್ನಾಗಿ ಮಾಡುತ್ತಿದ್ದನು.

---

ತತ್ರ ವಾಸುಕಿನಾಗೇಂದ್ರತನಯಾತ್ ಪ್ರಿಯದರ್ಶನಾತ್ ।
ಜಾತೋ ಯಶೋಧರಾಖ್ಯಾಯಾಂ ರಾಜಪುತ್ರ್ಯಾಂ ಮಹಾಯಶಾಃ ॥ ೨೮
ಆಸೀತ್ಕನಕವರ್ಷಾಖ್ಯೋ ನಗರೇ ನೃಪತಿಃ ಪುರಾ ।
ಕೃತ್ಸ್ನಭೂಭಾರವೋಢಾಪಿ ಯೋऽಶೇಷಗುಣಭೂಷಿತಃ ॥ ೨೯
ಲುಬ್ಧೋ ಯಶಸಿ ನ ತ್ವರ್ಥೇ ಭೀತಃ ಪಾಪಾನ್ನ ಶತ್ರುತಃ ।
ಮೂರ್ಖಃ ಪರಾಪವಾದೇಷು ನ ಚ ಶಾಸ್ತ್ರೇಷು ಯೋऽಭವತ್ ॥ ೩೦
ಅಲ್ಪತ್ವಂ ಯಸ್ಯ ಕೋಪೇऽಭೂನ್ನಪ್ರಸಾದೇ ಮಹಾತ್ಮನಃ ।
ಚಾಪೇ ಚ ಬದ್ಧಮುಷ್ಟಿತ್ವಂ ನ ದಾನೇ ಧೀರಚೇತಸಃ ॥ ೩೧
ಯೇನಾತ್ಯದ್ಭುತರೂಪೇಣ ರಕ್ಷತಾ ಚಾಖಿಲಂ ಜಗತ್ ।
ಮಾರವ್ಯಥಾಕುಲಶ್ಚಕ್ರೇ ದೃಷ್ಟೇನೈವಾಬಲಾಜನಃ ॥ ೩೨

೩೩–೩೪. ಒಮ್ಮೆ ಅವನು ಶರತ್ಕಾಲದಲ್ಲಿ ವಿಹರಿಸುವುದಕ್ಕಾಗಿ ಕಮಲದ ಪರಿಮಳವನ್ನು ಹೊತ್ತು ಬೀಸುತ್ತಿದ್ದ ಮಂದಮಾರುತದಿಂದ ತಂಪಾಗಿದ್ದ ಚಿತ್ರಪ್ರಸಾದವನ್ನು ಪ್ರವೇಶಿಸಿದನು. ಆ ಶರತ್ಕಾಲವು ಸ್ವಲ್ಪವೇ ಉಷ್ಣತೆಯನ್ನು ಹೊಂದಿದ್ದು (ಸ್ವಲ್ಪವೇ ತೀಕ್ಷ್ಣತೆಯನ್ನು ಹೊಂದಿದ್ದು) ಮದಿಸಿದ ಆನೆಗಳಿಂದ ಕೂಡಿದುದಾಗಿ (ಮದಿಸಿದವರನ್ನು ನಿಗ್ರಹಿಸುವವನು) ರಾಜಹಂಸಗಳ ಸಮೂಹವುಳ್ಳದ್ದೂ (ರಾಜಶ್ರೇಷ್ಠರ ಪರಿವಾರವುಳ್ಳವನು) ಪ್ರಜೆಗಳು ಆನಂದದಿಂದ ಉತ್ಸವಗಳಲ್ಲಿ ನಿರತರಾಗಿಯುಳ್ಳದ್ದೂ (ಉತ್ಸವಗಳಿಂದ ಪ್ರಜೆಗಳನ್ನು ಆನಂದಗೊಳಿಸುವವನು) ಆಗಿ ರಾಜನಿಗೆ ಗುಣಗಳಲ್ಲಿ ಸದೃಶವಾಗಿತ್ತು.

೩೫. ಆ ಚಿತ್ರಪ್ರಾಸಾದದಲ್ಲಿ ಚಿತ್ರಗಳನ್ನು ನೋಡುತ್ತಾ ಕನಕವರ್ಷನು ಮೆಚ್ಚಿಕೊಳ್ಳುತ್ತಿರುವಾಗ ಪ್ರತೀಹಾರನು ಒಳಗೆ ಬಂದು ರಾಜನಿಗೆ ಹೇಳಿದನು:

೩೬–೩೭. ಪ್ರಭುವೇ ! ವಿದರ್ಭ ದೇಶದಿಂದ ಇಲ್ಲಿಗೆ ಬಂದಿರುವ ರೋಲದೇವನೆಂಬ ಚಿತ್ರಕಾರನು ಚಿತ್ರಕರ್ಮದಲ್ಲಿ ತನಗೆ ಸಮಾನರಾದವರು ಯಾರೂ ಇಲ್ಲ ಎಂದು ಹೇಳಿಕೊಳ್ಳುತ್ತಾ ಅದನ್ನು ಪಟದಲ್ಲಿ ಬರೆದು ಸಿಂಹದ್ವಾರದಲ್ಲಿ ನೇತುಹಾಕಿದ್ದಾನೆ'

೩೮. ಅದನ್ನು ಕೇಳಿದ ಕೂಡಲೇ ಆದರಪೂರ್ವಕವಾಗಿ ಅವನನ್ನು ಕರೆತರುವಂತೆ ರಾಜನು ಆಜ್ಞಾಪಿಸಲು (ಅಲ್ಲಿಂದ) ಹೋಗಿ ಕ್ಷಣಮಾತ್ರದಲ್ಲಿ ಆ ಚಿತ್ರಕಾರನನ್ನು ಪ್ರತೀಹಾರನು ಕರೆತಂದನು.

---

ಸ ಕದಾಚಿಚ್ಛರತ್ಕಾಲೇ ಸೋಷ್ಮಣ್ಯುನ್ಮದವಾರಣೇ ।
ರಾಜಹಂಸಪರೀವಾರೇ ಸೋತ್ಸವಾನಂದಿತಪ್ರಜೇ ॥ ೩೩
ಆತ್ಮತುಲ್ಯಗುಣೇ ರಂತುಂ ಚಿತ್ರಪ್ರಾಸಾದಮಾವಿಶತ್ ।
ಆಕೃಷ್ಟಕಮಲಾಮೋದವಹನ್ಮಾರುತಶೀತಲಮ್ ॥ ೩೪
ತತ್ರ ನಿರ್ವರ್ಣಯನ್ಯಾವತ್ತಚ್ಚಿತ್ರಂ ಸ ಪ್ರಶಂಸತಿ ।
ತಾವತ್ಪ್ರವಿಶ್ಯ ಭೂಪಂ ತಂ ಪ್ರತೀಹಾರೋ ವ್ಯಜಿಜ್ಞಪತ್ ॥ ೩೫
ಇಹಾಗತೋ ವಿದರ್ಭೇಭ್ಯೋಽಪೂರ್ವಶ್ಚಿತ್ರಕರಃ ಪ್ರಭೋ ।
ಅನನ್ಯಸಮಮಾತ್ಮಾನಂ ಚಿತ್ರಕರ್ಮಣ್ಯುದಾಹರನ್ ॥ ೩೬
ರೋಲದೇವಾಭಿಧಾನೇನ ಸಿಂಹದ್ವಾರೇಽತ್ರ ತೇನ ಚ ।
ಏತದ್ದೇವಾಭಿಲಿಖ್ಯಾದ್ಯ ಚೇರಿಕೋಲ್ಲಂಬಿತಾ ಕಿಲ ॥ ೩೭
ತಚ್ಛ್ರುತ್ವೈವಾದರಾದ್ಭೂಪೇನಾದಿಷ್ಟಾನಯನಂ ಸ ತಮ್ ।
ಆನಿನಾಯ ಪ್ರತೀಹಾರೋ ಗತ್ವಾ ಚಿತ್ರಕರಂ ಕ್ಷಣಾತ್ ॥ ೩೮

೩೯. ಆ ಚಿತ್ರಕಾರನು ಪ್ರವೇಶಿಸಿ ಚಿತ್ರಗಳನ್ನು ನೋಡುವ ವಿನೋದದಲ್ಲಿ ಇದ್ದ ರಾಜ ಕನಕವರ್ಷನನ್ನು ಏಕಾಂತದಲ್ಲಿ ಸಂದರ್ಶಿಸಿದನು.

೪೦–೪೧. ಶ್ರೇಷ್ಠಸ್ತ್ರೀಯರ ಸ್ತನಗಳ ಮಧ್ಯೆ ತನ್ನ ಶರೀರದ ಭಾರವನ್ನಿಟ್ಟು (ಒರಗಿಕೊಂಡು) ಲೀಲೆಯಿಂದ ಕೈಯನ್ನು ಮೇಲೆತ್ತಿ ತಾಂಬೂಲವನ್ನು ಸ್ವೀಕರಿಸುತ್ತಿದ್ದ ರಾಜನು ಚಿತ್ರಕಾರರನ್ನು ಆದರಿಸಿದನು. ಚಿತ್ರಕಾರನೂ ಅವನಿಗೆ ನಮಸ್ಕಾರ ಮಾಡಿ ಕುಳಿತುಕೊಂಡು ರಾಜನಿಗೆ ನಿಧಾನವಾಗಿ ಹೀಗೆ ವಿಜ್ಞಾಪಿಸಿದನು.

೪೨. "ದೇವ ! ನಿನ್ನ ಪಾದಕಮಲವನ್ನು ನೋಡುವ ಆಸೆಯಿಂದ ನಾನು ಪಟವನ್ನು ನೇತುಹಾಕಿದನೇ ಹೊರತು ನನ್ನ ಜ್ಞಾನದ ಮದದಿಂದ ಅಲ್ಲ. ಆದುದರಿಂದ ಇದನ್ನು (ಈ ತಪ್ಪನ್ನು) ಕ್ಷಮಿಸಬೇಕು.

೪೩. ಯಾವ ರೂಪವನ್ನು ಇಲ್ಲಿ ಚಿತ್ರಿಸಬೇಕು, ಅಪ್ಪಣೆಮಾಡು. ಪ್ರಭುವೇ ! ನನ್ನ ಈ ಕಲಾಭ್ಯಾಸ ಯತ್ನವು ಸಫಲವಾಗಲಿ"

೪೪–೪೫. ಹೀಗೆ ಚಿತ್ರಗಾರನು ಹೇಳಲು ರಾಜನು ಅವನನ್ನು ಕುರಿತು ಹೇಳಿದನು: "ಉಪಾಧ್ಯಾಯನೇ ! ನಿನ್ನ ಇಚ್ಛೆಗನುಸಾರವಾಗಿ ಏನನ್ನಾದರೂ ಬರಿ. ನಾವು ಕಣ್ಣುಗಳನ್ನು ಸಂತೋಷಪಡಿಸುತ್ತೇವೆ. ನಿನ್ನ ನೈಪುಣ್ಯದಲ್ಲಿ ನಮಗೆ ಸಂದೇಹವೆಲ್ಲಿಯದು ?" ಹೀಗೆ ರಾಜನು ಹೇಳಲಾಗಿ, ರಾಜನ ಬಳಿಯಿದ್ದವರು ಹೀಗೆ ಹೇಳಿದರು.

---

ಸ ಪ್ರವಿಶ್ಯ ದದರ್ಶಾತ್ರ ಚಿತ್ರಾಲೋಕನಲೀಲಯಾ ।
ಸ್ಥಿತಂ ಕನಕವರ್ಷಂ ತಂ ನೃಪಂ ಚಿತ್ರಕರೋ ರಹಃ ॥ ೩೯
ವರನಾರೀಕುಚೋತ್ಸಂಗಸಮರ್ಪಿತತನೂಭರಮ್ ।
ಸಹೇಲೋದಂಚಿತಕರೋಪಾತ್ತತಾಂಬೂಲವೀಟಿಕಮ್ ॥ ೪೦
ಪ್ರಣಮ್ಯ ಚೋಪವಿಷ್ಟಸ್ತಂ ರಾಜಾನಂ ವಿಹಿತಾದರಮ್ ।
ಶನೈರ್ವಿಜ್ಞಾಪಯಾಮಾಸ ರೋಲದೇವಃ ಸ ಚಿತ್ರಕೃತ್ ॥ ೪೧
ಚೀರಿಕೋಲ್ಲಂಬಿತಾ ದೇವ ತ್ವತ್ಪಾದಾಬ್ಜದಿದೃಕ್ಷಯಾ ।
ಮಯಾ ನ ವಿಜ್ಞಾನಮದಾತ್ತತ್ ಕ್ಷಂತವ್ಯಮಿದಂ ಮಮ ॥ ೪೨
ಆದಿಶ್ಯತಾಂ ಚ ಚಿತ್ರೇ ಕಿಮಾಲಿಖಾಮೀಹ ರೂಪಕಮ್ ।
ಭವತ್ವೇತತ್ಕಲಾಶಿಕ್ಷಾಯತ್ನೋ ಮೇ ಸಫಲಃ ಪ್ರಭೋ ॥ ೪೩
ಇತಿ ಚಿತ್ರಕರೇಣೋಕ್ತೇ ಸ ರಾಜಾ ನಿಜಗಾದ ತಮ್ ।
ಉಪಾಧ್ಯಾಯ ಯಥಾಕಾಮಂ ಕಿಂಚಿದಾಲಿಖ್ಯತಾಂ ತ್ವಯಾ ॥ ೪೪
ಹ್ಲಾದಯಾಮೋ ವಯಂ ಚಕ್ಷುರ್ಭ್ರಾಂತಿಸ್ತ್ವತ್ಕೌಶಲೇ ತು ಕಾ ।
ಇತ್ಯುಕ್ತೇ ತೇನ ರಾಜ್ಞಾತ್ರ ತತ್ಪಾರ್ಶ್ವಸ್ಥಾ ಬಭಾಷಿರೇ ॥ ೪೫

೪೬. "ರಾಜನನ್ನೇ ಬರೆಯಲಿ. ಇತರ ಕುರೂಪಗಳಿಂದ ಏನು ಪ್ರಯೋಜನ ?" ಅದನ್ನು ಕೇಳಿ ಸಂತುಷ್ಟನಾದ ಚಿತ್ರಗಾರನು ಆ ರಾಜನನ್ನು ಚಿತ್ರಿಸಿದನು.

೪೭–೪೮–೪೯–೫೦–೫೧. ಎತ್ತರವಾದ ಮೂಗು, ನೀಳವಾಗಿ ಕೆಂಪಾಗಿರುವ ಕಣ್ಣುಗಳು, ವಿಶಾಲವಾದ ಹಣೆ, ಬಾಗಿರುವ ಕಪ್ಪು ಮುಂಗುರುಳು, ವಾಸಿಯಾಗಿರುವ ಬಾಣ ಮುಂತಾದುವುಗಳಿಂದ ಆದ ಗುರುತುಗಳುಳ್ಳ ವಿಶಾಲವಾದ ಎದೆ, ದಿಗ್ಗಜಗಳ ಸೊಂಡಿಲಿನಂತಿರುವ ಮನೋಹರವಾದ ತೋಳುಗಳು, ಪರಾಕ್ರಮದಿಂದ ಸೋತಿರುವ ಸಿಂಹಗಳ ಮರಿಗಳು ಕಾಣಿಕೆಯಾಗಿ ಕೊಟ್ಟಿರುವುವೋ ಎಂಬಂತಿರುವ ಮುಷ್ಟಿಯಿಂದ ಹಿಡಿಯಬಹುದಾದ ಮಧ್ಯಭಾಗ, ನೀಳವಾದ ತಾರುಣ್ಯವೆಂಬ ಆನೆಯನ್ನು ಕಟ್ಟಿಹಾಕುವ ಕಂಬಗಳಂತಿರುವ ತೊಡೆಗಳು, ಅಶೋಕವೃಕ್ಷದ ಚಿಗುರಿನಂತಿರುವ ಪಾದಕಮಲಗಳು, ಇವುಗಳಿಂದ ಕೂಡಿ ಯಥಾವತ್ತಾಗಿ ಕಾಣುವ ರಾಜನ ಚಿತ್ರವನ್ನು ಚಿತ್ರಕಾರನು ಬರೆದನು. ಇದನ್ನು ನೋಡಿದ ಮಾತ್ರಕ್ಕೆ ಎಲ್ಲರೂ ಚಿತ್ರಕಾರರನ್ನು ಅಭಿನಂದಿಸಿದರು.

---

ರಾಜೈವಾಲಿಖ್ಯತಾಮನ್ಯೈರ್ವಿರೂಪೈಃ ಕಿಂ ಪ್ರಯೋಜನಮ್ ।
ತಚ್ಛ್ರುತ್ವಾ ಚಿತ್ರಕೃತ್ತುಷ್ಟಃ ಸ ತಂ ರಾಜಾನಮಾಲಿಖತ್ ॥ ೪೬

ತುಂಗೇನ ನಾಸಾವಂಶೇನ ದೀರ್ಘರಕ್ತೇನ ಚಕ್ಷುಷಾ ।
ವಿಪುಲೇನ ಲಲಾಟೇನ ಕುಂತಲೈಃ ಕುಂಚಿತಾಸಿತೈಃ ॥ ೪೭

ವಿಸ್ತೀರ್ಣೇನೋರಸಾ ರೂಢಬಾಣಾದಿವ್ರಣಶೋಭಿನಾ ।
ಭುಜಯುಗ್ಮೇನ ದಿಗ್ದಂತಿಕರಾಕಾರೇಣ ಹಾರಿಣಾ ॥ ೪೮

ಮಧ್ಯೇನ ಮುಷ್ಟಿಮೇಯೇನ ಕೇಸರೀಂದ್ರಕಿಶೋರಕೈಃ ।
ಉಪಾಯನೀಕೃತೇನೇವ ಪರಾಕ್ರಮಪರಾಜಿತೈಃ ॥ ೪೯

ಯೌವನದ್ವಿರದಾಲಾನನಿಭೇನೋರುಯುಗೇಣ ಚ ।
ಅಶೋಕಪಲ್ಲವನಿಭೇನಾಂಘ್ರಿಯುಗ್ಮೇನ ಚಾರುಣಾ ॥ ೫೦

ದೃಷ್ಟ್ವೈವ ಸ್ವಾನುರೂಪೇಣ ರೂಪೇಣಾಲಿಖಿತಂ ನೃಪಮ್ ।
ಸಾಧುವಾದಂ ದದುಃ ಸರ್ವೇ ತಸ್ಯ ಚಿತ್ರಕೃತಸ್ತದಾ ॥ ೫೧

೫೨–೫೩. ಮತ್ತು ಅವರು ಆ ಚಿತ್ರಕಾರನನ್ನು ಕುರಿತು ಹೇಳಿದರು: "ಉಪಾಧ್ಯಾಯನೇ ! ಒಬ್ಬಂಟಿಗನಾದ ಪ್ರಭುವನ್ನು ನೋಡಲು ನಾವು ಇಚ್ಛಿಸುವುದಿಲ್ಲ. ಆದುದರಿಂದ ಈ ಚಿತ್ರಗಳ ಗೋಡೆಯಲ್ಲಿ ಚಿತ್ರಿಸಿರುವ ಈ ರಾಣಿಯರ ನಡುವೆ ಅನುರೂಪಳಾದ ಒಬ್ಬಳನ್ನು ನೀನು ಚೆನ್ನಾಗಿ ಚಿಂತಿಸಿ ಆರಿಸಿ ಈ ರಾಜನ ಪಕ್ಕದಲ್ಲಿ ಚಿತ್ರಿಸು. ನಮ್ಮ ಕಣ್ಣುಗಳಿಗೆ ಹಬ್ಬವು ಪೂರ್ಣವಾಗಲಿ."

೫೪. ಅದನ್ನು ಕೇಳಿ ಚಿತ್ರಕಾರನು ಅಲ್ಲಿದ್ದ ಚಿತ್ರಗಳನ್ನು ಗಮನಿಸಿ ನೋಡಿ ಹೇಳಿದನು: "ಈ ಸ್ತ್ರೀಯರು ಬಹಳ ಮಂದಿಯಿದ್ದರೂ ಇವರ ಪೈಕಿ ಯಾರೂ ರಾಜನಿಗೆ ಸದೃಶರಾದವರು ಇಲ್ಲ.

೫೫ ಮತ್ತು ಇಡೀ ಪೃಥ್ವಿಯಲ್ಲೇ ಈ ರಾಜನಿಗೆ ಸದೃಶ ರೂಪಳಾದ ಸ್ತ್ರೀಯು ಇಲ್ಲವೆಂದೇ ನಾನು ಭಾವಿಸುತ್ತೇನೆ. ಆದರೆ ಒಬ್ಬ ರಾಜಪುತ್ರಿಯು ಇದ್ದಾಳೆ. ನಿಮಗೆ ಅವಳ ವಿಷಯವಾಗಿ ಹೇಳುತ್ತೇನೆ. ಕೇಳಿರಿ.

೫೬ ವಿದರ್ಭ ದೇಶದಲ್ಲಿ ಕುಂಡಿನ ಎಂಬ ಹೆಸರುಳ್ಳ ಐಶ್ವರ್ಯ ಸಂಪನ್ನವಾದ ಪಟ್ಟಣವೊಂದಿದೆ. ಅಲ್ಲಿ ದೇವಶಕ್ತಿ ಎಂದು ಪ್ರಸಿದ್ಧನಾದ ರಾಜನಿದ್ದಾನೆ.

೫೭ ಅವನಿಗೆ ಪ್ರಾಣಕ್ಕಿಂತಲೂ ಹೆಚ್ಚುಪ್ರಿಯಳಾದ ಅನಂತವತೀ ಎಂಬ ರಾಣಿಯು ಇದ್ದಾಳೆ. ಅವಳಲ್ಲಿ ಆ ರಾಜನಿಗೆ ಮದನಸುಂದರೀ ಎಂಬ ಹೆಸರಿನ ಒಬ್ಬ ಪುತ್ರಿಯು ಇದ್ದಾಳೆ.

---

ಜಗದುಸ್ತಂ ಚ ನೇಚ್ಛಾಮೋ ದ್ರಷ್ಟುಮೇಕಾಕಿನಂ ಪ್ರಭುಮ್ ।
ಚಿತ್ತಭಿತ್ತೌ ತದೇತಸ್ಯಾಮೇತಾಸ್ವಾಲಿಖಿತಾಸ್ವಿಹ ॥ ೫೨
ರಾಜ್ಞೀಷು ಮಧ್ಯಾದೇಕಾಂ ತ್ವಂ ಸುವಿಚಾರ್ಯಾನುರೂಪಿಕಾಮ್ ।
ಲಿಖೋಪಾಧ್ಯಾಯ ಪಾರ್ಶ್ವೇಸ್ಯ ಪೂರ್ಣೋ ನೇತ್ರೋತ್ಸವೋಽಸ್ತು ನಃ ॥ ೫೩
ತಚ್ಛ್ರುತ್ವಾ ಸ ವಿಲೋಕ್ಯಾತ್ರ ಚಿತ್ರಂ ಚಿತ್ರಕರೋಽಬ್ರವೀತ್ ।
ಭೂಯಸೀಷ್ವಪಿ ನೈತಾಸು ತುಲ್ಯಾ ರಾಜ್ಞೋಽಸ್ತಿ ಕಾಚನ ॥ ೫೪
ಜಾನೇ ಚ ಪೃಥ್ವ್ಯಾಮೇವಾಸ್ಯ ತುಲ್ಯರೂಪಾಸ್ತಿ ನಾಂಗನಾ ।
ಅಸ್ತ್ಯೇಕಾ ರಾಜಪುತ್ರೀ ತು ಶೃಣುತಾಖ್ಯಾಮಿ ತಾಂ ಚ ವಃ ॥ ೫೫
ವಿದರ್ಭೇಷ್ವಸ್ತಿ ನಗರಂ ಶ್ರೀಮತ್ ಕುಂಡಿನಸಂಜ್ಞಕಮ್ ।
ದೇವಶಕ್ತಿರಿತಿಖ್ಯಾತಸ್ತತ್ರಾಸ್ತಿ ಚ ಮಹೀಪತಿಃ ॥ ೫೬
ತಸ್ಯಾನಂತವತೀತ್ಯಸ್ತಿ ರಾಜ್ಞೀ ಪ್ರಾಣಾಧಿಕಪ್ರಿಯಾ ।
ತಸ್ಯಾಂ ತಸ್ಯ ಸುತೋತ್ಪನ್ನಾ ನಾಮ್ನಾ ಮದನಸುಂದರೀ ॥ ೫೭

೫೮. ಅವಳ ಸೌಂದರ್ಯವನ್ನು ವರ್ಣಿಸಲು ಈ ಒಂದು ನಾಲಿಗೆಯಿಂದ ನನ್ನಂತಹವನು ಯಾವನು ತಾನೆ ಸಾಹಸ ಮಾಡಿಯಾನು ? ಆದರೆ ನಾನು ಇಷ್ಟು ಮಾತ್ರ ಹೇಳುತ್ತೇನೆ.

೫೯. ಅವಳನ್ನು ಸೃಷ್ಟಿಸಿದ ಮೇಲೆ ವಿಧಿಯು ಅವಳ ಮೇಲಿನ ಪ್ರೀತಿಯಿಂದ ಅವಳಷ್ಟೇ ಸುಂದರಳಾದ ಮತ್ತೊಬ್ಬಳನ್ನು ಸೃಷ್ಟಿಸಲು ಬಯಸಿದರೂ ಯುಗಗಳಾದರೂ ಸಾಧ್ಯವಾಗುವುದಿಲ್ಲ ಎಂದು ನಾನು ಭಾವಿಸುತ್ತೇನೆ.

೬೦. ಸೌಂದರ್ಯ, ಲಾವಣ್ಯ, ವಿನಯ, ವಯಸ್ಸು, ವಂಶ ಇವುಗಳಿಂದ ಪೃಥ್ವಿಯಲ್ಲಿ ಈ ರಾಜನಿಗೆ ಸದೃಶಳಾದ ರಾಜಕನ್ಯೆಯು ಅವಳೊಬ್ಬಳೇ.

೬೧. ಏಕೆಂದರೆ ನಾವು ಅಲ್ಲಿದ್ದಾಗ ಒಂದು ಸಾರಿ ಅವಳು ದಾಸಿಯ ಮೂಲಕ ನನ್ನನ್ನು ಬರ ಹೇಳಿದ್ದಳು. ಅದರಂತೆ ನಾನು ಆ ರಾಜಪುತ್ರಿಯ ಅಂತಃಪುರಕ್ಕೆ ಹೋಗಿದ್ದೆನು.

೬೨–೬೩. ಅಲ್ಲಿ ನಾನು ಕಮಲದ ಎಲೆಯ ಹಾಸಿಗೆಯಲ್ಲಿ ಹೊರಳಾಡುತ್ತಿದ್ದ ರಾಜಪುತ್ರಿಯನ್ನು ನೋಡಿದೆ. ಅವಳು ಆರ್ದ್ರವಾದ ಶ್ರೀಗಂಧವನ್ನು ಲೇಪಿಸಿಕೊಂಡಿದ್ದಳು. ಕಮಲದ ದಂಟಿನ ಹಾರವನ್ನು ಧರಿಸಿದ್ದಳು. ಸಖಿಜನರು ಬಾಳೆ ಎಲೆಗಳಿಂದ ಗಾಳಿ ಬೀಸುತ್ತಿದ್ದರು. ಅವಳು ಬಿಳಿಚಿಕೊಂಡು ಕೃಶಳಾಗಿದ್ದಳು. ಅವಳಲ್ಲಿ ಮನ್ಮಥಜ್ವರದ ಲಕ್ಷಣಗಳೆಲ್ಲವೂ ಸ್ಪಷ್ಟವಾಗಿ ಕಾಣುತ್ತಿದ್ದವು.

---

ಯಸ್ಯಾ ವರ್ಣಯಿತುಂ ರೂಪಮೇಕಯಾ ಜಿಹ್ವಯಾನಯಾ ।
ಮಾದೃಶಃ ಕಃ ಪ್ರಗಲ್ಭೇತ ಕಿಂ ತ್ವೇತಾವದ್ವದಾಮ್ಯಹಮ್ ॥ ೫೮
ತಾಂ ನಿರ್ಮಾಯ ವಿಧಿರ್ಮನ್ಯೇ ಸಂಜಾತೇಚ್ಛೋಽಪಿ ತದ್ರಸಾತ್ ।
ನಿರ್ಮಾತುಮನ್ಯಾಂ ತದ್ರೂಪಾಂ ಯುಗೈರಪಿ ನ ವೇತ್ಸ್ಯತಿ ॥ ೫೯
ಸೈಕಾಸ್ಯ ರಾಜ್ಞಃ ಸದೃಶೀ ಪೃಥಿವ್ಯಾಂ ರಾಜಕನ್ಯಕಾ ।
ರೂಪಲಾವಣ್ಯವಿನಯೈರ್ವಯಸಾ ಚ ಕುಲೇನ ಚ ॥ ೬೦
ಅಹಂ ತಯಾ ಹಿ ತತ್ರಸ್ಥಃ ಕದಾಚಿತ್ ಪ್ರೇಷ್ಯ ಚೇಟಿಕಾಮ್ ।
ಆಹೂತೋಽಂತಃಪುರಂ ತಸ್ಯಾ ರಾಜಪುತ್ರ್ಯಾ ಗತೋಽಭವಮ್ ॥ ೬೧
ತತ್ರಾಪಶ್ಯಮಹಂ ತಾಂ ಚ ಚಂದನಾರ್ದ್ರವಿಲೇಪನಾಮ್ ।
ಮೃಣಾಲಹಾರಾಂ ಬಿಸಿನೀಪತ್ರಶಯ್ಯಾವಿವರ್ತಿನೀಮ್ ॥ ೬೨
ಕದಲೀಪತ್ರಪವನೈರ್ವೀಜ್ಯಮಾನಾಂ ಸಖೀಜನೈಃ ।
ಪಾಂಡುಕ್ಷಾಮಾಮಭಿವ್ಯಕ್ತಸ್ಮರಸಂಜ್ವರಲಕ್ಷಣಾಮ್ ॥ ೬೩

೬೪–೬೫–೬೬. "ಎಲೈ ಸಖಿಯರೇ ! ಶ್ರೀಗಂಧದ ಲೇಪನ, ಬಾಳೆಗಿಡದ ಎಲೆಗಳ ಗಾಳಿ, ಇವುಗಳು ಬೇಡ. ನಿಮ್ಮ ಈ ವಿಫಲವಾದ ಶ್ರಮದಿಂದ ಏನು ಪ್ರಯೋಜನ ? ಏಕೆಂದರೆ ನಾನು ಮಂದಭಾಗ್ಯೆ. ಇವುಗಳು ಶೀತಲವಾಗಿದ್ದರೂ ಕೂಡ ನನ್ನನ್ನು ಸುಡುತ್ತಿವೆ." ಹೀಗೆ ಸಾಂತ್ವನ ಮಾಡುವುದರಲ್ಲಿ ಕಾತರರಾಗಿದ್ದ ಸಖಿಯರನ್ನು ನಿವಾರಿಸುತ್ತಾ ಆ ಸ್ಥಿತಿಯಲ್ಲಿದ್ದ ರಾಜಪುತ್ರಿಯನ್ನು ನೋಡಿ, ಅವಳ ಬಗ್ಗೆ ಚಿಂತೆಯಿಂದ ವ್ಯಾಕುಲನಾಗಿ ಅವಳಿಗೆ ನಮಸ್ಕಾರ ಮಾಡಿ, ಅವಳ ಮುಂಭಾಗದಲ್ಲಿ ಕುಳಿತುಕೊಂಡೆನು.

೬೭–೬೮. "ಉಪಾಧ್ಯಾಯನೇ ! ಚಿತ್ರದಲ್ಲಿ ಇಂತಹ ರೂಪವನ್ನು ಬರೆದು ನನಗೆ ಕೊಡು" ಎಂದು ಹೇಳಿ ನಡುಗುತ್ತಿರುವ ಕೈಯಿಂದ ಕುಂಚವನ್ನು ಹಿಡಿದು ಮೆಲ್ಲಗೆ ಭೂಮಿಯಲ್ಲಿ ಚಿತ್ರಿಸಿ ತೋರಿಸುತ್ತಾ ಆ ರಾಜಪುತ್ರಿಯು ಪರಮ ಸುಂದರವಾದ ಒಬ್ಬ ಯುವಕನ ಚಿತ್ರವನ್ನು ನನ್ನಿಂದ ಬರೆಸಿದಳು.

೬೯. ದೇವ ! ಸುಂದರನಾದ ಆ ಯುವಕನನ್ನು ಚಿತ್ರಿಸಿ ನಾನು ಯೋಚಿಸಿದೆನು. ಇವಳು ಸಾಕ್ಷಾತ್ ಕಾಮನನ್ನೇ ನನ್ನಿಂದ ಬರೆಸಿದ್ದಾಳೆ.

೭೦. ಆದರೆ ಇವನ ಕೈಯಲ್ಲಿ ಪುಷ್ಪರೂಪವಾದ ಬಿಲ್ಲನ್ನು ಬರೆಸಿಲ್ಲವಾದ್ದರಿಂದ ಇವನು ಕಾಮನಲ್ಲ. ಆದರೆ ಕಾಮನಂತೆ ರೂಪವುಳ್ಳ ಯಾವನೋ ಒಬ್ಬ ಯುವಕ ಎಂದು ಭಾವಿಸುತ್ತೇನೆ.

---

ಹೇ ಸಖ್ಯಶ್ಚಂದನಾಲೇಪಕದಲೀದಲಮಾರುತೈಃ ।
ಕೃತಮೇಭಿಃ ಕಿಮೇತೇನ ವಿಫಲೇನ ಶ್ರಮೇಣ ವಃ ॥ ೬೪
ಏತೇ ಹಿ ಮಂದಪುಣ್ಯಾಂ ಮಾಂ ದಹಂತಿ ಶಿಶಿರಾ ಅಪಿ ।
ಏವಂ ನಿವಾರಯಂತೀಂ ಚ ಸಖೀರಾಶ್ವಾಸನಾಕುಲಾಃ ॥ ೬೫
ವಿಲೋಕ್ಯ ತದವಸ್ಥಾಂ ತಾಂ ತದ್ವಿತರ್ಕಸಮಾಕುಲಃ ।
ಕೃತಪ್ರಣಾಮಸ್ತಸ್ಯಾಶ್ಚ ಪುರತೋಽಹಮುಪಾವಿಶಮ್ ॥ ೬೬
ಉಪಾಧ್ಯಾಯೇದೃಗಾಲಿಖ್ಯ ಚಿತ್ರೇ ಮೇ ದೇಹಿ ರೂಪಕಮ್ ।
ಇತ್ಯುಕ್ತ್ವಾ ವೇಪಮಾನೇನ ಪಾಣಿನಾ ಧೃತವರ್ತಿನಾ ॥ ೬೭
ಶನೈರಾಲಿಖ್ಯ ಸಾ ಭೂಮೌ ದರ್ಶಯಂತೀ ನೃಪಾತ್ಮಜಾ ।
ಅಲೇಖಯನ್ಮಯಾ ಕಂಚಿದ್ಯುವಾನಂ ರೂಪವತ್ತರಮ್ ॥ ೬೮
ಆಲಿಖ್ಯ ಸುಂದರಂ ತಂ ಚ ದೇವ ಚಿಂತಿತವಾನಹಮ್ ।
ಕಾಮ ಏವಾನಯಾ ಸಾಕ್ಷಾದಯಮಾಲೇಖಿತೋ ಮಯಾ ॥ ೬೯
ಕಿಂ ತು ಪುಷ್ಪಮಯಶ್ಚಾಪೋ ಹಸ್ತೇ ಯನ್ನಾಸ್ಯ ಲೇಖಿತಃ ।
ತೇನ ಜಾನೇ ನ ಕಾಮೋಽಯಂ ತದ್ರೂಪಃ ಕೋಽಪ್ಯಸೌ ಯುವಾ ॥ ೭೦

೭೧. ಇವಳು ನಿಜವಾಗಿ ಈ ಯುವಕನನ್ನು ಎಲ್ಲಿಯೋ ನೋಡಿರಬೇಕು ಅಥವಾ ಕೇಳಿರಬೇಕು. ಮತ್ತು ಇವಳಿಗೆ ಇವನಿಂದ ಈ ಮನ್ಮಥನ ಆವೇಗವು ಆಗಿರಬೇಕು.

೭೨. ಆದುದರಿಂದ ನಾನು ಇಲ್ಲಿಂದ ಹೊರಟು ಹೋಗಬೇಕು. ಇವಳ ತಂದೆಯಾದ ದೇವಶಕ್ತಿಗೆ ಇದು ತಿಳಿದರೆ ನನ್ನನ್ನು ಕ್ಷಮಿಸುವುದಿಲ್ಲ. ಅವನು ಭಯಂಕರವಾದ ಶಿಕ್ಷೆಯನ್ನು ವಿಧಿಸುವವನು.

೭೩. ಹೀಗೆ ಆಲೋಚಿಸಿ ನಾನು ರಾಜಕನ್ಯೆಯಾದ ಆ ಮದನಸುಂದರಿಗೆ ನಮಸ್ಕಾರ ಮಾಡಿ ಅವಳಿಂದ ಬಹುಮಾನಿತನಾಗಿ ಅಲ್ಲಿಂದ ಹೊರಗೆ ಹೊರಟೆನು.

೭೪. ಮಹಾರಾಜನೇ ! ಸೇವಕರು ಪರಸ್ಪರ ಮಾತಾಡಿಕೊಂಡದ್ದನ್ನು ಕೇಳಿ ಅವಳು ನಿನ್ನಲ್ಲಿ ಅನುರಕ್ತಳಾಗಿದ್ದಾಳೆ ಎಂಬ ವಿಷಯ ನನಗೆ ತಿಳಿದು ಬಂದಿದೆ.

೭೫. ಚಿತ್ರಪಟದಲ್ಲಿ ಗುಪ್ತವಾಗಿ ಚಿತ್ರಿಸಿದ ಆ ರಾಜಪುತ್ರಿಯ (ಚಿತ್ರವನ್ನು) ತೆಗೆದುಕೊಂಡು ನಾನು ವೇಗವಾಗಿ ನಿನ್ನ ಪಾದಮೂಲಕ್ಕೆ ಬಂದಿದ್ದೇನೆ.

೭೬. ಪ್ರಭುವೇ ! ನಿನ್ನ ಆಕಾರವನ್ನು ನೋಡಿ ನನ್ನ ಸಂಶಯವು ದೂರವಾಯಿತು. ಪ್ರಭುವಾದ ನಿನ್ನನ್ನೇ ಅವಳು ನನ್ನ ಕೈಯಿಂದ ಬರೆಸಿದ್ದಾಳೆ.

೭೭. ಅನೇಕ ಸಾರಿ (ಪ್ರಯತ್ನಪಟ್ಟರೂ) ಅವಳನ್ನು ಅವಳಂತೆಯೇ ಚಿತ್ರದಲ್ಲಿ ಬರೆಯಲು ನನಗೆ ಸಾಧ್ಯವಾಗಲಿಲ್ಲ. ಆದುದರಿಂದ (ನಿನಗೆ) ಸದೃಶಳಾಗಿದ್ದರೂ ಕೂಡ ಅವಳನ್ನು ಚಿತ್ರದಲ್ಲಿ ನಿನ್ನ ಪಕ್ಕದಲ್ಲಿ ಬರೆಯುವುದಿಲ್ಲ."

---

ಅಯಂ ಚ ನೂನಮನಯಾ ದೃಷ್ಟಃ ಕ್ವಾಪಿ ಶ್ರುತೋಽಪಿ ವಾ ।
ಏತನ್ನಿಬಂಧನಂ ಚೇದಮಸ್ಯಾಃ ಸ್ಮರವಿಜೃಂಭಿತಮ್ ॥ ೭೧
ತದಿತೋ ಮೇಽಪಯಾತವ್ಯಮುಗ್ರದಂಡೋಹ್ಯಯಂ ನೃಪಃ ।
ಏತತ್ಪಿತಾ ದೇವಶಕ್ತಿರ್ಬುದ್ಧ್ವೇದಂ ನ ಕ್ಷಮೇತ ಮೇ ॥ ೭೨
ಇತ್ಯಾಲೋಚ್ಯೈವ ನತ್ವಾ ತಾಮಹಂ ಮದನಸುಂದರೀಮ್ ।
ರಾಜಕನ್ಯಾಂ ನಿರಗಮಂ ತಯಾ ಸಂಮಾನಿತಸ್ತತಃ ॥ ೭೩
ಶ್ರುತಂ ಚಾತ್ರ ಮಹಾರಾಜ ಮಯಾ ಪರಿಜನಾನ್ಮಿಥಃ ।
ಸ್ವೈರಂ ಕಥಯತೋ ಯತ್ಸಾ ಸಾನುರಾಗಾ ಶ್ರುತೇ ತ್ವಯಿ ॥ ೭೪
ತತಶ್ಚಿತ್ರಪಟೇ ಗುಪ್ತಂ ಲಿಂಗಿತಾಂ ತಾಂ ನೃಪಾತ್ಮಜಾಮ್ ।
ಆದಾಯಾಹಂ ಭವತ್ಪಾದಮೂಲಂ ತ್ವರಿತಮಾಗತಃ ॥ ೭೫
ದೃಷ್ಟ್ವಾ ಚ ದೇವಸ್ಯಾಕಾರಂ ನಿವೃತ್ತಃ ಸಂಶಯೋ ಮಮ ।
ದೇವ ಏವ ತಯಾ ಚಿತ್ರೇ ಮದ್ಧಸ್ತೇನಾಭಿಲೇಖಿತಃ ॥ ೭೬
ಸಾ ಚಾಸಕೃನ್ನ ಸದೃಶೀ ಶಕ್ಯಾ ಲಿಖಿತುಮಿತ್ಯಹಮ್ ।
ಚಿತ್ರೇ ದೇವಸ್ಯ ಪಾರ್ಶ್ವೇ ತಾಂ ನ ಲಿಖಾಮಿ ಸಮಾಮಪಿ ॥ ೭೭

೭೮. ಹೀಗೆ ಹೇಳಿದ ಆ ರೋಲದೇವನನ್ನು ಕುರಿತು ರಾಜನು "ಹಾಗಿದ್ದರೆ ಆ ಚಿತ್ರಪಟದಲ್ಲಿರುವ ಅವಳನ್ನು ತೋರಿಸು" ಎಂದು ಹೇಳಿದನು.

೭೯. ಆಗ ಚಿತ್ರಕಾರನು ಪೆಟ್ಟಿಗೆಯಿಂದ ಆ ಚಿತ್ರಪಟವನ್ನು ಎಳೆದು ಚಿತ್ರದಲ್ಲಿದ್ದ ಆ ಮದನಸುಂದರಿಯನ್ನು ರಾಜನಿಗೆ ತೋರಿಸಿದನು.

೮೦. ರಾಜನಾದ ಕನಕವರ್ಷನು ಚಿತ್ರದಲ್ಲಿದ್ದರೂ ಕೂಡ ಅದ್ಭುತವಾದ ಸೌಂದರ್ಯವುಳ್ಳ ಅವಳನ್ನು ನೋಡಿ ತತ್ಕಾಲದಲ್ಲೇ ಮನ್ಮಥನಿಗೆ ವಶವಾದನು.

೮೧. ಅನಂತರ ರಾಜನು ಬಹಳ ಸುವರ್ಣವನ್ನು ಕೊಟ್ಟು ಆ ಚಿತ್ರಕಾರನನ್ನು ಶ್ರೀಮಂತಗೊಳಿಸಿ ಪ್ರಿಯೆಯ ಚಿತ್ರಪಟವನ್ನು ತೆಗೆದುಕೊಂಡು ಮಂದಿರದೊಳಗೆ ಪ್ರವೇಶಿಸಿದನು.

೮೨. ಅವಳ ಸೌಂದರ್ಯ ಮತ್ತು ಲಾವಣ್ಯಗಳನ್ನು ನೋಡಿ ರಾಜನ ಕಣ್ಣುಗಳು ತೃಪ್ತಿಗೊಂಡು, ಅವನ ಮನಸ್ಸು ಅವಳಲ್ಲಿ ತನ್ಮಯವಾಗಿ, ಅವನು ತನ್ನ ಎಲ್ಲ ಕಾರ್ಯಗಳನ್ನೂ ಬಿಟ್ಟು ಕುಳಿತನು.

೮೩. ಧೈರ್ಯವನ್ನು ಅಪಹರಿಸುವ ಮನ್ಮಥನು (ತನ್ನ ಮೇಲೆ) ರೂಪದ ಸ್ಪರ್ಧೆಯಿಂದ ಉಂಟಾದ ಅಸಹನೆಯಿಂದಲೋ ಎಂಬಂತೆ ಆ ಅವಕಾಶವನ್ನು ಉಪಯೋಗಿಸಿ ರಾಜನನ್ನು (ಕುಸುಮ)ಶರಗಳಿಂದ ಹೊಡೆಯುತ್ತಾ ಪೀಡಿಸಿದನು.

---

ಇತ್ಯುಕ್ತವಂತಂ ತಂ ರೋಲದೇವಂ ರಾಜಾ ಜಗಾದ ಸಃ ।
ತರ್ಹಿ ತ್ವಯಾ ಸಾ ತಚ್ಚಿತ್ರಪಟಸ್ಥಾ ದರ್ಶ್ಯತಾಮಿತಿ ॥ ೭೮
ತತೋ ವಲ್ಗುಲಿಕಾತಸ್ತಂ ಕೃಷ್ಟ್ವಾ ಪಟಮದರ್ಶಯತ್ ।
ಸ ಚಿತ್ರಕೃತ್ತಾಂ ಚಿತ್ರಸ್ಥಾಂ ರಾಜ್ಞೇ ಮದನಸುಂದರೀಮ್ ॥ ೭೯
ರಾಜಾ ಕನಕವರ್ಷೋऽಪಿ ತಾಂ ಸ ಚಿತ್ರಗತಾಮಪಿ ।
ವಿಚಿತ್ರರೂಪಾಮಾಲೋಕ್ಯ ಸದ್ಯಃ ಸ್ಮರವಶಂ ಯಯೌ ॥ ೮೦
ಪೂರಯಿತ್ವಾ ಚ ಬಹುನಾ ಹೇಮ್ನಾ ಚಿತ್ರಕರಂ ಸ ತಮ್ ।
ಆತ್ತಪ್ರಿಯಾಚಿತ್ರಪಟೋ ವಿವೇಶಾಭ್ಯಂತರಂ ನೃಪಃ ॥ ೮೧
ತತ್ರ ತದ್ರೂಪಲಾವಣ್ಯದರ್ಶನಾತೃಪ್ತಲೋಚನಃ ।
ತ್ಯಕ್ತಸರ್ವಕ್ರಿಯಸ್ತಸ್ಥೌ ತದೇಕಮಯಮಾನಸಃ ॥ ೮೨
ಬಬಾಧೇ ಧೈರ್ಯಹಾರೀ ತಂ ನಿಘ್ನನ್ ಲಬ್ಧಾಂತರಃ ಶರೈಃ ।
ರೂಪಸ್ಪರ್ಧಾಸಮುದ್ಭೂತಮಾತ್ಸರ್ಯ ಇವ ಮನ್ಮಥಃ ॥ ೮೩

೮೪. ರಾಜನು ಅವನ ರೂಪದಲ್ಲಿ ಲೋಭಗೊಂಡ ಸ್ತ್ರೀಯರಿಗೆ ಯಾವ ಮನ್ಮಥ ಬಾಧೆಯನ್ನು ಉಂಟುಮಾಡಿದ್ದನೋ ಅದೇ ಮನ್ಮಥ ಬಾಧೆಯು ಇವನಿಗೆ ನೂರಾರುಪಟ್ಟು ಜಾಸ್ತಿಯಾಗಿ ಫಲಿಸಿತೋ ಎಂಬಂತಾಯಿತು.

೮೫. ಅನಂತರ ಕೆಲವು ದಿನಗಳಾದ ಮೇಲೆ ವಿರಹದಿಂದ ಬಿಳಿಚಿಕೊಂಡು ಕೃಶನಾದ ರಾಜನು ಅದರ ಬಗ್ಗೆ ಪ್ರಶ್ನೆ ಮಾಡಿದ ಆಪ್ತರಾದ ಸಚಿವರಿಗೆ ತನ್ನ ಮನೋಗತವನ್ನು ಹೇಳಿದನು.

೮೬–೮೭. ಮತ್ತೆ ಆ ಸಚಿವರೊಡನೆ ಸಮಾಲೋಚನೆ ಮಾಡಿ ಕನ್ಯೆಯಾದ ಮದನಸುಂದರಿಯನ್ನು ಯಾಚಿಸುವುದಕ್ಕಾಗಿ ಕನಕವರ್ಷನು ರಾಜನಾದ ದೇವಶಕ್ತಿಯ ಬಳಿಗೆ ಸಮಯಜ್ಞನೂ ಕಾರ್ಯವನ್ನು ತಿಳಿದವನೂ ಆಪ್ತನೂ ಉತ್ತಮವಂಶದಲ್ಲಿ ಹುಟ್ಟಿದವನೂ ಮಧುರವಾಗಿ ಮತ್ತು ಉದಾರವಾಗಿ ಮಾತನಾಡುವವನೂ ಆದ ಸಂಗಮಸ್ವಾಮಿ ಎಂಬ ಹೆಸರುಳ್ಳ ವಿಪ್ರನನ್ನು ದೂತನನ್ನಾಗಿ ಕಳುಹಿಸಿದನು.

೮೮. ಆ ಸಂಗಮಸ್ವಾಮಿಯು ಹೇರಳವಾದ ಯೋಗ್ಯ ಸಾಮಗ್ರಿಯೊಡನೆ ವಿದರ್ಭದೇಶಕ್ಕೆ ಹೋಗಿ ಕುಂಡಿನಪುರವನ್ನು ಪ್ರವೇಶಿಸಿದನು.

೮೯. ಅಲ್ಲಿ ಅವನು ವಿಧಿವತ್ತಾಗಿ ರಾಜನಾದ ದೇವಶಕ್ತಿಯನ್ನು ಸಂದರ್ಶಿಸಿ, ತನ್ನ ಪ್ರಭುವಿಗೋಸ್ಕರವಾಗಿ ಆ ರಾಜನ ಪುತ್ರಿಯನ್ನು ಪ್ರಾರ್ಥಿಸಿದನು.

---

ಯಾ ದತ್ತಾ ರೂಪಲುಬ್ಧಾನಾಂ ಸ್ಮರಾರ್ತಿಸ್ತೇನ ಯೋಷಿತಾಮ್ ।
ಫಲಿತೇವ ಚ ಸೈವಾಸ್ಯ ಶತಶಾಖಂ ಮಹೀಕ್ಷಿತಃ ॥ ೮೪

ತತೋ ದಿನೈಶ್ಚ ವಿರಹಕ್ಷಾಮಪಾಂಡುಃ ಶಶಂಸ ಸಃ ।
ಆಪ್ತೇಭ್ಯಃ ಸಚಿವೇಭ್ಯಸ್ತತ್ಪೃಚ್ಛದ್ಭ್ಯಃ ಸ್ವಂ ಮನೋಗತಮ್ ॥ ೮೫

ಮಂತ್ರಯಿತ್ವಾ ಚ ತೈಃ ಸಾಕಂ ಕನ್ಯಾಂ ಮದನಸುಂದರೀಮ್ ।
ಯಾಚಿತುಂ ಪ್ರಾಹಿಣೋದ್ದೂತಂ ಸ ರಾಜ್ಞೇ ದೇವಶಕ್ತಯೇ ॥ ೮೬

ಸಂಗಮಸ್ವಾಮಿನಾಮಾನಂ ಕಾಲಜ್ಞಂ ಕಾರ್ಯವೇದಿನಮ್ ।
ವಿಪ್ರಮಾಪ್ತಂ ಕುಲೀನಂ ಚ ಮಧುರೋದಾತ್ತಭಾಷಿಣಮ್ ॥ ೮೭

ಸ ಗತ್ವಾ ಸುಮಹಾರ್ಹೇಣ ವಿಪ್ರಃ ಪರಿಕರೇಣ ತಾನ್ ।
ವಿದರ್ಭಾನ್ ಸಂಗಮಸ್ವಾಮೀ ಪ್ರಾವಿಶತ್ಕುಂಡಿನಂ ಪುರಮ್ ॥ ೮೮

ಯಥಾವತ್ತತ್ರ ರಾಜಾನಂ ದೇವಶಕ್ತಿಂ ದದರ್ಶ ತಮ್ ।
ಸ ಸ್ವಾಮಿನೋಽರ್ಥೇ ತಸ್ಮಾಚ್ಚ ಪ್ರಾರ್ಥಯಾಮಾಸ ತತ್ಸುತಾಮ್ ॥ ೮೯

೯೦. "ಹೇಗಿದ್ದರೂ ಈ ಮಗಳನ್ನು ನಾನು ಬೇರೆಯವನಿಗೆ ಕೊಡಬೇಕು. ರಾಜನಾದ ಕನಕವರ್ಷನು ನಮ್ಮಂತೆಯೇ ಯೋಗ್ಯನೂ ಆಗಿದ್ದಾನೆ ಮತ್ತು ಇವಳನ್ನು (ಸ್ವತಃ) ಯಾಚಿಸುತ್ತಿದ್ದಾನೆ.

೯೧. ಆದುದರಿಂದ ಇವಳನ್ನು ಇವನಿಗೆ ಕೊಡುತ್ತೇನೆ' ಎಂದು ದೇವಶಕ್ತಿ ಕೂಡ ಸಮಾಲೋಚನೆ ಮಾಡಿ ಸಂಗಮಸ್ವಾಮಿಯ ಮಾತನ್ನು ವಿಶ್ವಾಸದಿಂದ ಒಪ್ಪಿದನು.

೯೨. ಮತ್ತೆ ರಾಜನು ತನ್ನ ಮಗಳಾದ ಮದನಸುಂದರಿಯ ರೂಪದಂತೆಯೇ ಆಶ್ಚರ್ಯಕರವಾದ ಅವಳ ನೃತ್ತವನ್ನೂ ಸಂಗಮಸ್ವಾಮಿಗೆ ತೋರಿಸಿದನು.

೯೩. ಅದರಿಂದ ಸಂತುಷ್ಟನಾದ ಸಂಗಮಸ್ವಾಮಿಯನ್ನು ರಾಜನು ಸತ್ಕರಿಸಿ ಮಗಳನ್ನು ಕನ್ಯಾದಾನ ಮಾಡಿಕೊಡಲು ಒಪ್ಪಿದನು.

೯೪. ಮತ್ತು ವಿವಾಹಕ್ಕೆ ಮುಹೂರ್ತವನ್ನು ನಿಶ್ಚಯಿಸಿ ಅಲ್ಲಿಗೆ ಬರಲು (ಕನಕವರ್ಷರಾಜನಿಗೆ) ಸಂದೇಶವನ್ನು ನೀಡಿ ಸಂಗಮಸ್ವಾಮಿಯ ಜೊತೆಯಲ್ಲಿ ಪ್ರತಿದೂತನೊಬ್ಬನನ್ನು ಕಳುಹಿಸಿಕೊಟ್ಟನು.

೯೫. ಅನಂತರ ಸಂಗಮಸ್ವಾಮಿಯು ಪ್ರತಿದೂತನೊಡನೆ ಬಂದು ರಾಜನಾದ ಕನಕವರ್ಷನಿಗೆ ಕಾರ್ಯಸಿದ್ಧಿಯಾದುದನ್ನು ನಿವೇದಿಸಿದನು.

---

ದೇಯಾ ತಾವನ್ಮಯಾನ್ಯಸ್ಮೈ ದುಹಿತೈಷಾ ಸ ಚೋಚಿತಃ ।
ಭೂಪಃ ಕನಕವರ್ಷೋऽಸ್ಮಾದೃಶೋऽಪ್ಯೇತಾಂ ಚ ಯಾಚತೇ ॥ ೯೦

ತದೇತಸ್ಮೈ ದದಾಮ್ಯೇನಾಮಿತಿ ಸಂಮಂತ್ರ್ಯ ಸೋऽಪಿ ಚ ।
ಶ್ರದ್ಧೇ ದೇವಶಕ್ತಿಸ್ತತ್ಸಂಗಮಸ್ವಾಮಿನೋ ವಚಃ ॥ ೯೧

ದರ್ಶಯಾಮಾಸ ತಸ್ಮೈ ಚ ತಸ್ಯಾ ರೂಪಮಿವಾದ್ಭುತಮ್ ।
ನೃತ್ತಂ ಮದನಸುಂದರ್ಯಾಃ ಸುತಾಯಾಃ ಸ ಮಹೀಪತಿಃ ॥ ೯೨

ತತಸ್ತದ್ದರ್ಶನಪ್ರೀತಂ ಸಂಗಮಸ್ವಾಮಿನಂ ಸ ತಮ್ ।
ಪ್ರತಿಪನ್ನಸುತಾದಾನಃ ಸಂಮಾನ್ಯ ಪ್ರಾಹಿಣೋನ್ನೃಪಃ ॥ ೯೩

ನಿಶ್ಚಿತ್ಯ ಲಗ್ನಮುದ್ವಾಹಹೇತೋರಾಗಮ್ಯತಾಮಿಹ ।
ಸಂದಿಶ್ಯೇತಿ ಸಮಂ ತೇನ ಪ್ರತಿದೂತಂ ಸಸರ್ಜ ಚ ॥ ೯೪

ಆಗತ್ಯ ಸಂಗಮಸ್ವಾಮೀ ಪ್ರತಿದೂತಯುತೋऽಥ ಸಃ ।
ರಾಜ್ಞೇ ಕನಕವರ್ಷಾಯ ಸಿದ್ಧಂ ಕಾರ್ಯಂ ನ್ಯವೇದಯತ್ ॥ ೯೫

೯೬–೯೭. ಮಹಾಪರಾಕ್ರಮಿಯಾದ ಕನಕವರ್ಷನು ಪ್ರತಿದೂತನನ್ನು ಸತ್ಕರಿಸಿ ಮದನಸುಂದರಿಯು ತನ್ನಲ್ಲಿ ಅನುರಕ್ತಳಾಗಿದ್ದಾಳೆ ಎಂಬುದನ್ನು ಖಚಿತವಾಗಿ ತಿಳಿದು ಮುಹೂರ್ತವನ್ನು ನಿಶ್ಚಯಿಸಿ, ದೃಢವಾದ ಮನಸ್ಸಿನಿಂದ ವಿವಾಹಕ್ಕಾಗಿ ಕುಂಡಿನಪುರಕ್ಕೆ ಹೋದನು.

೯೮–೯೯. ದಾರಿಯಲ್ಲಿ ಕನಕವರ್ಷನು ಕಾಡಿನಲ್ಲಿ ಅಶೋಕವೃಕ್ಷದ ಮೇಲೆ ಹತ್ತಿ ಕಾಡಿನೊಳಗಿರುವ ಕಿರಾತರಂತೆ ಪ್ರಾಣಿಹಿಂಸಕಗಳಾದ ಸಿಂಹ ಮೊದಲಾದ ವನ್ಯಮೃಗಗಳನ್ನು ಸಂಹರಿಸುತ್ತಾ ವಿದರ್ಭದೇಶವನ್ನು ಸೇರಿ ಅವನನ್ನು ಎದುರುಗೊಂಡ ರಾಜಾ ದೇವಶಕ್ತಿಯೊಡನೆ ಕುಂಡಿನಪುರವನ್ನು ಪ್ರವೇಶಿಸಿದನು.

೧೦೦. ಅಲ್ಲಿ ಪಟ್ಟಣದ ಸ್ತ್ರೀಯರಿಗೆ ನೇತ್ರೋತ್ಸವವುಂಟುಮಾಡುತ್ತಾ ವಿವಾಹಕ್ಕಾಗಿ ಎಲ್ಲ ಸಾಮಗ್ರಿಗಳನ್ನೂ ಸಜ್ಜುಗೊಳಿಸಲಾಗಿದ್ದ ರಾಜಮಂದಿರವನ್ನು ಪ್ರವೇಶಿಸಿದನು.

೧೦೧. ಅಲ್ಲಿ ದೇವಶಕ್ತಿರಾಜನ ಉದಾರವಾದ ಉಪಚಾರದಿಂದ ಸಂತುಷ್ಟನಾಗಿ ಕನಕವರ್ಷನು ಒಂದುದಿನ ಅಲ್ಲೇ ವಿಶ್ರಾಂತಿ ತೆಗೆದುಕೊಂಡನು.

೧೦೨. ಮಾರನೆಯ ದಿನ ದೇವಶಕ್ತಿಯು ರಾಜ್ಯವೊಂದನ್ನು ಬಿಟ್ಟು ಇತರ ಸರ್ವಸ್ವವನ್ನೂ ಕೊಟ್ಟು ಮಗಳಾದ ಮದನಸುಂದರಿಯನ್ನು ಕನಕವರ್ಷನಿಗೆ ಕನ್ಯಾದಾನ ಮಾಡಿಕೊಟ್ಟನು.

---

ತತೋ ಲಗ್ನಂ ವಿನಿಶ್ಚಿತ್ಯ ಪ್ರತಿದೂತಂ ಪ್ರಪೂಜ್ಯ ತಮ್ ।
ಅಸಕೃತ್ತಾಂ ಚ ವಿಜ್ಞಾಯ ರಕ್ತಾಂ ಮದನಸುಂದರೀಮ್ ॥ ೯೬
ತದ್ವಿವಾಹಾಯ ದುರ್ವಾರವೀರ್ಯೋ ನಿಃಶಂಕಮಾನಸಃ ।
ರಾಜಾ ಕನಕವರ್ಷೋಽಸೌ ಪ್ರಾಯಾತ್ತತ್ ಕುಂಡಿನಂ ಪುರಮ್ ॥ ೯೭
ಅಶೋಕಲತಯಾರೂಢಃ ಪ್ರತ್ಯಂತಾರಣ್ಯವಾಸಿನಃ ।
ಪ್ರಾಣಿಪ್ರಾಣಹರಾನ್ನಿಘ್ನನ್ ಸಿಂಹಾದೀನ್ ಶಬರಾನಿವ ॥ ೯೮
ವಿದರ್ಭಾನ್ ಪ್ರಾಪ್ಯ ನಗರಂ ಕುಂಡಿನಂ ತದ್ವಿವೇಶ ಸಃ ।
ನಿರ್ಗತೇನಾಗ್ರತೋ ರಾಜ್ಞಾ ಸಹಿತೋ ದೇವಶಕ್ತಿನಾ ॥ ೯೯
ತತ್ರ ಪೌರಪುರಂಧ್ರೀಣಾಂ ವಿಲಬ್ಧನಯನೋತ್ಸವಃ ।
ಸಜ್ಜಿತೋದ್ವಾಹಸಂಭಾರಂ ಪ್ರಾವಿಶದ್ರಾಜಮಂದಿರಮ್ ॥ ೧೦೦
ವಿಶಶ್ರಾಮ್ಯತಿ ಸ್ಮ ತತ್ರೈತತ್ಸ ದಿನಂ ಸಪರಿಚ್ಛದಃ ।
ದೇವಶಕ್ತಿನೃಪೋದಾರಕೃತಾಚಾರಾನುರಂಜಿತಃ ॥ ೧೦೧
ಅನ್ಯೇದ್ಯುರ್ದೇವಶಕ್ತಿಸ್ತಾಂ ತಸ್ಮೈ ಮದನಸುಂದರೀಮ್ ।
ಸುತಾಂ ರಾಜ್ಯೈಕಶೇಷೇಣ ಸರ್ವಸ್ವೇನ ಸಮಂ ದದೌ ॥ ೧೦೨

೧೦೩. ಅನಂತರ ಅಲ್ಲಿ ಒಂದು ವಾರ ಕಾಲ ಇದ್ದು ಕನಕವರ್ಷನು ನವವಧುವಿನೊಡನೆ ತನ್ನ ನಗರಕ್ಕೆ ಹಿಂದಿರುಗಿದನು.

೧೦೪. ಜಗತ್ತಿಗೆ ಮುದ ನೀಡುವ ಆ ರಾಜನು ಹೆಂಡತಿಯೊಡನೆ ಆ ನಗರಕ್ಕೆ ಬಂದಾಗ, ಬೆಳದಿಂಗಳೊಡನೆ ಚಂದ್ರನು ಬಂದಾಗ ಆಗುವಂತೆ ಸಂತೋಷ ಸಂಭ್ರಮಗಳು ತುಂಬಿಕೊಂಡುವು.

೧೦೫. ಆ ರಾಜನಿಗೆ ಬಹಳ ಜನ ಅಂತಃಪುರಸ್ತ್ರೀಯರಿದ್ದರೂ ಆ ಮದನಸುಂದರಿಯು ಅಚ್ಯುತನಿಗೆ ರುಕ್ಮಿಣಿಯಂತೆ ಅವನಿಗೆ ಪ್ರಾಣಕ್ಕಿಂತ ಮಿಗಿಲಾದಳು.

೧೦೬. ಸುಂದರವಾದ ರೆಪ್ಪೆಗಳುಳ್ಳ ಆ ದಂಪತಿಗಳ ಕಣ್ಣುಗಳು ಪರಸ್ಪರ ನೋಟಗಳಲ್ಲಿ ನೆಟ್ಟುಹೋಗಿ ಅವರು ಮನ್ಮಥನ ಬಾಣಗಳಿಂದ ಬೀಗಮುದ್ರೆ ಹಾಕಿದವರಂತಾದರು.

೧೦೭. ಒಮ್ಮೆ ಅಲ್ಲಿ ಅರಳಿದ ಕೇಸರಗಳುಳ್ಳ (ಕತ್ತಿನ ಕೂದಲುಗಳುಳ್ಳ), ಮಾನಿನಿಯರ ಕೋಪವೆಂಬ ಆನೆಗಳನ್ನು ಸೀಳಿಹಾಕುವ ವಸಂತಮಾಸವೆಂಬ ಸಿಂಹವು ಬಂದಿತು.

೧೦೮. ಅಲ್ಲಿ ವಸಂತಮಾಸವು ಪುಷ್ಪಬಾಣನಾದ ಮನ್ಮಥನಿಗಾಗಿ ಮಾವಿನ ಹೂಗೊಂಚಲುಗಳ ಬಿಲ್ಲುಗಳನ್ನು ಸಜ್ಜುಗೊಳಿಸುತ್ತಾ ಅವುಗಳನ್ನು ಸೇರಿಕೊಂಡ ದುಂಬಿಗಳ ಸಾಲನ್ನೇ ಹುರಿಯನ್ನಾಗಿ ಮಾಡಿತು.

---

ಸ್ಥಿತ್ವಾ ಚ ತತ್ರ ಸಪ್ತಾಹಂ ಸ ರಾಜಾ ನಗರಂ ನಿಜಮ್ ।
ಆಗಾತ್ಕನಕವರ್ಷೋಽಥ ನವವಧ್ವಾ ಸಮಂ ತಯಾ ॥ ೧೦೩

ಪ್ರಾಪ್ತೇ ಕಾಂತಾಯುತೇ ತಸ್ಮಿನ್ ಜಗದಾನಂದದಾಯಿನಿ ।
ಸ ಕೌಮುದೀಕೇ ಶಶಿನೀವಾಸೀತ್ತತ್ಸೋತ್ಸವಂ ಪುರಮ್ ॥ ೧೦೪

ಸಾಥ ಪ್ರಾಣಾಧಿಕಾ ತಸ್ಯ ರಾಜ್ಞೋ ಮದನಸುಂದರೀ ।
ಆಸೀದ್ಬಹ್ವವರೋಧಸ್ಯಾಪ್ಯಚ್ಯುತಸ್ಯೇವ ರುಕ್ಮಿಣೀ ॥ ೧೦೫

ಅನ್ಯೋನ್ಯವದನಾಸಕ್ತಲೋಚನೈಃ ಸ್ಮರಸಾಯಕೈಃ ।
ಕೀಲಿತಾವಿವ ತೌ ಚಾಸ್ತಾಂ ದಂಪತೀ ಚಾರುಪಕ್ಷ್ಮಭಿಃ ॥ ೧೦೬

ಏಕದಾ ಚಾಜಗಾಮಾತ್ರ ವಿಕಸತ್ಕೇಸರಾವಲಿಃ ।
ದಲಯನ್ ಮಾನಿನೀಮಾನಮಾತಂಗಂ ಮಧುಕೇಸರೀ ॥ ೧೦೭

ಲಗ್ನಾಲಿಮಾಲಾ ಮೌರ್ವೀಕಾಃ ಪುಷ್ಪೇಷೋಃ ಕುಸುಮಾಕರಃ ।
ಸಜ್ಜೀಚಕಾರಚೋತ್ಫುಲ್ಲಚೂತವಲ್ಲೀರ್ಧನುರ್ಲತಾಃ ॥ ೧೦೮

೧೧೯. ಮಂದಮಾರುತವು ಉಪವನಗಳನ್ನು ನಡುಗಿಸುವಂತೆ ಕಾಮದಿಂದ ಉದ್ದೀಪಿತವಾದ ಪಥಿಕ ವಿರಹಿಣಿಯರ ಹೃದಯಗಳನ್ನು ನಡುಗಿಸುತ್ತಾ ಬೀಸಿತು.

೧೨೦. ನದಿಗಳ ಪ್ರವಾಹಗಳು, ವೃಕ್ಷಗಳ ಪುಷ್ಪಗಳು, ಚಂದ್ರನ ಕಲೆಗಳು ಕ್ಷಯಿಸಿದರೂ ಮತ್ತೆ ಬರುತ್ತವೆ. ಆದರೆ ದೇಹಧಾರಿಗಳ ಯೌವನವು ಮತ್ತೆ ಬರುವುದಿಲ್ಲ.

೧೨೧. "ಓ ಜನರೇ, ಅಭಿಮಾನದ ಕಲಹವನ್ನು ತೊರೆದು ಪ್ರಿಯಜನರೊಡನೆ ಕೂಡಿ ರಮಿಸಿರಿ' ಎಂದು ಜನರಿಗೆ ಹೇಳುತ್ತಿವೆಯೋ ಎಂಬಂತೆ ಕೋಗಿಲೆಗಳ ಇಂಚರವು ಕೇಳಿಸುತ್ತಿತ್ತು.

೧೨೨. ಇಂತಹ ಸಮಯದಲ್ಲಿ ಕನಕವರ್ಷನು ಸಮಸ್ತ ಅಂತಃಪುರಜನರೊಡನೆ ವಿಹರಿಸುವುದಕ್ಕಾಗಿ ವಸಂತೋದ್ಯಾನವನ್ನು ಪ್ರವೇಶಿಸಿದನು.

೧೨೩–೧೨೪. ಅಲ್ಲಿ ಪರಿಜನರು ಧರಿಸಿದ್ದ ಕೆಂಪು ಬಟ್ಟೆಗಳು ಅಶೋಕವೃಕ್ಷಗಳ ಕಾಂತಿಯನ್ನು ಅಪಹರಿಸಿದ್ದುವು. ವಾರಾಂಗನೆಯರ ಗೀತೆಗಳು ಕೋಗಿಲೆಗಳ ಇಂಚರವನ್ನೂ ಭ್ರಮರಗಳ ಗುಂಜಾರವವನ್ನೂ ಅಪಹರಿಸಿದ್ದುವು. (ಅಂತಹ ಪ್ರದೇಶದಲ್ಲಿ) ರಾಜನು ಅಂತಃಪುರಸ್ತ್ರೀಯರಿದ್ದರೂ ಕೂಡ ಮದನಸುಂದರಿಯೊಡನೆ ತಾನೇ ಹೂವುಗಳನ್ನು ಕೀಳುವುದು ಮುಂತಾದ ವಿಲಾಸಗಳಿಂದ ವಿಹರಿಸಿದನು.

---

ವವೌ ಚೋಪವನಾನೀವ ಚೇತಾಂಸ್ಯಧ್ವಗಯೋಷಿತಾಮ್ ।
ಸಮುದ್ದೀಪಿತಕಾಮಾನಿ ಕಂಪಯನ್ ಮಲಯಾನಿಲಃ ॥ ೧೧೯

ಪೂರಾ ನದೀನಾಂ ಪುಷ್ಪಾಣಿ ತರೂಣಾಂ ಶಶಿನಃ ಕಲಾಃ ।
ಕ್ಷೀಣಾನಿ ಪುನರಾಯಾಂತಿ ಯೌವನಾನಿ ನ ದೇಹಿನಾಮ್ ॥ ೧೨೦

ಭೋ ಮುಕ್ತಮಾನಕಲಹಾ ರಮಧ್ವಂ ದಯಿತಾನ್ವಿತಾಃ ।
ಇತೀವ ಮಧುರಾಲಾಪಾಃ ಕೋಕಿಲಾ ಜಗದುರ್ಜನಾನ್ ॥ ೧೨೧

ತತ್ಕಾಲೇ ಚ ಮಧೂದ್ಯಾನಂ ವಿಹರ್ತುಂ ಪ್ರವಿವೇಶ ಸಃ ।
ರಾಜಾ ಕನಕವರ್ಷೋಽತ್ರ ಸರ್ವೈರಂತಃಪುರೈಃ ಸಹ ॥ ೧೨೨

ಮುಷ್ಣನ್ ಶ್ರಿಯಮಶೋಕಾನಾಂ ರಕ್ತೈಃ ಪರಿಜನಾಂಬರೈಃ ।
ಗೀತೈರ್ವಾರಾಂಗನಾನಾಂ ಚ ಕೋಕಿಲಭ್ರಮರಧ್ವನಿಮ್ ॥ ೧೨೩

ದೇವ್ಯಾ ಮದನಸುಂದರ್ಯಾ ಸಮಂ ತತ್ರ ಸ ಭೂಪತಿಃ ।
ಚಿಕ್ರೀಡ ಸಾವರೋಧೋಽಪಿ ಕುಸುಮಾವಚಯಾದಿಭಿಃ ॥ ೧೨೪

೧೧೫. ಮಧೂದ್ಯಾನದಲ್ಲಿ ಬಹಳ ಕಾಲ ವಿಹರಿಸಿದ ಮೇಲೆ ರಾಜನು ಸ್ನಾನಮಾಡಲೆಂದು ಗೋದಾವರೀನದಿಗೆ ಇಳಿದು ಅಂತಃಪುರಸ್ತ್ರೀಯರೊಡನೆ ಜಲಕ್ರೀಡೆಯನ್ನು ಆಡಿದನು.

೧೧೬–೧೧೭. ಕನಕವರ್ಷನ ಅಂಗನೆಯರು ಗೋದಾವರೀನದಿಯಲ್ಲಿದ್ದ ಕಮಲಗಳನ್ನು ತಮ್ಮ ಮುಖಗಳಿಂದ ಮೀರಿಸಿದರು. ತಮ್ಮ ಕಣ್ಣುಗಳಿಂದ ಕನ್ನೈದಿಲೆಗಳನ್ನು ಸೋಲಿಸಿದರು. ತಮ್ಮ ಕುಚಗಳಿಂದ ಚಕ್ರವಾಕಪಕ್ಷಿಗಳ ಜೋಡಿಗಳನ್ನು ಜಯಿಸಿದರು. ಮರಳಿನ ದಿಣ್ಣೆಗಳನ್ನು ನಿತಂಬಗಳಿಂದ ಗೆದ್ದರು. ಇದರಿಂದ ಕೋಪಗೊಂಡು, ಕ್ಷೋಭೆಯಿಂದ ಗೋದಾವರಿಯು ಹುಬ್ಬು ಗಂಟಿಕ್ಕಿಕೊಂಡಿದೆಯೋ ಎಂಬಂತೆ ಅದರ ಅಲೆಗಳು ತೋರುತ್ತಿದ್ದವು.

೧೧೮. ಆಗ ಜಲಕ್ರೀಡೆಯಿಂದ ಆ ಸ್ತ್ರೀಯರ ವಸ್ತ್ರಗಳು ಹಾರಾಡಿ ಅದರಿಂದ ಅವರ ಅವಯವಗಳ ಸೌಂದರ್ಯವು ವ್ಯಕ್ತವಾಗಿ ಅದರಲ್ಲಿ ರಾಜನ ಮನಸ್ಸು ರಮಿಸಿತು.

೧೧೯. ಒಬ್ಬ ರಾಣಿಯ ಸ್ತನದ ವಸ್ತ್ರವು ಜಾರಿಹೋಗಿದ್ದು ಅವಳ ಚೆನ್ನದ ಕಲಶಗಳಂತಿದ್ದ ಸ್ತನಗಳಿಗೆ ರಾಜನು ಬೊಗಸೆಯಿಂದ ನೀರು ಎರಚಿದನು.

೧೨೦. ಅದನ್ನು ನೋಡಿ ಮದನಸುಂದರಿಗೆ ಅಸಹನೆಯಿಂದ ಆ ರಾಣಿಯ ವಿಷಯದಲ್ಲಿ ಕೋಪ ಬಂದಿತು. ಅವಳು ಉದ್ವೇಗಗೊಂಡವಳಂತೆ "ನದಿಯನ್ನು ಇನ್ನು ಎಷ್ಟು ಕಲಕಬೇಕು ?' ಎಂದು ಕೇಳಿದಳು.

---

ವಿಹೃತ್ಯ ಚಾತ್ರ ಸುಚಿರಂ ಸ್ನಾತುಂ ಗೋದಾವರೀಂ ನೃಪಃ ।
ಅವತೀರ್ಯ ಜಲಕ್ರೀಡಾಂ ಸಾಂತಃಪುರಜನೋ ವ್ಯಧಾತ್ ॥ ೧೧೫
ಮುಖೈಃ ಪದ್ಮಾನಿ ನಯನೈರುತ್ಪಲಾನಿ ಪಯೋಧರೈಃ ।
ರಥಾಂಗನಾಮ್ನಾಂ ಯುಗ್ಮಾನಿ ನಿತಂಬೈಃ ಪುಲಿನಸ್ಥಲೀಃ ॥ ೧೧೬
ವಿಜಿತ್ಯ ತಸ್ಯಾಃ ಸರಿತಃ ಕ್ಷೋಭಯಾಮಾಸುರಾಶಯಮ್ ।
ತರಂಗದರ್ಶಿತಾಮರ್ಷಭ್ರೂಭಂಗಾಯಾಸ್ತದಂಗನಾಃ ॥ ೧೧೭
ಅಂಭೋವಿಹಾರವಿಚಲದ್ವಸ್ತ್ರವ್ಯಕ್ತಾಂಗಭಂಗಿಷು ।
ರೇಮೇ ಕನಕವರ್ಷಸ್ಯ ತಾಸು ತಸ್ಯ ತದಾ ಮನಃ ॥ ೧೧೮
ಏಕಾಂ ಚಾತಾಡಯದ್ರಾಜ್ಞೀಂ ಹೇಮಕುಂಭದ್ವಯೋಪಮೇ ।
ಕುಚಯುಗ್ಮೇ ಚ ವಿಸ್ರಸ್ತವಸನೇ ಕರವಾರಿಣಾ ॥ ೧೧೯
ತದ್ದೃಷ್ಟ್ವಾ ಸಾ ಚುಕೋಪಾಸ್ಯೈ ಸೇರ್ಷ್ಯಾ ಮದನಸುಂದರೀ ।
ಕಿಯತ್ ಕ್ಷೋಭ್ಯಾ ನದೀತ್ಯೇವ ಸೋದ್ವೇಗೇವ ಜಗಾದ ಚ ॥ ೧೨೦

೧೫೧. ಮತ್ತು ನೀರಿನಿಂದ ಮೇಲೆದ್ದು ಬೇರೆ ವಸ್ತ್ರವನ್ನು ಧರಿಸಿ ಕೋಪದಿಂದ ಪ್ರಿಯನ ಆ ಅಪರಾಧವನ್ನು ಸಖಿಯರಿಗೆ ಹೇಳುತ್ತಾ ತನ್ನ ಮಂದಿರಕ್ಕೆ ಹೋದಳು.

೧೫೨. ಅವಳ ಮನೋಭಾವವನ್ನು ಅರಿತುಕೊಂಡ ಕನಕವರ್ಷ ರಾಜನೂ ಜಲಕ್ರೀಡೆಯನ್ನು ನಿಲ್ಲಿಸಿ ಮದನಸುಂದರಿಯ ವಾಸಗೃಹಕ್ಕೆ ಬಂದನು.

---

ಉತ್ತೀರ್ಯ ಚಾಂಭಸಃ ಪ್ರಾಯಾದಾತ್ತವಸ್ತ್ರಾಂತರಾ ರುಷಾ ।
ಪ್ರಿಯಾಪರಾಧಂ ಶಂಸಂತೀ ತಂ ಸಖೀಭ್ಯಃ ಸ್ವಮಂದಿರಮ್ ॥ ೧೫೧
ತತೋ ಜ್ಞಾತಾಶಯಸ್ತಸ್ಯಾ ಜಲಕ್ರೀಡಾಂ ವಿಮುಚ್ಯ ಸಃ ।
ರಾಜಾ ಕನಕವರ್ಷೋಽಪಿ ತದ್ವಾಸಗೃಹಮಾಯಯೌ ॥ ೧೫೨

೧೨೩. ಅಲ್ಲಿ ಪಂಜರದಲ್ಲಿದ್ದ ಗಿಳಿಗಳು ಕೋಪದಿಂದ ಅವನನ್ನು ತಡೆಯುತ್ತಿದ್ದರೂ ಅವನು ಒಳಗೆ ಪ್ರವೇಶಿಸಿ ಕೋಪದಿಂದ ಪೀಡಿತಳಾಗಿದ್ದ ದೇವಿಯನ್ನು ನೋಡಿದನು.

೧೨೪-೧೨೭. ಅವಳು ಎಡಗೈಯಲ್ಲಿ ತನ್ನ ವಿಷಾದದಿಂದ ಕೂಡಿದ ಮುಖಕಮಲವನ್ನಿಟ್ಟುಕೊಂಡು ಸ್ವಚ್ಛವಾದ ಮುತ್ತಿನ ಮಣಿಗಳಂತಿದ್ದ ಕಣ್ಣೀರಿನ ಹನಿಗಳನ್ನು ಕಣ್ಣುಗಳಿಂದ ಸುರಿಸುತ್ತಾ, ಕಣ್ಣೀರಿನಿಂದ ಗದ್ಗದವಾದ ಧ್ವನಿಯಲ್ಲಿ, ಹೊರಹೊಮ್ಮಿದ ದಂತಕಾಂತಿಯಿಂದ ಮನೋಹರವಾದ ಮುಗ್ಧವಾದ ಅಪಭ್ರಂಶದ ಭಾಷೆಯಲ್ಲಿ ಹೀಗೆ ಹೇಳುತ್ತಿದ್ದಳು. 'ವಿರಹವನ್ನು ನೀನು ಸಹಿಸುವುದಾದರೆ ನಿನ್ನ ಅಭಿಮಾನವನ್ನು ತೊರೆಯಬೇಕು. ಓ ಹೃದಯವೇ ! ವಿರಹವನ್ನು ಸಹಿಸುವುದಾದರೆ ನಿನ್ನ ಅಭಿಮಾನವನ್ನು ಹೆಚ್ಚಿಸಿಕೋ. ಹೀಗೆ ಚೆನ್ನಾಗಿ ವಿವೇಚಿಸಿ ಒಂದನ್ನು ಅವಲಂಬಿಸಿ ನಿಲ್ಲು. ಎರಡು ದಡಗಳಲ್ಲೂ ಪಾದವನ್ನಿಟ್ಟರೆ ನೀನು ಮಧ್ಯದಲ್ಲಿ ಬಿದ್ದು ಖಂಡಿತ ಹಾಳಾಗುವೆ !'

೧೨೮. ಕೋಪದಲ್ಲಿಯೂ ಮನೋಹರಳಾಗಿದ್ದ ಅವಳನ್ನು ರಾಜನು ನೋಡಿ ಲಜ್ಜೆಯಿಂದಲೂ, ಭಯದಿಂದಲೂ ಅವಳ ಬಳಿಗೆ ಬಂದನು.

---

ವಾರ್ಯಮಾಣೋ ರುಷಾ ತತ್ರ ಪಂಜರಸ್ಥೈಃ ಶುಕೈರಪಿ ।
ಪ್ರವಿಶ್ಯ ಸ ದದರ್ಶಾಂತರ್ದೇವೀಂ ತಾಂ ಮನ್ಯುಪೀಡಿತಾಮ್ ॥ ೧೨೩
ವಾಮಹಸ್ತತಲನ್ಯಸ್ತವಿಷಣ್ಣವದನಾಂಬುಜಾಮ್ ।
ಸ್ವಚ್ಛಮುಕ್ತಾಫಲನಿಭೈಃ ಪತದ್ಭಿರ್ಬಾಷ್ಪಬಿಂದುಭಿಃ ॥ ೧೨೪
"ಜ[1]ಇ ವಿರಹೋ ಣ ಸಹಿಜ್ಜಇ ಮಾಣೋ (ಸುಹಾ ವಿ) ಪರಿವಜ್ಜಣೀಓ ತೇ ।
ವಿರಹೋ ಹಿಅಅ ಸಹಿಜ್ಜಇ ಮಾಣೋ (ಏವ್ವ) ಪರಿವಡ್ಢಣೀಓ ತೇ ॥ ೧೨೫
ಇಅ ಜಾಣಿಊಣ ಣಿಉಣಂ ಚಿಠ್ಠಸು ಓಲಂಬಿಊಣ ಇಕ್ಕದರಮ್ ।
ಉಹಅತಡದಿಣ್ಣಪಾಓ ಮಜ್ಝಣಿವಡಿಓ ಧುವಂ ವಿಣಿಸ್ಸಿಹಸಿ ॥" ೧೨೬
ಇತೀಮಂ ದ್ವಿಪದೀಖಂಡಂ ಪಠಂತೀಂ ಸಾಶ್ರುಗದ್ಗದಮ್ ।
ನಿರ್ಯದ್ದಂತಾಂಶುಹಾರಿಣ್ಯಾ ಗಿರಾಪಭ್ರಂಶಮುಗ್ಧಯಾ ॥ ೧೨೭
ವಿಲೋಕ್ಯ ಚ ತಥಾಭೂತಾಂ ತಾಂ ಕೋಪೇಽಪಿ ಮನೋರಮಾಮ್ ।
ಉಪಾಯಯೌ ಸಲಜ್ಜಶ್ಚ ಸಭಯಶ್ಚ ಸ ಭೂಪತಿಃ ॥ ೧೨೮

---

೧ ಯದಿ ವಿರಹೋ ನ ಸಹ್ಯತೇ ಮಾನಃ (ಸುಖಾದಪಿ) ಪರಿವರ್ಜನೀಯಸ್ತೇ ।
ವಿರಹೋ ಹೃದಯ ಸಹ್ಯತೇ ಮಾನಃ (ಏವ) ಪರಿವರ್ಧನೀಯಸ್ತೇ ॥ ೧
ಇತಿ ಜ್ಞಾತ್ವಾ ನಿಪುಣಂ ತಿಷ್ಠಸ್ವಾವಲಂಬ್ಯೈಕತರಮ್ ।
ಉಭಯತಟದತ್ತಪಾದೋ ಮಧ್ಯನಿಪತಿತೋ ಧ್ರುವಂ ವಿನಶಿಷ್ಯಸಿ ॥ ೨ ಇತಿಚ್ಛಾಯಾ

೧೭೯. ಅನಂತರ ಅವನಿಗೆ ಒಲಿಯದ ಅವಳನ್ನು ಆಲಿಂಗನ ಮಾಡಿ ಕನಕವರ್ಷನು ಪ್ರೀತಿಯಿಂದ ಮೃದುವಾದ ಮತ್ತು ವಿನಯದಿಂದ ಕೂಡಿದ ಮಾತುಗಳಿಂದ ಅವಳನ್ನು ಪ್ರಸನ್ನಗೊಳಿಸಲು ತೊಡಗಿದನು.

೧೮೦. ಪರಿವಾರಜನವು ವಕ್ರೋಕ್ತಿಗಳಿಂದ ಅವನು ಮಾಡಿದ ತಪ್ಪನ್ನು ಸೂಚಿಸುತ್ತಿರಲು ರಾಜನು ಅಪರಾಧಿಯಾದ ತನ್ನನ್ನು ನಿಂದಿಸುತ್ತಾ ಮದನಸುಂದರಿಯ ಕಾಲುಗಳಿಗೆ ಬಿದ್ದನು.

೧೮೧. ಅನಂತರ ಕರಗಿ ಸುರಿದ ಅವಳ ಕೋಪವೋ ಎಂಬಂತಿದ್ದ ಕಣ್ಣೀರಧಾರೆಗಳಿಂದ ಸಿಂಪಡಿಸುತ್ತಾ ರಾಣಿಯು ರಾಜನ ಕಂಠವನ್ನು ಸಂತೋಷದಿಂದ ಬಿಗಿದಪ್ಪಿದಳು.

೧೮೨. ಅನಂತರ ರಾಜನು ಹರ್ಷಗೊಂಡು ಕೋಪಬಿಟ್ಟು ಸಂತುಷ್ಟಳಾದ ಅವಳೊಡನೆ ಆ ದಿನವನ್ನು ಕಳೆದು ರಾತ್ರಿಯಲ್ಲಿ ಅವಳೊಡನೆ ಸಂಭೋಗವನ್ನು ಸೇವಿಸಿ ನಿದ್ರೆ ಹೋದನು.

೧೮೩. ಅವನು ಮಲಗಿದ್ದಾಗ ಅಕಸ್ಮಾತ್ತಾಗಿ ವಿಕಾರವಾದ ಹೆಂಗಸೊಬ್ಬಳು ಅವನ ಕತ್ತಿನಿಂದ ಒಂದೆಳೆ ಮುತ್ತಿನಸರವನ್ನೂ ತಲೆಯಿಂದ ಚೂಡಾರತ್ನವನ್ನೂ ಅಪಹರಿಸಿದಂತೆ ಸ್ವಪ್ನವಾಯಿತು.

೧೮೪. ಅದಾದನಂತರವೂ ಅವನು ನಾನಾವಿಧವಾದ ಪ್ರಾಣಿಗಳ ಅವಯವಗಳಿರುವ ಶರೀರವುಳ್ಳ ಬೇತಾಳವನ್ನು ಸ್ವಪ್ನದಲ್ಲಿ ಕಂಡನು. ಬಾಹುಯುದ್ಧದಲ್ಲಿ ತೊಡಗಿದ ಆ ಬೇತಾಳನನ್ನು ರಾಜನು ಭೂಮಿಯ ಮೇಲೆ ಕೆಡವಿದನು.

---

ಪರಾಙ್ಮುಖೀಮಥಾಶ್ಲಿಷ್ಯ ವಚೋಭಿಃ ಪ್ರೀತಿಪೇಶಲೈಃ ।
ಪ್ರವೃತ್ತೋಽಭೂತ್ಸವಿನಯೈಸ್ತಾಂ ಪ್ರಸಾದಯಿತುಂ ಚ ಸಃ ॥ ೧೭೯

ವಕ್ರೋಕ್ತಿಸೂಚಿತಾವದ್ಯೇ ಪರಿವಾರೇ ಪಪಾತ ಚ ।
ತಸ್ಯಾಶ್ಚರಣಯೋರ್ನಿಂದನ್ನಾತ್ಮಾನಮಪರಾಧಿನಮ್ ॥ ೧೮೦

ತತಸ್ತನ್ಮನ್ಯುನೇವಾಶ್ರುವಾರಿಣಾ ಗಲಿತೇನ ಸಾ ।
ಸಿಂಚಂತೀ ಕಂಠಲಗ್ನಾಸ್ಯ ಪ್ರಸಾದ ಮಹೀಪತೇಃ ॥ ೧೮೧

ಅಥೈಷ ಹೃಷ್ಟೋ ನೀತ್ವಾ ತದ್ದಿನಂ ಕುಪಿತತುಷ್ಟಯಾ ।
ರಾಜಾ ತಯಾಸಹಾಸೇವ್ಯ ರತಂ ನಿದ್ರಾಮಗಾನ್ನಿಶಿ ॥ ೧೮೨

ಸುಪ್ತೋ ದದರ್ಶ ಚಾಕಸ್ಮಾತ್ ಸ್ವಪ್ನೇ ವಿಕೃತಯಾ ಸ್ತ್ರಿಯಾ ।
ಹೃತಾಮೇಕಾವಲೀಂ ಕಂಠಾಚ್ಚೂಡಾರತ್ನಂ ಚ ಮೂರ್ಧತಃ ॥ ೧೮೩

ತತೋಽಪ್ಯಪಶ್ಯದ್ವೇತಾಲಂ ನಾನಾಪ್ರಾಣ್ಯಂಗವಿಗ್ರಹಮ್ ।
ಬಾಹುಯುದ್ಧೇ ಪ್ರವೃತ್ತಂ ಚ ತಂ ಸ ಭೂಮಾವಪಾತಯತ್ ॥ ೧೮೪

೧೩೫. ಬೇತಾಳದ ಬೆನ್ನಿನ ಮೇಲೆ ಕುಳಿತುಕೊಂಡ ರಾಜನನ್ನು ಆ ಬೇತಾಳವು ಪಕ್ಷಿಯಂತೆ ಹಾರಿ ಅಂತರಿಕ್ಷಕ್ಕೆ ಒಯ್ದು ಕಡೆಗೆ ಸಮುದ್ರದಲ್ಲಿ ಎಸೆಯಿತು.

೧೩೬. ಆದರೆ ಹೇಗೋ ಆ ಸಮುದ್ರದಿಂದ ಮೇಲೆ ದಾಟಿ ಬಂದ ಅವನು ಕಂಠದಲ್ಲಿ ಏಕಾವಲೀಸರವೂ ಶಿರಸ್ಸಿನಲ್ಲಿ ಚೂಡಾಮಣಿಯೂ ಹಿಂದಿನಂತೆಯೇ ಇದ್ದುದನ್ನು ಕಂಡನು.

೧೩೭. ಇದಾದನಂತರ ಎಚ್ಚತ್ತುಗೊಂಡ ರಾಜನು ಪ್ರಾತಃಕಾಲದಲ್ಲಿ ಪರಿಚಯಕ್ಕಾಗಿ ಬಂದ ಕ್ಷಪಣಕನನ್ನು ಈ ಸ್ವಪ್ನದ ಫಲದ ಬಗ್ಗೆ ಕೇಳಿದನು.

೧೩೮. ——————————। ಅಪ್ರಿಯವಾದುದನ್ನು ಹೇಳಬಾರದು. ಆದರೆ ನೀನು ಕೇಳಿದುದರಿಂದ ನಾನು ಹೇಗೆ ತಾನೆ ಅವುಗಳನ್ನು ಹೇಳದಿರಲಿ.[1]

೧೩೯. ನೀನು ನೋಡಿದ ಏಕಾವಲೀಸರವು ಅಪಹೃತವಾದದ್ದು ಹಾಗೂ ಚೂಡಾಮಣಿಯು ಅಪಹೃತವಾದದ್ದು ದೇವಿಯೊಡನೆ ಮತ್ತು ಪುತ್ರನೊಡನೆ ನಿನಗೆ ವಿಯೋಗವು ಉಂಟಾಗುವುದು ಎಂದು ಸೂಚಿಸುತ್ತದೆ.

೧೪೦. ಸಮುದ್ರವನ್ನು ದಾಟಿ ಮೇಲೆ ಬಂದ ನೀನು ಏಕಾವಳಿಯನ್ನೂ ಚೂಡಾರತ್ನವನ್ನೂ ಮತ್ತೆ ಪಡೆಯುವುದು ದುಃಖವು ಮುಗಿದು ಆ ದೇವಿ–ಪುತ್ರರ ಸಮಾಗಮವೂ ನಿನಗೆ ಉಂಟಾಗುವುದು ಎಂದು ಸೂಚಿಸುತ್ತದೆ.

---

ಪೃಷ್ಠೋಪವಿಷ್ಟಶ್ಚೋಡ್ಡೀಯ ಪಕ್ಷಿಣೇವ ವಿಹಾಯಸಾ ।
ನೀತ್ವಾ ತೇನ ನೃಪೋಽಂಭೋಧೌ ಬೇತಾಲೇನ ಸ ಚಿಕ್ಷಿಪೇ ॥ ೧೩೫

ತತಃ ಕಥಂಚಿದುತ್ತೀರ್ಣಃ ಪರಮೇಕಾವಲೀಂ ಗಲೇ ।
ಚೂಡಾಮಣಿಂ ಚ ತಂ ಮೂರ್ಧ್ನಿ ಪೂರ್ವವತ್‌ಸ್ಥಿತಮೈಕ್ಷತ ॥ ೧೩೬

ಏತದ್ದೃಷ್ಟ್ವಾ ಪ್ರಬುದ್ಧಃ ಸ ಪ್ರಾತಃ ಪರಿಚಯಾಗತಮ್ ।
ಅಸ್ಯ ಕ್ಷಪಣಕಂ ರಾಜಾ ಫಲಂ ಸ್ವಪ್ನಸ್ಯ ಪೃಷ್ಟವಾನ್ ॥ ೧೩೭

————————————————।
ನ ವಾಚ್ಯಮಪ್ರಿಯಂ ಕಿಂ ತು ಕಥಂ ಪೃಷ್ಟೋ ನ ವಚ್ಮಿ ಯೇ ॥ ೧೩೮

ಯಾ ತ್ವಯೈಕಾವಲೀ ದೃಷ್ಟಾ ಹೃತಾ ಚೂಡಾಮಣಿಸ್ತಥಾ ।
ಸೈಷ ದೇವ್ಯಾ ವಿಯೋಗಸ್ತೇ ಪುತ್ರೇಣ ಚ ಭವಿಷ್ಯತಿ ॥ ೧೩೯

ಪ್ರಾಪ್ತೇ ಚೈಕಾವಲೀ ರತ್ನೇ ಯದುತ್ತೀರ್ಣಾಬ್ಧಿನಾ ತ್ವಯಾ ।
ದುಃಖಾಂತೇ ಸೋಽಪಿ ಭಾವೀ ತೇ ದೇವೀ ಪುತ್ರಸಮಾಗಮಃ ॥ ೧೪೦

---

೧. ೧೩೮ನೆಯ ಶ್ಲೋಕದ ಪ್ರಥಮಪಾದವು ಈ ಆವೃತ್ತಿಯಲ್ಲಿ ಇಲ್ಲ.

೧೫೧. ಹೀಗೆ ಕ್ಷಪಣಕನು ಹೇಳಲು ಆ ರಾಜನು ವಿಚಾರ ಮಾಡಿ "ಇನ್ನೂ ನನಗೆ ಪುತ್ರನು ಹುಟ್ಟಿಯೇ ಇಲ್ಲ. ಮೊದಲು ಅವನು ಹುಟ್ಟಲಿ" ಎಂದು ಹೇಳಿದನು.

೧೫೨. ಅನಂತರ ಬಳಿಗೆ ಬಂದ ರಾಮಾಯಣ ಪಾಠಕನಿಂದ ರಾಜನು ಪುತ್ರನಿಗಾಗಿ ಕ್ಲೇಶಪಟ್ಟ ದಶರಥರಾಜನ ವಿಷಯವನ್ನು ಕೇಳಿದನು.

೧೫೩. ಕ್ಷಪಣಕನು ಹೋದಮೇಲೆ ಪುತ್ರನನ್ನು ಪಡೆಯಬೇಕೆಂಬ ಚಿಂತೆಯುಂಟಾದ ರಾಜ ಕನಕವರ್ಷನು ಖಿನ್ನನಾಗಿ ಆ ದಿನವನ್ನು ಕಳೆದನು.

೧೫೪. ಆ ರಾತ್ರಿಯಲ್ಲಿ ಏಕಾಕಿಯಾಗಿ ಶಯನದಲ್ಲಿ ಇದ್ದ ರಾಜನಿಗೆ ನಿದ್ರೆ ಬಾರದಿದ್ದಾಗ ಬಾಗಿಲನ್ನು ಮುಚ್ಚಿದ್ದರೂ ಇದ್ದಕ್ಕಿದ್ದಂತೆ ಒಬ್ಬ ಸ್ತ್ರೀ ಒಳಗೆ ಪ್ರವೇಶಿಸಿದುದನ್ನು ನೋಡಿದನು.

೧೫೫. ಅವಳ ರೂಪ ಸೌಮ್ಯವಾಗಿತ್ತು. ಅವಳು ವಿನಯವಂತಳಾಗಿ ಕಂಡಳು. ಅವಳಿಗೆ ರಾಜನು ಆಶ್ಚರ್ಯದೊಡನೆ ಮೇಲೆದ್ದು ಪ್ರಣಾಮ ಮಾಡಿದನು. ಆಗ ಅವನಿಗೆ ಅವಳು ಆಶೀರ್ವಾದವನ್ನು ಮಾಡಿ ಹೀಗೆ ಹೇಳಿದಳು.

೧೫೬. "ಮಗನೇ ! ನಾನು ನಿನ್ನ ತಂದೆಯ ಅಕ್ಕ. ರತ್ನಪ್ರಭಾ ಎಂಬುದು ನನ್ನ ಹೆಸರು. ನಾನು ನಾಗರಾಜನಾದ ವಾಸುಕಿಯ ಮಗಳು.

---

ಇತಿ ಕ್ಷಪಣಕೇನೋಕ್ತೇ ವಿಮೃಶ್ಯ ಸ ನೃಪೋಽಬ್ರವೀತ್ ।
ಪುತ್ರೋ ಮೇಽದ್ಯಾಪಿ ನಾಸ್ತ್ಯೇವ ಸ ತಾವಜ್ಜಾಯತಾಮಿತಿ ॥ ೧೫೧
ಅಥೋಪಯಾತಾದಶ್ರೌಷೀತ್ಸ ರಾಮಾಯಣಪಾಠಕಾತ್ ।
ಪುತ್ರಾರ್ಥಂ ವಿಹಿತಕ್ಲೇಶಂ ರಾಜಾ ದಶರಥಂ ನೃಪಮ್ ॥ ೧೫೨
ತೇನೋದ್ಭೂತಸುತಪ್ರಾಪ್ತಿಚಿಂತಃ ಕ್ಷಪಣಕೇ ಗತೇ ।
ರಾಜಾ ಕನಕವರ್ಷಸ್ತ್ಸಿನ್ನಿನಾಯ ವಿಮನಾ ದಿನಮ್ ॥ ೧೫೩
ರಾತ್ರಾವಕಸ್ಮಾಚ್ಚೈಕಾಕೀ ವಿನಿದ್ರಃ ಶಯನಸ್ಥಿತಃ ।
ದ್ವಾರೇಽನುದ್ಘಾಟಿತೇಽಪ್ಯಂತಃಪ್ರವಿಷ್ಟಾಂ ಸ್ತ್ರಿಯಮೈಕ್ಷತ ॥ ೧೫೪
ವಿನೀತಾ ಸೌಮ್ಯರೂಪಾ ಚ ಸಾ ತಂ ಸಾಶ್ಚರ್ಯಮುತ್ಥಿತಮ್ ।
ಕೃತಪ್ರಣಾಮಂ ದತ್ತಾಶೀಃ ಕ್ಷಿತೀಶ್ವರಮಭಾಷತ ॥ ೧೫೫
ಪುತ್ರ ಮಾಂ ವಿದ್ಧಿ ತನಯಾಂ ನಾಗರಾಜಸ್ಯ ವಾಸುಕೇಃ ।
ತ್ವತ್ಪಿತುರ್ಭಗಿನೀಂ ಜ್ಯೇಷ್ಠಾಂ ನಾಮ್ನಾ ರತ್ನಪ್ರಭಾಮಿಮಾಮ್ ॥ ೧೫೬

೧೪೭ ನಾನು ನಿನ್ನ ರಕ್ಷಣೆಗಾಗಿ ನಿನ್ನ ಬಳಿಯಲ್ಲಿ ಸದಾ ಕಣ್ಣಿಗೆ ಕಾಣದಂತೆ ಇರುತ್ತೇನೆ. ಇಂದು ನೀನು ಚಿಂತೆಯಿಂದಿದ್ದುದನ್ನು ನೋಡಿ ನಿನಗೆ ಕಾಣಿಸಿಕೊಂಡೆನು.

೧೪೮ ನಿನ್ನ ಚಿಂತೆಯನ್ನು ನನಗೆ ನೋಡಲಾಗಲಿಲ್ಲ. ಆದುದರಿಂದ ಚಿಂತೆಗೆ ಕಾರಣವನ್ನು ಹೇಳು." ಹೀಗೆ ತಂದೆಯ ಸೋದರಿಯಾದ ಅವಳು ಕೇಳಿದಾಗ ಆ ರಾಜನು ಅವಳಿಗೆ ಹೇಳಿದನು:

೧೪೯. "ಅಮ್ಮ ! ಈ ರೀತಿಯಾಗಿ ನಿನ್ನ ಅನುಗ್ರಹಕ್ಕೆ ಪಾತ್ರನಾದ ನಾನು ಧನ್ಯನು. ನನಗೆ ಮಗನು ಹುಟ್ಟದಿರುವುದೇ ನನ್ನ ಚಿಂತೆಗೆ ಕಾರಣ.

೧೫೦. ಅಮ್ಮ ! ದಶರಥ ಮೊದಲಾದ ರಾಜರ್ಷಿಗಳೂ ಕೂಡ ಹಿಂದೆ ಸ್ವರ್ಗಕ್ಕೋಸ್ಕರವಾಗಿ ಪುತ್ರಸಂತಾನವನ್ನು ಅಪೇಕ್ಷಿಸಿದರು. ಅಂತಹ ಪುತ್ರ ಸಂತಾನದ ವಿಷಯದಲ್ಲಿ ಇನ್ನು ನನ್ನಂತಹವರು ಹೇಗೆ ತಾನೆ ಅಪೇಕ್ಷೆ ಪಡಬಾರದು ?"

೧೫೧. ರಾಜನಾದ ಕನಕವರ್ಷನ ಮಾತನ್ನು ಕೇಳಿ ನಾಗಸ್ತ್ರೀಯಾದ ಆ ರತ್ನಪ್ರಭೆಯು ಸೋದರನ ಪುತ್ರನಾದ ಅವನಿಗೆ ಈ ರೀತಿ ಹೇಳಿದಳು.

೧೫೨. "ಹಾಗಿದ್ದರೆ, ಪುತ್ರನೇ ! ಒಂದು ಉಪಾಯವನ್ನು ಹೇಳುತ್ತೇನೆ. ಅದನ್ನು ನೀನು ಮಾಡು. ನೀನು ಹೋಗಿ ಪುತ್ರಪ್ರಾಪ್ತಿಗಾಗಿ ಕುಮಾರಸ್ವಾಮಿಯನ್ನು ಪ್ರಸನ್ನಗೊಳಿಸಿ ಬೇಡು.

---

ರಕ್ಷಾರ್ಥಂ ತೇಽಂತಿಕೇ ಶಶ್ವದದೃಷ್ಟಾ ಚ ವಸಾಮ್ಯಹಮ್ ।
ಅದ್ಯ ದೃಷ್ಟ್ವಾ ಸಚಿಂತಂ ತ್ವಾಮಾತ್ಮಾ ತೇ ದರ್ಶಿತೋ ಮಯಾ ॥ ೧೪೭
ನ ದ್ರಷ್ಟುಮುತ್ಸಹೇ ಗ್ಲಾನಿಂ ತವ ತದ್ಬ್ರೂಹಿ ಕಾರಣಮ್ ।
ಇತ್ಯುಕ್ತ ಸ ತಯಾ ರಾಜಾ ಪಿತೃಷ್ವಸ್ರಾ ಜಗಾದ ತಾಮ್ ॥ ೧೪೮
ಧನ್ಯೋಽಹಮಂಬ ಯಸ್ಯೈವಂ ತ್ವಂ ಪ್ರಸಾದಂ ಕರೋಷಿ ಮೇ ।
ಅನಿರ್ವೃತ್ತಿಂ ಚ ಮೇ ವಿದ್ಧಿ ಪುತ್ರಾಸಂಭವಹೇತುಕಾಮ್ ॥ ೧೪೯
ಅಪಿ ರಾಜರ್ಷಯೋ ಯತ್ರ ಪುರಾ ದಶರಥಾದಯಃ ।
ಸ್ವರ್ಗಾರ್ಥಮೈಚ್ಛಂಸ್ತತ್ರಾಂಬ ಕಥಂ ನೇಚ್ಛಂತು ಮಾದೃಶಾಃ ॥ ೧೫೦
ಏತತ್ಕನಕವರ್ಷಸ್ಯ ನೃಪತೇಸ್ತಸ್ಯ ಸಾ ವಚಃ ।
ಶ್ರುತ್ವಾ ರತ್ನಪ್ರಭಾ ನಾಗೀ ಭ್ರಾತುಃ ಪುತ್ರಮುವಾಚ ತಮ್ ॥ ೧೫೧
ತರ್ಹಿ ಪುತ್ರ ವದಾಮ್ಯೇಕಂ ಯಮುಪಾಯಂ ಕುರುಷ್ವ ತಮ್ ।
ಗತ್ವಾ ಸ್ವಾಮಿಕುಮಾರಂ ತ್ವಮೇತದರ್ಥಂ ಪ್ರಸಾದಯ ॥ ೧೫೨

೧೫೩. ಆಗ ವಿಘ್ನವನ್ನುಂಟು ಮಾಡುವುದಕ್ಕಾಗಿ ತಲೆಯ ಮೇಲೆ ದುಃಸಹವಾದ ಕುಮಾರಧಾರೆಯು ಬೀಳುತ್ತದೆ. ಆದರೆ ನಾನು ನಿನ್ನ ಶರೀರದೊಳಗೆ ಪ್ರವೇಶ ಮಾಡುತ್ತೇನೆ. ಆಗ ನನ್ನ ಪ್ರಭಾವದಿಂದ ಅದನ್ನು ನೀನು ಸಹಿಸುವೆ.

೧೫೪. ಬೇರೆ ವಿಘ್ನಗಳ ಸಮೂಹವನ್ನೂ ಗೆದ್ದು ನಿನ್ನ ಇಷ್ಟಾರ್ಥವನ್ನು ನೀನು ಪಡೆಯುವೆ". ಹೀಗೆ ಹೇಳಿ ನಾಗಸ್ತ್ರೀಯು ಅಂತರ್ಧಾನ ಹೊಂದಿದಳು. ರಾಜನು ಹರ್ಷಗೊಂಡು ಆ ರಾತ್ರಿಯನ್ನು ಕಳೆದನು.

೧೫೫. ಪ್ರಾತಃಕಾಲದಲ್ಲಿ ರಾಜ್ಯಭಾರವನ್ನು ಮಂತ್ರಿಗಳಲ್ಲಿ ಇಟ್ಟು ರಾಜನು ಪುತ್ರನನ್ನು ಪಡೆಯಬೇಕೆಂಬ ಆಸೆಯಿಂದ ಸ್ವಾಮಿಕುಮಾರನ ಪಾದಮೂಲಕ್ಕೆ ಹೋದನು.

೧೫೬. ಅಲ್ಲಿ ಪ್ರಭುವಾದ ಸ್ವಾಮಿಕುಮಾರನನ್ನು ಆರಾಧಿಸುವುದಕ್ಕಾಗಿ ತನ್ನ ಶರೀರದೊಳಗೆ ಪ್ರವೇಶಿಸಿದ ಆ ನಾಗಸ್ತ್ರೀಯು ಕೊಟ್ಟ ಬಲದಿಂದ ತೀವ್ರವಾದ ತಪಸ್ಸನ್ನು ಆಚರಿಸಿದನು.

೧೫೭. ಅನಂತರ ವಜ್ರಾಯುಧಕ್ಕೆ ಸದೃಶವಾದ ಕುಮಾರಜಲಧಾರೆಯು ನಿರಂತರವಾಗಿ ಆ ರಾಜನ ತಲೆಯ ಮೇಲೆ ಬೀಳಲು ತೊಡಗಿತು.

೧೫೮. ಕನಕವರ್ಷನು (ತನ್ನ) ಶರೀರದೊಳಗೆ ಪ್ರವೇಶಿಸಿದ ನಾಗಸ್ತ್ರೀಯ ಬಲದಿಂದ ಆ ಧಾರೆಯನ್ನು ಸಹಿಸಿಕೊಂಡನು. ಅನಂತರ ಅವನಿಗೆ ವಿಘ್ನವನ್ನುಂಟುಮಾಡಲು ಗುಹನು ಗಣಪತಿಯನ್ನು ಪ್ರೇರಿಸಿದನು.

---

ಕುಮಾರಧಾರಾಂ ವಿಘ್ನಾಯ ಪತಂತೀಂ ಮೂರ್ಧ್ನಿ ದುಃಸಹಾಮ್ ।
ಶರೀರಾಂತಃಪ್ರವಿಷ್ಟಾಯಾಃ ಪ್ರಭಾವಾನ್ಮೇ ಸಹಿಷ್ಯಸೇ ॥ ೧೫೩

ವಿಘ್ನಜಾತಂ ವಿಜಿತ್ಯಾನ್ಯದಪಿ ಪ್ರಾಪ್ಸ್ಯಸಿ ವಾಂಛಿತಮ್ ।
ಇತ್ಯುಕ್ತ್ವಾಂತರ್ದಧೇ ನಾಗೀ ರಾಜಾ ಹೃಷ್ಟೋಽಕ್ಷಿಪತ್ಕ್ಷಪಾಮ್ ॥ ೧೫೪

ಪ್ರಾತರ್ಮಂತ್ರಿಷು ವಿನ್ಯಸ್ಯ ರಾಜ್ಯಂ ಪುತ್ರಾಭಿಕಾಂಕ್ಷಯಾ ।
ಯಯೌ ಸ್ವಾಮಿಕುಮಾರಸ್ಯ ಪಾದಮೂಲಂ ಸ ಭೂಪತಿಃ ॥ ೧೫೫

ತತ್ರ ತೀವ್ರಂ ತಪಶ್ಚಕ್ರೇ ತಮಾರಾಧಯಿತುಂ ಪ್ರಭುಮ್ ।
ತಯಾರ್ಪಿತಬಲೋ ನಾಗ್ಯಾ ಶರೀರಾಂತಃಪ್ರವಿಷ್ಟಯಾ ॥ ೧೫೬

ತತೋಽಶನಿನಿಭಾ ರಾಜ್ಞಃ ಪತಿತುಂ ತಸ್ಯ ಮೂರ್ಧನಿ ।
ಕುಮಾರವಾರಿಧಾರಾ ಸಾ ಪ್ರವೃತ್ತಾಭೂದನಾರತಮ್ ॥ ೧೫೭

ಸ ಚ ಸೇಹೇ ಶರೀರಾಂತರ್ಗತನಾಗೀಬಲೇನ ತಾಮ್ ।
ತತಸ್ತಸ್ಯಾಧಿವಿಘ್ನಾರ್ಥಂ ಹೇರಂಬಂ ಪ್ರೈರಯದ್ಗುಹಃ ॥ ೧೫೮

೧೪೯. ಗಣಪತಿಯು ಅವನಿಗೆ ಆ ಧಾರೆಯ ಮಧ್ಯದಲ್ಲಿ ಸರ್ಪದ ಅತ್ಯಂತ ಉಗ್ರವಾದ ಮಹಾವಿಷವನ್ನು ಸೃಷ್ಟಿಸಿದನು. ಅದರಿಂದಲೂ ಅವನು ನಡುಗಲಿಲ್ಲ.

೧೫೦. ಅನಂತರ ದೇವತೆಗಳಿಂದಲೂ ಜಯಿಸಲು ಅಸಾಧ್ಯನಾದ ವಿನಾಯಕನು ಸಾಕ್ಷಾತ್ತಾಗಿ ಹೋಗಿ ಆ ಕನಕವರ್ಷನ ಎದೆಯ ಮೇಲೆ ದಂತದಿಂದ ಹೊಡೆಯಲು ಪ್ರಾರಂಭಿಸಿದನು.

೧೫೧. ಅನಂತರ ಗಣಪತಿದೇವನನ್ನು ದುರ್ಜಯನೆಂದು ತಿಳಿದು ರಾಜನಾದ ಕನಕವರ್ಷನು ಅದನ್ನು ಸಹಿಸಿಕೊಂಡೇ ಸ್ತೋತ್ರಗಳಿಂದ ಅವನನ್ನು ಪೂಜಿಸಲು ತೊಡಗಿದನು.

೧೫೨. "ಓ ವಿಘ್ನೇಶ್ವರನೇ ! ಸಮಸ್ತ ಇಷ್ಟಾರ್ಥಗಳ ಉತ್ತಮಸಿದ್ಧಿಯ ನಿಧಿಕಲಶಕ್ಕೆ ಸಮಾನನಾಗಿರುವವನೂ ಸರ್ಪಭೂಷಣನೂ ಲಂಬೋದರನೂ ಆದ ನಿನಗೆ ನಮಸ್ಕಾರ.

೧೫೩. ಓ ಗಜಾನನನೇ ! ಅನಾಯಾಸದಿಂದ ಸೊಂಡಿಲನ್ನು ಮೇಲಕ್ಕೆತ್ತಿ ಅದರಿಂದ ಬ್ರಹ್ಮನ ಆಸನಕಮಲವನ್ನೇ ಕೊಡವಿ ಕೆಡವಿ ಬ್ರಹ್ಮದೇವನನ್ನೇ ನಡುಗಿಸಿದವನೇ ! ನಿನಗೆ ಜಯವಾಗಲಿ.

೧೫೪. ಶಂಕರಪ್ರಿಯನೇ ! ಲೋಕಕ್ಕೆ ಏಕಮಾತ್ರ ರಕ್ಷಕನಾದ ನೀನು ಸಂತುಷ್ಟನಾಗದಿದ್ದರೆ ದೇವತೆಗಳಿಗೂ, ರಾಕ್ಷಸರಿಗೂ ಹಾಗೂ ಮುನೀಂದ್ರರುಗಳಿಗೂ ಇಷ್ಟಸಿದ್ಧಿಗಳು ಉಂಟಾಗುವುದಿಲ್ಲ.

---

ಹೇರಂಬಶ್ಚಾಸೃಜತ್ತತ್ರ ಧಾರಾಮಧ್ಯೇ ಮಹಾವಿಷಮ್ ।
ತಸ್ಯಾಜಗರಮತ್ಯುಗ್ರಂ ನ ಸ ತೇನಾಪ್ಯಕಂಪತ ॥ ೧೪೯
ತತೋ ವಿನಾಯಕಃ ಸಾಕ್ಷಾದ್ದಂತಾಘಾತಾನುರಃಸ್ಥಲೇ ।
ಏತ್ಯ ದಾತುಂ ಪ್ರವವೃತೇ ತಸ್ಯಾಜಯ್ಯಃ ಸುರೈರಪಿ ॥ ೧೫೦
ಮತ್ವಾ ತಂ ದುರ್ಜಯಂ ದೇವಂ ಸೋಽಥ ಸ್ತುತಿಭಿರರ್ಚಿತಮ್ ।
ರಾಜಾ ಕನಕವರ್ಷಸ್ತದ್ವಿಷಹ್ಯೈವೋಪಚಕ್ರಮೇ ॥ ೧೫೧
ನಮಃ ಸರ್ವಾರ್ಥಸಂಸಿದ್ಧಿನಿಧಿಕುಂಭೋಪಮಾತ್ಮನೇ ।
ಲಂಬೋದರಾಯ ವಿಘ್ನೇಶ ವ್ಯಾಲಾಲಂಕರಣಾಯ ತೇ ॥ ೧೫೨
ಲೀಲೋತ್ಕ್ಷಿಪ್ತಕರಾಘಾತವಿಧುತಾಸನಪಂಕಜಮ್ ।
ಬ್ರಹ್ಮಾಣಮಪಿ ಸೋತ್ಕಂಪಂ ಕುರ್ವನ್‌ಜಯ ಗಜಾನನ ॥ ೧೫೩
ಸುರಾಸುರಮುನೀಂದ್ರಾಣಾಮಪಿ ಸಂತಿ ನ ಸಿದ್ಧಯಃ ।
ಅತುಷ್ಟೇ ತ್ವಯಿ ಲೋಕೈಕಶರಣ್ಯೇ ಶಂಕರಪ್ರಿಯ ॥ ೧೫೪

೧೬೫–೧೬೬. ಕುಂಭದಂತಿರುವ ಹೊಟ್ಟೆಯುಳ್ಳವನು, ಮೊರಗಳಂತಿರುವ ಕಿವಿಗಳುಳ್ಳವನು, ಶಿವಗಣಗಳ ಅಧ್ಯಕ್ಷನಾದವನು, ಮದದಿಂದ ಉಬ್ಬಿದವನು, ಪಾಶವನ್ನು ಕೈಯಲ್ಲಿ ಹೊಂದಿರುವವನು, ಅಂಬರೀಷನು, ಜಂಬಕನು, ತ್ರಿಶೂಲಾಯುಧವುಳ್ಳವನು, ಎಂದು ಮೊದಲಾದ ಪಾಪನಾಶಕವೂ ಆಯಾಸಂಖ್ಯೆಯ ಸ್ಥಾನಗಳಿಗೆ ನಿಯತವಾದವೂ ಆದ ಅರವತ್ತೆಂಟು ನಾಮಗಳಿಂದ ಸುರಶ್ರೇಷ್ಠರು ನಿನ್ನನ್ನು ಸ್ತುತಿಸಿದರು.

೧೬೭ ಪ್ರಭುವೇ ! ನಿನ್ನನ್ನು ಸ್ಮರಿಸುವವನಿಗೂ ಸ್ತುತಿಸುವವನಿಗೂ ಯುದ್ಧ, ರಾಜಗೃಹ, ಜೂಜು, ಕಳ್ಳರು, ಬೆಂಕಿ, ದುಷ್ಟಮೃಗ ಮೊದಲಾದವುಗಳಿಂದ ಉಂಟಾದ ಭಯವು ನಾಶವಾಗುತ್ತದೆ."

೧೬೮. ಹೀಗೆ ಈ ಸ್ತುತಿ ವಚನಗಳಿಂದಲೂ ಬಹುವಿಧವಾದ ಇತರ ವಚನಗಳಿಂದಲೂ ರಾಜನಾದ ಕನಕವರ್ಷನು ಆ ವಿಘ್ನೇಶ್ವರನನ್ನು ಪೂಜಿಸಿದನು.

೧೬೯. ಆಗ "ನಾನು ಸಂತುಷ್ಟನಾಗಿದ್ದೇನೆ. ನಿನಗೆ ವಿಘ್ನವನ್ನು ಉಂಟುಮಾಡುವುದಿಲ್ಲ. ಪುತ್ರನನ್ನು ಹೊಂದು" ಎಂದು ಹೇಳಿ ಆ ವಿಘ್ನೇಶ್ವರನು ಅಂತರ್ಧಾನ ಹೊಂದಿದನು.

೧೭೦. ಅನಂತರ ಸ್ವಾಮಿಕುಮಾರನು ಅವನ ಧಾರೆಯನ್ನು ಧರಿಸಿದ ರಾಜನನ್ನು ಕುರಿತು ಹೇಳಿದನು. "ಧೀರನೇ ! ನಿನ್ನ ವಿಷಯದಲ್ಲಿ ಸಂತುಷ್ಟನಾಗಿದ್ದೇನೆ. ಅದರಿಂದ ವರವನ್ನು ಬೇಡು."

---

ಘಟೋದರಃ ಶೂರ್ಪಕರ್ಣೋ ಗಣಾಧ್ಯಕ್ಷೋ ಮದೋತ್ಕಟಃ ।
ಪಾಶಹಸ್ತೋಽಂಬರೀಷಶ್ಚ ಜಂಬಕಸ್ತ್ರಿಶಿಖಾಯುಧಃ ॥ ೧೬೫
ಏವಮಾದ್ಯೈಃ ಸ್ತುವಂತಿ ಸ್ಮ ಪಾಪಘ್ನೈರಷ್ಟಷಷ್ಟಿಭಿಃ ।
ತತ್ಸಂಖ್ಯಸ್ಥಾನನಿಯತೈರ್ನಾಮಭಿಸ್ತ್ವಾಂ ಸುರೋತ್ತಮಾಃ ॥ ೧೬೬
ಸ್ಮರತಃ ಸ್ತುವತಶ್ಚ ತ್ವಾಂ ವಿನಶ್ಯತಿ ಭಯಂ ಪ್ರಭೋ ।
ರಣರಾಜಕುಲದ್ಯೂತಚೌರಾಗ್ನಿಶ್ವಾಪದಾದಿಜಮ್ ॥ ೧೬೭
ಇತಿ ಸ್ತುತಿಪದ್ಯೈರೇತೈರನ್ಯೈರ್ಬಹುವಿಧೈಶ್ಚ ಸಃ ।
ನೃಪಃ ಕನಕವರ್ಷಸ್ತಂ ವಿಘ್ನೇಶ್ವರಮಪೂಜಯತ್ ॥ ೧೬೮
ತುಷ್ಟೋಽಸ್ಮಿ ನ ಕರಿಷ್ಯಾಮಿ ವಿಘ್ನಂ ತೇ ಪುತ್ರಮಾಪ್ನುಹಿ ।
ಇತ್ಯುಕ್ತ್ವಾಂತರ್ದಧೇ ತತ್ರ ರಾಜ್ಞಸ್ತಸ್ಯ ಸ ವಿಘ್ನಜಿತ್ ॥ ೧೬೯
ತತಃ ಸ್ವಾಮಿಕುಮಾರಸ್ತಂ ತದ್ಧಾರಾಧಾರಿಣಂ ನೃಪಮ್ ।
ಉವಾಚ ಧೀರ ತುಷ್ಟೋಽಸ್ಮಿ ತವ ಯಾಚಸ್ವ ತದ್ವರಮ್ ॥ ೧೭೦

೧೭೧. ಅದನ್ನು ಕೇಳಿ ಪರಮಸಂತೋಷದಿಂದ ರಾಜನು ಆ ದೇವನನ್ನು ಕುರಿತು "ಪ್ರಭುವೇ ! ನಿನ್ನ ಅನುಗ್ರಹದಿಂದ ನನಗೆ ಪುತ್ರನು ಹುಟ್ಟಲಿ" ಎಂದು ವಿಜ್ಞಾಪಿಸಿದನು.

೧೭೨. "ಹಾಗೆಯೇ ಆಗಲಿ. ನನ್ನ ಗಣದ ಅಂಶವನ್ನು ಹೊಂದಿರುವ ಪುತ್ರನು ನಿನಗೆ ಜನಿಸುವನು. ಅವನು ಹಿರಣ್ಯವರ್ಷ ಎಂಬ ಹೆಸರಿನವನಾಗುತ್ತಾನೆ."

೧೭೩. ಹೀಗೆ ಹೇಳಿ ಮಯೂರವಾಹನನಾದ ಕುಮಾರಸ್ವಾಮಿಯು ವಿಶೇಷವಾದ ಅನುಗ್ರಹವನ್ನು ಮಾಡಲು ಅಪೇಕ್ಷಿಸಿ ಆ ರಾಜನನ್ನು ಗರ್ಭಗೃಹದ ಒಳಗೆ ಪ್ರವೇಶಿಸಲು ಕರೆದನು.

೧೭೪. ಅದರಿಂದಾಗಿ ಆ ರಾಜನ ದೇಹದಿಂದ ಅದೃಶ್ಯಳಾಗಿ ಆ ನಾಗಸ್ತ್ರೀಯು ಹೊರಗೆ ಹೋದಳು. ಏಕೆಂದರೆ ಶಾಪಭೀತಿಯಿಂದ ಸ್ತ್ರೀಯರು ಕುಮಾರಸ್ವಾಮಿಯ ಮಂದಿರವನ್ನು ಪ್ರವೇಶಿಸುವುದಿಲ್ಲ.

೧೭೫. ಅನಂತರ ಆ ಕನಕವರ್ಷನು ತನ್ನ ಮನುಷ್ಯ ತೇಜಸ್ಸಿನಿಂದ ಯುಕ್ತನಾಗಿ ಅಗ್ನಿಪುತ್ರನಾದ ಆ ಕುಮಾರದೇವನ ಗರ್ಭಗೃಹವನ್ನು ಪ್ರವೇಶಿಸಿದನು.

೧೭೬. ಆ ಕುಮಾರದೇವನೂ ಕೂಡ ನಾಗಸ್ತ್ರೀಯು ನೆಲೆನಿಲ್ಲದ ಕಾರಣದಿಂದ ಹಿಂದಿನ ತೇಜಸ್ಸನ್ನು ಕಳೆದುಕೊಂಡಂತಿದ್ದ ಆ ರಾಜನನ್ನು ನೋಡಿ "ಇದು ಏನಿರಬಹುದು ?" ಎಂದು ಚಿಂತಿಸಿದನು.

---

ತಚ್ಛ್ರುತ್ವಾ ಸ ಪ್ರಹೃಷ್ಟಸ್ತಂ ದೇವಂ ರಾಜಾ ವ್ಯಜಿಜ್ಞಪತ್ ।
ತ್ವತ್ಪ್ರಸಾದೇನ ಮೇ ನಾಥ ಸೂನುರುತ್ಪದ್ಯತಾಮಿತಿ ॥ ೧೭೧
ಏವಮಸ್ತು ಸುತೋ ಭಾವೀ ಭವತೋ ಮದ್ಗಣಾಂಶಜಃ ।
ನಾಮ್ನಾ ಹಿರಣ್ಯವರ್ಷಶ್ಚ ಭವಿಷ್ಯತಿ ಸ ಭೂಪತೇ ॥ ೧೭೨
ಇತ್ಯುಕ್ತ್ವಾ ಗರ್ಭಗೇಹಾಂತಃಪ್ರವೇಶಾಯ ತಮಾಹ್ವಯತ್ ।
ಸವಿಶೇಷಪ್ರಸಾದೇಪ್ಸುರ್ನೃಪತಿಂ ಬರ್ಹಿವಾಹನಃ ॥ ೧೭೩
ತೇನಾದೃಶ್ಯಾಸ್ಯ ನಿರಗಾನ್ನಾಗೀ ದೇಹಾನ್ನೃಪಸ್ಯ ಸಾ ।
ವಿಶಂತಿ ಶಾಪಭೀತಾ ಹಿ ನ ಕುಮಾರಗೃಹಂ ಸ್ತ್ರಿಯಃ ॥ ೧೭೪
ತತಃ ಕನಕವರ್ಷೋಽಸೌ ಸ್ವೇನ ಮಾನುಷತೇಜಸಾ ।
ವಿವೇಶ ಗರ್ಭಭವನಂ ತಸ್ಯ ದೇವಸ್ಯ ಪಾವಕೇಃ ॥ ೧೭೫
ಸ ತಂ ನಾಗ್ಯನಧಿಷ್ಠಾನಾತ್ ಪೂರ್ವತೇಜೋವಿನಾಕೃತಮ್ ।
ದೃಷ್ಟ್ವಾ ನೃಪಂ ಕಿಮೇತತ್ಸ್ಯಾದಿತಿ ದೇವೋಽಪ್ಯಚಿಂತಯತ್ ॥ ೧೭೬

೧೭೭. ನಾಗಸ್ತ್ರೀಯ ಬಲದಿಂದ ಕಠಿಣವ್ರತವನ್ನು ರಾಜನು ನಿರ್ವಹಿಸಿದನೆಂಬುದನ್ನು ಧ್ಯಾನದಿಂದ ತಿಳಿದು ಗುಹದೇವನು ಕ್ರುದ್ಧನಾಗಿ ಶಪಿಸಿದನು.

೧೭೮. "ದುಷ್ಟ ! ನೀನು ಕಪಟವನ್ನು ಮಾಡಿದುದರಿಂದ (ಮುಂದೆ) ಹುಟ್ಟಿದ ಮಗನಿಂದಲೂ ಮಹಾದೇವಿಯಿಂದಲೂ ನಿನಗೆ ವಿಯೋಗವು ಉಂಟಾಗುವುದು."

೧೭೯. ಸಿಡಿಲಿನಂತೆ ಭಯಂಕರವಾದ ಈ ಶಾಪವನ್ನು ಕೇಳಿ ಮಹಾಕವಿಯಾದ ಆ ರಾಜನು ಮೋಹವನ್ನು ಬಿಟ್ಟು ಆ ಗುಹದೇವನನ್ನು ಸೂಕ್ತಿಗಳಿಂದ ಸ್ತುತಿಸಿದನು.

೧೮೦. ಆ ಸೂಕ್ತಿಗಳಿಂದ ಸಂತುಷ್ಟನಾದ ಷಣ್ಮುಖನು ರಾಜನನ್ನು ಕುರಿತು ಹೇಳಿದನು: "ರಾಜನೇ ! ನಿನ್ನ ಸೂಕ್ತಿಗಳಿಂದ ಸಂತೋಷಗೊಂಡಿದ್ದೇನೆ. ಆದುದರಿಂದ ನಿನಗೆ ಶಾಪಾಂತವನ್ನು ಹೇಳುತ್ತೇನೆ.

೧೮೧. ಒಂದು ವರ್ಷಕಾಲ ನಿನಗೆ ಪತ್ನೀಪುತ್ರರ ವಿಯೋಗವು ಉಂಟಾಗುವುದು. ಮತ್ತು ನೀನು ಮೂರು ಅಪಮೃತ್ಯುಗಳಿಂದ ಮುಕ್ತನಾಗಿ ಅಲ್ಲಿಂದ ಮುಂದೆ ಅವರನ್ನು ಹೊಂದುವೆ."

೧೮೨. ಹೀಗೆ ಹೇಳಿ ಷಣ್ಮುಖನು ಮಾತನ್ನು ನಿಲ್ಲಿಸಲು ರಾಜನು ಆ ದೇವನಿಗೆ ನಮಸ್ಕರಿಸಿ ಅವನ ಅನುಗ್ರಹಾಮೃತದಿಂದ ತೃಪ್ತನಾಗಿ ತನ್ನ ಪಟ್ಟಣಕ್ಕೆ ಬಂದನು.

೧೮೩. ಅಲ್ಲಿ ಬೆಳದಿಂಗಳಿನಲ್ಲಿ ಚಂದ್ರನ ಅಮೃತಪ್ರವಾಹದಂತೆ ಆ ರಾಜನಿಗೆ ರಾಣಿಯಾದ ಮದನಸುಂದರಿಯಲ್ಲಿ ಪುತ್ರನು ಹುಟ್ಟಿದನು.

---

ಜ್ಞಾತ್ವಾ ನಾಗೀಬಲವ್ಯಾಜನಿರ್ವ್ಯೂಢವಿಷಮವ್ರತಮ್ ।
ಪ್ರಣಿಧಾನಾಚ್ಚ ತಂ ಕ್ರುದ್ಧಃ ಶಶಾಪ ಸ ನೃಪಂ ಗುಹಃ ॥ ೧೭೭
ವ್ಯಾಜಸ್ತ್ವಯಾ ಕೃತೋ ಯಸ್ಮಾದತೋ ಜಾತೇನ ಸೂನುನಾ ।
ಮಹಾದೇವ್ಯಾ ಚ ದುರ್ದಾಂತವಿಯೋಗಸ್ತೇ ಭವಿಷ್ಯತಿ ॥ ೧೭೮
ನಿರ್ಘಾತದಾರುಣಂ ಶ್ರುತ್ವಾ ಶಾಪಮೇತಂ ಸ ಭೂಪತಿಃ ।
ಸೂಕ್ತೈಸ್ತುಷ್ಟಾವ ತಂ ದೇವಂ ಮೋಹಂ ಮುಕ್ತ್ವಾ ಮಹಾಕವಿಃ ॥ ೧೭೯
ಸ ಸುಭಾಷಿತತುಷ್ಟೋಽಥ ಷಣ್ಮುಖಸ್ತಮಭಾಷತ ।
ರಾಜಂಸ್ತುಷ್ಟೋಽಸ್ಮಿ ಸೂಕ್ತೈಸ್ತೇ ಶಾಪಾಂತಂ ತವ ವಚ್ಮಿ ತತ್ ॥ ೧೮೦
ಭವಿಷ್ಯತ್ಯಬ್ದಮೇಕಂ ತೇ ಪತ್ನೀಪುತ್ರವಿಯುಕ್ತತಾ ।
ಮುಕ್ತೋಽಪಮೃತ್ಯು ತ್ರಿತಯಾತ್ತೌ ಚ ಪ್ರಾಪ್ಸ್ಯಸ್ಯತಃ ಪರಮ್ ॥ ೧೮೧
ಇತ್ಯುಕ್ತ್ವಾ ವಿರತಾಲಾಪೇ ಷಣ್ಮುಖೇ ಸ ಪ್ರಣಮ್ಯ ತಮ್ ।
ತತ್ಪ್ರಸಾದಸುಧಾತೃಪ್ತೋ ರಾಜಾ ಸ್ವಪುರಮಾಯಯೌ ॥ ೧೮೨
ತತ್ರ ತಸ್ಯಾಮೃತಸ್ಯಂದೋ ಜ್ಯೋತ್ಸ್ನಾಯಾಮಿವ ಶೀತಗೋಃ ।
ದೇವ್ಯಾಂ ಮದನಸುಂದರ್ಯಾಂ ಕ್ರಮಾತ್ಸೂನುರಜಾಯತ ॥ ೧೮೩

೧೪೪. ಪುತ್ರನ ಮುಖವನ್ನು ನೋಡಿ ಮತ್ತೆ ಮತ್ತೆ ಆ ರಾಜನು ಮತ್ತು ರಾಣಿಯು, ಇಬ್ಬರೂ ಅತ್ಯಂತ ಸಂತೋಷದಿಂದ ತಮ್ಮೊಳಗೇ ತಾವು ನಿಲ್ಲದಂತಾದರು.

೧೪೫. ರಾಜನು ತನ್ನ ಕನಕವರ್ಷ ಎಂಬ ಹೆಸರನ್ನು ಭುವಿಯಲ್ಲಿ ಸಾರ್ಥಕಗೊಳಿಸುತ್ತಾ ಧನವನ್ನು ವರ್ಷಿಸುತ್ತಾ ಉತ್ಸವವನ್ನು ಆಚರಿಸಿದನು.

೧೪೬. ಐದು ರಾತ್ರಿಗಳು ಕಳೆದ ಮೇಲೆ ಆರನೆಯ ರಾತ್ರಿಯಲ್ಲಿ ಪ್ರಸೂತಿ ಗೃಹದಲ್ಲಿ ರಕ್ಷಾವಿಧಿಗಳನ್ನು ಮಾಡಿದ್ದರೂ ಅನಿರೀಕ್ಷಿತವಾಗಿ ಮೇಘವು ಆವರಿಸಿತು.

೧೪೭. ಜಾಗೃತನಾಗಿಲ್ಲದ ರಾಜನ ರಾಜ್ಯವನ್ನು, ಅಲಕ್ಷಿಸಿದ ಶತ್ರುವು ಆಕ್ರಮಿಸುವಂತೆ ಅಲ್ಲಿ ಬೆಳೆಯುತ್ತಾ ಹೋದ ಆ ಮೇಘವು ಕ್ರಮವಾಗಿ ಅಂತರಿಕ್ಷವನ್ನು ಆವರಿಸಿತು.

೧೪೮. ಅನಂತರ ಬಿರುಗಾಳಿಯೆಂಬ ಮದವೇರಿದ ಆನೆಯು ಮದಜಲದ ಪ್ರವಾಹವನ್ನು ಸುರಿಸುವಂತೆ ವೃಷ್ಟಿಯ ಧಾರಾಪ್ರವಾಹಗಳನ್ನು ಸುರಿಸುತ್ತಾ ಮರಗಳ ಬುಡಗಳನ್ನು ಕಿತ್ತು ಹಾಕುತ್ತಾ ವೇಗವಾಗಿ ಪ್ರಸರಿಸಲು ಆರಂಭಿಸಿತು.

೧೪೯. ಆ ಕ್ಷಣದಲ್ಲಿ ಅಗಳಿ ಹಾಕಿದ್ದರೂ ಬಾಗಿಲನ್ನು ತೆರೆದು ಭಯಂಕರಳಾದ ಒಬ್ಬ ಸ್ತ್ರೀಯು ಚೂರಿಯನ್ನು ಕೈಯಲ್ಲಿ ಹಿಡಿದು ಆ ಪ್ರಸೂತಿಗೃಹವನ್ನು ಪ್ರವೇಶಿಸಿದಳು.

೧೫೦. ಅವಳು ಮದನಸುಂದರಿಯ ಸ್ತನದಲ್ಲಿ ಮುಖವಿಟ್ಟುಕೊಂಡಿದ್ದ ಪುತ್ರನನ್ನು ದೇವಿಯಿಂದ ಅಪಹರಿಸಿ ಪರಿಜನವರ್ಗವನ್ನು ಸಂಮೋಹಗೊಳಿಸಿ ಓಡಿ ಹೋದಳು.

---

ದೃಷ್ಟ್ವಾ ಸುತಮುಖಂ ಸೋಽಥ ರಾಜಾ ರಾಜ್ಞೀ ಚ ಸಾ ಮುಹುಃ ।
ಅತ್ಯಾನಂದಸಮಾಯುಕ್ತೌ ನಾವರ್ತೇತಾಂ ತದಾತ್ಮನಿ ॥ ೧೪೪

ತತ್ಕಾಲಂ ಚೋತ್ಸವಂ ಚಕ್ರೇ ವಸು ವರ್ಷನ್ ಸ ಭೂಪತಿಃ ।
ನಿಜಾಂ ಕನಕವರ್ಷಾಖ್ಯಾಂ ನಯನ್‌ಭುವಿ ಯಥಾರ್ಥತಾಮ್ ॥ ೧೪೫

ಪಂಚರಾತ್ರೇ ಗತೇ ಷಷ್ಠ್ಯಾಂ ರಜನೌ ಜಾತವೇಶ್ಮನಿ ।
ಕೃತೇ ರಕ್ಷಾವಿಧೌ ತತ್ರ ಮೇಘೋಽಶಂಕಿತಮಾಗತಃ ॥ ೧೪೬

ತೇನ ವೃದ್ಧಿಮವಾಪ್ತೇನ ತತ್ರಾವವ್ರೇ ನಭಃ ಕ್ರಮಾತ್ ।
ಶತ್ರುಣೋಪೇಕ್ಷಿತೇನೇವ ರಾಜ್ಯಂ ರಾಜ್ಞಃ ಪ್ರಮಾದಿನಃ ॥ ೧೪೭

ಮದಸ್ಯೇವ ಕ್ಷಿಪನ್ ಧಾರಾ ವರ್ಷಸ್ಯೋನ್ಮೂಲಿತದ್ರುಮಃ ।
ತತೋ ಧಾವಿತುಮಾರೇಭೇ ವಾತಮತ್ತಮತಂಗಜಃ ॥ ೧೪೮

ತತ್ಕ್ಷಣಂ ಸಾರ್ಗಲಮಪಿ ದ್ವಾರಮುದ್ಘಾಟ್ಯ ಭೀಷಣಾ ।
ಸ್ತ್ರೀ ಕಾಪಿ ಕ್ಷುರಿಕಾಹಸ್ತಾ ಜಾತವೇಶ್ಮ ವಿವೇಶ ತತ್ ॥ ೧೪೯

ಸಾ ತಂ ಮದನಸುಂದರ್ಯಾಃ ಸ್ತನಾಸಕ್ತಮುಖಂ ಸುತಮ್ ।
ಹೃತ್ವಾ ದೇವ್ಯಾಃ ಪ್ರದುದ್ರಾವ ಸಂಮೋಹ್ಯೈವ ಪರಿಚ್ಛದಮ್ ॥ ೧೫೦

೧೯೧. ಅನಂತರ "ಅಯ್ಯೋ ! ಅಯ್ಯೋ ! ನನ್ನ ಪುತ್ರನನ್ನು ರಾಕ್ಷಸಿಯು ಅಪಹರಿಸಿದಳು' ಎಂದು ಕಾತರಳಾಗಿ ಗೋಳಾಡುತ್ತಾ ರಾಣಿಯು ಆ ರಾಕ್ಷಸಿಯನ್ನು ಅನುಸರಿಸಿ ಓಡಿದಳು. ಆ ಹೆಂಗಸೂ ಕತ್ತಲಲ್ಲಿ ಎಲ್ಲಿಯೋ ಓಡಿಹೋದಳು.

೧೯೨. ಮತ್ತೆ ಆ ಹೆಂಗಸು ಹೋಗಿ ಮಗುವಿನೊಡನೆ ಸರಸ್ಸಿನ ಒಳಗೆ ಧುಮುಕಿದಳು. ರಾಣಿಯೂ ಮಗುವಿನ ಮೇಲಿನ ಆಸೆಯಿಂದ ಹಿಂಬಾಲಿಸಿ ಅದರಲ್ಲಿ ಬಿದ್ದಳು.

೧೯೩. ಕ್ಷಣಮಾತ್ರದಲ್ಲಿ ಮೇಘವು ಹೊರಟುಹೋಯಿತು. ರಾತ್ರಿಯೂ ಕೊನೆಯಾಯಿತು. ಪ್ರಸೂತಿಗೃಹದಲ್ಲಿ ಪರಿವಾರದ ಗೋಳಾಟವು ಕೇಳಿಬಂದಿತು.

೧೯೪. ರಾಜನಾದ ಕನಕವರ್ಷನು ಅದನ್ನು ಕೇಳಿ ಪ್ರಸೂತಿಗೃಹಕ್ಕೆ ಹೋಗಿ ಪುತ್ರನೂ, ಪ್ರಿಯೆಯೂ ಇಲ್ಲದಿರುವುದನ್ನು ನೋಡಿ ಮೂರ್ಛೆ ಹೊಂದಿದನು.

೧೯೫. ಮತ್ತು ಮೂರ್ಛೆಯಿಂದ ಎಚ್ಚೆತ್ತು "ಅಯ್ಯೋ ! ದೇವಿ ! ಅಯ್ಯೋ ! ಪುತ್ರಕ ! ಶಿಶುವೇ !' ಎಂದು ಪ್ರಲಾಪ ಮಾಡುತ್ತಾ ಇದ್ದಾಗ ಒಂದು ವರ್ಷದ ಅವಧಿಯುಳ್ಳ ಆ ಶಾಪವು ಅವನ ನೆನಪಿಗೆ ಬಂದಿತು.

೧೯೬. "ಭಗವಂತನೇ ! ಸ್ಕಂದನೇ ! ಮಂದಪುಣ್ಯನಾದ ನನಗೆ ನೀನು ವಿಷದಿಂದ ಕೂಡಿದ ಅಮೃತ ಕೊಟ್ಟಂತೆ ಶಾಪದಿಂದ ಕೂಡಿದ ವರವನ್ನು ಹೇಗೆ ತಾನೆ ಕೊಟ್ಟೆ ?

---

ಹಾ ಹಾ ಹೃತೋ ಮೇ ರಾಕ್ಷ್ಯಾ ಸುತ ಇತ್ಯಥ ವಿಹ್ವಲಾ ।
ಕ್ರಂದಂತೀ ಚಾನ್ವಧಾವತ್ತಾಂ ರಾಜ್ಞೀ ಸಾ ಸ್ತ್ರೀ ತಮಸ್ಯಪಿ ॥ ೧೯೧
ಸಾ ಚ ಗತ್ವಾ ಪಪಾತ ಸ್ತ್ರೀ ಸರಸ್ಯಂತಃ ಸಬಾಲಕಾ ।
ರಾಜ್ಞೀ ಚಾನ್ವಪತತ್ಸಾಪಿ ತತ್ರೈವಾಪತ್ಯತೃಷ್ಣಯಾ ॥ ೧೯೨
ಕ್ಷಣಾನ್ಮೇಘೋ ನಿವವೃತೇ ಜಗಾಮಾಂತಂ ಚ ಯಾಮಿನೀ ।
ಜಾತವೇಶ್ಮನಿ ಚಾಕ್ರಂದಃ ಪರಿವಾರಸ್ಯ ಶುಶ್ರುವೇ ॥ ೧೯೩
ರಾಜಾ ಕನಕವರ್ಷೋಽಥ ತಚ್ಛ್ರುತ್ವಾ ಜಾತವಾಸಕಮ್ ।
ಏತ್ಯ ಪುತ್ರಪ್ರಿಯಾಶೂನ್ಯಂ ದೃಷ್ಟ್ವಾ ಮೋಹಂ ಜಗಾಮ ಸಃ ॥ ೧೯೪
ಸಮಾಶ್ವಸ್ಯ ಚ ಹಾ ದೇವಿ ಹಾ ಪುತ್ರಕ ಶಿಶೋ ಇತಿ ।
ವಿಲಪನ್ನಥ ಸಸ್ಮಾರ ಶಾಪಾಂತಂ ವತ್ಸರಾವಧಿಮ್ ॥ ೧೯೫
ಭಗವನ್ಶಾಪಸಂಪೃಕ್ತೋ ಮಂದಪುಣ್ಯಸ್ಯ ಮೇ ವರಃ ।
ಕಥಂ ಸ್ಕಂದ ತ್ವಯಾ ದತ್ತಃ ಸವಿಷಾಮೃತಸಂನಿಭಃ ॥ ೧೯೬

೧೯೭. ಅಯ್ಯೋ ! ಅಯ್ಯೋ ! ಸಾವಿರ ಯುಗಗಳಿಗೆ ಸಮವಾದ ಒಂದು ವರ್ಷವನ್ನು ಜೀವಿತಕ್ಕಿಂತಲೂ ಅಧಿಕಳಾದ ಮದನಸುಂದರೀ ದೇವಿಯಿಲ್ಲದೆ ಹೇಗೆ ಕಳೆಯಲಿ ?"

೧೯೮. ಹೀಗೆ ಗೋಳಿಡುತ್ತಿದ್ದ ರಾಜನಿಗೆ ಎಲ್ಲ ವೃತ್ತಾಂತವನ್ನೂ ತಿಳಿದ ಮಂತ್ರಿಗಳು ಧೈರ್ಯ ಹೇಳಿದರೂ ಸಮಾಧಾನವಾಗಲಿಲ್ಲ. ದೇವಿಯ ಜೊತೆಯಲ್ಲೇ ಹೊರಟು ಹೋದ ಅವನ ಧೈರ್ಯ ಮರಳಿ ಬರಲಿಲ್ಲ.

೧೯೯. ಅನಂತರ ಮನ್ಮಥನ ಆವೇಗದಿಂದ ವಿವಶನಾಗಿ ರಾಜನು ಪಟ್ಟಣದಿಂದ ಹೊರಗೆ ಹೋಗಿ ಅಲೆದಾಡುತ್ತಾ ಚಿತ್ತಭ್ರಮೆಯಿಂದ ವಿಂಧ್ಯಪರ್ವತದ ಕಾಡನ್ನು ಪ್ರವೇಶಿಸಿದನು.

೨೦೦-೨೦೧. ಅಲ್ಲಿ ಚಿಕ್ಕ ಹೆಣ್ಣು ಜಿಂಕೆಗಳ ಕಣ್ಣುಗಳನ್ನು ನೋಡಿ ಪ್ರಿಯೆಯಾದ ಮದನಸುಂದರಿಯ ಕಣ್ಣುಗಳು ಅವನ ನೆನಪಿಗೆ ಬರುತ್ತಿದ್ದವು. ಚಮರೀ ಮೃಗಗಳ ಬಾಲದ ಗೊಂಚಲುಗಳನ್ನು ನೋಡಿದಾಗ ಪ್ರಿಯೆಯ ಕೇಶರಾಶಿಯ ಸೌಂದರ್ಯದ ನೆನಪು ಬರುತ್ತಿತ್ತು. ಹೆಣ್ಣಾನೆಗಳ ನಡಿಗೆಯನ್ನು ನೋಡಿದಾಗ ಪ್ರಿಯೆಯ ಮಂದಗಮನ ಜ್ಞಾಪಕಕ್ಕೆ ಬರುತ್ತಿತ್ತು. ಇದರಿಂದ ಅವನ ಮನ್ಮಥಾಗ್ನಿಯು ಬೆಳೆದು ಪ್ರಜ್ವಲಿಸಿತು.

೨೦೨. ಬಾಯಾರಿಕೆ ಮತ್ತು ಬಿಸಿಲಿನಿಂದ ಬಳಲಿದ ಅವನು ಅಡ್ಡಾಡುತ್ತಾ ವಿಂಧ್ಯಪರ್ವತದ ತಲಪ್ರದೇಶವನ್ನು ಸೇರಿ ಅಲ್ಲಿ ಗಿರಿಝರಿಯ ನೀರನ್ನು ಪಾನ ಮಾಡಿ ಒಂದು ವೃಕ್ಷದ ಬುಡದಲ್ಲಿ ಕುಳಿತುಕೊಂಡನು.

---

ಹಾ ಹಾ ಯುಗಸಹಸ್ರಾಭಂ ಕಥಂ ನೇಷ್ಯಾಮಿ ವತ್ಸರಮ್ ।
ದೇವ್ಯಾ ಮದನಸುಂದರ್ಯಾ ಜೀವಿತಾಧಿಕಯಾ ವಿನಾ ॥ ೧೯೭
ಇತ್ಯಾಕ್ರುದಂಶ್ಚ ಸ ಜ್ಞಾತವೃತ್ತಾಂತೈರ್ಮಂತ್ರಿಭಿರ್ನೃಪಃ ।
ಬೋಧ್ಯಮಾನೋಽಪಿ ನ ಪ್ರಾಪ ದೇವ್ಯಾ ಸಹ ಗತಾಂ ಧೃತಿಮ್ ॥ ೧೯೮
ಕ್ರಮಾಚ್ಚ ಮದನಾವೇಗವಿವಶೋ ನಿರ್ಗತಃ ಪುರಾತ್ ।
ವಿವೇಶ ವಿಂಧ್ಯಕಾಂತಾರಮುನ್ಮನೀಭೂಯ ಸ ಭ್ರಮನ್ ॥ ೧೯೯
ತತ್ರ ಬಾಲಮೃಗೀನೇತ್ರೈಃ ಪ್ರಿಯಾಯಾ ಲೋಚನಶ್ರಿಯಮ್ ।
ಕಬರೀಭಾರಸೌಂದರ್ಯಂ ಚಮರೀಬಾಲಸಂಚಯೈಃ ॥ ೨೦೦
ದೃಷ್ಟೈಃ ಕರಿಕರೇಣೂನಾಂ ಗತೈರ್ಮಂಥರತಾಂ ಗತೇಃ ।
ಸ್ಮರತಸ್ತಸ್ಯ ಜಜ್ವಾಲ ಸುತರಾಂ ಮದನಾನಲಃ ॥ ೨೦೧
ಭ್ರಾಮ್ಯಂಸ್ತೃಷ್ಣಾತಪಕ್ಲಾಂತೋ ವಿಂಧ್ಯಪಾದಮವಾಪ್ಯ ಸಃ ।
ಪೀತನಿರ್ಝರಪಾನೀಯಸ್ತರುಮೂಲ ಉಪಾವಿಶತ್ ॥ ೨೦೨

೨೦೩. ಅಷ್ಟರಲ್ಲಿ ಗುಹೆಯ ದ್ವಾರದಿಂದ ವಿಂಧ್ಯಪರ್ವತದ ಅಟ್ಟಹಾಸವೋ ಎಂಬಂತೆ ಉಚ್ಚಸ್ವರದಿಂದ ಗರ್ಜಿಸುತ್ತಾ ಕೇಸರಗಳಿಂದ ತುಂಬಿದ್ದ ಸಿಂಹವೊಂದು ಹೊರಗೆ ಬಂದು ಅವನನ್ನು ಕೊಲ್ಲಲು ಮೇಲೆರಗಿತು.

೨೦೪. ಆ ಕ್ಷಣದಲ್ಲಿ ಆಕಾಶದಿಂದ ಬಂದ ಯಾವನೋ ಒಬ್ಬ ವಿದ್ಯಾಧರನು ವೇಗದಿಂದ ಮೇಲೆ ಬಿದ್ದು ಕತ್ತಿಯಿಂದ ಹೊಡೆದು ಆ ಸಿಂಹವನ್ನು ಇಬ್ಭಾಗವಾಗಿ ಸೀಳಿದನು.

೨೦೫. ಮತ್ತೆ ಆ ಗಗನಚರನು ರಾಜನ ಬಳಿಗೆ ಬಂದು ಅವನನ್ನು ಕೇಳಿದನು: "ರಾಜನೇ ! ಕನಕವರ್ಷನೇ ! ಈ ರೀತಿ ಈ ಪ್ರದೇಶಕ್ಕೆ ನೀನು ಹೇಗೆ ಬಂದೆ ?"

೨೦೬. ಅದನ್ನು ಕೇಳಿ ಸ್ಮರಣೆಯನ್ನು ಹೊಂದಿದ ರಾಜನು ಅವನನ್ನು ಕುರಿತು "ವಿರಹಾಗ್ನಿಯಿಂದ ವ್ಯಾಕುಲನಾದ ನನ್ನ ಗುರುತು ನಿನಗೆ ಹೇಗೆ ಗೊತ್ತಾಯಿತು ?" ಎಂದು ಕೇಳಿದನು.

---

ತಾವದ್ಗುಹಾಮುಖಾದ್ವಿಂಧ್ಯಸ್ಯಾಟ್ಟಹಾಸ ಇವೋನ್ನದನ್ ।
ಸಿಂಹಃ ಸಟಾಲೋ ನಿರ್ಗತ್ಯ ಹಂತುಮಭ್ಯುತ್ಪಾತ ತಮ್ ॥ ೨೦೩

ತತ್ಕ್ಷಣಂ ಗಗನಾಯಾತಃ ಕೋಽಪಿ ವಿದ್ಯಾಧರೋ ಜವಾತ್ ।
ನಿಪತ್ಯಾಸಿಪ್ರಹಾರೇಣ ಸಿಂಹಂ ತಮಕರೋದ್ದ್ವಿಧಾ ॥ ೨೦೪

ಸಮೀಪಮೇತ್ಯ ಚಾಪೃಚ್ಛದ್ರಾಜಾನಂ ತಂ ಸ ಖೇಚರಃ ।
ರಾಜನ್ ಕನಕವರ್ಷೈವಂ ಪ್ರಾಪ್ತೋಽಸ್ಯೇತಾಂ ಕಥಂ ಭುವಮ್ ॥ ೨೦೫

ತಚ್ಛ್ರುತ್ವಾ ಸಂಸ್ಮೃತಿಂ ಲಬ್ಧ್ವಾ ಸ ರಾಜಾ ಪ್ರತ್ಯುವಾಚ ತಮ್ ।
ವಿರಹಾನಲವಿಕ್ಷಿಪ್ತಂ ಕುತಸ್ತ್ವಂ ವೇತ್ಸಿ ಮಾಮಿತಿ ॥ ೨೦೬

೨೦೭-೨೦೮-೨೦೯-೨೧೦. ಆಗ ವಿದ್ಯಾಧರನು ಹೇಳಿದನು: "ನಾನು ಪರಿವ್ರಾಜಕನಾಗಿ ಬಂಧುಮಿತ್ರನೆಂಬ ಮನುಷ್ಯನಾಗಿ ಹಿಂದೆ ನಿನ್ನ ಪಟ್ಟಣದಲ್ಲಿ ವಾಸ ಮಾಡುತ್ತಿದ್ದೆ. ನಿನ್ನ ಸೇವೆ ಮಾಡಿ ನಾನು ನಿನ್ನನ್ನು ಪ್ರಾರ್ಥಿಸಿದಾಗ ನೀನು ಸಹಾಯ ಮಾಡಿದೆ. ವೀರನೇ ! ಬೇತಾಲಸಾಧನೆಯಿಂದ ನಾನು ವಿದ್ಯಾಧರ ಸ್ವರೂಪವನ್ನು ಹೊಂದಿದೆ. ಅದರಿಂದಾಗಿ ನಿನ್ನನ್ನು ಗುರುತಿಸಿ ನಿನಗೆ ಪ್ರತ್ಯುಪಕಾರವನ್ನು ಮಾಡಲು ನಿನ್ನನ್ನು ಕೊಲ್ಲಲು ಬಯಸಿದ ಈ ಸಿಂಹವನ್ನು ನೋಡಿ ನಾನು ಕೊಂದು ಹಾಕಿದೆ. ಈಗ ನನ್ನ ಹೆಸರು ಬಂಧುಪ್ರಭ". ಹೀಗೆ ಹೇಳಿದ ಅವನಿಗೆ ಕನಕವರ್ಷನು ಪ್ರೀತಿಯಿಂದ ಹೇಳಿದನು:

೨೧೧. "ಓಹೋ ! ನೆನಪಿದೆ ನನಗೆ. ನೀನು ಆ ಸ್ನೇಹದ ಋಣವನ್ನು ಇಲ್ಲಿ ತೀರಿಸಿದೆ. ಆದುದರಿಂದ ಹೇಳು. ನನಗೆ ಭಾರ್ಯಾಪುತ್ರರೊಡನೆ ಸಮಾಗಮ ಯಾವಾಗ ಆಗುವುದು ?"

೨೧೨. ಅವನ ಮಾತನ್ನು ಕೇಳಿ ವಿದ್ಯೆಯ ಪ್ರಭಾವದಿಂದ (ಮುಂದಾಗುವುದನ್ನು) ತಿಳಿದು ಬಂಧುಪ್ರಭನು ರಾಜನನ್ನು ಕುರಿತು ಹೇಳಿದನು.

೨೧೩. "ವಿಂಧ್ಯವಾಸಿನಿಯ ದರ್ಶನದಿಂದ ನೀನು ಪತ್ನೀಪುತ್ರರನ್ನು ಹೊಂದುವೆ. ಆದುದರಿಂದ ನೀನು ಸಿದ್ಧಿಗಾಗಿ ಅಲ್ಲಿಗೆ ಹೋಗು. ನಾನು ನನ್ನ ಲೋಕಕ್ಕೆ ಹೋಗುತ್ತೇನೆ.'

---

ತತೋ ವಿದ್ಯಾಧರೋಽವಾದೀದಹಂ ಪ್ರಾವ್ರಾಜಕೋ ಭವನ್ ।
ಮಾನುಷೋ ಬಂಧುಮಿತ್ರಾಖ್ಯಸ್ತ್ವತ್ಪುರೇ ನ್ಯವಸಂ ಪುರಾ ॥ ೨೦೭
ಸೇವಯಾ ಪ್ರಾರ್ಥಿತೇನಾತ್ರ ತ್ವಯಾ ಸಾಹಾಯಕೇ ಕೃತೇ ।
ವಿದ್ಯಾಧರತ್ವಂ ಪ್ರಾಪ್ತೋಽಸ್ಮಿ ವೀರ ಬೇತಾಲಸಾಧನಾತ್ ॥ ೨೦೮
ತೇನ ತ್ವಾಂ ಪ್ರತ್ಯಭಿಜ್ಞಾಯ ಕರ್ತುಂ ತೇ ಪ್ರತ್ಯುಪಕ್ರಿಯಾಮ್ ।
ತ್ವಜ್ಜಿಘಾಂಸುರಯಂ ದೃಷ್ಟ್ವಾ ಸಿಂಹೋ ವ್ಯಾಪಾದಿತೋ ಮಯಾ ॥ ೨೦೯
ನಾಮ್ನಾ ಬಂಧುಪ್ರಭಶ್ಚಾದ್ಯ ಸಂವೃತ್ತೋಽಸ್ಮೀತಿ ವಾದಿನಮ್ ।
ರಾಜಾ ಕನಕವರ್ಷಸ್ತಂ ಜಾತಪ್ರೀತಿರಭಾಷತ ॥ ೨೧೦
ಹಂತ ಸ್ಮರಾಮಿ ಸಾ ಚೇಹ ಮೈತ್ರೀ ನಿರ್ವಾಹಿತಾ ತ್ವಯಾ ।
ತದ್ಬ್ರೂಹಿ ಮೇ ಕದಾ ಭಾವೀ ಭಾರ್ಯಾಪುತ್ರಸಮಾಗಮಃ ॥ ೨೧೧
ಇತಿ ತಸ್ಯ ವಚಃ ಶ್ರುತ್ವಾ ಬುದ್ಧ್ವಾ ವಿದ್ಯಾಪ್ರಭಾವತಃ ।
ವಿದ್ಯಾಧರೋಽಬ್ರವೀದ್ಬಂಧುಪ್ರಭಸ್ತಂ ಸ ಮಹೀಭೃತಮ್ ॥ ೨೧೨
ದೃಷ್ಟಯಾ ವಿಂಧ್ಯವಾಸಿನ್ಯಾ ಪತ್ನೀಪುತ್ರೌ ತ್ವಮಾಪ್ಸ್ಯಸಿ ।
ತತ್ತತ್ರ ಗಚ್ಛ ಸಿದ್ಧ್ಯೈ ತ್ವಂ ಸ್ವಲೋಕಂ ಚ ವ್ರಜಾಮ್ಯಹಮ್ ॥ ೨೧೩

೨೧೪. ಹೀಗೆ ಹೇಳಿ ಆ ವಿದ್ಯಾಧರ ಬಂಧುಪ್ರಭನು ಅಂತರಿಕ್ಷಕ್ಕೆ ಹಾರಿಹೋದನು. ರಾಜನಾದ ಕನಕವರ್ಷನು ಮೆಲ್ಲಗೆ ಧೈರ್ಯವನ್ನು ತಾಳಿ ವಿಂಧ್ಯವಾಸಿನಿಯನ್ನು ಸಂದರ್ಶಿಸಲು ಹೋದನು.

೨೧೫. ರಾಜನು ಹೋಗುತ್ತಿರುವಾಗ ದಾರಿಯಲ್ಲಿ ಅವನ ಮೇಲೆ ಕಾಡಿನ ದೊಡ್ಡ ಮದಿಸಿದ ಆನೆಯೊಂದು ತಲೆಯನ್ನು ಕೊಡವುತ್ತಾ ಸೊಂಡಿಲನ್ನು ಮುಂದಕ್ಕೆ ಚಾಚಿಕೊಂಡು ಬಂದು ಎರಗಿತು.

೨೧೬. ಅದನ್ನು ನೋಡಿ ರಾಜ ಕನಕವರ್ಷನು ಹಳ್ಳದ ಮಾರ್ಗದಿಂದ ಪಕ್ಕಕ್ಕೆ ಸರಿದು ಹೋದನು. ಅವನನ್ನು ಆ ಮಾರ್ಗದಲ್ಲೇ ಹಿಂಬಾಲಿಸಿ ಓಡಿಬಂದ ಆನೆಯು ಆ ಹಳ್ಳದಲ್ಲಿ ಬಿದ್ದು ಮೃತಪಟ್ಟಿತು.

೨೧೭. ಅನಂತರ ನಡೆದು ಬಳಲಿದ್ದ ರಾಜನು ಒಂದು ದೊಡ್ಡ ಸರೋವರವನ್ನು ತಲುಪಿದನು. ಅದರಲ್ಲಿ ಕಾಂಡಗಳು ಮೇಲೆದ್ದು ಅರಳಿದ್ದ ಕಮಲಗಳು ಸಮೃದ್ಧವಾಗಿದ್ದವು.

೨೧೮. ಅಲ್ಲಿ ಸ್ನಾನ ಮಾಡಿ ನೀರನ್ನು ಕುಡಿದು ಕಮಲದ ದಂಟನ್ನು ಭಕ್ಷಿಸಿದ ಅವನು ಒಂದು ಮರದ ಬುಡದಲ್ಲಿ ವಿಶ್ರಮಿಸಿದನು. ಕ್ಷಣ ಮಾತ್ರದಲ್ಲಿ ನಿದ್ರೆಯು ಅವನನ್ನು ಆವರಿಸಿತು.

೨೧೯. ಅಷ್ಟರಲ್ಲಿ ಆ ಮಾರ್ಗದಿಂದ ಬೇಟೆಯಿಂದ ಹಿಂದಿರುಗುತ್ತಿದ್ದ ಕಿರಾತರು ಬಂದು ಮಲಗಿ ನಿದ್ರೆ ಮಾಡಿದ್ದ ಉತ್ತಮಲಕ್ಷಣಸಂಪನ್ನನಾಗಿದ್ದ ಆ ರಾಜನನ್ನು ನೋಡಿದರು.

---

ಇತ್ಯುಕ್ತ್ವಾ ಖಂ ಗತೇ ತಸ್ಮಿನ್ ರಾಜಾ ಲಬ್ಧಧೃತಿಃ ಶನೈಃ ।
ಪ್ರಾಯಾತ್ ಕನಕವರ್ಷೋಽಸೌ ದ್ರಷ್ಟುಂ ತಾಂ ವಿಂಧ್ಯವಾಸಿನೀಮ್ ॥ ೨೧೪
ಗಚ್ಛಂತಮಭ್ಯಧಾವತ್ತಂ ನೃಪಂ ವನ್ಯೋ ಮಹಾನ್ಪಥಿ ।
ಆಧೂತಮಸ್ತಕೋ ಮತ್ತಃ ಪ್ರಸಾರಿತಕರಃ ಕರೀ ॥ ೨೧೫
ತಂ ದೃಷ್ಟ್ವಾ ಶ್ವಭ್ರಮಾರ್ಗೇಣ ಸ ರಾಜಾಪಸರತ್ತಥಾ ।
ಯಥಾನುಧಾವನ್ ಸ ಗಜೋ ವಿಪೇದೇ ಶ್ವಭ್ರಪಾತತಃ ॥ ೨೧೬
ತತಃ ಸೋಽಧ್ವಶ್ರಮಾಯಾಸಕ್ಲಾಂತೋ ರಾಜಾ ವ್ರಜನ್ಕ್ರಮಾತ್ ।
ಉದ್ದಂಡಪುಂಡರೀಕಾಢ್ಯಂ ಪ್ರಾಪದೇಕಂ ಮಹತ್ಸರಃ ॥ ೨೧೭
ತತ್ರ ಸ್ನಾತ್ವಾ ಚ ಪೀತ್ವಾ ಚ ಜಲಂ ಜಗ್ಧಮೃಣಾಲಕಃ ।
ವಿಶ್ರಾಂತಃ ಪಾದಪತಲೇ ಕ್ಷಣಂ ಜಹ್ರೇ ಸ ನಿದ್ರಯಾ ॥ ೨೧೮
ತಾವಚ್ಚ ತೇನ ಮೃಗಯಾನಿವೃತ್ತಾಃ ಶಬರಾಃ ಪಥಾ ।
ಆಗತಾ ದದೃಶುಃ ಸುಪ್ತಂ ತಂ ರಾಜಾನಂ ಸುಲಕ್ಷಣಮ್ ॥ ೨೧೯

೨೨೦. ದೇವಿಗೆ ಬಲಿಕೊಡುವುದಕ್ಕಾಗಿ ಅವನನ್ನು ತತ್‌ಕ್ಷಣ ಬಂಧಿಸಿ ತಮ್ಮ ಕಿರಾತ ರಾಜನಾದ ಮುಕ್ತಾಫಲ ಎಂಬವನ ಬಳಿಗೆ ಕರೆದೊಯ್ದರು.

೨೨೧. ಆ ಕಿರಾತರಾಜನು ಕೂಡ ಶ್ರೇಷ್ಠನಾಗಿದ್ದ ಆ ರಾಜನನ್ನು ನೋಡಿ ವಿಂಧ್ಯವಾಸಿನಿಯ ಮಂದಿರಕ್ಕೆ ಬಲಿಪಶುವಾಗಿ ಮಾಡಲು ಅವನನ್ನು ಒಯ್ದನು.

೨೨೨. ರಾಜನು ಆ ದೇವಿಯನ್ನು ನಮಸ್ಕಾರ ಮಾಡಿದ ಮಾತ್ರಕ್ಕೇ ಆ ದೇವಿಯ ಅನುಗ್ರಹದಿಂದಲೂ ಸ್ಕಂದನ ಅನುಗ್ರಹದಿಂದಲೂ ಅವನ ಬಂಧನವು ಕಳಚಿ ಬಿತ್ತು

೨೨೩. ಅದನ್ನು ನೋಡಿ ಅವನ ಮೇಲೆ ಅದ್ಭುತವಾದ ಆ ದೇವಿಯ ಅನುಗ್ರಹವಿರುವುದನ್ನು ತಿಳಿದು ಕಿರಾತರಾಜನು ಆ ರಾಜನನ್ನು ವಧದಿಂದ ಮುಕ್ತನನ್ನಾಗಿ ಮಾಡಿದನು.

೨೨೪. ಈ ರೀತಿ ಮೂರನೆಯದಾದ ಅಪಮೃತ್ಯುವನ್ನು ದಾಟಿದ ಕನಕವರ್ಷನಿಗೆ ಆ ಶಾಪವು ಪೂರ್ಣವಾಯಿತು.

೨೨೫. ಅಷ್ಟರಲ್ಲಿ ಸೋದರತ್ತೆಯಾದ ನಾಗಸ್ತ್ರೀಯು ಮದನಸುಂದರೀ ದೇವಿಯನ್ನು ಅವಳ ಮಗನೊಡನೆ ಕರೆದುಕೊಂಡು ಅಲ್ಲಿಗೇ ಬಂದಳು.

---

ತೇ ಚ ದೇವ್ಯುಪಹಾರಾರ್ಥಂ ಬದ್ಧ್ವಾ ನಿನ್ಯುಸ್ತದೈವ ತಮ್ ।
ಸ್ವಸ್ಯ ಮುಕ್ತಾಫಲಾಖ್ಯಸ್ಯ ಪಾರ್ಶ್ವಂ ಶಬರಭೂಭೃತಃ ॥ ೨೨೦
ಸೋಽಪ್ಯೇನಂ ಶಬರಾಧೀಶಃ ಪ್ರಶಸ್ತಂ ವೀಕ್ಷ್ಯ ನೀತವಾನ್ ।
ಕೇತನಂ ವಿಂಧ್ಯವಾಸಿನ್ಯಾಃ ಪಶೂಕರ್ತುಂ ನರಾಧಿಪಮ್ ॥ ೨೨೧
ದೃಷ್ಟ್ವೈವ ಚ ಸ ದೇವೀಂ ತಾಂ ಪ್ರಣಮಂಸ್ತದನುಗ್ರಹಾತ್ ।
ರಾಜಾ ಸ್ಕಂದಪ್ರಸಾದಾಚ್ಚ ಬಭೂವ ಸ್ರಸ್ತಬಂಧನಃ ॥ ೨೨೨
ತದಾಲೋಕ್ಯಾದ್ಭುತಂ ಮತ್ವಾ ತಸ್ಯ ತಂ ದೇವ್ಯನುಗ್ರಹಮ್ ।
ಮುಮೋಚ ತಂ ಸ ರಾಜಾನಂ ಶಬರಾಧಿಪತಿರ್ವಧಾತ್ ॥ ೨೨೩
ಏವಂ ಕನಕವರ್ಷಸ್ಯ ತೃತೀಯಾದಪಮೃತ್ಯುತಃ ।
ಅತಿಕ್ರಾಂತಸ್ಯ ತಸ್ಯಾಭೂತ್ ಪೂರ್ಣಂ ತಚ್ಛಾಪವತ್ಸರಮ್ ॥ ೨೨೪
ತಾವಚ್ಚ ತಸ್ಯ ಸಾ ನಾಗೀ ರಾಜ್ಞೋ ಮದನಸುಂದರೀಮ್ ।
ದೇವೀಂ ಸಪುತ್ರಾಮಾದಾಯ ತತ್ರೈವಾಗಾತ್ ಪಿತೃಷ್ವಸಾ ॥ ೨೨೫

೨೨೬-೨೨೭. ಅವಳು ರಾಜನನ್ನು ಕುರಿತು ಹೇಳಿದಳು: "ಎಲೈ ರಾಜನೇ ! ಕುಮಾರಸ್ವಾಮಿಯ ಶಾಪವನ್ನು ತಿಳಿದ ನಾನು ನಿನ್ನವರಾದ ಈ ಇಬ್ಬರನ್ನೂ ನನ್ನ ಮನೆಗೆ ಕರೆದುಕೊಂಡು ಹೋಗಿ ಯುಕ್ತಿಯಿಂದ ರಕ್ಷಿಸಿದ್ದೇನೆ. ಆದುದರಿಂದ, ಕನಕವರ್ಷನೇ ! ಇವರಿಬ್ಬರನ್ನೂ ಸ್ವೀಕರಿಸು. ಈ ಪೃಥ್ವೀರಾಜ್ಯವನ್ನು ಭೋಗಿಸು. ನೀನು ಈಗ ಶಾಪಮುಕ್ತನಾಗಿದ್ದೀಯೆ."

೨೨೮. ಹೀಗೆ ಹೇಳಿದಾಗ ರಾಜನು ಅವಳಿಗೆ ಬಗ್ಗಿ ನಮಸ್ಕಾರ ಮಾಡಿದನು. ಆಗ ಆ ನಾಗಸ್ತ್ರೀಯು ಅಂತರ್ಧಾನವಾದಳು. ಈ ರೀತಿ ಪತ್ನೀ ಪುತ್ರರು ಬಂದು ಸೇರಿದುದು ಸ್ವಪ್ನದಂತೆ ಕಾಣಿಸಿತು.

೨೨೯. ಬಹಳ ಕಾಲದ ನಂತರ ಸೇರಿದ ರಾಜನೂ ರಾಣಿಯೂ ಪರಸ್ಪರ ಆಲಿಂಗನ ಮಾಡಿಕೊಂಡರು. ಅವರ ವಿರಹದ ಕಷ್ಟವು ಅವರ ಸಂತೋಷದ ಕಣ್ಣೀರುಗಳೊಡನೆ ಹರಿದು ಹೋಯಿತು.

೨೩೦. ಅನಂತರ ಕನಕವರ್ಷನು ಪೃಥ್ವೀಪತಿಯಾದ ಪ್ರಭುವೆಂಬುದನ್ನು ಅರಿತು ಕಿರಾತರಾಜನಾದ ಆ ಮುಕ್ತಾಫಲನು ಅವನ ಕಾಲುಗಳಿಗೆ ಬಿದ್ದನು.

೨೩೧. ಅವನ ಕ್ಷಮೆಯನ್ನು ಕೇಳಿ ತನ್ನ ಹಳ್ಳಿಗೆ ಅವನನ್ನು ಬರಮಾಡಿಕೊಂಡು ಪುತ್ರಭಾರ್ಯಾಸಹಿತನಾದ ಆ ರಾಜನನ್ನು ಯೋಗ್ಯವಾದ ಉಪಚಾರಗಳಿಂದ ಉಪಚರಿಸಿದನು.

---

ಜಗಾದ ತಂ ಚ ಭೋ ರಾಜನ್ ಜ್ಞಾತಕೌಮಾರಶಾಪಯಾ ।
ಏತೌ ತೇ ರಕ್ಷಿತೌ ಯುಕ್ತ್ಯಾ ನೀತ್ವಾ ಸ್ವಭುವನಂ ಮಯಾ ॥ ೨೨೬
ತಸ್ಮಾತ್ ಕನಕವರ್ಷ ಸ್ವೌ ಗೃಹಾಣೈತೌ ಪ್ರಿಯಾಸುತೌ ।
ಭುಂಕ್ಷ್ವೇದಂ ಪೃಥಿವೀರಾಜ್ಯಂ ಕ್ಷೀಣಶಾಪೋಽಧುನಾಹ್ಯಸಿ ॥ ೨೨೭
ಇತ್ಯುಕ್ತ್ವಾ ಪ್ರಣತಂ ಸಾ ತಂ ನೃಪಂ ನಾಗೀ ತಿರೋದಧೇ ।
ನೃಪೋಽಪಿ ಸ್ವಪ್ನಮಿವ ತನ್ಮೇನೇ ಭಾರ್ಯಾಸುತಾಗಮಮ್ ॥ ೨೨೮
ತತೋಽಸ್ಯ ರಾಜ್ಞೋ ರಾಜ್ಞ್ಯಾಶ್ಚ ಚಿರಾದಾಶ್ಲಿಷ್ಟಯೋರ್ಮಿಥಃ ।
ಅಗಲದ್ವಿರಹಕ್ಲೇಶೋ ಹರ್ಷಬಾಷ್ಪಾಂಬುಭಿಃ ಸಹ ॥ ೨೨೯
ತತಃ ಕನಕವರ್ಷಂ ತಂ ಬುದ್ಧ್ವಾ ಪೃಥ್ವೀಪತಿಂ ಪ್ರಭುಂ ।
ಮುಕ್ತಾಫಲೋಽಪತತ್ತಸ್ಯ ಶಬರೇಂದ್ರಃ ಸ ಪಾದಯೋಃ ॥ ೨೩೦
ಕ್ಷಮಯಿತ್ವಾ ಚ ಪಲ್ಲೀಂ ಸ್ವಾಂ ಪ್ರವೇಶ್ಯ ಚ ನಿಜೋಚಿತೈಃ ।
ತೈಸ್ತೈಃ ಸಸುತದಾರಂ ತಮುಪಚಾರೈರುಪಾಚರತ್ ॥ ೨೩೧

೨೩೨. ಅನಂತರ ಅಲ್ಲಿದ್ದ ಕನಕವರ್ಷ ರಾಜನು ದೂತರ ಮೂಲಕವಾಗಿ ರಾಜನೂ ಮಾವನೂ ಆದ ದೇವಶಕ್ತಿಯನ್ನೂ ಮತ್ತು ತನ್ನ ಪಟ್ಟಣದಿಂದ ತನ್ನ ಸೈನ್ಯವನ್ನೂ ಬರಮಾಡಿಕೊಂಡನು.

೨೩೩. ಪ್ರಿಯೆಯಾದ ಮದನಸುಂದರಿಯನ್ನೂ ಕುಮಾರಸ್ವಾಮಿಯ ಅನುಗ್ರಹದಿಂದ ಹುಟ್ಟಿದ ಪುತ್ರನಾದ ಕನಕವರ್ಷನನ್ನೂ ಹೆಣ್ಣಾನೆಯ ಮೇಲೆ ಹತ್ತಿಸಿ ಮುಂದೆ ಬಿಟ್ಟು ಮಾವನ ಮನೆಯಲ್ಲಿರಲು ಅವನ ಮನೆಗೆ ಹೊರಟನು.

೨೩೪. ಅನಂತರ ಕೆಲವು ದಿವಸಗಳಾದ ಮೇಲೆ ಕನಕವರ್ಷ ರಾಜನು ವಿದರ್ಭದೇಶದಲ್ಲಿರುವ ಕುಂಡಿನವೆಂಬ ಪಟ್ಟಣವನ್ನು ಸೇರಿ ಮಾವನ ಮನೆಯನ್ನು ತಲುಪಿದನು. ಸಮೃದ್ಧಿಸಂಪನ್ನವಾದ ಆ ಪಟ್ಟಣದಲ್ಲಿ ಪುತ್ರ ಭಾರ್ಯಾ ಮತ್ತು ಸೇನಾಸಹಿತನಾಗಿ ಮಾವನಿಂದ ಸತ್ಕೃತನಾಗಿ ಕೆಲವು ದಿನಗಳು ಇದ್ದನು.

೨೩೫. ಮತ್ತೆ ಅಲ್ಲಿಂದ ಹೊರಟು ಬಹಳಕಾಲದಿಂದ ಉತ್ಸುಕವಾಗಿದ್ದ ಪಟ್ಟಣದ ಸ್ತ್ರೀ ಜನರ ನಯನಗಳು ಅವನನ್ನು ಪಾನ ಮಾಡುತ್ತಿರುವಂತೆ ನೋಡುತ್ತಿರಲು ಅವನು ತನ್ನ ಪಟ್ಟಣವಾದ ಕನಕಪುರವನ್ನು ಸೇರಿದನು.

೨೩೬. ಪುತ್ರ ಹಾಗೂ ಮದನಸುಂದರಿಯೊಡನೆ ರಾಜನು ಸಂತೋಷದ ಗೆಲುವಿನಿಂದ ಕೂಡಿದ ಮೂರ್ತಿವತ್ತಾದ ಉತ್ಸವು ಬಂದಂತೆ ರಾಜಧಾನಿಯನ್ನು ಪ್ರವೇಶಿಸಿದನು.

---

ಸೋಽಥ ತತ್ರ ಸ್ಥಿತೋ ರಾಜಾ ದೂತೈರಾನಾಯಯನ್ನೃಪಮ್ ।
ಶ್ವಶುರಂ ದೇವಶಕ್ತಿಂ ತಂ ಸ್ವಸೈನ್ಯಂ ಚ ನಿಜಾತ್ಪುರಾತ್ ॥ ೨೩೨

ಅಥಾಸ್ಥಿತಕರೇಣುಕಾಂ ಮದನಸುಂದರೀಂ ತಾಂ ಪ್ರಿಯಾಂ
ಸುತಂ ಚ ಶರಜನ್ಮನೋದಿತಹಿರಣ್ಯವರ್ಷಾಭಿಧಮ್ ।
ವಿಧಾಯ ಪುರತಸ್ತತಃ ಶ್ವಶುರವೇಶ್ಮವಾಸಾದಿತಃ
ಚಚಾಲ ಸ ತದನ್ವಿತಃ ಕನಕವರ್ಷಪೃಥ್ವೀಪತಿಃ ॥ ೨೩೩

ಅವಾಪ ಚ ಸ ವಾಸರೈಃ ಕತಿಪಯೈರ್ಗೃಹಂ ಶ್ವಾಶುರಂ
ವಿದರ್ಭವಿಷಯಾಶ್ರಿತಂ ತದಥ ಕುಂಡಿನಾಖ್ಯಂ ಪುರಮ್ ।
ಸಮೃದ್ಧಿಮತಿ ತತ್ರ ಚ ಶ್ವಶುರಸತ್ಕೃತಃ ಕಾನಿಚಿತ್
ದಿನಾನ್ಯಭಜತ ಸ್ಥಿತಿಂ ತನಯದಾರಸೇನಾಯುತಃ ॥ ೨೩೪

ಪ್ರಸ್ಥಾಯ ತತಶ್ಚ ಶನೈಃ ಕನಕಪುರಂ ಪ್ರಾಪ್ತವಾನ್ನಿಜಂ ನಗರಮ್ ।
ಪೌರವಧೂಜನನಯನೈಶ್ಚಿರೋತ್ಸುಕೈಃ ಪೀಯಮಾನ ಇವ ॥ ೨೩೫

ಅವಿಶಚ್ಚ ರಾಜಧಾನೀಂ ಸುತಸಹಿತೋ ಮದನಸುಂದರೀಯುಕ್ತಃ ।
ಉತ್ಸವ ಇವ ವಿಗ್ರಹವಾನ್ ಪ್ರಮೋದಶೋಭಾನ್ವಿತಃ ಸ ನೃಪಃ ॥ ೨೩೬

೨೩೭. ಅಲ್ಲಿ ಆ ಮದನಸುಂದರಿಗೆ ಪಟ್ಟ ಕಟ್ಟಿ ಅಭಿಷೇಚಿಸಿ ಆ ಏಳಿಗೆಯ ಸಮಯದಲ್ಲಿ ಪ್ರಜಾಜನರನ್ನು ಸತ್ಕರಿಸಿ ರಾಜನು ಅವಳನ್ನು ಸಮಸ್ತ ಅಂತಃಪುರದ ಮುಖ್ಯಳನ್ನಾಗಿ ಮಾಡಿದನು.

೨೩೮. ಅನಂತರ ಮದನಸುಂದರೀದೇವಿಯೊಡನೆ ಮತ್ತು ಪುತ್ರನಾದ ಹಿರಣ್ಯವರ್ಷನೊಡನೆ ಪ್ರತಿದಿನವೂ ಉತ್ಸವವನ್ನು ಆಚರಿಸುತ್ತಾ ಮತ್ತೆ ವಿಯೋಗ ದುಃಖವನ್ನು ಕಾಣದ ಕನಕವರ್ಷರಾಜನು ನಾಲ್ಕು ಸಮುದ್ರಗಳ ಪರ್ಯಂತವಾದ ಮತ್ತು ನಿಷ್ಕಂಟಕವಾದ ಈ ಭೂಮಂಡಲವನ್ನು ಆಳಿದನು.

೨೩೯. ಹೀಗೆ ತನ್ನ ಮಂತ್ರಿಗಳಲ್ಲಿ ಮುಖ್ಯನಾದ ಗೋಮುಖನಿಂದ ಮನೋಹರವಾದ ಈ ಕಥೆಯನ್ನು ಕೇಳಿ ರಾಜಪುತ್ರನಾದ ನರವಾಹನದತ್ತನು ಸತಿಯಾದ ಅಲಂಕಾರವತಿಯೊಡನೆ ಸಂತೋಷದಿಂದಿದ್ದನು.

ಇಲ್ಲಿಗೆ ಮಹಾಕವಿ ಶ್ರೀ ಸೋಮದೇವಭಟ್ಟನು ವಿರಚಿಸಿದ

ಕಥಾಸರಿತ್ಸಾಗರದ

ಅಲಂಕಾರವತೀಲಂಬಕದಲ್ಲಿ ಐದನೆಯ ತರಂಗವು ಮುಗಿಯಿತು.

---

ಅಭಿಷಿಚ್ಯ ಬದ್ಧಪಟ್ಟಾಂ ತತ್ರ ಚ ತಾಂ ಮದನಸುಂದರೀಮಕರೋತ್ ।
ಸರ್ವಾಂತಃಪುರಮುಖ್ಯಾಮಭ್ಯುದಯೇ ಮಾನಿತಪ್ರಕೃತಿಃ ॥ ೨೩೭

ದೇವ್ಯಾ ತಯಾ ಸಹ ಸುತೇನ ಚ ತೇನ ಬದ್ಧ
ನಿತ್ಯೋತ್ಸವಃ ಪುನರದೃಷ್ಟವಿಯೋಗದುಃಖಃ ।
ನಿಷ್ಕಂಟಕಂ ಕನಕವರ್ಷನರೇಶ್ವರೋಽಥ
ಭೂಮಂಡಲಂ ಸಚತುರಂತಮಿದಂ ಶಶಾಸ ॥ ೨೩೮

ಇತಿ ಗೋಮುಖತಃ ಸ್ವಮಂತ್ರಿಮುಖ್ಯಾದ್ರುಚಿರಾಂ ತತ್ರ ಕಥಾಮಿಮಾಂ ನಿಶಮ್ಯ ।
ನರವಾಹನದತ್ತರಾಜಪುತ್ರಃ ಸದಲಂಕಾರವತೀಯುತಸ್ತುತೋಷ ॥ ೨೩೯

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ

ಕಥಾಸರಿತ್ಸಾಗರೇ

ಅಲಂಕಾರವತೀಲಂಬಕೇ ಪಂಚಮಸ್ತರಂಗಃ

# ಆರನೆಯ ತರಂಗ

೧–೨. ಪ್ರಿಯೆಯೊಡನಿದ್ದ ನರವಾಹನದತ್ತನು ಗೋಮುಖನು ಹೇಳಿದ ಕಥೆಯಿಂದ ಹರ್ಷಗೊಂಡನು. ಆಗ ಗೋಮುಖನ ಮೇಲಿನ ಈರ್ಷ್ಯೆಯಿಂದ ಮರುಭೂತಿಯು ಕುಪಿತನಾಗಿದ್ದುದನ್ನು ನೋಡಿ ನರವಾಹನದತ್ತನು ಅವನನ್ನು ಪ್ರಸನ್ನಗೊಳಿಸುತ್ತಾ "ಮರುಭೂತಿಯೇ ! ನೀನೇಕೆ ಒಂದು ಕಥೆಯನ್ನೂ ಹೇಳುತ್ತಿಲ್ಲ ?" ಎಂದು ಕೇಳಿದನು.

೩. ಆಗ ಮರುಭೂತಿಯು ಸಂತುಷ್ಟನಾಗಿ "ಹಾಗೆಯೇ ಆಗಲಿ ಹೇಳುತ್ತೇನೆ' ಎಂದು ಹೇಳಿ ಈ ಕಥೆಯನ್ನು ಹೇಳಲು ಆರಂಭಿಸಿದನು.

೪. "ಪ್ರಭುವೇ ! ಹಿಂದೆ ರಾಜನಾದ ಕಮಲವರ್ಮನಿಗೆ ಸೇರಿದ ಕಮಲಪುರವೆಂಬ ಪಟ್ಟಣದಲ್ಲಿ ಚಂದ್ರಸ್ವಾಮಿ ಎಂಬ ಬ್ರಾಹ್ಮಣ ಶ್ರೇಷ್ಠನೊಬ್ಬನು ಇದ್ದನು.

೫. ಉತ್ತಮಬುದ್ಧಿಸಂಪನ್ನನಾದ ಆ ಚಂದ್ರಸ್ವಾಮಿಗೆ ವಿನಯಸಂಪನ್ನಳಾದ ದೇವಮತಿಯೆಂಬ ಭಾರ್ಯೆಯು ಇದ್ದಳು. ಅವಳು ಲಕ್ಷ್ಮೀಸರಸ್ವತಿಯರಿಗೆ ಸಮಾನಳಾದ ಮೂರನೆಯವಳೋ ಎಂಬಂತಿದ್ದಳು.

---

# ಷಷ್ಠಸ್ತರಂಗಃ

ತತಃ ಸ ಗೋಮುಖಾಖ್ಯಾತಕಥಾತುಷ್ಟಃ ಪ್ರಿಯಾಸಖಃ ।
ದೃಷ್ಟ್ವಾ ಸಕೋಪವಿಕೃತಿಂ ಮರುಭೂತಿಂ ತದೀರ್ಷ್ಯಯಾ ॥ ೧
ನರವಾಹನದತ್ತಸ್ತಂ ನಿಜಗಾದಾನುರಂಜಯನ್ ।
ಮರುಭೂತೇ ತ್ವಮಪ್ಯೇಕಾಂ ಕಿಂ ನಾಖ್ಯಾಸಿ ಕಥಾಮಿತಿ ॥ ೨
ತತಃ ಸ ಬಾಢಮಾಖ್ಯಾಮೀತ್ಯುಕ್ತ್ವಾ ತುಷ್ಟೇನ ಚೇತಸಾ ।
ಸಮಾಖ್ಯಾತುಂ ಕಥಾಮೇತಾಂ ಮರುಭೂತಿಃ ಪ್ರಚಕ್ರಮೇ ॥ ೩
ಚಂದ್ರಸ್ವಾಮೀತ್ಯಭೂತ್ಪೂರ್ವಂ ರಾಜ್ಞಃ ಕಮಲವರ್ಮಣಃ ।
ನಗರೇ ದೇವ ಕಮಲಪುರಾಖ್ಯೇ ಬ್ರಾಹ್ಮಣೋತ್ತಮಃ ॥ ೪
ತಸ್ಯ ಲಕ್ಷ್ಮೀಸರಸ್ವತ್ಯೋಸ್ತೃತೀಯಾ ವಿನಯೋಜ್ಜ್ವಲಾ ।
ಭಾರ್ಯಾ ದೇವಮತಿರ್ನಾಮ ಸಮಾನಾ ಸುಮತೇರಭೂತ್ ॥ ೫

೬ ಆ ಬ್ರಾಹ್ಮಣನಿಗೆ ಆ ಪತ್ನಿಯಲ್ಲಿ ಉತ್ತಮ ಲಕ್ಷಣ ಸಂಪನ್ನನಾದ ಪುತ್ರನು ಹುಟ್ಟಿದನು. ಅವನು ಹುಟ್ಟಿದಾಗ ಅಂತರಿಕ್ಷದಿಂದ ಹೀಗೆ ವಾಣಿಯು ಕೇಳಿಸಿತು.

೭ "ಚಂದ್ರಸ್ವಾಮಿಯೇ ! ನೀನು ನಿನ್ನ ಮಗನನ್ನು ಮಹೀಪಾಲನೆಂದು ಕರೆಯಬೇಕು. ಏಕೆಂದರೆ ಇವನು ರಾಜನಾಗಿ ಬಹಳ ಕಾಲ ಭೂಮಿಯನ್ನು ಪಾಲಿಸುತ್ತಾನೆ."

೮ ಈ ದಿವ್ಯವಾಣಿಯನ್ನು ಕೇಳಿ ಸಂಭ್ರಮವನ್ನು ಆಚರಿಸಿ ಚಂದ್ರಸ್ವಾಮಿಯು ಪುತ್ರನಿಗೆ ಮಹೀಪಾಲ ಎಂದೇ ನಾಮಕರಣ ಮಾಡಿದನು.

೯. ಕ್ರಮವಾಗಿ ಬೆಳೆದ ಆ ಮಹೀಪಾಲನಿಗೆ ಶಸ್ತ್ರವೇದವನ್ನು ತಿಳಿಸಲಾಯಿತು. ಜೊತೆಗೆ ಅವನು ಇತರ ಸಮಸ್ತ ವಿದ್ಯೆಗಳಲ್ಲೂ ಶಿಕ್ಷಿತನಾದನು.

೧೦. ಅಷ್ಟರಲ್ಲಿ ಚಂದ್ರಸ್ವಾಮಿಯ ಭಾರ್ಯೆಯಾದ ದೇವಮತಿಯು ಮತ್ತೆ ಸರ್ವಾವಯವ ಸುಂದರಿಯಾದ ಒಬ್ಬಳು ಕನ್ಯೆಯನ್ನು ಪ್ರಸವಿಸಿದಳು.

೧೧. ಚಂದ್ರಮತೀ ಎಂದು ನಾಮಕರಣಗೊಂಡ ಆ ಪುತ್ರಿಯೂ ಮಹೀಪಾಲನೂ ತಮ್ಮ ತಂದೆಯ ಮನೆಯಲ್ಲಿ ಬೆಳೆದರು.

೧೨. ಅನಂತರ ಒಮ್ಮೆ ಆ ದೇಶದಲ್ಲಿ ಸೂರ್ಯನ ಕಿರಣಗಳಿಂದ ಸಸ್ಯಗಳೇ ಸುಟ್ಟುಹೋಗಿ ಮಳೆಯೇ ಇಲ್ಲದೆ ಕ್ಷಾಮದ ಸಂಕಷ್ಟವು ಉಂಟಾಯಿತು.

---

ತಸ್ಯಾಂ ತಸ್ಯ ಚ ವಿಪ್ರಸ್ಯ ಪತ್ನ್ಯಾಂ ಜಜ್ಞೇ ಸುಲಕ್ಷಣಃ ।
ಪುತ್ರಃ ಸ ಯಸ್ಯ ಜಾತಸ್ಯ ವಾಗೇವಮುದಗಾದ್ದಿವಃ ॥ ೬
ಚಂದ್ರಸ್ವಾಮಿನ್ಮಹೀಪಾಲೋ ನಾಮ್ನಾ ಕಾರ್ಯಃ ಸುತಸ್ತ್ವಯಾ ।
ರಾಜಾ ಭೂತ್ವಾ ಚಿರಂ ಯಸ್ಮಾತ್ ಪಾಲಯಿಷ್ಯತ್ಯಯಂ ಮಹೀಮ್ ॥ ೭
ಏತದ್ದಿವ್ಯಂ ವಚಃ ಶ್ರುತ್ವಾ ಸ ಮಹೀಪಾಲಮೇವ ತಮ್ ।
ಚಂದ್ರಸ್ವಾಮಿಸುತಂ ನಾಮ್ನಾ ಚಕಾರ ರಚಿತೋತ್ಸವಃ ॥ ೮
ಕ್ರಮಾಚ್ಚ ಸ ಮಹೀಪಾಲೋ ವಿವೃದ್ಧೋ ಗ್ರಾಹಿತೋಽಭವತ್ ।
ಶಸ್ತ್ರವೇದಂ ವಿದ್ಯಾಸು ಸಮಂ ಸರ್ವಾಸು ಶಿಕ್ಷಿತಃ ॥ ೯
ತಾವಚ್ಚ ಸುಷುವೇ ತಸ್ಯ ಸಾ ಚಂದ್ರಸ್ವಾಮಿನಃ ಪುನಃ ।
ಭಾರ್ಯಾ ದೇವಮತಿಃ ಕನ್ಯಾಂ ಸರ್ವಾವಯವಸುಂದರೀಮ್ ॥ ೧೦
ಸಾ ಚ ಚಂದ್ರಮತೀ ನಾಮ ಮಹೀಪಾಲಃ ಸ ಚ ಕ್ರಮಾತ್ ।
ಭ್ರಾತರೌ ವವೃಧಾತೇ ತೌ ಸ್ವಪಿತುಸ್ತಸ್ಯ ವೇಶ್ಮನಿ ॥ ೧೧
ಅಥಾವೃಷ್ಟಿಕೃತಸ್ತತ್ರ ದೇಶೇ ದುರ್ಭಿಕ್ಷವಿಪ್ಲವಃ ।
ಉದಪದ್ಯತ ದಗ್ಧೇಷು ಸಸ್ಯೇಷು ರವಿರಶ್ಮಿಭಿಃ ॥ ೧೨

೧೩. ಆ ಸಂಕಷ್ಟದಿಂದ ರಾಜನು ಸನ್ಮಾರ್ಗವನ್ನು ತೊರೆದು ಅಧರ್ಮದಿಂದ ಪ್ರಜೆಗಳ ಕಡೆಯಿಂದ ಧನವನ್ನು ಲೂಟಿ ಮಾಡುತ್ತಾ ದರೋಡೆಕೋರನಂತೆ ಆಚರಿಸಲು ತೊಡಗಿದನು.

೧೪. ಆಗ ದೇಶವು ಸರ್ವನಾಶ ಹೊಂದಲು ಪ್ರಾರಂಭವಾಯಿತು. ಆಗ ಬ್ರಾಹ್ಮಣನಾದ ಚಂದ್ರಸ್ವಾಮಿಯ ಪತ್ನಿಯಾದ ದೇವಮತಿಯು ಅವನಿಗೆ ಹೀಗೆ ಹೇಳಿದಳು:

೧೫. "ಈ ಪಟ್ಟಣದಿಂದ ನನ್ನ ತಂದೆಯ ಮನೆಗೆ ಹೋಗೋಣ ಬಾ. ಏಕೆಂದರೆ ಇಲ್ಲಿ ನಮ್ಮ ಮಕ್ಕಳು ಎಂದಾದರೂ ವಿಪತ್ತಿಗೊಳಗಾದಾರು."

೧೬. ಅದನ್ನು ಕೇಳಿ ಚಂದ್ರಸ್ವಾಮಿಯು ಆಕೆಗೆ ಹೇಳಿದನು: "ಹಾಗೆ ಮಾಡುವುದು ಬೇಡ. ಏಕೆಂದರೆ ದುರ್ಭಿಕ್ಷದ ಸಮಯದಲ್ಲಿ ಮನೆಯಿಂದ ಓಡಿಹೋಗುವುದು ಮಹಾಪಾಪ

೧೭. ಆದುದರಿಂದ ನಾನು ಈ ಇಬ್ಬರು ಬಾಲಕರನ್ನು ಕರೆದುಕೊಂಡು ಹೋಗಿ ನಿನ್ನ ತಂದೆಯ ಮನೆಯಲ್ಲಿ ಇರಿಸುತ್ತೇನೆ. ನೀನು ಇಲ್ಲಿ ಇರು. ನಾನು ಶೀಘ್ರವಾಗಿ ಬಂದು ಬಿಡುತ್ತೇನೆ."

೧೮–೧೯. ಇದಕ್ಕೆ ಹಾಗೆಯೇ ಆಗಲೆಂದು ಒಪ್ಪಿದ ಭಾರ್ಯೆಯನ್ನು ಮನೆಯಲ್ಲಿ ಇರಿಸಿ ಚಂದ್ರಸ್ವಾಮಿಯು ತನ್ನ ಇಬ್ಬರು ಮಕ್ಕಳಾದ ಮಹೀಪಾಲ ಹಾಗೂ ಚಂದ್ರಮತಿಯನ್ನು ಕರೆದುಕೊಂಡು ಆ ಪಟ್ಟಣದಿಂದ ಹೆಂಡತಿಯ ತಂದೆಯ ಮನೆಗೆ ಹೊರಟನು.

---

ತದ್ದೋಷೇಣ ಚ ರಾಜಾತ್ರ ಪ್ರಾರೇಭೇ ತಸ್ಕರಾಯಿತುಮ್ ।
ಅಧರ್ಮೇಣ ಪ್ರಜಾಭ್ಯೋಽರ್ಥಮಾಕರ್ಷನ್ ಮುಕ್ತಸತ್ಪಥಃ ॥ ೧೩
ತತೋಽವಸೀದತ್ಯತ್ಯರ್ಥಂ ದೇಶೇ ತಸ್ಮಿನ್ನುವಾಚ ಸಾ ।
ಭಾರ್ಯಾ ದೇವಮತಿರ್ವಿಪ್ರಂ ಚಂದ್ರಸ್ವಾಮಿನಮತ್ರ ತಮ್ ॥ ೧೪
ಆಗಚ್ಛ ಮತ್ಪಿತೃಗೃಹಂ ವ್ರಜಾಮೋ ನಗರಾದಿತಃ ।
ಏತೇ ಹ್ಯಪತ್ಯೇ ನಶ್ಯೇತಾಮಾವಯೋರಿಹ ಜಾತುಚಿತ್ ॥ ೧೫
ತಚ್ಛ್ರುತ್ವಾ ತಾಂ ಸ ವಕ್ತಿ ಸ್ಮ ಚಂದ್ರಸ್ವಾಮೀ ಸ್ವಗೇಹಿನೀಮ್ ।
ಮೈವಂ ಪಾಪಂ ಮಹದ್ಗೇಹಾದ್ದುರ್ಭಿಕ್ಷೇ ಹಿ ಪಲಾಯನಮ್ ॥ ೧೬
ತದಹಂ ಬಾಲಕಾವೇತೌ ನೀತ್ವಾ ತ್ವತ್ಪಿತೃವೇಶ್ಮನಿ ।
ಸ್ಥಾಪಯಾಮಿ ತ್ವಮಾಸ್ವೇಹ ಶೀಘ್ರಂ ಚೈಷ್ಯಾಮ್ಯಹಂ ಪುನಃ ॥ ೧೭
ಇತ್ಯುಕ್ತ್ವಾ ಸ್ಥಾಪಯಿತ್ವಾ ತಾಂ ತಥೇತ್ಯುಕ್ತವತೀಂ ಗೃಹೇ ।
ಭಾರ್ಯಾಂ ಸ ಚಂದ್ರಸ್ವಾಮೀ ತೌ ಗೃಹೀತ್ವಾ ದಾರಕೌ ನಿಜೌ ॥ ೧೮
ಮಹೀಪಾಲಂ ಚ ತಂ ತಾಂ ಚ ಕನ್ಯಾಂ ಚಂದ್ರಮತೀಮುಭೌ ।
ತತಃ ಪ್ರತಸ್ಥೇ ನಗರಾತ್ ಪತ್ನೀಪಿತೃಗೃಹಂ ಪ್ರತಿ ॥ ೧೯

೨೦. ಪ್ರಯಾಣ ಮಾಡುತ್ತಾ ಕ್ರಮೇಣ ಅವರು ಮೂರು ನಾಲ್ಕು ದಿನಗಳಲ್ಲಿ ಒಂದು ದೊಡ್ಡ ಕಾಡನ್ನು ತಲುಪಿದರು. ಅಲ್ಲಿ ಸೂರ್ಯಕಿರಣಗಳ ಬೇಗೆಯಿಂದ ಮರಗಳೆಲ್ಲ ಒಣಗಿ ವಿರಳವಾಗಿದ್ದವು. ನೆಲದಲ್ಲಿ ಮರಳೂ ಮಳೆಯಿಲ್ಲದೆ ಸುಡುತ್ತಿತ್ತು.

೨೧. ಮಕ್ಕಳು ಆ ಕಾಡಿನಲ್ಲಿ ಬಾಯಾರಿಕೆಯಿಂದ ಬಳಲಿದರು. ಅವರನ್ನು ಅಲ್ಲೇ ಒಂದೆಡೆ ಇರಿಸಿ ನೀರನ್ನು ಹುಡುಕುತ್ತಾ ಚಂದ್ರಸ್ವಾಮಿ ದೂರ ಹೋದನು.

೨೨. ಅಲ್ಲಿ ಅವನ ಎದುರಿಗೆ ಕಾರ್ಯಾರ್ಥವಾಗಿ ಎಲ್ಲಿಗೋ ಹೊರಟಿದ್ದ ಸಿಂಹದಂಷ್ಟ್ರನೆಂಬ ಹೆಸರುಳ್ಳ ಕಿರಾತಾಧಿಪತಿಯು ತನ್ನ ಅನುಚರರೊಡನೆ ಅನಿರೀಕ್ಷಿತವಾಗಿ ಬಂದನು.

೨೩. ಆ ಕಿರಾತನು ಅಲ್ಲಿ ಚಂದ್ರಸ್ವಾಮಿಯನ್ನು ನೋಡಿ ವಿಚಾರಿಸಿ ಅವನಿಗೆ ಕುಡಿಯಲು ನೀರು ಬೇಕೆಂಬುದನ್ನು ಅರಿತು ಸಂಜ್ಞೆಯನ್ನು ಮಾಡಿ ಸೇವಕನಿಗೆ ಹೇಳಿದನು: "ಇವನನ್ನು ಕರೆದುಕೊಂಡು ಹೋಗಿ ನೀರನ್ನು ಒದಗಿಸಿರಿ."

೨೪. ಅದನ್ನು ಕೇಳಿ ಆ ಕಿರಾತನ ಇಬ್ಬರು ಮೂವರು ಸೇವಕರು ಅವನ ಅಭಿಪ್ರಾಯವನ್ನು ತಿಳಿದು ಋಜು ಸ್ವಭಾವದವನಾದ ಚಂದ್ರಸ್ವಾಮಿಯನ್ನು ಹಳ್ಳಿಗೆ ಕರೆದುಕೊಂಡು ಹೋಗಿ ಕಟ್ಟಿ ಹಾಕಿದರು.

೨೫. ನರಬಲಿಗಾಗಿ ತನ್ನನ್ನು ಕಟ್ಟಿಹಾಕಿದ್ದಾರೆಂದು ಅವರಿಂದ ತಿಳಿದು ಚಂದ್ರಸ್ವಾಮಿಯು ಕಾಡಿನಲ್ಲಿರುವ ತನ್ನ ಮಕ್ಕಳಿಗಾಗಿ ಶೋಕಿಸಿದನು.

---

ಗಚ್ಛನ್ ಕ್ರಮಾತ್ತ್ರಿಚತುರೈರ್ದಿನೈಃ ಪ್ರಾಪ ಮಹಾಟವೀಮ್ ।
ಅರ್ಕಾಂಶುತಪ್ತಸಿಕತಾಂ ವಿಶುಷ್ಕವಿರಲದ್ರುಮಾಮ್ ॥ ೨೦
ತಸ್ಯಾಂ ತೃಷಾಭಿಭೂತೌ ತೌ ಸ್ಥಾಪಯಿತ್ವಾ ಸ ದಾರಕೌ ।
ಚಂದ್ರಸ್ವಾಮೀ ಯಯೌ ದೂರಮನ್ವೇಷ್ಟುಂ ವಾರಿ ತತ್ಕೃತೇ ॥ ೨೧
ತತ್ರ ತಸ್ಯಾಯಯಾವಗ್ರೇ ಸಾನುಗಃ ಶಬರಾಧಿಪಃ ।
ಅಕಸ್ಮಾತ್ ಸಿಂಹದಂಷ್ಟ್ರಾಖ್ಯಃ ಕಾರ್ಯಾಯ ಪ್ರಸ್ಥಿತಃ ಕ್ವಚಿತ್ ॥ ೨೨
ಸ ತಂ ದೃಷ್ಟ್ವಾತ್ರ ಪೃಷ್ಟ್ವಾ ಚ ಬುದ್ಧ್ವಾ ಭಿಲ್ಲೋ ಜಲಾರ್ಥಿನಮ್ ।
ಸಂಜ್ಞಾಂ ಕೃತ್ವಾಬ್ರವೀದ್ಭೃತ್ಯಾನ್ನೀತ್ವಾಂಭಃ ಪ್ರಾಪ್ಯತಾಮಯಮ್ ॥ ೨೩
ತಚ್ಛ್ರುತ್ವಾ ತಸ್ಯ ಭೃತ್ಯಾಸ್ತೇ ದ್ವಿತ್ರಾ ಲಬ್ಧಾಶಯಾ ಋಜುಮ್ ।
ತೇ ಚಂದ್ರಸ್ವಾಮಿನಂ ಪಲ್ಲೀಂ ನೀತ್ವಾ ಬದ್ಧಮಕುರ್ವತ ॥ ೨೪
ನರೋಪಹಾರಾಯಾತ್ಮಾನಂ ತೇಭ್ಯೋ ಬುದ್ಧ್ವಾ ಸ ಸಂಯತಮ್ ।
ಚಂದ್ರಸ್ವಾಮೀ ಶುಶೋಚ ಸ್ವೌ ದಾರಕಾವಟವೀ ಗತೌ ॥ ೨೫

೩೬. "ಅಯ್ಯೋ ಮಹೀಪಾಲ ! ಅಯ್ಯೋ ಮಗಳೇ ! ಚಂದ್ರಮತಿಯೇ ! ಅಸ್ಥಾನದಲ್ಲಿ ನಾನು ನಿಮ್ಮನ್ನು ಕಾಡಿನಲ್ಲಿ ಬಿಟ್ಟು ಹೇಗೆ ತಾನೆ ಸಿಂಹವ್ಯಾಘ್ರಗಳ ಮಾಂಸವನ್ನಾಗಿ ಮಾಡಿದೆ ?

೩೭. ಮತ್ತು ಕಳ್ಳರಿಂದ ನಾನು ಹತನಾಗಿದ್ದೇನೆ. ನನಗೆ ರಕ್ಷಕನೇ ಇಲ್ಲವಾಗಿದೆ." ಹೀಗೆ ಗೋಳಿಡುತ್ತಾ ದುಃಖದಿಂದ ಆ ಬ್ರಾಹ್ಮಣನು ಆಕಾಶದಲ್ಲಿ ಸೂರ್ಯನನ್ನು ನೋಡಿದನು.

೩೮. "ಓಹೋ ! ಮೋಹವನ್ನು ತೊರೆದು ಈ ನನ್ನ ಪ್ರಭುವನ್ನು ರಕ್ಷಕನನ್ನಾಗಿ ಆಶ್ರಯಿಸುತ್ತೇನೆ" ಎಂದು ಆಲೋಚಿಸಿ ಆ ಬ್ರಾಹ್ಮಣನು ಸೂರ್ಯನನ್ನು ಸ್ತೋತ್ರ ಮಾಡಲು ಆರಂಭಿಸಿದನು.

೩೯. "ಪರ ಮತ್ತು ಅಪರವಾದ ಆಕಾಶಗಳಲ್ಲಿ ನೆಲೆಸಿರುವವನೂ ಜ್ಯೋತಿಸ್ವರೂಪನೂ ಸರ್ವವ್ಯಾಪಕನೂ ಒಳಗಿನ ಮತ್ತು ಹೊರಗಿನ ಕತ್ತಲೆಯನ್ನು (ಅಜ್ಞಾನವನ್ನು) ಹೋಗಲಾಡಿಸುವವನೂ ಆದ ನಿನಗೆ ನಮಸ್ಕಾರ.

೪೦. ನೀನು ತ್ರಿಜಗದ್ವ್ಯಾಪಿಯಾದ ವಿಷ್ಣುವು. ನೀನು ಶಿವನು. ಶ್ರೇಯಸ್ಸುಗಳ ನಿಧಿಯು, ಸುಪ್ತವಾದ ವಿಶ್ವವನ್ನು ಕಾರ್ಯಪ್ರವೃತ್ತವಾಗುವಂತೆ ಮಾಡುವ ಪರಮ ಪ್ರಜಾಪತಿಯು ನೀನು.

೪೧. ಪ್ರಕಾಶಹೀನರಾದ ಇವರಿಬ್ಬರು ಪ್ರಕಾಶಿಸಲಿ ಎಂದು ಅಗ್ನಿ ಮತ್ತು ಚಂದ್ರನಲ್ಲಿ ದಯೆಯಿಂದ ತೇಜಸ್ಸನ್ನಿಟ್ಟು ನೀನು ರಾತ್ರಿಯಲ್ಲಿ ಅಂತರ್ಧಾನವನ್ನು ಹೊಂದುತ್ತೀಯೆ.

---

ಹಾ ಮಹೀಪಾಲ ಹಾ ವತ್ಸೇ ಚಂದ್ರವತ್ಯಪದೇ ಕಥಮ್ ।
ಮಹಾರಣ್ಯೇ ಯುವಾಂ ತ್ಯಕ್ತ್ವಾ ಸಿಂಹವ್ಯಾಘ್ರಾಮಿಷೀಕೃತೌ ॥ ೩೬
ಆತ್ಮಾ ಚ ಘಾತಿತಶ್ಚೌರೈರ್ನಚಾಸ್ತಿ ಶರಣಂ ಮಮ ।
ಇತ್ಯಾಕ್ರಂದನ್‌ಸ ವಿಪ್ರೋऽರ್ಕಂ ವ್ಯೋಮ್ನ್ಯಪಶ್ಯದಸಂಮದಾತ್ ॥ ೩೭
ಹಂತ ಮೋಹಂ ವಿಹಾಯೈತಂ ಸ್ವಂ ಪ್ರಭುಂ ಶರಣಂ ಶ್ರಯೇ ।
ಇತ್ಯಾಲೋಚ್ಯ ದ್ವಿಜಃ ಸೂರ್ಯಂ ಸ ಸ್ತೋತುಮುಪಚಕ್ರಮೇ ॥ ೩೮
ತುಭ್ಯಂ ಪರಾಪರಾಕಾಶಶಾಯಿನೇ ಜ್ಯೋತಿಷೇ ವಿಭೋ ।
ಆಭ್ಯಂತರಂ ಚ ಬಾಹ್ಯಂ ಚ ತಮಃ ಪ್ರಣುದತೇ ನಮಃ ॥ ೩೯
ತ್ವಂ ವಿಷ್ಣುಸ್ತ್ರಿಜಗದ್ವ್ಯಾಪೀ ತ್ವಂ ಶಿವಃ ಶ್ರೇಯಸಾಂ ನಿಧಿಃ ।
ಸುಪ್ತಂ ವಿಚೇಷ್ಟಯನ್ ವಿಶ್ವಂ ಪರಮಸ್ತ್ವಂ ಪ್ರಜಾಪತಿಃ ॥ ೪೦
ಅಪ್ರಕಾಶೌ ಪ್ರಕಾಶೇತಾಮೇತಾವಿತ್ಯಗ್ನಿಚಂದ್ರಯೋಃ ।
ನ್ಯಸ್ತಾತ್ಮತೇಜಾ ದಯಯೇವಾಂತರ್ಧಿಂ ಯಾಸಿ ಯಾಮಿನೀಮ್ ॥ ೪೧

೩೨. ಪ್ರಕಾಶವಂತನೇ ! ನೀನು ಉದಯಿಸಿದಾಗ ರಾಕ್ಷಸರೂ ಓಡಿಹೋಗುತ್ತಾರೆ. ದಸ್ಯುಗಳು ಪ್ರಭಾವರಹಿತರಾಗುತ್ತಾರೆ. ಗುಣವಂತರು ಸಂತೋಷಗೊಳ್ಳುತ್ತಾರೆ.

೩೩. ಮೂರುಲೋಕಗಳಿಗೂ ಏಕಮಾತ್ರ ಪ್ರದೀಪನಾದವನೇ ! ಶರಣಾಗತನಾದ ನನ್ನನ್ನು ರಕ್ಷಿಸು. ನನ್ನ ಈ ದುಃಖದ ಕತ್ತಲೆಯನ್ನು ನಾಶಮಾಡು. (ನನ್ನಲ್ಲಿ) ದಯೆಯನ್ನು ಇಡು."

೩೪. ಎಂದು ಮೊದಲಾದ ವಚನಗಳಿಂದ ಸೂರ್ಯನನ್ನು ಭಕ್ತಿಯಿಂದ ಸ್ತೋತ್ರ ಮಾಡಿದ ಚಂದ್ರಸ್ವಾಮಿಗೆ ಆಕಾಶದಿಂದ ವಾಣಿಯು ಕೇಳಿಬಂದಿತು.

೩೫ "ಚಂದ್ರಸ್ವಾಮಿಯೇ ! ನಿನ್ನ ವಿಷಯದಲ್ಲಿ ನಾನು ಸಂತುಷ್ಟನಾಗಿದ್ದೇನೆ. ನೀನು ವಧೆಯನ್ನು ಹೊಂದುವುದಿಲ್ಲ ಮತ್ತು ನನ್ನ ಅನುಗ್ರಹದಿಂದ ನಿನಗೆ ನಿನ್ನ ಮಕ್ಕಳು ಸಿಗುವರು."

೩೬ ಹೀಗೆ ದಿವ್ಯವಾಣಿಯು ಹೇಳಿದ ಮೇಲೆ ಚಂದ್ರಸ್ವಾಮಿಯು ಕಿರಾತನು ಒದಗಿಸಿದ ಸ್ನಾನಭೋಜನಗಳನ್ನು ಮುಗಿಸಿ ನಂಬಿಕೆಯಿಂದ ಅಲ್ಲಿಯೇ ಇದ್ದನು.

---

ವಿದ್ರವಂತ್ಯಪಿ ರಕ್ಷಾಂಸಿ ಪ್ರಭವಂತಿ ನ ದಸ್ಯವಃ ।
ಪ್ರಮೋದಂತೇ ಚ ಗುಣಿನೋ ಭಾಸ್ವನ್ನಭ್ಯುದಿತೇ ತ್ವಯಿ ॥ ೩೨
ತದ್ರಕ್ಷ ಶರಣಾಪನ್ನಂ ತ್ರೈಲೋಕ್ಯೈಕಪ್ರದೀಪ ಮಾಮ್ ।
ಇದಂ ದುಃಖಾಂಧಕಾರಂ ಮೇ ವಿದಾರಯ ದಯಾಂ ಕುರು ॥ ೩೩
ಇತ್ಯಾದಿಭಿಸ್ತದಾ ವಾಕ್ಯೈರ್ಭಕ್ತ್ಯಾ ಸ್ತುತವತೋ ರವಿಮ್ ।
ಚಂದ್ರಸ್ವಾಮಿದ್ವಿಜಸ್ಯಾಸ್ಯ ಗಗನಾದುಚ್ಚಚಾರ ವಾಕ್ ॥ ೩೪
ತುಷ್ಟೋಽಸ್ಮಿ ಚಂದ್ರಸ್ವಾಮಿಂಸ್ತೇ ನ ತ್ವಂ ವಧಮವಾಪ್ಸ್ಯಸಿ ।
ಮತ್ಪ್ರಸಾದಾಚ್ಚ ಪುತ್ರಾದಿಸಂಗಮಸ್ತೇ ಭವಿಷ್ಯತಿ ॥ ೩೫
ಇತ್ಯುಕ್ತೋ ದಿವ್ಯಯಾ ವಾಚಾ ಜಾತಾಸ್ಥಸ್ತತ್ರ ತಸ್ಥಿವಾನ್ ।
ಚಂದ್ರಸ್ವಾಮೀ ಸ ಶಬರೋಪಾಹೃತಸ್ನಾನಭೋಜನಃ ॥ ೩೬

೩೭–೩೮. ಅಷ್ಟರಲ್ಲಿ ತಂದೆಯು ಬರದಿದ್ದುದರಿಂದ ದುಃಖಿತನಾಗಿ ಮಹೀಪಾಲನು ಏನೋ ಆಗಿಬಿಟ್ಟಿರಬೇಕೆಂದು ಅಶುಭವನ್ನು ಶಂಕಿಸಿ ಗೋಳಾಡುತ್ತಿದ್ದನು. ಹೀಗೆ ಸಹೋದರಿಯೊಡನೆ ಆ ಅರಣ್ಯದಲ್ಲಿ ಗೋಳಾಡುತ್ತಿದ್ದ ಅವನನ್ನು ಅದೇ ಮಾರ್ಗದಿಂದ ಚಲಿಸುತ್ತಿದ್ದ ಒಂದು ವರ್ತಕರ ಸಮೂಹವು ನೋಡಿ ಸಾರ್ಥಧರನೆಂಬ ಅವರ ಪ್ರಧಾನನು ಅವರ ವೃತ್ತಾಂತದ ಬಗ್ಗೆ ವಿಚಾರಿಸಿದನು.

೩೯. ಅವನು ದಯೆಯಿಂದ ಮಹೀಪಾಲನ್ನು ಸಮಾಧಾನ ಮಾಡಿ ಸರ್ವಲಕ್ಷಣಸಂಪನ್ನನಾದ ಆ ಶಿಶುವನ್ನು ನೋಡಿ ಇಬ್ಬರನ್ನೂ ತನ್ನ ದೇಶಕ್ಕೆ ಒಯ್ದನು.

೪೦. ಮಗನಂತೆಯೇ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದ ಆ ವರ್ತಕನ ಮನೆಯಲ್ಲಿ ಮಹೀಪಾಲನು ಬಾಲ್ಯದಲ್ಲಿಯೂ ಅಗ್ನಿಹೋಮರೂಪ ಕ್ರಿಯೆಯಲ್ಲಿ ಆಸಕ್ತನಾಗಿದ್ದನು.

೪೧. ಒಂದು ದಿನ ತಾರಾಪುರ ನಿವಾಸಿಯಾದ ತಾರಾಧರ್ಮನೆಂಬ ರಾಜನ ಮಂತ್ರಿಯು ಕಾರ್ಯನಿಮಿತ್ತವಾಗಿ ಆ ಮಾರ್ಗದಿಂದ ಬಂದನು.

೪೨. ಬ್ರಾಹ್ಮಣ ಶ್ರೇಷ್ಠನಾದ ಆ ಮಂತ್ರಿಯ ಹೆಸರು ಅನಂತಸ್ವಾಮಿ. ಅವನು ಆ ವರ್ತಕ ನಾಯಕನ ಮಿತ್ರ ಅವನು ಆನೆ, ಕುದುರೆ, ಪದಾತಿಗಳೊಡನೆ ಆ ವರ್ತಕನ ಮನೆಗೆ ಬಂದನು.

---

ತಾವಚ್ಚ ತಂ ಮಹೀಪಾಲಂ ಸ್ವಸ್ರಾ ಯುಕ್ತಮರಣ್ಯಗಮ್ ।
ಪಿತರ್ಯನಾಯತ್ಯಾಕ್ರಂದವಿಧುರಂ ಶಂಕಿತಾಶುಭಮ್ ॥ ೩೭
ದದರ್ಶ ತೇನ ಮಾರ್ಗೇಣ ಸಾರ್ಥವಾಹಃ ಸಮಾಗತಃ ।
ಮಹಾನ್ ಸಾರ್ಥಧರೋನಾಮ ವೃತ್ತಾಂತಂ ಪೃಚ್ಛತಿ ಸ್ಮ ಚ ॥ ೩೮
ಸ ತಮಾಶ್ವಾಸ್ಯ ಕೃಪಯಾ ಶಿಶುಂ ದೃಷ್ಟ್ವಾ ಸುಲಕ್ಷಣಮ್ ।
ಸಾರ್ಥವಾಹೋ ನಿನಾಯ ಸ್ವಂ ದೇಶಂ ಸ್ವಸೃಸಖಂ ತತಃ ॥ ೩೯
ತತ್ರಾಸೀತ್ ಸ ಮಹೀಪಾಲೋ ಬಾಲ್ಯೇಽಪ್ಯಗ್ನಿಕ್ರಿಯಾರತಃ ।
ಸದನೇ ತಸ್ಯ ವಣಿಜಃ ಪುತ್ರಸ್ನೇಹೇನ ಪಶ್ಯತಃ ॥ ೪೦
ಏಕದಾ ನೃಪತೇರ್ಮಂತ್ರೀ ತಾರಾಪುರನಿವಾಸಿನಃ ।
ತಾರಾಧರ್ಮಾಭಿಧಾನಸ್ಯ ಕಾರ್ಯಾರ್ತ್ತೇನಾಗತಃ ಪಥಾ ॥ ೪೧
ವಿವೇಶ ಸಾರ್ಥವಾಹಸ್ಯ ತಸ್ಯ ಮಿತ್ರಂ ದ್ವಿಜೋತ್ತಮಃ ।
ಗೃಹಾನನಂತಸ್ವಾಮೀತಿ ಸಹಸ್ತ್ಯಶ್ವಪದಾತಿಕಃ ॥ ೪೨

೪೩–೪೪. ಅಲ್ಲಿ ವಿಶ್ರಮಿಸಿಕೊಂಡ ಮೇಲೆ ಮಂತ್ರಿಯು ಅಲ್ಲಿ ಮಹೀಪಾಲನನ್ನು ನೋಡಿದನು. ಶುಭವಾದ ಆಕಾರವುಳ್ಳ ಹಾಗೂ ಜಪತಪ, ಅಗ್ನಿಕಾರ್ಯಗಳಲ್ಲಿ ಆಸಕ್ತನಾಗಿದ್ದ ಅವನ ವೃತ್ತಾಂತವನ್ನು ವರ್ತಕನಿಂದ ಕೇಳಿ ತಿಳಿದುಕೊಂಡು ಅವನು ತನ್ನದೇ ವರ್ಣದವನೆಂದು ತಿಳಿದು, ತನಗೆ ಮಕ್ಕಳಿಲ್ಲದುದರಿಂದ ಮಹೀಪಾಲನನ್ನೂ ಅವನ ಸೋದರಿಯನ್ನೂ ತನಗೆ ಕೊಡಬೇಕೆಂದು ವರ್ತಕನನ್ನು ಕೇಳಿಕೊಂಡನು.

೪೫ ಅದರಂತೆ ವರ್ತಕಮುಖ್ಯನು ಆ ಇಬ್ಬರು ಮಕ್ಕಳನ್ನೂ ಅವನಿಗೆ ಕೊಟ್ಟನು. ಅವರನ್ನು ಕರೆದುಕೊಂಡು ಅನಂತಸ್ವಾಮಿಯು ಪರಿವಾರದೊಡನೆ ತಾರಾಪುರಕ್ಕೆ ಹೋದನು.

೪೬ ಅಲ್ಲಿ ಆ ಮಂತ್ರಿಯು ಮಹೀಪಾಲನನ್ನು ಪುತ್ರನನ್ನಾಗಿ ಇರಿಸಿಕೊಂಡನು. ಮಹೀಪಾಲನು ವಿದ್ಯೆ ಮತ್ತು ವಿಪುಲವಾದ ಸಂಪತ್ತುಳ್ಳ ಮಂತ್ರಿಯ ಮನೆಯಲ್ಲಿ ಇದ್ದನು.

೪೭ ಈ ಮಧ್ಯದಲ್ಲಿ ಕಿರಾತರ ಹಳ್ಳಿಯಲ್ಲಿ ಬಂಧನಕ್ಕೊಳಗಾದ ಚಂದ್ರಸ್ವಾಮಿಯ ಬಳಿಗೆ ಕಿರಾತಾಧಿಪತಿಯಾದ ಸಿಂಹದಂಷ್ಟ್ರನು ಬಂದು ಹೇಳಿದನು:

೪೮ "ಬ್ರಾಹ್ಮಣನೇ ! ನಾನು ನಿನ್ನನ್ನು ಸತ್ಕರಿಸಿ ಬಿಟ್ಟು ಬಿಡಬೇಕು, ನಿನ್ನನ್ನು ಕೊಲ್ಲಬಾರದು ಎಂದು ದೇವನಾದ ಸೂರ್ಯನು ಸ್ವಪ್ನದಲ್ಲಿ ನನಗೆ ಆದೇಶ ಮಾಡಿದನು.

---

ಸ ವಿಶ್ರಾಂತೋಽತ್ರ ತಂ ದೃಷ್ಟ್ವಾ ಮಹೀಪಾಲಂ ಶುಭಾಕೃತಿಮ್ ।
ಜಪಾಗ್ನಿಕಾರ್ಯಾದಿರತಂ ವೃತ್ತಾಂತಂ ಪರಿಪೃಚ್ಛ್ಯ ಚ ॥ ೪೩
ಅನಪತ್ಯೋ ವಿದಿತ್ವಾ ಚ ಸವರ್ಣಂ ಸಾರ್ಥವಾಹತಃ ।
ತಸ್ಮಾದ್ಯಯಾಚೇಽಪತ್ಯಾರ್ಥೀ ಮಂತ್ರೀ ತದ್ಭಗಿನೀಂ ಚ ತಾಮ್ ॥ ೪೪
ತತಸ್ತೌ ತೇನ ವೈಶ್ಯೇನ ದತ್ತಾವಾದಾಯ ದಾರಕೌ ।
ಸಾರ್ಥವಾಹೇನ ಸೋಽನಂತಸ್ವಾಮೀ ತಾರಾಪುರಂ ಯಯೌ ॥ ೪೫
ತತ್ರ ಪುತ್ರೀಕೃತಸ್ತೇನ ಮಹೀಪಾಲಃ ಸ ಮಂತ್ರಿಣಾ ।
ತಸ್ಥೌ ತದ್ಭವನೇಽಪ್ಯಸ್ಯ ವಿದ್ಯಾವಿಪುಲಸಂಪದಿ ॥ ೪೬
ಅತ್ರಾಂತರೇ ಚ ಬದ್ಧಂ ತಂ ಚಂದ್ರಸ್ವಾಮಿನಮೇತ್ಯ ಸಃ ।
ಭಿಲ್ಲಾಧಿಪಃ ಸಿಂಹದಂಷ್ಟ್ರಃ ಪಲ್ಲ್ಯಾಂ ತಸ್ಯಾಮಭಾಷತ ॥ ೪೭
ಬ್ರಹ್ಮನ್ ಸ್ವಪ್ನೇಽಹಮಾದಿಷ್ಟಸ್ತಥಾ ದೇವೇನ ಭಾನುನಾ ।
ಯಥಾ ಸಂಪೂಜ್ಯ ಮೋಕ್ತವ್ಯೋ ನ ಹಂತವ್ಯೋ ಮಯಾ ಭವಾನ್ ॥ ೪೮

೪೯. ಆದುದರಿಂದ ಏಳು. ನಿನ್ನ ಇಚ್ಛೆಯಂತೆ ಹೋಗು." ಎಂದು ಹೇಳಿ ಕಿರಾತಾಧಿಪತಿಯು ಮುತ್ತಿನ ಮಣಿ ಮತ್ತು ಕಸ್ತೂರಿಯನ್ನು ಕೊಟ್ಟು ಕಾಡಿನಲ್ಲಿ ಹಿಂಬಾಲಕರನ್ನು ವ್ಯವಸ್ಥೆ ಮಾಡಿ ಚಂದ್ರಸ್ವಾಮಿಯನ್ನು ಬಿಟ್ಟುಬಿಟ್ಟನು.

೫೦–೫೧. ಅನಂತರ ಅಲ್ಲಿಂದ ಬಿಡುಗಡೆ ಹೊಂದಿದ ಚಂದ್ರಸ್ವಾಮಿಯು ತಂಗಿಯೊಡನಿದ್ದ ಪುತ್ರ ಮಹೀಪಾಲನನ್ನು ಕಾಣದೆ ಹುಡುಕುತ್ತಾ ಕಾಡಿನಿಂದ ಹೊರಟು ಅಲೆದಾಡುತ್ತಾ ಸಮುದ್ರತೀರದಲ್ಲಿದ್ದ ಜಲಪುರವೆಂಬ ಹೆಸರಿನ ಪಟ್ಟಣವನ್ನು ಸೇರಿ ಯಾವನೋ ಒಬ್ಬ ಬ್ರಾಹ್ಮಣನ ಮನೆಗೆ ಅತಿಥಿಯಾಗಿ ಪ್ರವೇಶಿಸಿದನು.

೫೨. ಅಲ್ಲಿ ಊಟವಾದ ಮೇಲೆ ಪ್ರಸಂಗವಶಾತ್ ತನ್ನ ವೃತ್ತಾಂತವನ್ನು ಹೇಳಿದ ಚಂದ್ರಸ್ವಾಮಿಯನ್ನು ಕುರಿತು ಗೃಹಸ್ವಾಮಿಯಾದ ಆ ಬ್ರಾಹ್ಮಣನು ಹೇಳಿದನು.

೫೩. "ಕನಕವರ್ಮನೆಂಬ ಹೆಸರಿನ ವರ್ತಕನು ಕಳೆದ ದಿನಗಳಲ್ಲಿ ಇಲ್ಲಿಗೆ ಬಂದಿದ್ದನು. ಅವನಿಗೆ ಕಾಡಿನಲ್ಲಿ ಸೋದರಿಯೊಡನಿದ್ದ ಒಬ್ಬ ಬ್ರಾಹ್ಮಣ ಬಾಲಕನು ಸಿಕ್ಕಿದನು.

೫೪. ಅತ್ಯಂತ ಸುಂದರರಾದ ಆ ಇಬ್ಬರು ಮಕ್ಕಳನ್ನೂ ಕರೆದುಕೊಂಡು ಅವನು ಇಲ್ಲಿಂದ ನಾರಿಕೇಲ ಮಹಾದ್ವೀಪಕ್ಕೆ ಹೋದನು. ಆದರೆ ಅವನು ಆ ಮಕ್ಕಳ ಹೆಸರನ್ನು ಹೇಳಲಿಲ್ಲ.'

೫೫. ಅದನ್ನು ಕೇಳಿ ನಿಶ್ಚಯವಾಗಿ ಅವರಿಬ್ಬರೂ ತನ್ನವರೇ ಎಂದು ಯೋಚಿಸುತ್ತಾ ಚಂದ್ರಸ್ವಾಮಿಯು ಆ ದ್ವೀಪ ಶ್ರೇಷ್ಠವನ್ನು ಕುರಿತು ಹೋಗಲು ನಿಶ್ಚಯ ಮಾಡಿದನು.

---

ತದುತ್ತಿಷ್ಠ ವ್ರಜ ಸ್ವೇಚ್ಛಮಿತ್ಯುಕ್ತ್ವಾ ಸ ಮುಮೋಚ ತಮ್ ।
ಪ್ರತ್ತಮುಕ್ತಾಮೃಗಮದಂ ಕ್ಲೃಪ್ತಾರಣ್ಯಾನುಯಾತ್ರಿಕಮ್ ॥ ೪೯
ಸೋಽಥ ಮುಕ್ತಸ್ತತಶ್ಚಂದ್ರಸ್ವಾಮೀ ತಮನುಜಾಯುತಮ್ ।
ಅಪ್ರಾಪ್ಯಾರಣ್ಯತಃ ಪುತ್ರಂ ಮಹೀಪಾಲಂ ಗವೇಷಯನ್ ॥ ೫೦
ಭ್ರಮನ್ನಬ್ಧೇಸ್ತಟೇ ಪ್ರಾಪ್ಯ ನಾಮ್ನಾ ಜಲಪುರಂ ಪುರಮ್ ।
ಪ್ರವಿವೇಶಾತಿಥಿರ್ಭೂತ್ವಾ ಗೃಹಂ ವಿಪ್ರಸ್ಯ ಕಸ್ಯಚಿತ್ ॥ ೫೧
ತತ್ರ ಭುಕ್ತೋತ್ತರಾಖ್ಯಾತಸ್ವವೃತ್ತಾಂತಂ ಪ್ರಸಂಗತಃ ।
ತಂ ಸ ವಿಪ್ರೋ ಗೃಹಪತಿಶ್ಚಂದ್ರಸ್ವಾಮಿನಮಭ್ಯಧಾತ್ ॥ ೫೨
ವಣಿಕ್ಕನಕವರ್ಮಾಖ್ಯೋಽತೀತೇಷ್ವಾಗಾದ್ದಿನೇಷ್ವಿಹ ।
ತೇನಾಟವ್ಯಾಂ ಸ್ವಸೃಸಖಃ ಪ್ರಾಪ್ತೋ ಬ್ರಾಹ್ಮಣದಾರಕಃ ॥ ೫೩
ತೌ ಚಾದಾಯಾತಿಭವ್ಯೌ ದ್ವೌ ದಾರಕೌ ಸ ಇತೋ ಗತಃ ।
ನಾರಿಕೇಲಮಹಾದ್ವೀಪೇ ನೋಕ್ತಂ ತನ್ನಾಮ ತೇನ ತು ॥ ೫೪
ತಚ್ಛ್ರುತ್ವಾ ಮಾಮಕಾವೇವ ನೂನಂ ತಾವಿತಿ ಚಿಂತಯನ್ ।
ಚಂದ್ರಸ್ವಾಮೀ ಮತಿಂ ಚಕ್ರೇ ಗಂತುಂ ದ್ವೀಪವರಂ ಸ ತಮ್ ॥ ೫೫

೫೬. ಆ ರಾತ್ರಿಯನ್ನು ಅಲ್ಲೇ ಕಳೆದು ಆ ಚಂದ್ರಸ್ವಾಮಿಯು ನಾರಿಕೇಲ ದ್ವೀಪಕ್ಕೆ ಹೋಗುವ ವಿಷ್ಣುಶರ್ಮನೆಂಬ ವರ್ತಕನನ್ನು ಹುಡುಕಿ ಅವನ ಸಂಪರ್ಕವನ್ನು ಮಾಡಿದನು.

೫೭. ಆ ವರ್ತಕನ ಜೊತೆಯಲ್ಲೇ ಹಡಗನ್ನು ಹತ್ತಿ ಮಕ್ಕಳ ಮೇಲಿನ ಪ್ರೀತಿಯಿಂದ ಸಮುದ್ರ ಮಾರ್ಗವಾಗಿ ಚಂದ್ರಸ್ವಾಮಿಯು ಆ ದ್ವೀಪಕ್ಕೆ ಹೋದನು.

೫೮–೫೯. ಅಲ್ಲಿ ವಿಚಾರಿಸಿದಾಗ ಅವನಿಗೆ ಆ ದ್ವೀಪ ನಿವಾಸಿಗಳಾದ ವರ್ತಕರು "ಕನಕವರ್ಮನೆಂಬ ವರ್ತಕನೇನೋ ಕಾಡಿನಲ್ಲಿ ದೊರಕಿದ ಉತ್ತಮ ರೂಪವಂತರಾದ ಇಬ್ಬರು ಬ್ರಾಹ್ಮಣ ಬಾಲಕರನ್ನು ಕರೆದುಕೊಂಡು ಇಲ್ಲಿಗೆ ಬಂದಿದ್ದನು. ಆದರೆ ಅವನು ಇಲ್ಲಿಂದ ಈಗ ಆ ಮಕ್ಕಳೊಡನೆ ಕಟಾಹದ್ವೀಪಕ್ಕೆ ಹೋದನು" ಎಂದು ತಿಳಿಸಿದರು.

೬೦. ಅದನ್ನು ಕೇಳಿ ಆ ಬ್ರಾಹ್ಮಣನು ಅಲ್ಲಿಂದ ಹಡಗಿನ ಮೂಲಕ ಕಟಾಹ ದ್ವೀಪಕ್ಕೆ ಹೋಗುವ ದಾನವರ್ಮನೆಂಬ ವರ್ತಕನ ಜೊತೆ ಕಟಾಹದ್ವೀಪಕ್ಕೆ ಹೋದನು.

೬೧. ಅಲ್ಲಿಯೂ ಕೂಡ ಆ ಬ್ರಾಹ್ಮಣನು ಕನಕವರ್ಮನೆಂಬ ಆ ವರ್ತಕನು ಆ ದ್ವೀಪದಿಂದ ಕರ್ಪೂರವೆಂಬ ಹೆಸರುಳ್ಳ ದ್ವೀಪಕ್ಕೆ ಹೋದನೆಂದು ಕೇಳಿದನು.

೬೨. ಹೀಗೆ ಕ್ರಮವಾಗಿ ಕರ್ಪೂರ, ಸುವರ್ಣದ್ವೀಪ ಮತ್ತು ಸಿಂಹಲಗಳನ್ನು ಕುರಿತು ವರ್ತಕರ ಜೊತೆ ಹೋಗಿಯೂ ಕೂಡ ಆ ಬ್ರಾಹ್ಮಣನಿಗೆ ಕನಕವರ್ಮನೆಂಬ ಆ ವರ್ತಕನು ಸಿಕ್ಕಲಿಲ್ಲ.

---

ನೀತ್ವಾ ಚ ರಾತ್ರಿಮನ್ವಿಷ್ಯ ವಣಿಜಾ ವಿಷ್ಣುಶರ್ಮಣಾ ।
ಸ ವ್ಯಧಾತ್ ಸಂಗತಿಂ ದ್ವೀಪಂ ನಾರಿಕೇಲಂ ಪ್ರಯಾಸ್ಯತಾ ॥ ೫೬
ತೇನೈವ ಚ ಸಮಾರುಹ್ಯ ಯಾನಪಾತ್ರಂ ಜಗಾಮ ಸಃ ।
ಚಂದ್ರಸ್ವಾಮೀ ಸುತಸ್ನೇಹಾದ್ದ್ವೀಪಮಬ್ಧಿಪಥೇನ ತಮ್ ॥ ೫೭
ತತ್ರ ಪೃಚ್ಛಂತಮೂಚುಸ್ತಂ ವಣಿಜಸ್ತನ್ನಿವಾಸಿನಃ ।
ವಣಿಕ್ಕನಕವರ್ಮಾಖ್ಯಃ ಕಾಮಮಾಸೀದಿಹಾಗತಃ ॥ ೫೮
ಸುರೂಪಾವಟವೀಪ್ರಾಪ್ತಾವಾದಾಯ ದ್ವಿಜದಾರಕೌ ।
ಗತಃ ಕಟಾಹದ್ವೀಪಂ ತು ತದ್ಯುಕ್ತಃ ಸ ಇತೋಽಧುನಾ ॥ ೫೯
ತಚ್ಛ್ರುತ್ವಾ ಸ ತತೋ ವಿಪ್ರೋ ವಣಿಜಾ ದಾನವರ್ಮಣಾ ।
ಪೋತೇನ ಗಚ್ಛತಾ ಸಾಕಂ ಕಟಾಹದ್ವೀಪಮಭ್ಯಗಾತ್ ॥ ೬೦
ತತ್ರಾಪಿ ಸ ದ್ವಿಜೋಽಶ್ರೌಷೀದ್ಗತಂ ತಂ ವಣಿಜಂ ತತಃ ।
ದ್ವೀಪಾತ್ ಕನಕವರ್ಮಾಣಂ ದ್ವೀಪಂ ಕರ್ಪೂರಸಂಜ್ಞಕಮ್ ॥ ೬೧
ಏವಂ ಕ್ರಮೇಣ ಕರ್ಪೂರಸುವರ್ಣದ್ವೀಪಸಿಂಹಲಾನ್ ।
ವಣಿಗ್ಭಿಃ ಸಹ ಗತ್ವಾಪಿ ತಂ ಪ್ರಾಪ ವಣಿಜಂ ನ ಸಃ ॥ ೬೨

೬೩. ಆದರೆ ಸಿಂಹಲದ್ವೀಪವಾಸಿಗಳಿಂದ ಕನಕವರ್ಮನೆಂಬ ವರ್ತಕನು ತನ್ನ ದೇಶವಾದ ಚಿತ್ರಕೂಟವೆಂಬ ಪಟ್ಟಣಕ್ಕೆ ಹೋದನೆಂದು ಕೇಳಿದನು.

೬೪. ಅಲ್ಲಿಂದ ಚಂದ್ರಸ್ವಾಮಿಯು ಕೋಟೀಶ್ವರನೆಂಬ ಹೆಸರುಳ್ಳ ವರ್ತಕನೊಡನೆ ಅವನ ಹಡಗಿನಿಂದ ಸಮುದ್ರವನ್ನು ದಾಟಿ ಚಿತ್ರಕೂಟಪುರಕ್ಕೆ ಹೋದನು.

೬೫. ಅಲ್ಲಿ ಚಂದ್ರಸ್ವಾಮಿಗೆ ಕನಕವರ್ಮನೆಂಬ ವರ್ತಕನು ಸಿಕ್ಕಿದನು. ಚಂದ್ರಸ್ವಾಮಿಯು ಆ ವರ್ತಕನಿಗೆ ಮಕ್ಕಳ ವಿಷಯದಲ್ಲಿ ಉತ್ಸುಕನಾಗಿ ತನ್ನ ಸಮಸ್ತ ವೃತ್ತಾಂತವನ್ನೂ ಹೇಳಿದನು.

೬೬ ಅನಂತರ ಆ ಕನಕವರ್ಮನು ಚಂದ್ರಸ್ವಾಮಿಯ ದುಃಖವನ್ನು ತಿಳಿದು ತಾನು ಅರಣ್ಯದಿಂದ ಕರೆತಂದಿದ್ದ ಆ ಇಬ್ಬರು ಮಕ್ಕಳನ್ನು ಅವನಿಗೆ ತೋರಿಸಿದನು.

೬೭ ಚಂದ್ರಸ್ವಾಮಿಯ ಆ ಮಕ್ಕಳನ್ನು ನೋಡಿದಾಗ ಅವರಿಬ್ಬರೂ ಅವನವರಾಗಿರಲಿಲ್ಲ. ಅವರು ಬೇರೆ ಯಾರೋ ಇಬ್ಬರು ಆಗಿದ್ದರು.

೬೮. ಚಂದ್ರಸ್ವಾಮಿಗೆ ಬಹಳ ದುಃಖವಾಯಿತು. ಅವನು ಕಣ್ಣೀರು ಸುರಿಸುತ್ತಾ ನಿರಾಶನಾಗಿ ಗೋಳಾಡಿದನು. "ಅಯ್ಯೋ ? ಇಷ್ಟು ಸುತ್ತಾಡಿದರೂ ಕೂಡ ನನ್ನ ಮಕ್ಕಳು ಸಿಗಲಿಲ್ಲ.

---

ಸಿಂಹಲೇಭ್ಯಸ್ತು ಶುಶ್ರಾವ ಗತಂ ತಂ ವಣಿಜಂ ನಿಜಮ್ ।
ದೇಶಂ ಕನಕವರ್ಮಾಣಂ ಚಿತ್ರಕೂಟಾಭಿಧಂ ಪುರಮ್ ॥ ೬೩

ತತಃ ಕೋಟೀಶ್ವರಾಖ್ಯೇನ ವಣಿಜಾ ಸ ಸಮಂ ಯಯೌ ।
ಚಂದ್ರಸ್ವಾಮೀ ಚಿತ್ರಕೂಟಂ ತತ್ಪೋತೋತ್ತೀರ್ಣವಾರಿಧಿಃ ॥ ೬೪

ತಸ್ಮಿನ್ ಕನಕವರ್ಮಾಣಂ ವಣಿಜಂ ತಮವಾಪ ಸಃ ।
ಆಚಖ್ಯೌ ಚಾಖಿಲಂ ತಸ್ಮೈ ಸ್ವೋದಂತಂ ದಾರಕೋತ್ಸುಕಃ ॥ ೬೫

ತತಃ ಕನಕವರ್ಮಾ ತೌ ಜ್ಞಾತಾರ್ತಿಃ ಸೋಽಸ್ಯ ದಾರಕೌ ।
ದರ್ಶಯಾಮಾಸ ಯೌ ತೇನ ಲಬ್ಧ್ವಾ ನೀತಾವರಣ್ಯತಃ ॥ ೬೬

ಚಂದ್ರಸ್ವಾಮೀ ಚ ತೌ ಯಾವದ್ವೀಕ್ಷತೇ ದಾರಕಾವುಭೌ ।
ತಾವನ್ನೈವ ತದೀಯೌ ತೌ ತಾವನ್ಯಾವೇವ ಕೌಚನ ॥ ೬೭

ತತಃ ಸಬಾಷ್ಪೋ ಶೋಕಾರ್ತೋ ನಿರಾಶೋ ವಿಲಲಾಪ ಸಃ ।
ಇಯದ್ಭ್ರಾಂತ್ವಾಪಿ ಹಾ ಪ್ರಾಪ್ತೋ ನ ಪುತ್ರೋ ನ ಸುತಾ ಮಯಾ ॥ ೬೮

೧೯. ನೀಚನಾದ ಪ್ರಭುವಿನಂತೆ ವಿಧಿಯು ನನಗೆ ಆಸೆಯನ್ನು ತೋರಿಸಿದನು. ಆದರೆ ಆಸೆಯನ್ನು ಪೂರ್ಣಗೊಳಿಸಲಿಲ್ಲ. ದುರಾತ್ಮನಾದ ವಿಧಿಯು ದೂರದಿಂದ ದೂರಕ್ಕೆ ನನ್ನನ್ನು ವ್ಯರ್ಥವಾಗಿ ಅಲೆದಾಡಿಸಿದನು."

೨೦. ಇತ್ಯಾದಿಯಾಗಿ ಗೋಳಾಡುತ್ತಾ ಇದ್ದ ಚಂದ್ರಸ್ವಾಮಿಯನ್ನು ವರ್ತಕನಾದ ಕನಕವರ್ಮನು ಸಾಂತ್ವನ ಮಾಡಿದನು. ಹಾಗೆ ಆಶ್ವಾಸಿತನಾದ ನಂತರ ಚಂದ್ರಸ್ವಾಮಿಯು ಶೋಕದಿಂದ ಹೇಳಿದನು:

೨೧. "ಭೂಮಂಡಲವನ್ನು ಸುತ್ತುತ್ತಿರುವ ನನಗೆ ಒಂದು ವರ್ಷದ ಒಳಗಾಗಿ ನನ್ನ ಮಕ್ಕಳಿಬ್ಬರು ಸಿಕ್ಕದಿದ್ದರೆ ನಾನು ಗಂಗಾತೀರದಲ್ಲಿ ತಪಸ್ಸಿನಿಂದ ಈ ಶರೀರವನ್ನು ತ್ಯಜಿಸುವೆನು."

೨೨. ಹೀಗೆ ಹೇಳಿದ ಚಂದ್ರಸ್ವಾಮಿಯನ್ನು ಕುರಿತು ಅಲ್ಲಿದ್ದ ಯಾವನೋ ಒಬ್ಬ ಜ್ಞಾನಿಯು ಹೇಳಿದನು: "ನಾರಾಯಣಿಯ ಅನುಗ್ರಹದಿಂದ ಆ ಇಬ್ಬರು ಮಕ್ಕಳನ್ನು ಪಡೆದೇ ಪಡೆಯುವೆ. ಹೋಗು"

೨೩. ಅದನ್ನು ಕೇಳಿ ಚಂದ್ರಸ್ವಾಮಿಯು ಸಂತುಷ್ಟಹೃದಯನಾಗಿ ಸೂರ್ಯನ ಅನುಗ್ರಹವನ್ನು ಸ್ಮರಿಸುತ್ತಾ ವರ್ತಕರಿಂದ ಪೂಜಿತನಾಗಿ ಆ ಪಟ್ಟಣದಿಂದ ಹೊರಟನು.

೨೪. ಅನಂತರ ಚಂದ್ರಸ್ವಾಮಿಯು ಅಗ್ರಹಾರಗಳಲ್ಲೂ ಹಳ್ಳಿಗಳಲ್ಲೂ ಪಟ್ಟಣಗಳಲ್ಲೂ ಸುತ್ತಾಡಿ ಹುಡುಕುತ್ತಾ ಒಂದು ದಿವಸ ಸಾಯಂಕಾಲ ಎತ್ತರವಾದ ಮರಗಳಿಂದ ಕೂಡಿದ ಒಂದು ಅರಣ್ಯವನ್ನು ಸೇರಿದನು.

---

ಧಾತ್ರಾ ಕುಪ್ರಭುಣೇವಾಶಾ ದರ್ಶಿತಾ ಮೇ ನ ಪೂರಿತಾ ।
ಭ್ರಾಮಿತೋಽಸ್ಮಿ ಚ ಮಿಥ್ಯೈವ ದೂರಾದ್ದೂರಂ ದುರಾತ್ಮನಾ ॥ ೧೯
ಇತ್ಯಾದಿ ಶೋಚನ್ ವಣಿಜಾ ಕ್ರಮಾತ್ ಕನಕವರ್ಮಣಾ ।
ಆಶ್ವಾಸಿತಃ ಸ ತೇನಾಥ ಚಂದ್ರಸ್ವಾಮೀ ಶುಚಾಬ್ರವೀತ್ ॥ ೨೦
ವತ್ಸರೇಣಾತ್ಮಜೌ ತೌ ಚೇನ್ನ ಪ್ರಾಪ್ಸ್ಯಾಮಿ ಭುವಂ ಭ್ರಮನ್ ।
ತತಸ್ತ್ಯಕ್ಷ್ಯಾಮಿ ತಪಸಾ ಗಂಗಾತೀರೇ ಶರೀರಕಮ್ ॥ ೨೧
ಇತ್ಯುಕ್ತವಂತಂ ತತ್ರಸ್ಥೋ ಜ್ಞಾನೀ ಕೋಽಪಿ ತಮಭ್ಯಧಾತ್ ।
ನಾರಾಯಣ್ಯಾಃ ಪ್ರಸಾದಾತ್ತೌ ಪ್ರಾಪ್ಸ್ಯಸ್ಯೇವಾತ್ಮಜೌ ವ್ರಜ ॥ ೨೨
ತಚ್ಛ್ರುತ್ವಾ ಸ ಪ್ರಹೃಷ್ಟಾತ್ಮಾ ಭಾಸ್ಕರಾನುಗ್ರಹಂ ಸ್ಮರನ್ ।
ವಣಿಗ್ಭಿಃ ಪೂಜಿತಃ ಪ್ರಾಯಾಚ್ಚಂದ್ರಸ್ವಾಮೀ ಪುರಾತ್ತತಃ ॥ ೨೩
ತತೋಽಗ್ರಹಾರಾನ್ ಗ್ರಾಮಾಂಶ್ಚ ಚಿನ್ವನ್ ಸ ನಗರಾಣಿ ಚ ।
ಭ್ರಮನ್ ಪ್ರಾಪ್ಯೈಕದಾ ಸಾಯಂ ವನಂ ಪ್ರಾಂಶುಬಹುದ್ರುಮಮ್ ॥ ೨೪

೭೫. ಅಲ್ಲಿ ರಾತ್ರಿಯನ್ನು ಕಳೆಯುವುದಕ್ಕಾಗಿ ಹಣ್ಣು ನೀರುಗಳಿಂದ ಜೀವನ ಪೋಷಣೆಯನ್ನು ಮಾಡಿಕೊಂಡು ಚಂದ್ರಸ್ವಾಮಿಯು ಸಿಂಹ, ಹುಲಿ ಮುಂತಾದವುಗಳ ಭಯದಿಂದ ಒಂದು ಮರವನ್ನು ಹತ್ತಿ ಕುಳಿತನು.

೭೬–೭೭. ಅಲ್ಲಿ ರಾತ್ರಿ ನಿದ್ರೆ ಬರದೆ ಕುಳಿತಿದ್ದ ಅವನು ಮರದ ಕೆಳಗೆ ತಮಗೆ ಯೋಗ್ಯವಾದ ನಾನಾವಿಧ ಕಾಣಿಕೆಗಳನ್ನು ತೆಗೆದುಕೊಂಡು ಭೈರವದೇವನ ಆಗಮನವನ್ನು ನಿರೀಕ್ಷಿಸುತ್ತಾ ಬಂದಿದ್ದ ನಾರಾಯಣಿಯನ್ನು ಮುಂದಿಟ್ಟುಕೊಂಡಿದ್ದ ಮಾತೃದೇವತೆಗಳ ಒಂದು ದೊಡ್ಡ ಸಮೂಹವನ್ನು ನೋಡಿದನು.

೭೮. “ಇಂದು ದೇವನು ಏಕೆ ವಿಳಂಬ ಮಾಡುತ್ತಾನೆ” ಎಂದು ಮಾತೃದೇವತೆಗಳು ನಾರಾಯಣಿಯನ್ನು ಕೇಳಿದರು. ಅವಳು ನಕ್ಕಳು. ಆದರೆ ಏನೂ ಹೇಳಲಿಲ್ಲ.

೭೯. ಅವರು ಬಿಡದೆ ಹಠದಿಂದ ಕೇಳಿದಾಗ, ಅವಳು ಅವರಿಗೆ ಈ ರೀತಿಯಾಗಿ ಹೇಳಿದಳು: “ಸಖಿಯರೇ ! ಇದು ಲಜ್ಜಾಕರವಾದುದಾದರೂ ನಾನು ಹೇಳುತ್ತೇನೆ.

೮೦. “ಈ ಲೋಕದಲ್ಲಿ ಸುರಪುರವೆಂಬ ಪಟ್ಟಣದಲ್ಲಿ ಸುರಸೇನ ಎಂಬ ರಾಜನಿದ್ದಾನೆ. ಅವನಿಗೆ ವಿದ್ಯಾಧರೀ ಎಂಬ ಮಗಳು ಇದ್ದಾಳೆ. ಅವಳ ಸೌಂದರ್ಯ ಬಹಳ ಪ್ರಸಿದ್ಧವಾದುದು.

೮೧. ವಿವಾಹಯೋಗ್ಯಳಾದ ಅವಳಿಗೆ ವಿಮಲನೆಂಬ ರಾಜನ ಮಗನಾದ ಪ್ರಭಾಕರನೆಂಬವನು ಅವಳಿಗೆ ರೂಪದಲ್ಲಿ ಸಮಾನನಾದವನೆಂದು ಆ ರಾಜನಿಗೆ ತಿಳಿದುಬಂದಿತು.

---

ತತ್ರ ಕ್ಷಪಯಿತುಂ ರಾತ್ರಿಂ ಕೃತ್ವಾ ವೃತ್ತಿಂ ಫಲಾಂಬುಭಿಃ ।
ಸ ತಸ್ಥೌ ತರುಮಾರುಹ್ಯ ಸಿಂಹವ್ಯಾಘ್ರಾದಿಶಂಕಯಾ ॥ ೭೫
ಅನಿದ್ರಶ್ಚ ನಿಶೀಥೇಽತ್ರ ದದರ್ಶ ಸ ತರೋರಧಃ ।
ಮಹನ್ನಾರಾಯಣೀಮುಖ್ಯಂ ಮಾತೃಚಕ್ರಂ ಸಮಾಗತಮ್ ॥ ೭೬
ಉಪಹಾರಾನ್ ಸಮಾಹೃತ್ಯ ನಾನಾರೂಪಾನ್ನಿಜೋಚಿತಾನ್ ।
ಪ್ರತೀಕ್ಷಮಾಣಂ ದೇವಸ್ಯ ಭೈರವಸ್ಯ ಕಿಲಾಗಮಮ್ ॥ ೭೭
ಚಿರಯತ್ಯದ್ಯ ಕಿಂ ದೇವ ಇತಿ ತತ್ರ ಚ ಮಾತರಃ ।
ನಾರಾಯಣೀಮಥಾಪೃಚ್ಛನ್‌ಸಾ ಜಹಾಸ ತು ನಾಬ್ರವೀತ್ ॥ ೭೮
ಅತಿನಿರ್ಬಂಧಪೃಷ್ಟಾ ಚ ತಾಭಿಸ್ತಾಃ ಪ್ರತ್ಯುವಾಚ ಸಾ ।
ಲಜ್ಜಾವಹಂ ಯದಪ್ಯೇತತ್‌ಸಖ್ಯಸ್ತದಪಿ ವಚ್ಮ್ಯಹಮ್ ॥ ೭೯
ಅಸ್ತೀಹ ಸುರಸೇನಾಖ್ಯೋ ರಾಜಾ ಸುರಪುರೇ ಪುರೇ ।
ತಸ್ಯ ವಿದ್ಯಾಧರೀ ನಾಮ ಖ್ಯಾತರೂಪಾಸ್ತಿ ಚಾತ್ಮಜಾ ॥ ೮೦
ಪ್ರದೇಯಾಯಾಶ್ಚ ತೇನಾಸ್ಯಾ ರಾಜ್ಞಾ ರೂಪಸಮಃ ಶ್ರುತಃ ।
ವಿಮಲಾಖ್ಯಸ್ಯ ತನಯೋ ರಾಜ್ಞೋ ನಾಮ್ನಾ ಪ್ರಭಾಕರಃ ॥ ೮೧

೮೨. ಸುರಸೇನ ರಾಜನು ಆ ಪ್ರಭಾಕರನಿಗೆ ಅವಳನ್ನು ವಿವಾಹ ಮಾಡಿಕೊಡಲು ಅಪೇಕ್ಷಿಸುತ್ತಿರುವಾಗ ಆ ವಿಮಲ ರಾಜನೂ ಸುರಸೇನನ ಪುತ್ರಿಯು ತನ್ನ ಪುತ್ರನಿಗೆ ಅನುರೂಪಳಾದವಳು ಎಂದು ಕೇಳಿದನು.

೮೩. ಅನಂತರ ವಿಮಲನು ದೂತರ ಮೂಲಕ ಪುತ್ರನಿಗೋಸ್ಕರ ಸುರಸೇನ ಪುತ್ರಿಯಾದ ವಿದ್ಯಾಧರಿಯನ್ನು ಕೊಡಲು ಸುರಸೇನನ್ನು ಕೇಳಿದನು.

೮೪. ಅದರಂತೆ ಸುರಸೇನನು ಯೋಗ್ಯವಾದ ಸಂಪತ್ತಿನೊಡನೆ ವಿಮಲನ ಪುತ್ರನಾದ ಪ್ರಭಾಕರನಿಗೆ ಮಗಳನ್ನು ಶಾಸ್ತ್ರವಿಧಿಗನುಸಾರವಾಗಿ ವಿವಾಹ ಮಾಡಿಕೊಟ್ಟನು.

೮೫. ಅನಂತರ ಆ ವಿದ್ಯಾಧರಿಯು ಮಾವನಿಗೆ ಸೇರಿದ ವಿಮಲಪುರವೆಂಬ ಪಟ್ಟಣವನ್ನು ಸೇರಿ ರಾತ್ರಿಯಲ್ಲಿ ಪತಿಯೊಡನೆ ಶಯನವನ್ನು ಸೇವಿಸಿದಳು.

೮೬. ಅಲ್ಲಿ ಸಂಭೋಗವಿಲ್ಲದೆ ಮಲಗಿದ ಪತಿಯನ್ನು ಉತ್ಕಂಠಿತಳಾಗಿ ಅವಳು ನೋಡುವಾಗ ಅವನು ನಪುಂಸಕನೆಂಬುದನ್ನು ಅವಳಿಗೆ ತಿಳಿಯಿತು.

೮೭. "ಅಯ್ಯೋ ! ನಾನು ಹಾಳಾದೆ. ನಪುಂಸಕನಾದ ಪತಿಯು ನನಗೆ ಹೇಗೆ ಸಿಕ್ಕಿದನು?" ಎಂದು ಶೋಕಿಸುತ್ತಾ ಆ ರಾಜಪುತ್ರಿಯು ಆ ರಾತ್ರಿಯನ್ನು ಕಳೆದಳು.

೮೮. ಅನಂತರ "ಸರಿಯಾಗಿ ನೋಡದೆ ನನ್ನನ್ನು ನಪುಂಸಕನಿಗೆ ನೀನು ಹೇಗೆ ವಿವಾಹ ಮಾಡಿಕೊಟ್ಟೆ ?" ಎಂದು ಲೇಖವನ್ನು ಬರೆದು ಅವಳು ತಂದೆಗೆ ಕಳುಹಿಸಿಕೊಟ್ಟಳು.

---

ತಸ್ಮೈ ದಿತ್ಸತಿ ತಾಂ ತಸ್ಮಿನ್ ರಾಜ್ಞಿ ತೇನಾಪಿ ಸಾ ಶ್ರುತಾ ।
ವಿಮಲೇನ ಸುತಾ ತಸ್ಯ ನಿಜಪುತ್ರಾನುರೂಪಿಕಾ ॥ ೮೨

ತತಃ ಸವಿಮಲಸ್ತಸ್ಮಾತ್ ಸುರಸೇನಾದಯಾಚತ ।
ವಿದ್ಯಾಧರೀಂ ದೂತಮುಖಾತ್ ಪುತ್ರಾರ್ಥೇ ತಾಂ ತದಾತ್ಮಜಾಮ್ ॥ ೮೩

ಸೋಽಪ್ಯಪೇಕ್ಷಿತಸಂಪತ್ತ್ಯಾ ತತ್ಸುತಾಯ ಸುತಾಮದಾತ್ ।
ಪ್ರಭಾಕರಾಯ ತಸ್ಮೈ ತಾಂ ಸುರಸೇನೋ ಯಥಾವಿಧಿ ॥ ೮೪

ತತಃ ಸಾ ಪ್ರಾಪ್ಯ ವಿಮಲಪುರಾಖ್ಯಂ ಶ್ವಾಶುರಂ ಪುರಮ್ ।
ವಿದ್ಯಾಧರೀ ಸಮಂ ಭರ್ತ್ರಾ ಶಯನೀಯಮಗಾನ್ನಿಶಿ ॥ ೮೫

ತತ್ರಾಸಂಭೋಗಸುಪ್ತಂ ಸಾ ಪತಿಂ ಸೋತ್ಕಾ ಪ್ರಭಾಕರಮ್ ।
ಯಾವನ್ನಿರೀಕ್ಷತೇ ತಾವತ್ತಮಪಶ್ಯನ್ನಪುಂಸಕಮ್ ॥ ೮೬

ಹಾ ಹತಾಸ್ಮಿ ಕಥಂ ಷಂಢಃ ಪತಿಃ ಪ್ರಾಪ್ತೋ ಮಯೇತಿ ಸಾ ।
ಶೋಚಂತೀ ಚೇತಸಾ ರಾತ್ರಿಂ ರಾಜಪುತ್ರೀ ನಿನಾಯ ತಾಮ್ ॥ ೮೭

ನಪುಂಸಕಾಯ ದತ್ತಾಹಮನನ್ವಿಷ್ಯ ಕಥಂ ತ್ವಯಾ ।
ಇತಿ ಲೇಖಂ ಲಿಖಿತ್ವಾ ಚ ಪಿತ್ರೇ ಸಾ ಪ್ರಾಹಿಣೋತ್ತತಃ ॥ ೮೮

೮೯. ಲೇಖವನ್ನು ಓದಿಸಿದ ಕೂಡಲೇ ವಿಮಲನು ತನ್ನನ್ನು ಕಪಟದಿಂದ ಮೋಸ ಮಾಡಿದ್ದಾನೆ ಎಂದು ವಿಮಲನ ಬಗ್ಗೆ ಅವಳ ತಂದೆಯು ಕ್ರೋಧವನ್ನು ತಾಳಿದನು.

೯೦. "ನೀನು ಕಪಟದಿಂದ ನಪುಂಸಕನಾದ ಮಗನಿಗೆ ಮಗಳನ್ನು ಕೊಡುವಂತೆ ನನ್ನನ್ನು ಮಾಡಿದೆಯಾದುದರಿಂದ ಅದರ ಫಲವನ್ನು ಅನುಭವಿಸು. ನೋಡು, ನಾನು ಬಂದು ನಿನ್ನನ್ನು ಕೊಲ್ಲುತ್ತೇನೆ."

೯೧. ಹೀಗೆ ಸುರಸೇನನು ಬಲದಿಂದ ಉದ್ರಿಕ್ತನಾಗಿ ರಾಜನಾದ ವಿಮಲನಿಗೆ ಸಂದೇಶವನ್ನು ಬರೆದು ಕಳುಹಿಸಿದನು.

೯೨. ವಿಮಲನು ಈ ಲೇಖದ ವಿಷಯವನ್ನು ತಿಳಿದು ಮಂತ್ರಿಗಳೊಡನೆ ಚರ್ಚಿಸಿದನು. ಆದರೆ ದುರ್ಜಯನಾದ ಸುರಸೇನನ ವಿಷಯದಲ್ಲಿ ಯಾವ ಉಪಾಯವೂ ತೋರಲಿಲ್ಲ.

೯೩. ಆಗ ಪಿಂಗದತ್ತನೆಂಬ ಮಂತ್ರಿಯು ವಿಮಲನನ್ನು ಕುರಿತು ಹೇಳಿದನು: "ಈ ವಿಷಯದಲ್ಲಿ ಒಂದೇ ಒಂದು ಉಪಾಯವಿದೆ. ಪ್ರಭುವೇ ! ಅದನ್ನ ಅನುಸರಿಸಿದರೆ ನಮಗೆ ಒಳ್ಳೆಯದು.

೯೪. ಸ್ಥೂಲಶಿರಸ್ಸು ಎಂಬ ಯಕ್ಷನು ಇದ್ದಾನೆ. ನನಗೆ ಅವನನ್ನು ಆರಾಧಿಸುವ ಮಂತ್ರ ತಿಳಿದಿದೆ. ಅದರಿಂದ ಅವನು ನನಗೆ ಬೇಕಾದ ವರವನ್ನು ಕೊಡುತ್ತಾನೆ.

---

ಸ ಲೇಖಂ ವಾಚಯಿತ್ವೈವ ವಿಮಲೇನಾಸ್ಮಿ ವಂಚಿತಃ ।
ಛದ್ಮನೇತ್ಯಗಮತ್ಕ್ರೋಧಂ ತತ್ಪಿತಾ ವಿಮಲಂ ಪ್ರತಿ ॥ ೮೯
ಸುತಾಂ ನಪುಂಸಕಾಯಾಹಂ ಯದ್ವ್ಯಾಜಾದ್ದಾಪಿತಸ್ತ್ವಯಾ ।
ಪುತ್ರಾಯ ತತ್ಫಲಂ ಭುಂಕ್ಷ್ವ ಪಶ್ಯ ತ್ವಾಮೇತ್ಯ ಹನ್ಮ್ಯಹಮ್ ॥ ೯೦
ಇತಿ ತಸ್ಮೈ ಸ್ವಲೇಖೇನ ಸಂದಿದೇಶ ಸ ಭೂಪತಿಃ ।
ಸುರಸೇನೋ ಬಲೋದ್ರಿಕ್ತೋ ವಿಮಲಾಯ ಮಹೀಕ್ಷಿತೇ ॥ ೯೧
ವಿಮಲಶ್ಚಾಧಿಗತ್ಯೈತಂ ತಲ್ಲೇಖಾರ್ಥಂ ಸಮಂತ್ರಿಕಃ ।
ವಿಮೃಶನ್ ದುರ್ಜಯೋ ತಸ್ಮಿನ್ನೋಪಾಯಂ ಕಂಚಿದೈಕ್ಷತ ॥ ೯೨
ತತಸ್ತಂ ಪಿಂಗದತ್ತಾಖ್ಯೋ ಮಂತ್ರೀ ವಿಮಲಮಭ್ಯಧಾತ್ ।
ಏಕ ಏವಾಸ್ತ್ಯುಪಾಯೋಽತ್ರ ತಂ ದೇವ ಶ್ರೇಯಸೇ ಕುರು ॥ ೯೩
ಅಸ್ತಿ ಸ್ಥೂಲಶಿರಾ ನಾಮ ಯಕ್ಷಸ್ತಸ್ಯ ಚ ವೇದ್ಮ್ಯಹಮ್ ।
ಮಂತ್ರಮಾರಾಧನಂ ಯೇನ ವರಮಿಷ್ಟಂ ದದಾತಿ ಸಃ ॥ ೯೪

೯೫. ಆ ಮಂತ್ರವನ್ನು ಸ್ವೀಕರಿಸಿ ಅದರಿಂದ ಯಕ್ಷನನ್ನು ಆರಾಧಿಸಿ ಪುತ್ರನಿಗಾಗಿ ಲಿಂಗವನ್ನು ಬೇಡು. ಸದ್ಯಕ್ಕೆ ಯುದ್ಧವು ಶಾಂತವಾಗಲಿ."

೯೬. ಮಂತ್ರಿಯು ಹೀಗೆ ಹೇಳಿದ ಮೇಲೆ ರಾಜನು ಮಂತ್ರಿಯಿಂದ ಆ ಮಂತ್ರವನ್ನು ಸ್ವೀಕರಿಸಿ ಯಕ್ಷನನ್ನು ಆರಾಧಿಸಿ ಪುತ್ರನಿಗಾಗಿ ಅವನಿಂದ ಲಿಂಗವನ್ನು ಯಾಚಿಸಿದನು.

೯೭. ಆಗ ಯಕ್ಷನು ಲಿಂಗವನ್ನು ಕೊಡಲಾಗಿ ವಿಮಲನ ಪುತ್ರನಾದ ಪ್ರಭಾಕರನು ಪುರುಷನಾದನು. ಆದರೆ ಯಕ್ಷನು ನಪುಂಸಕನಾದನು.

೯೮. ಆಗ ಆ ವಿದ್ಯಾಧರಿಯು ಪುರುಷನಾದ ಪ್ರಭಾಕರನನ್ನು ನೋಡಿ ಅವನ ಜೊತೆಯಲ್ಲಿ ಸುರತಸೌಖ್ಯವನ್ನು ಪಡೆದು ಹೀಗೆ ಯೋಚಿಸಿದಳು.

೯೯. 'ಮದದೋಷದಿಂದ ನಾನು ಭ್ರಾಂತಳಾದೆ. ನನ್ನ ಪತಿಯು ನಪುಂಸಕನಲ್ಲ. ಇವನು ಸುಂದರನಾದ ಪುರುಷನೇ. ಈ ವಿಷಯದಲ್ಲಿ ಅನ್ಯಥಾ ವಿಚಾರವನ್ನು ಮಾಡಬಾರದು.'

೧೦೦. ಹೀಗೆ ಆಲೋಚಿಸಿ ತನ್ನ ಬಗ್ಗೆ ನಾಚಿಕೆಗೊಂಡು ಅವಳು ಪುನಃ ತಂದೆಗೆ ಲೇಖವನ್ನು ಕಳುಹಿಸಿದಳು. ಅದರಿಂದ ಸುರಸೇನನು ಸಮಾಧಾನ ಹೊಂದಿದನು.

೧೦೧. ಈ ವೃತ್ತಾಂತವನ್ನು ಇಂದು ತಿಳಿದು ಕೋಪಗೊಂಡ ಭೈರವದೇವನು ಸ್ಥೂಲಶಿರಸ್ಸೆಂಬ ಆ ಯಕ್ಷನನ್ನು ಕರೆಸಿ ಶಾಪಕೊಟ್ಟನು.

---

ತೇನೋಪಾತ್ತೇನ ಮಂತ್ರೇಣ ಯಕ್ಷಮಾರಾಧ್ಯ ಸಂಪ್ರತಿ ।
ಲಿಂಗಂ ಯಾಚಸ್ವ ಪುತ್ರಾರ್ಥಂ ಸದ್ಯಃ ಶಾಮ್ಯತು ವಿಗ್ರಹಃ ॥ ೯೫
ಇತ್ಯುಕ್ತೋ ಮಂತ್ರಿಣಾ ತಸ್ಮಾನ್ಮಂತ್ರಮಾದಾಯ ತಂ ನೃಪಃ ।
ಸುತಾರ್ಥಂ ಯಕ್ಷಮಾರಾಧ್ಯ ಸ ತಂ ಲಿಂಗಮಯಾಚತ ॥ ೯೬
ತೇನ ಸಂಪ್ರತಿ ದತ್ತೇ ಚ ಲಿಂಗೇ ಯಕ್ಷೇಣ ತತ್ಸುತಃ ।
ಪುಮಾನ್ ಪ್ರಭಾಕರಃ ಸೋಽಭೂದ್ಯಕ್ಷಸ್ತ್ವಾಸೀನ್ನಪುಂಸಕಃ ॥ ೯೭
ಸಾ ತು ವಿದ್ಯಾಧರೀ ದೃಷ್ಟ್ವಾ ಪುಮಾಂಸಂ ತಂ ಪ್ರಭಾಕರಮ್ ।
ತೇನ ಪತ್ಯಾ ಸಹಾವಾಪ್ತರತಸೌಖ್ಯಾ ವ್ಯಚಿಂತಯತ್ ॥ ೯೮
ಭ್ರಾಂತಾಹಂ ಮದದೋಷೇಣ ನ ಮೇ ಭರ್ತಾ ನಪುಂಸಕಃ ।
ಪುಮಾನೇವೈಷ ಸುಭಗೋ ನಾತ್ರ ಕಾರ್ಯಾನ್ಯಥಾ ಮತಿಃ ॥ ೯೯
ಇತ್ಯಾಲೋಚ್ಯೈನಮೇವಾರ್ಥಂ ಲಿಖಿತ್ವಾ ಲಜ್ಜಿತಾ ಪುನಃ ।
ಪಿತ್ರೇ ಸಾ ಪ್ರಾಹಿಣೋಲ್ಲೇಖಂ ಶಮಂ ಭೇಜೇ ಚ ತೇನ ಸಃ ॥ ೧೦೦
ಏತಂ ಜ್ಞಾತ್ವಾ ಚ ವೃತ್ತಾಂತಂ ಭೈರವೇಣಾದ್ಯ ಕುಪ್ಯತಾ ।
ಆನಾಯ್ಯ ಸ ಸ್ಥೂಲಶಿರಾಃ ಶಪ್ತೋ ದೇವೇನ ಗುಹ್ಯಕಃ ॥ ೧೦೧

೧೧೨. "ನೀನು ಲಿಂಗವನ್ನು ತ್ಯಾಗಮಾಡಿ ನಪುಂಸಕತ್ವವನ್ನು ಆಶ್ರಯಿಸಿರುವ ಕಾರಣ ಜೀವನಪರ್ಯಂತ ನೀನು ನಪುಂಸಕನಾಗಿಯೇ ಇರು. ಆ ಪ್ರಭಾಕರನು ಪುರುಷನಾಗಲಿ.'

೧೧೩. ಈ ರೀತಿ ನಪುಂಸಕನಾದ ಆ ಯಕ್ಷನು ಇಂದು ದುಃಖಿತನಾಗಿದ್ದಾನೆ. ಮತ್ತು ಆ ಪ್ರಭಾಕರನು ಭೋಗಸುಖಕ್ಕಾಗಿ ಪುರುಷನಾಗಿದ್ದಾನೆ.

೧೧೪. ಆದುದರಿಂದ ಈ ಕಾರ್ಯದಿಂದಾಗಿ ಇಂದು ದೇವನು ಬರುವುದರಲ್ಲಿ ಸ್ವಲ್ಪ ವಿಳಂಬವಾಗಿದೆ. ಶೀಘ್ರದಲ್ಲಿ ಅವನು ಬಂದನೆಂದೇ ತಿಳಿಯಿರಿ."

೧೧೫. ಹೀಗೆ ದೇವಿಯಾದ ನಾರಾಯಣಿಯು ಮಾತೃದೇವಿಯರಿಗೆ ಹೇಳುತ್ತಿರುವಾಗ ಚಕ್ರೇಶ್ವರನಾದ ಭೈರವದೇವನು ಅಲ್ಲಿಗೆ ಬಂದನು.

೧೧೬. ಎಲ್ಲ ಮಾತೃಕೆಯರಿಂದಲೂ ಉಪಹಾರಗಳಿಂದ ಚೆನ್ನಾಗಿ ಪೂಜಿತನಾದ ಭೈರವನು ಯೋಗಿನೀಸಮೇತನಾಗಿ ಕ್ಷಣಕಾಲ ತಾಂಡವನೃತ್ಯವನ್ನು ಮಾಡಿ ಕ್ರೀಡಿಸಿದನು.

೧೧೭. ಅದೆಲ್ಲವನ್ನೂ ಮರದ ಮೇಲಿನಿಂದ ನೋಡುತ್ತಾ ಚಂದ್ರಸ್ವಾಮಿಯು ನಾರಾಯಣಿಯ ಒಬ್ಬ ದಾಸಿಯನ್ನು ನೋಡಿದನು. ಆ ದಾಸಿಯೂ ಅವನನ್ನು ನೋಡಿದಳು.

---

ಲಿಂಗತ್ಯಾಗೇನ ಷಂಢತ್ವಮಾಶ್ರಿತಂ ಯತ್ತ್ವಯಾ ತತಃ ।
ಷಂಢ ಏವ ಭವಾಜೀವಂ ಪುಮಾನ್ಸೋಽಸ್ತು ಪ್ರಭಾಕರಃ ॥ ೧೧೨
ಏವಂ ನಪುಂಸಕೀಭೂತೋ ಗುಹ್ಯಕಃ ಸೋಽದ್ಯ ದುಃಖಭಾಕ್ ।
ಪ್ರಭಾಕರಶ್ಚ ಪುರುಷೀಭೂತೋ ಭೋಗಸುಖಾಯ ಸಃ ॥ ೧೧೩
ತದೇತೇನಾದ್ಯ ಕಾರ್ಯೇಣ ದೇವಸ್ಯಾಗಮನೇ ಮನಾಕ್ ।
ಜಾತೋ ವಿಲಂಬಃ ಕ್ಷಿಪ್ರಾಚ್ಚ ಜಾನೀತಾಗತಮೇವ ತಮ್ ॥ ೧೧೪
ಇತಿ ನಾರಾಯಣೀದೇವೀ ಮಾತೄರ್ಯಾವದ್ಬ್ರವೀತಿ ಸಾ ।
ದೇವಶ್ಚಕ್ರೇಶ್ವರಸ್ತಾವದಾಯಯೌ ಸೋಽತ್ರ ಭೈರವಃ ॥ ೧೧೫
ಸಂಪೂಜಿತಶ್ಚ ಸರ್ವಾಭಿರುಪಹಾರೈಃ ಸಮಾತೃಭಿಃ ।
ತಾಂಡವೇನ ಕ್ಷಣಂ ನೃತ್ಯನ್ನಕ್ರೀಡದ್ಯೋಗಿನೀಸಖಃ ॥ ೧೧೬
ತಚ್ಚ ಸರ್ವಂ ತರೋಃ ಪೃಷ್ಠಾಚ್ಚಂದ್ರಸ್ವಾಮೀ ವಿಲೋಕಯನ್ ।
ನಾರಾಯಣ್ಯಾ ದದರ್ಶೈಕಾಂ ದಾಸೀಂ ಸಾಪಿ ತಮೈಕ್ಷತ ॥ ೧೧೭

೧೧೮. ದೈವವಶಾತ್ ಅವರಿಬ್ಬರೂ ಪರಸ್ಪರ ಅನುರಾಗಯುಕ್ತರಾದರು. ನಾರಾಯಣೀ ದೇವಿಗೆ ಅವರಿಬ್ಬರೂ ಆ ರೀತಿಯಾದದ್ದು ತಿಳಿಯಿತು.

೧೧೯. ಅನಂತರ ಮಾತೃಕೆಯರ ಸಹಿತನಾಗಿ ಭೈರವನು ಹೋಗಲಾಗಿ ಆ ನಾರಾಯಣಿಯು ಸ್ವಲ್ಪ ಹೊತ್ತಿನ ಮೇಲೆ ಮರದ ಮೇಲಿದ್ದ ಚಂದ್ರಸ್ವಾಮಿಯನ್ನು ಕರೆದಳು.

೧೨೦. ಇಳಿದು ಬಂದ ಚಂದ್ರಸ್ವಾಮಿಯನ್ನೂ ಮತ್ತು ತನ್ನ ದಾಸಿಯನ್ನೂ "ನಿಮ್ಮಿಬ್ಬರಿಗೂ ಪರಸ್ಪರ ಅಭಿಲಾಷೆಯುಂಟಾಗಿದೆಯೇನು ?" ಎಂದು ಕೇಳಿದಳು.

೧೨೧. "ದೇವಿಯೇ ! ಹೌದು" ಎಂದು ಹೇಳಿದ ಅವರಿಬ್ಬರಿಂದ ಸತ್ಯಾಂಶವನ್ನು ತಿಳಿದುಕೊಂಡವಳಾಗಿ ನಾರಾಯಣೀ ದೇವಿಯು ಕೋಪವನ್ನು ತೊರೆದು ನಂತರ ಚಂದ್ರಸ್ವಾಮಿಯನ್ನು ಕುರಿತು ಹೇಳಿದಳು.

೧೨೨. "ನೀವಿಬ್ಬರೂ ಸತ್ಯವನ್ನು ಹೇಳಿದುದರಿಂದ ಸಂತೋಷವಾಗಿದೆ. ಆದ್ದರಿಂದ ನಿಮ್ಮಿಬ್ಬರನ್ನೂ ಶಪಿಸುವುದಿಲ್ಲ. ಈ ದಾಸಿಯನ್ನು ನಿನಗೆ ಕೊಡುತ್ತೇನೆ. ನೀವಿಬ್ಬರೂ ಸುಖವಾಗಿರಿ."

---

ಅನ್ಯೋನ್ಯಸಾಭಿಲಾಷೌ ಚ ದೈವಾದ್ದ್ವೌ ತೌ ಬಭೂವತುಃ ।
ಸಾ ಚ ನಾರಾಯಣೀ ದೇವೀ ತಥಾಭೂತೌ ವಿವೇದ ತೌ ॥ ೧೧೮

ಗತೇಽಥ ಮಾತೃಸಹಿತೇ ಭೈರವೇ ಸಾ ವಿಲಂಬ್ಯ ತಮ್ ।
ನಾರಾಯಣೀ ಪಾದಪಸ್ಥಂ ಚಂದ್ರಸ್ವಾಮಿನಮಾಹ್ವಯತ್ ॥ ೧೧೯

ಅವರುಹ್ಯಾಗತಂ ತಂ ಚ ಸ್ವದಾಸೀಂ ತಾಂ ಚ ಸಾ ತತಃ ।
ಪಪ್ರಚ್ಛ ಕಚ್ಚಿದನ್ಯೋನ್ಯಮಭಿಲಾಷೋಽಸ್ತಿ ವಾಮಿತಿ ॥ ೧೨೦

ಅಸ್ತಿ ದೇವೀತಿ ವಿಜ್ಞಪ್ತಾ ತಾಭ್ಯಾಂ ತಥ್ಯಂ ತತಶ್ಚ ಸಾ ।
ದೇವೀ ವಿಮುಕ್ತಕೋಪಾ ತಂ ಚಂದ್ರಸ್ವಾಮಿನಮಭ್ಯಧಾತ್ ॥ ೧೨೧

ಸತ್ಯೇನೋಕ್ತೇನ ತುಷ್ಟಾಹಂ ಯುವಯೋರ್ನ ಶಪಾಮಿ ವಾಮ್ ।
ದದಾಮ್ಯೇತಾಂ ತು ದಾಸೀಂ ತೇ ಭವತಂ ನಿರ್ವೃತೌ ಯುವಾಮ್ ॥ ೧೨೨

೧೧೩–೧೧೪. ಅದನ್ನು ಕೇಳಿ ಆ ಬ್ರಾಹ್ಮಣನು ಹೇಳಿದನು: "ದೇವಿ ! ಯದ್ಯಪಿ ಮನಸ್ಸು ಚಂಚಲವಾದುದು. ಆದರೂ ಅದನ್ನು ನಿಗ್ರಹಮಾಡುತ್ತೇನೆ. ಪರಸ್ತ್ರೀಯನ್ನು ನಾನು ಸ್ಪರ್ಶಿಸುವುದಿಲ್ಲ. ಇದು ಮನಸ್ಸಿನ ಸ್ವಭಾವವಷ್ಟೆ ಆದರೆ ಶಾರೀರಿಕವಾದ ಪಾಪವನ್ನು ಮಾತ್ರ ವರ್ಜಿಸಬೇಕು."

೧೧೫. "ನಿನ್ನ ವಿಷಯದಲ್ಲಿ ನನಗೆ ಸಂತೋಷವಾಗಿದೆ. ಆದ್ದರಿಂದ ನಿನಗೆ ಈ ವರವನ್ನು (ಕೊಡುತ್ತೇನೆ.) ಶೀಘ್ರವಾಗಿ ನೀನು ಪುತ್ರಾದಿಗಳನ್ನು ಪಡೆಯುವೆ. ಮತ್ತು ಬಾಡದಿರುವ ಮತ್ತು ವಿಷ ಮುಂತಾದುವುಗಳನ್ನು ನಾಶಮಾಡುವ ಈ ಉತ್ಪಲ ಪುಷ್ಪವನ್ನು ತೆಗೆದುಕೋ !"

೧೧೬. ಹೀಗೆ ಹೇಳಿ ಚಂದ್ರಸ್ವಾಮಿಗೆ ಉತ್ಪಲಪುಷ್ಪವನ್ನು ಕೊಟ್ಟು ನಾರಾಯಣೀ ದೇವಿಯು ದಾಸೀ ಸಹಿತಳಾಗಿ ಅಂತರ್ಧಾನ ಹೊಂದಿದಳು.

೧೧೭. ಚಂದ್ರಸ್ವಾಮಿಯು ಉತ್ಪಲಪುಷ್ಪವನ್ನು ಪಡೆದು ರಾತ್ರಿಯು ಕಳೆದ ಮೇಲೆ ಅಲ್ಲಿಂದ ಹೊರಟು ಸುತ್ತಾಡುತ್ತಾ ತಾರಾಪುರವೆಂಬ ಪಟ್ಟಣವನ್ನು ಸೇರಿದನು.

೧೧೮. ಅಲ್ಲೇ ಬ್ರಾಹ್ಮಣಮಂತ್ರಿಯಾದ ಅನಂತಸ್ವಾಮಿಯ ಮನೆಯಲ್ಲಿ ಇವನ ಪುತ್ರನಾದ ಮಹೀಪಾಲನೂ ಅವನ ಮಗಳೂ ಇದ್ದರು.

---

ತಚ್ಛ್ರುತ್ವಾಸೋಽಬ್ರವೀದ್ವಿಪ್ರೋ ದೇವಿ ಯದ್ಯಪಿ ಚಂಚಲಮ್ ।
ಮನೋ ರುಣಧ್ಮಿ ತದಪಿ ಸ್ಪೃಶಾಮಿ ನ ಪರಸ್ತ್ರಿಯಮ್ ॥ ೧೧೩
ಮನಸಃ ಪ್ರಕೃತಿರ್ಹ್ಯೇಷಾ ರಕ್ಷ್ಯಂ ಪಾಪಂ ತು ಕಾಯಿಕಮ್ ।
ಇತ್ಯೂಚಿವಾಂಸಂ ತಂ ಧೀರಂ ವಿಪ್ರಂ ದೇವೀ ಜಗಾದ ಸಾ ॥ ೧೧೪
ಪ್ರೀತಾಸ್ಮಿ ತೇ ವರಶ್ಚಾಯಂ ಪುತ್ರಾದೀನ್ ಶೀಘ್ರಮಾಪ್ಸ್ಯಸಿ ।
ಇದಂ ಚೋತ್ಪಲಮಮ್ಲಾಯಿ ವಿಷಾದಿಘ್ನಂ ಗೃಹಾಣ ಮೇ ॥ ೧೧೫
ಇತ್ಯುಕ್ತ್ವಾ ನೀರಜಂ ದತ್ತ್ವಾ ಚಂದ್ರಸ್ವಾಮಿದ್ವಿಜಸ್ಯ ಸಾ ।
ನಾರಾಯಣೀ ಸದಾಸೀಕಾ ದೇವೀ ತಸ್ಯ ತಿರೋದಧೇ ॥ ೧೧೬
ಸ ಚ ಪ್ರಾಪ್ತೋತ್ಪಲೋ ರಾತ್ರೌ ಕ್ಷೀಣಾಯಾಂ ಪ್ರಸ್ಥಿತಸ್ತತಃ ।
ತಾರಾಪುರಂ ತನ್ನಗರಂ ಪ್ರಾಪ ವಿಪ್ರಃ ಪರಿಭ್ರಮನ್ ॥ ೧೧೭
ಯತ್ರಾಸ್ಯ ಸ ಸ್ಥಿತಃ ಪುತ್ರೋ ಮಹೀಪಾಲಂ ಸುತಾ ಚ ಸಾ ।
ಅನಂತಸ್ವಾಮಿನಸ್ತಸ್ಯ ಗೃಹೇ ವಿಪ್ರಸ್ಯ ಮಂತ್ರಿಣಃ ॥ ೧೧೮

೧೯. ಅದೇ ಮಂತ್ರಿಯ ಮನೆಗೆ ಹೋಗಿ ಚಂದ್ರಸ್ವಾಮಿಯು ಆ ಮಂತ್ರಿಯು ಅತಿಥಿಪ್ರಿಯನೆಂದು ಕೇಳಿ ಭೋಜನದ ಅಪೇಕ್ಷೆಯಿಂದ ಬಾಗಿಲಲ್ಲಿ ವೇದಘೋಷವನ್ನು ಮಾಡಿದನು.

೨೦. ದ್ವಾರಪಾಲಕರು ಇವನ ಬಗ್ಗೆ ತಿಳಿಸಿ ಒಳಗೆ ಪ್ರವೇಶ ಮಾಡಿಸಿದರು. ಆಗ ಆ ವಿದ್ವಾಂಸನನ್ನು ಆ ಮಂತ್ರಿಯು ನೋಡಿದ ಮಾತ್ರಕ್ಕೇ ಅವನನ್ನು ಭೋಜನಕ್ಕಾಗಿ ನಿಮಂತ್ರಿಸಿದನು.

೨೧. ಹೀಗೆ ನಿಮಂತ್ರಿತನಾದ ಚಂದ್ರಸ್ವಾಮಿಯು ಅಲ್ಲಿ ಅನಂತಹ್ರದವೆಂಬ ಹೆಸರುಳ್ಳ ಪಾಪನಾಶಕವಾದ ಸರಸ್ಸು ಇದೆಯೆಂದು ಕೇಳಿ ಅಲ್ಲಿಗೆ ಸ್ನಾನ ಮಾಡಲು ಹೋದನು.

೨೨. ಅಲ್ಲಿಂದ ಸ್ನಾನ ಮಾಡಿ ಬರುತ್ತಿರುವಾಗ ಆ ಬ್ರಾಹ್ಮಣನು ಆ ಪಟ್ಟಣದಲ್ಲಿ ಎಲ್ಲ ಕಡೆಯೂ "ಅಯ್ಯೋ ! ಕಷ್ಟ!" ಎಂಬ ಶಬ್ದವನ್ನು ಕೇಳಿದನು.

೨೩. ಅದರ ಕಾರಣವನ್ನು ಕೇಳಿದಾಗ ಜನರು ಅವನಿಗೆ ಹೇಳಿದರು: "ಇಲ್ಲಿ ಬ್ರಾಹ್ಮಣನ ಪುತ್ರನಾದ ಮಹೀಪಾಲನೆಂಬುವನು ಇದ್ದಾನೆ.

---

ತತ್ರ ಗತ್ವಾ ಸ ತಸ್ಯೈವ ಮಂತ್ರಿಣೋ ಭೋಜನೇಪ್ಸಯಾ ।
ದ್ವಾರೇ ಪ್ರಾಧ್ಯಯನಂ ಚಕ್ರೇ ಶ್ರುತ್ವಾ ತಮತಿಥಿಪ್ರಿಯಮ್ ॥ ೧೯
ಸ ಚ ಮಂತ್ರೀ ಪ್ರತೀಹಾರೈರಾವೇದ್ಯಾಂತಃಪ್ರವೇಶಿತಮ್ ।
ನ್ಯಮಂತ್ರಯತ ದೃಷ್ಟ್ವೈವ ವಿದ್ವಾಂಸಂ ಭೋಜನಾಯ ತಮ್ ॥ ೨೦
ನಿಮಂತ್ರಿತೋಽಥ ಸ ಶ್ರುತ್ವಾ ತತ್ರ ಪಾಪಹರಂ ಸರಃ ।
ಚಂದ್ರಸ್ವಾಮೀ ಯಯೌ ಸ್ನಾತುಮನಂತಹ್ರದಸಂಜ್ಞಕಮ್ ॥ ೨೧
ಆಗಚ್ಛತಿ ತತಃ ಸ್ನಾತ್ವಾ ಯಾವತ್ತಾವತ್ಸಮಂತತಃ ।
ಹಾಕಷ್ಟಶಬ್ದಂ ಶುಶ್ರಾವ ನಗರೇ ತತ್ರ ಸ ದ್ವಿಜಃ ॥ ೨೨
ತತ್ಕಾರಣಂ ಚ ಪೃಚ್ಛಂತಂ ತಮೇವಮವದಜ್ಜನಃ ।
ಇಹ ಸ್ಥಿತೋ ಮಹೀಪಾಲೋ ನಾಮ ಬ್ರಾಹ್ಮಣಪುತ್ರಕಃ ॥ ೨೩

೧೨೪–೧೨೫. ಅವನು ಕಾಡಿನಲ್ಲಿ ಸಾರ್ಥಧರನೆಂಬ ಮುಖ್ಯ ವರ್ತಕನಿಗೆ ಸಿಕ್ಕಿದ್ದನು. ಸೋದರಿಯ ಸಮೇತನಾದ ಅವನನ್ನು ಉತ್ತಮ ಲಕ್ಷಣಸಂಪನ್ನನೆಂದು ಕಂಡು ಆ ಸಾರ್ಥಧರನಿಂದ ಬೇಡಿ ಪಡೆದು ಮಂತ್ರಿಯಾದ ಅನಂತಸ್ವಾಮಿಯು ಪ್ರಯತ್ನದಿಂದ ಅವನನ್ನು ಇಲ್ಲಿಗೆ ಕರೆತಂದನು. ಅಪುತ್ರನಾದ ಮಂತ್ರಿಯು ಅವನನ್ನು ಪುತ್ರನನ್ನಾಗಿ ಮಾಡಿಕೊಂಡನು. ಅವನು (ಆ ಮಂತ್ರಿಗೆ) ಅತ್ಯಂತ ಪ್ರಿಯನಾದವನಾದನು.

೧೨೬ ಸದ್ಗುಣಸಂಪನ್ನನಾದ ಆ ಮಹೀಪಾಲನು ಇಲ್ಲಿ ರಾಷ್ಟ್ರದ ರಾಜನಾದ ತಾರಾವರ್ಮನಿಗೂ ಪ್ರಿಯನಾದನು. ಅವನನ್ನು ಇಂದು ಕೃಷ್ಣಸರ್ಪವು ಕಚ್ಚಿತು. ಅದರಿಂದಾಗಿ ಪಟ್ಟಣದಲ್ಲಿ ಹಾಹಾರವವುಂಟಾಗಿದೆ."

೧೨೭ ಇದನ್ನು ಕೇಳಿ ಇವನು ತನ್ನ ಮಗನೇ ಎಂದು ಯೋಚಿಸುತ್ತಾ ಚಂದ್ರಸ್ವಾಮಿಯು ವೇಗವಾಗಿ ಆ ಮಂತ್ರಿಯ ಮನೆಗೆ ಬಂದನು.

೧೨೮. ಅಲ್ಲಿ ಸುತ್ತುವರಿದಿದ್ದ ಜನರ ನಡುವೆ ಬಿದ್ದಿದ್ದವನನ್ನು ನೋಡಿ ಅವನು ತನ್ನ ಮಗನೆಂದು ಅರಿತನು. ಆಗ ದೇವಿಯು ಕೊಟ್ಟ (ವಿಷಹಾರಿಯಾದ) ಅಗದೋತ್ಪಲವು ತನ್ನ ಕೈಯಲ್ಲಿ ಇದ್ದುದರಿಂದ ಅವನ ಮನಸ್ಸು ಹಗುರಾಯಿತು.

೧೨೯. ಆ ಉತ್ಪಲ ಪುಷ್ಪವನ್ನು ಮಹೀಪಾಲನ ಮೂಗಿಗೆ ಅವನು ಹಿಡಿದನು. ಕೂಡಲೇ ಅದರ ಗಂಧದಿಂದ ಮಹೀಪಾಲನ ವಿಷವು ಇಳಿಯಿತು.

---

ಅಟವ್ಯಾಃ ಸಾರ್ಥವಾಹೇನ ಪ್ರಾಪ್ತ ಸಾರ್ಥಧರೇಣ ಸಃ ।
ತಸ್ಮಾತ್ಸುಲಕ್ಷಣೋ ದೃಷ್ಟ್ವಾ ಯಾಚಿತ್ವಾ ಭಗಿನೀಸಖಃ ॥ ೧೨೪
ಅನಂತಸ್ವಾಮಿನಾ ಯತ್ನಾದಿಹಾನೀತಃ ಸ ಮಂತ್ರಿಣಾ ।
ಪುತ್ರೀಕೃತಶ್ಚಾಪುತ್ರೇಣ ಸ ತೇನ ಪ್ರಿಯತಾಂ ಗತಃ ॥ ೧೨೫
ತಾರಾವರ್ಮನೃಪಸ್ಯೇಹ ರಾಷ್ಟ್ರಸ್ಯಾಸ್ಯ ಚ ಸದ್ಗುಣಃ ।
ಸೋಽದ್ಯ ಕೃಷ್ಣಾಹಿನಾ ದಷ್ಟೇನ ಹಾಹಾರವಃ ಪುರೇ ॥ ೧೨೬
ಏತಚ್ಛ್ರುತ್ವಾ ಸ ಏವೈಷ ಮತ್ಸುತ ಇತಿ ಚಿಂತಯನ್ ।
ಆಯಯೌ ತ್ವರಿತಶ್ಚಂದ್ರಸ್ವಾಮೀ ಮಂತ್ರಿಗೃಹಂ ಸ ತತ್ ॥ ೧೨೭
ತತ್ರ ಸರ್ವೈರ್ವೃತಂ ದೃಷ್ಟ್ವಾ ಪರಿಜ್ಞಾಯ ಚ ತಂ ಸುತಮ್ ।
ನಂದತಿ ಸ್ಮ ಸ ಹಸ್ತಸ್ಥದೇವೀದತ್ತಾಗದೋತ್ಪಲಃ ॥ ೧೨೮
ಅಥೌಕಯಚ್ಚ ನಾಸಾಯಾಂ ಮಹೀಪಾಲಸ್ಯ ತಸ್ಯ ತತ್ ।
ನೀಲೋತ್ಪಲಂ ತದೈವಾಭೂತ್ ತದ್ಗಂಧೇನ ಸ ನಿರ್ವಿಷಃ ॥ ೧೨೯

೧೩೦. ಆಗ ನಿದ್ದೆಯಿಂದ ಎಚ್ಚತ್ತವನಂತೆ ಮಹೀಪಾಲನು ಎದ್ದನು. ಆಗ ಆ ಪಟ್ಟಣದಲ್ಲಿ ರಾಜನೇ ಅಲ್ಲದೆ ಎಲ್ಲ ಜನರೂ ಉತ್ಸವವನ್ನು ಆಚರಿಸಿದರು.

೧೩೧. ಚಂದ್ರಸ್ವಾಮಿಯನ್ನು ಆಗ ಎಲ್ಲರೂ ಅವನು ಯಾವನೋ ಒಬ್ಬ ದೇವಾಂಶನೆಂದು ಭಾವಿಸಿದರು. ಅನಂತಸ್ವಾಮಿ, ಪಟ್ಟಣಿಗರು, ರಾಜ ಎಲ್ಲರೂ ಅವನನ್ನು ಧನಸಂಪತ್ತುಗಳಿಂದ ಪೂಜಿಸಿದರು.

೧೩೨. ಸಮ್ಮಾನಿತನಾದ ಚಂದ್ರಸ್ವಾಮಿಯು ಪುತ್ರನಾದ ಮಹೀಪಾಲನನ್ನೂ ಮಗಳಾದ ಚಂದ್ರವತಿಯನ್ನೂ ನೋಡಿ ಸಂತೋಷಪಡುತ್ತಾ ಮಂತ್ರಿಯ ಮನೆಯಲ್ಲಿಯೇ ಸುಖವಾಗಿದ್ದನು.

೧೩೩. ಆದರೆ ಅಲ್ಲಿ ಪರಸ್ಪರ ಪರಿಚಯವಾಗಿದ್ದರೂ ಆ ಮೂರು ಮಂದಿಯೂ ಮೌನವಾಗಿ ಇದ್ದರು. ಕಾರ್ಯಾಪೇಕ್ಷಿಗಳಾದ ಬುದ್ಧಿವಂತರು ಅಸಮಯದಲ್ಲಿ (ತಮ್ಮ) ವಿಷಯವನ್ನು ಪ್ರಕಟ ಮಾಡುವುದಿಲ್ಲ.

೧೩೪. ಅನಂತರ ರಾಜನಾದ ತಾರಾವರ್ಮನು (ಅವನ) ಸದ್ಗುಣಗಳಿಂದ ಮನಸ್ಸಿನಲ್ಲಿ ಸಂತೋಷಪಟ್ಟು ಮಹೀಪಾಲನಿಗೆ ಬಂಧುಮತೀ ಎಂಬ ಮಗಳನ್ನು ವಿವಾಹ ಮಾಡಿಕೊಟ್ಟನು.

೧೩೫ ಬೇರೆ ಪುತ್ರನಿಲ್ಲದ ಆ ರಾಜನು ಮೊದಲೇ ಕೊಟ್ಟಿದ್ದ ಅರ್ಧರಾಜ್ಯದೊಡನೆ ಸಮಸ್ತ ರಾಜ್ಯವನ್ನೂ ಅವನಿಗೇ ಕೊಟ್ಟನು.

---

ಉತ್ತಸ್ಥೌ ಚ ಮಹೀಪಾಲೋ ನಿದ್ರಾಯುಕ್ತ ಇವಾಸ್ತ ಸಃ ।
ಪುರೇ ಚಾತ್ರೋತ್ಸವಂ ಚಕ್ರೇ ಜನಃ ಸರ್ವಃ ಸರಾಜಕಃ ॥ ೧೩೦
ಚಂದ್ರಸ್ವಾಮೀಚ ಸ ತದಾ ದೇವಾಂಶಃ ಕೋऽಪ್ಯಸಾವಿತಿ ।
ಅನಂತಸ್ವಾಮಿನಾ ಪೌರೈ ರಾಜ್ಞಾ ಚಾರ್ಥೈರಪೂಜ್ಯತ ॥ ೧೩೧
ತಸ್ಥೌ ಚ ತತ್ರೈವ ಸುಖಂ ಮಂತ್ರಿವೇಶ್ಮನಿ ಸೋऽರ್ಚಿತಃ ।
ಪಶ್ಯನ್ ಪುತ್ರಂ ಮಹೀಪಾಲಂ ಸುತಾಂ ಚಂದ್ರವತೀಂ ಚ ತಾಮ್ ॥ ೧೩೨
ಪರಿಜ್ಞಾಯಾಪಿ ಚಾನ್ಯೋನ್ಯಂ ತೂಷ್ಣೀಂ ತಸ್ಥುಸ್ತ್ರಯೋऽಪಿ ತೇ ।
ಕುರ್ವಂತ್ಯಕಾಲೇऽಭಿವ್ಯಕ್ತಿಂ ನ ಕಾರ್ಯಾಪೇಕ್ಷಿಣೋ ಬುಧಾಃ ॥ ೧೩೩
ಅಥ ತಸ್ಮೈ ಮಹೀಪಾಲಾಯಾಂತಃಸಂತೋಷಿತೋ ಗುಣೈಃ ।
ರಾಜಾ ಬಂಧುಮತೀಂ ನಾಮ ತಾರಾವರ್ಮಾ ದದೌ ಸುತಾಮ್ ॥ ೧೩೪
ಪ್ರದತ್ತನಿಜರಾಜ್ಯಾರ್ಧೇ ತಸ್ಮಿನ್ನೇವ ವ್ಯಧಾತ್ತದಾ ।
ಸುಖೀರಾಜ್ಯಭರಂ ಕೃತ್ಸ್ನಂ ಸ ನೃಪೋऽನನ್ಯಪುತ್ರಕಃ ॥ ೧೩೫

೧೩೬ ಮಹೀಪಾಲನೂ ರಾಜ್ಯವನ್ನು ಪಡೆದು ತನ್ನ ನಿಜವಾದ ತಂದೆಯನ್ನು ಎಲ್ಲರಿಗೂ ತಿಳಿಯುವಂತೆ ಪ್ರಕಟಿಸಿ ತನ್ನ ತಂಗಿಯನ್ನು ಉತ್ತಮಸ್ಥಾನದಲ್ಲಿ ವಿವಾಹ ಮಾಡಿಕೊಟ್ಟು ಸುಖವಾಗಿ ಇದ್ದನು.

೧೩೭ ಒಂದು ದಿನ ತಂದೆಯಾದ ಚಂದ್ರಸ್ವಾಮಿಯು ತಾನಾಗಿಯೇ ಅವನನ್ನು ಕುರಿತು ಹೇಳಿದನು: "ಬಾ. ನಿನ್ನ ತಾಯಿಯನ್ನು ಕರೆತರುವುದಕ್ಕಾಗಿ ನಮ್ಮ ದೇಶಕ್ಕೆ ಹೋಗೋಣ.

೧೩೮ ನಿನ್ನ ಬಗ್ಗೆ ಬಹಳ ಕಾಲದಿಂದ ದುಃಖದಲ್ಲೇ ಮುಳುಗಿರುವ ಅವಳು ರಾಜ್ಯವನ್ನು ಹೊಂದಿದ ಮೇಲೆ ತನ್ನನ್ನು ಹೇಗೆ ಮರೆತುಬಿಟ್ಟೆ ಎಂದು ಶಾಪ ಹಾಕಿಯಾಳು.

೧೩೯. ತಾಯಿತಂದೆಗಳಿಂದ ಶಾಪವನ್ನು ಹೊಂದಿದವನು ಎಂದಿಗೂ ಸುಖವನ್ನು ಹೊಂದಲಾರ. ಇದರ ಬಗ್ಗೆ ಹಿಂದೆ ನಡೆದ ಈ ವರ್ತಕನ ಪುತ್ರನ ಕಥೆಯನ್ನು ಕೇಳು.

೧೪೦. ಧವಲ ಎಂಬ ಪಟ್ಟಣದಲ್ಲಿ ಚಕ್ರನೆಂಬ ವರ್ತಕಪುತ್ರನು ಇದ್ದನು. ಅವನು ತಾಯಿತಂದೆಯರು ಇಷ್ಟಪಡದಿದ್ದರೂ ವ್ಯಾಪಾರಕ್ಕಾಗಿ ಸ್ವರ್ಣದ್ವೀಪಕ್ಕೆ ಹೋದನು.

೧೪೧. ಅನಂತರ ಅವನು ಐದು ವರ್ಷಗಳಲ್ಲಿ ಅಪಾರ ಧನವನ್ನು ಸಂಪಾದಿಸಿ ಹಿಂದಿರುಗುವ ಉದ್ದೇಶದಿಂದ ರತ್ನಗಳಿಂದ ತುಂಬಿದ ಹಡಗನ್ನು ಹತ್ತಿ ಸಮುದ್ರದಲ್ಲಿ ಹೊರಟನು.

---

ಮಹೀಪಾಲೋಽಪಿ ಸ ಪ್ರಾಪ್ತರಾಜ್ಯಃ ಪ್ರಖ್ಯಾಪ್ಯ ತಂ ನಿಜಮ್ ।
ಪಿತರಂ ಸ್ವಾನುಜಾಂ ಸ್ಥಾನೇ ದತ್ತ್ವಾ ತಸ್ಥೌ ಯಥಾಸುಖಮ್ ॥ ೧೩೬
ಏಕದಾ ತಂ ಪಿತಾ ಚಂದ್ರಸ್ವಾಮೀ ಸ್ವೈರಮಭಾಷತ ।
ಏಹಿ ಸ್ವದೇಶಂ ಗಚ್ಛಾವೋ ಮಾತುರಾನಯನಾಯ ತೇ ॥ ೧೩೭
ರಾಜ್ಯಸ್ಥಂ ತ್ವಾಂ ಹಿ ಬುದ್ಧ್ವಾ ಸಾ ಕಥಂ ತೇನಾಸ್ಮಿ ವಿಸ್ಮೃತಾ ।
ಇತಿ ಕ್ರುದ್ಧಾ ಶಪೇಜ್ಜಾತು ಪುತ್ರಾರ್ತಿಚಿರದುಃಖಿತಾ ॥ ೧೩೮
ಮಾತಾಪಿತೃಭ್ಯಾಂ ಶಪ್ತಃ ಸನ್ನ ಜಾತು ಸುಖಮಶ್ನುತೇ ।
ತಥಾ ಚೈತಾಂ ಪುರಾವೃತ್ತಾಂ ವಣಿಕ್ಪುತ್ರಕಥಾಂ ಶೃಣು ॥ ೧೩೯
ಚಕ್ರೋ ನಾಮ ವಣಿಕ್ಪುತ್ರೋ ಧವಲಾಖ್ಯೇಽಭವತ್ಪುರೇ ।
ಸೋಽನಿಚ್ಛತೋರಗಾತ್ಪಿತ್ರೋಃ ಸ್ವರ್ಣದ್ವೀಪಂ ವಣಿಜ್ಯಯಾ ॥ ೧೪೦
ತತಃ ಸ ಪಂಚಭಿರ್ವರ್ಷೈರುಪಾರ್ಜಿತಮಹಾಧನಃ ।
ಆಗಚ್ಛನ್ನಾರುರೋಹಾಬ್ಧೌ ವಹನಂ ರತ್ನಪೂರಿತಮ್ ॥ ೧೪೧

೧೫೨. ಅವನು ಹೋಗಬೇಕಾದ ಸ್ಥಳವು ದೂರವೇ ಉಳಿದಿರುವಾಗ ಸಮುದ್ರದಲ್ಲಿ ಚಂಡಮಾರುತವೆದ್ದಿತು ಮತ್ತು ಭೀಕರವಾದ ಮಳೆಯನ್ನು ಸುರಿಸುತ್ತಾ ಮೇಘವು ಗರ್ಜಿಸುತ್ತಾ ಮೇಲೆದ್ದಿತು.

೧೫೩. ತಾಯಿತಂದೆಯರನ್ನು ತಿರಸ್ಕರಿಸಿ ಇವನು ಬಂದವನು ಎಂಬ ಕೋಪದಿಂದಲೋ ಎಂಬಂತೆ ಅವನ ಹಡಗನ್ನು ದೊಡ್ಡ ಅಲೆಗಳು ಮೇಲೆದ್ದು ಮುರಿದು ಹಾಕಿದುವು.

೧೫೪. ಆ ಹಡಗಿನಲ್ಲಿದ್ದ ಕೆಲವರನ್ನು ನೀರು ಸೆಳೆದುಕೊಂಡಿತು. ಕೆಲವರನ್ನು ಮೊಸಳೆಗಳು ತಿಂದು ಹಾಕಿದುವು. ಆಯುಸ್ಸಿನ ಬಲದಿಂದ ಚಕ್ರನನ್ನು ಮಾತ್ರ ಅಲೆಗಳು ಒಯ್ದು ತೀರದಲ್ಲಿ ಎಸೆದುವು.

೧೫೫. ಕಷ್ಟದಿಂದ ಅಲ್ಲಿದ್ದ ಆ ವರ್ತಕಪುತ್ರನು ಸ್ವಪ್ನದಲ್ಲಿ ನೋಡಿದಂತೆ ಕೈಯಲ್ಲಿ ಪಾಶವನ್ನು ಹಿಡಿದಿದ್ದ ಕಪ್ಪಾದ ಆಕಾರವುಳ್ಳ ಒಬ್ಬ ಭಯಂಕರನಾದ ಪುರುಷನನ್ನು ಕಂಡನು.

೧೫೬. ಆ ಪುರುಷನು ಚಕ್ರನನ್ನು ಎಳೆದು ಪಾಶದಿಂದ ಬಿಗಿದು ದೂರದಲ್ಲಿ ಸಿಂಹಾಸನದಲ್ಲಿ ಕುಳಿತಿದ್ದ ಪುರುಷನಿಂದ ಅಧಿಷ್ಠಿತವಾದ ಸಭೆಗೆ ಒಯ್ದನು.

೧೫೭. ಆಸನದಲ್ಲಿ ಕುಳಿತಿದ್ದ ಆ ಪುರುಷನ ಆಜ್ಞೆಯಂತೆ ಪಾಶಧಾರಿಯಾದ ಪುರುಷನೇ ತರುಣನಾದ ವರ್ತಕನನ್ನು ಒಯ್ದು ಕಬ್ಬಿಣದ ಮನೆಯ ಒಳಗೆ ಹಾಕಿದನು.

---

ಅಲ್ಪಾವಶೇಷೇ ಗಂತವ್ಯೇ ವಾರಿಧೌ ತಸ್ಯ ಚೋನ್ನದನ್ ।
ಉದತಿಷ್ಠನ್ ಮಹಾವಾತವರ್ಷವೇಗಾಕುಲೋಽಂಬುದಃ ॥ ೧೫೨
ಪಿತರಾವವಮನ್ಯೈಷ ಕಿಮಾಯಾತ ಇತೀವ ತತ್ ।
ಕ್ರೋಧಾತ್ ಪ್ರವಹಣಂ ತಸ್ಯ ನಿರ್ಬಭಂಜುರ್ಮಹೋರ್ಮಯಃ ॥ ೧೫೩
ತತ್ರಸ್ಥಾಃ ಕೇಽಪಿ ಹೃತಾಸ್ತೋಯೈರ್ಮಕರೈಃ ಕೇಽಪಿ ಭಕ್ಷಿತಾಃ ।
ಚಕ್ರಸ್ತ್ವಾಯುರ್ಬಲಾನ್ನೀತ್ವಾ ತೀರೇ ಕ್ಷಿಪ್ತಶ್ಚ ವೀಚಿಭಿಃ ॥ ೧೫೪
ತತ್ರಸ್ಥೋ ನಿಃಸಹಃ ಸ್ವಪ್ನ ಇವ ರೌದ್ರಾಸಿತಾಕೃತಿಮ್ ।
ಪಾಶಹಸ್ತಂ ದದರ್ಶೈಕಂ ಪುರುಷಂ ಸ ವಣಿಕ್ಸುತಃ ॥ ೧೫೫
ತೇನೋತ್ಕ್ಷಿಪ್ಯ ಚ ನೀತೋಽಭೂತ್ಸ ಚಕ್ರಃ ಪಾಶವೇಷ್ಟಿತಃ ।
ದೂರಂ ಸಿಂಹಾಸನಸ್ಥೇನ ಪುರುಷೇಣಾಸ್ಥಿತಾಂ ಸಭಾಮ್ ॥ ೧೫೬
ತಸ್ಯಾಜ್ಞಯಾಸನಸ್ಥಸ್ಯ ತೇನೈವ ಸವಣಿಗ್ಯುವಾ ।
ನೀತ್ವಾ ಪಾಶಭೃತಾ ಲೋಹಮಯೇ ಗೇಹೇ ನ್ಯವೇಶ್ಯತ ॥ ೧೫೭

೧೩೮. ಅಲ್ಲಿ ಒಳಗೆ ಚಕ್ರನು ಒಬ್ಬ ಪುರುಷನನ್ನು ನೋಡಿದನು. ಅವನ ತಲೆಯ ಮೇಲೆ ಕಾದಿರುವ ಕಬ್ಬಿಣದ ಚಕ್ರವೊಂದು ಸದಾ ಸುತ್ತುತ್ತಿದ್ದು ಅವನಿಗೆ ಹಿಂಸೆ ಕೊಡುತ್ತಿತ್ತು.

೧೩೯. "ನೀನು ಯಾರು ? ಯಾವ ಪಾಪದಿಂದ ನಿನಗೆ ಹೀಗಾಗಿದೆ ? ಅಯ್ಯೋ ನೀನು ಹೇಗೆ ತಾನೆ ಬದುಕಿದ್ದೀಯೆ ?" ಎಂದು ಚಕ್ರನು ಅವನನ್ನು ಕೇಳಿದನು. ಅವನು ಕೂಡ ಆ ಚಕ್ರನಿಗೆ ಈ ರೀತಿ ಪ್ರತ್ಯುತ್ತರ ಹೇಳಿದನು.

೧೪೦. "ನಾನು ಖಡ್ಗನೆಂಬ ವರ್ತಕಪುತ್ರ. ತಾಯಿತಂದೆಯರ ಮಾತನ್ನು ನಾನು ನಡೆಸಲಿಲ್ಲವಾದ್ದರಿಂದ ಅವರು ಕುಪಿತರಾಗಿ ನನ್ನನ್ನು ಶಪಿಸಿದರು.

೧೪೧. 'ದುರಾಚಾರನೇ ! ತಲೆಯ ಮೇಲೆ ಕಾದ ಕಬ್ಬಿಣದ ಚಕ್ರವನ್ನಿಟ್ಟಂತೆ ನಮ್ಮಿಬ್ಬರನ್ನು ನೀನು ಪೀಡಿಸುವುದರಿಂದ ನಿನಗೂ ಇಂತಹ ಪೀಡೆಯೇ ಉಂಟಾಗುವುದು.'

೧೪೨. ಹೀಗೆ ಹೇಳಿ ಅವರಿಬ್ಬರೂ ಸುಮ್ಮನಾದರು. ನಾನು ಅಳುತ್ತಿದ್ದುದನ್ನು ನೋಡಿ ಅವರು ಹೇಳಿದರು. "ಅಳಬೇಡ. ಈ ಪೀಡೆಯು ನಿನಗೆ ಒಂದು ತಿಂಗಳು ಮಾತ್ರ ಇರಲಿ.'

೧೪೩. ಅದನ್ನು ಕೇಳಿ ನಾನು ಶೋಕದಿಂದ ಆ ದಿವಸವನ್ನು ಕಳೆದು ಹಾಸಿಗೆಯಲ್ಲಿ ಮಲಗಿದೆ ರಾತ್ರಿಯಲ್ಲಿ ಸ್ವಪ್ನದಲ್ಲಿ ಬಂದಂತೆ ಭಯಂಕರನಾದ ಒಬ್ಬ ಪುರುಷನು ಬಂದದ್ದನ್ನು ಕಂಡೆನು.

---

ತತ್ರಾಂತಃ ಪೀಡ್ಯಮಾನಂ ಸ ಚಕ್ರಃ ಪುರುಷಮೈಕ್ಷತ ।
ಮೂರ್ಧ್ನಿ ತಪ್ತೇನ ಲೌಹೇನ ಚಕ್ರೇಣ ಭ್ರಮತಾನಿಶಮ್ ॥ ೧೩೮
ಕಸ್ತ್ವಂ ಕೇನಾಶುಭೇನೇದಂ ತವ ಜೀವಸ್ಯಹೋ ಕಥಮ್ ।
ಇತ್ಯಪೃಚ್ಛತ್ಸ ಚಕ್ರಸ್ತಂ ಸೋಽಪ್ಯೇವಂ ಪ್ರತ್ಯುವಾಚ ತಮ್ ॥ ೧೩೯
ಖಡ್ಗಾಖ್ಯೋಽಹಂ ವಣಿಕ್ಪುತ್ರಃ ಪಿತ್ರೋರ್ಯಚ್ಚ ವಚೋ ಮಯಾ ।
ನ ಕೃತಂ ತೇನ ಸಂಕ್ರುದ್ಧೌ ತೌ ಮಾಮಶಪತಾಂ ಕ್ರುಧಾ ॥ ೧೪೦
ಶಿರಃಸ್ಥಾಯಸಸಂತಪ್ತಚಕ್ರಾಭೌ ನೌ ದುನೋಷಿ ಯತ್ ।
ತದೀದೃಶ್ಯೇವ ತೇ ಪೀಡಾ ದುರಾಚಾರ ಭವಿಷ್ಯತಿ ॥ ೧೪೧
ಇತ್ಯುಕ್ತ್ವಾ ತೌ ವಿರಮ್ಯೋಭೌ ರುದಂತಂ ಮಾಮವೋಚತಾಮ್ ।
ಮಾರೋದೀರೇಕಮೇವಾಸ್ತು ಮಾಸಂ ಪೀಡಾ ತವೇದೃಶೀ ॥ ೧೪೨
ತಚ್ಛ್ರುತ್ವಾಹಂ ಶುಚಾ ನೀತ್ವಾ ತದ್ದಿನಂ ಶಯನಾಶ್ರಿತಃ ।
ನಿಶಿ ಸ್ವಪ್ನ ಇವಾದ್ರಾಕ್ಷಂ ಭೀಮಂ ಪುರುಷಮಾಗತಮ್ ॥ ೧೪೩

೧೫೪. ಅವನು ನನ್ನನ್ನು ಬಲಾತ್ಕಾರದಿಂದ ಎಳೆದು ಈ ಲೋಹಮಯವಾದ ಮನೆಯಲ್ಲಿ ಹಾಕಿದನು. ಮತ್ತು ನನ್ನ ತಲೆಯ ಮೇಲೆ ಸುತ್ತುತ್ತಿರುವ ಈ ಜ್ವಲಿಸುವ ಚಕ್ರವನ್ನು ಇಟ್ಟನು.

೧೫೫. ಹೀಗೆ ಇದು ನನಗೆ ತಾಯಿತಂದೆಗಳ ಶಾಪದಿಂದ ಬಂದದ್ದು. ಇದರಿಂದ ನನ್ನ ಪ್ರಾಣಗಳೇನೂ ಹೋಗುವುದಿಲ್ಲ. ಆ ತಿಂಗಳು ಕೂಡ ಇಂದಿಗೆ ಸಂಪೂರ್ಣವಾಯಿತು. ಆದರೂ ನನಗೆ ಬಿಡುಗಡೆಯಾಗುತ್ತಿಲ್ಲ."

೧೫೬. ಹೀಗೆ ಹೇಳಿದ ಆ ಖಡ್ಗನನ್ನು ಕುರಿತು ಆ ಚಕ್ರನು ದಯೆಯಿಂದ ಹೇಳಿದನು. ""ಧನಕ್ಕೋಸ್ಕರವಾಗಿ ಪ್ರವಾಸ ಹೊರಟ ನಾನೂ ತಾಯಿತಂದೆಯರ ಮಾತನ್ನು ನಡೆಸಲಿಲ್ಲ.

೧೫೭. ನೀನು ಸಂಪಾದಿಸಿದ ಹಣವು ನಾಶವಾಗುವುದು ಎಂದು ಅವರಿಬ್ಬರೂ ನನ್ನನ್ನು ಶಪಿಸಿದರು. ಅದರಿಂದಾಗಿ ದ್ವೀಪಾಂತರದಲ್ಲಿ ಸಂಪಾದಿಸಿದ ನನ್ನ ಸಮಸ್ತ ಧನವೂ ಸಮುದ್ರದಲ್ಲಿ ನಷ್ಟವಾಯಿತು.

೧೫೮. ಇದೇ ನನ್ನ ವಿಚಾರ. ಮತ್ತು ಬೇರೆಡೆಯಲ್ಲಿ ಬದುಕುವುದರಿಂದ ನನಗೆ ಏನು ಪ್ರಯೋಜನ? ಖಡ್ಗನೇ ! ನನ್ನ ತಲೆಯ ಮೇಲೆ ಈ ಚಕ್ರವನ್ನು ಇಡು. ನಿನ್ನ ಶಾಪವು ಹೊರಟು ಹೋಗಲಿ."

೧೫೯. ಹೀಗೆ ಚಕ್ರನು ಹೇಳುತ್ತಿರುವಾಗಲೇ ಇಲ್ಲಿ ದಿವ್ಯವಾಣಿಯು ಶ್ರುತವಾಯಿತು. "ಖಡ್ಗನೇ ! ನೀನು ಮುಕ್ತನಾಗಿದ್ದೀಯೆ. ಚಕ್ರನ ತಲೆಯ ಮೇಲೆ ಈ ಚಕ್ರವನ್ನು ಇಡು."

---

ತೇನಾದಾಯ ಬಲೇನಾಹಮಸ್ಮಿನ್ಲೋಹಮಯೇ ಗೃಹೇ ।
ಕ್ಷಿಪ್ತೋ ನ್ಯಸ್ತಂ ಚ ಮೇ ಮೂರ್ಧ್ನಿ ಜ್ವಲಚ್ಚಕ್ರಮಿದಂ ಭ್ರಮತ್ ॥ ೧೫೪
ಇತಿ ಮೇ ಪಿತೃಶಾಪೋಽಯಂ ತೇನ ಪ್ರಾಣಾ ನ ಯಾಂತಿ ಮೇ ।
ಸ ಚ ಮಾಸೋಽದ್ಯ ಸಂಪೂರ್ಣೋ ನ ಚ ಮುಚ್ಯೇ ತಥಾಪ್ಯಹಮ್ ॥ ೧೫೫
ಇತ್ಯುಕ್ತವಂತಂ ತಂ ಖಡ್ಗಂ ಸ ಚಕ್ರಃ ಸಕೃಪೋಽಬ್ರವೀತ್ ।
ಪಿತ್ರೋಃ ಪ್ರವಸತಾರ್ಥಾರ್ಥಂ ಮಯಾಪಿ ನ ಕೃತಂ ವಚಃ ॥ ೧೫೬
ಪ್ರಾಪ್ತಂ ನಂಕ್ಷ್ಯತಿ ತೇ ವಿತ್ತಮಿತಿಮಾಂ ಶಪತಃ ಸ್ಮ ತೌ ।
ತೇನಾಬ್ಧೌ ಮೇ ಧನಂ ನಷ್ಟಂ ಕೃತ್ಸ್ನಂ ದ್ವೀಪಾಂತರಾರ್ಜಿತಮ್ ॥ ೧೫೭
ಏಷೈವ ವಾರ್ತಾ ಚಾನ್ಯತ್ರ ತತ್ಕೋಽರ್ಥೋ ಜೀವಿತೇನ ಮೇ ।
ದೇಹ್ಯೇತನ್ಮೂರ್ಧ್ನಿ ಮೇ ಚಕ್ರಂ ಖಡ್ಗಶಾಪೋಽಪಯಾತು ತೇ ॥ ೧೫೮
ಇತಿ ಚಕ್ರೇ ವದತ್ಯೇವ ವಾಣೀ ದಿವ್ಯಾತ್ರ ಶುಶ್ರುವೇ ।
ಖಡ್ಗ ಮುಕ್ತೋಽಸಿ ಚಕ್ರಸ್ಯ ಮೂರ್ಧ್ನ್ಯೇತಚ್ಚಕ್ರಮರ್ಪಯ ॥ ೧೫೯

೧೬೦. ಅದನ್ನು ಕೇಳಿ ಚಕ್ರನ ತಲೆಯ ಮೇಲೆ ತತ್‌ಕ್ಷಣವೇ ಚಕ್ರವನ್ನು ಖಡ್ಗನು ಇಟ್ಟನು. ಆಗ ಆ ಖಡ್ಗನನ್ನು ಅದೃಶ್ಯನಾದ ಯಾವನೋ ಒಬ್ಬನು ಅಲ್ಲಿಂದ (ಅವನ) ತಂದೆಯ ಮನೆಗೆ ಕರೆದೊಯ್ದನು.

೧೬೧. ಅಲ್ಲಿ ಖಡ್ಗನು ಮತ್ತೆ ತಾಯಿತಂದೆಗಳ ಶಾಸನವನ್ನು ಮೀರದೆ ಇದ್ದನು. ಆದರೆ ಚಕ್ರನು ತಲೆಯ ಮೇಲೆ ಆ ಚಕ್ರವನ್ನು ಇಟ್ಟುಕೊಂಡು ಅಲ್ಲಿ ಹೀಗೆ ಹೇಳಿದನು.

೧೬೨. "ಪೃಥಿವಿಯಲ್ಲಿ ಇತರ ಎಲ್ಲ ಪಾಪಿಗಳೂ ಅವರ ಪಾತಕಗಳಿಂದ ಮುಕ್ತರಾಗಲಿ. ಪಾಪಕ್ಷಯವಾಗುವವರೆಗೂ ಈ ಚಕ್ರವು ನನ್ನ ತಲೆಯ ಮೇಲೆ ಸುತ್ತುತ್ತಿರಲಿ.'

೧೬೩. ಹೀಗೆ ಹೇಳಿದ ಧೀರಸತ್ತ್ವನಾದ ಚಕ್ರನ ಮೇಲೆ ಅಂತರಿಕ್ಷದಲ್ಲಿದ್ದ ದೇವತೆಗಳು ಪುಷ್ಪವೃಷ್ಟಿಯನ್ನು ಸುರಿಸುತ್ತಾ ಸಂತೋಷದಿಂದ ಹೀಗೆ ಹೇಳಿದರು.

೧೬೪. "ಒಳ್ಳೆಯದು ! ಒಳ್ಳೆಯದು ! ಮಹಾಚಿತ್ತನೇ ! ಈ ಕಾರುಣ್ಯದಿಂದ ನಿನ್ನ ಪಾಪವು ಶಾಂತವಾಯಿತು, ಹೋಗು. ಮತ್ತು ನಿನ್ನ ಧನವು ಅಕ್ಷಯವಾಗುವುದು."

೧೬೫. ಹೀಗೆ ದೇವತೆಗಳು ಹೇಳಲು ಚಕ್ರನ ತಲೆಯನ್ನು ಬಿಟ್ಟು ಕ್ಷಣಮಾತ್ರದಲ್ಲಿ ಆ ಕಬ್ಬಿಣದ ಚಕ್ರವು ಮಾಯವಾಗಿ ಎಲ್ಲಿಗೋ ಹೊರಟುಹೋಯಿತು.

---

ತಚ್ಛ್ರುತ್ವಾ ಚಕ್ರಶಿರಸಿ ನ್ಯಸ್ತಚಕ್ರಸ್ತದೈವ ಸಃ ।
ಖಡ್ಗಃ ಕೇನಾಪ್ಯದೃಶ್ಯೇನ ನಿನ್ಯೇ ಪಿತೃಗೃಹಂ ತತಃ ॥ ೧೬೦
ತತ್ರಾಸೀತ್ ಸ ಪುನಃ ಪಿತ್ರೋರನುಲ್ಲಂಘಿತಶಾಸನಃ ।
ಚಕ್ರಸ್ತ್ವಾದಾಯ ತನ್ಮೂರ್ಧ್ನಿ ಚಕ್ರಂ ತತ್ರೈವಮಭ್ಯಧಾತ್ ॥ ೧೬೧
ಪಾಪಿನೋಽನ್ಯೇಽಪಿ ಮುಚ್ಯಂತಾಂ ಪೃಥ್ವ್ಯಾಂ ತತ್ಪಾತಕೈರಪಿ ।
ಆಪಾಪಕ್ಷಯಮೇತನ್ಮೇ ಚಕ್ರಂ ಭ್ರಾಮ್ಯತು ಮೂರ್ಧನಿ ॥ ೧೬೨
ಇತ್ಯುಕ್ತವಂತಂ ತಂ ಚಕ್ರಂ ಧೀರಸತ್ತ್ವಂ ನಭಃಸ್ಥಿತಾಃ ।
ಪುಷ್ಪವೃಷ್ಟಿಮುಚೋ ದೇವಾಃ ಪರಿತುಷ್ಟೈವಮಬ್ರುವನ್ ॥ ೧೬೩
ಸಾಧು ಸಾಧು ಮಹಾಸತ್ತ್ವ ಶಾಂತಂ ಕರುಣಯಾನಯಾ ।
ಪಾಪಂ ತೇ ವ್ರಜ ವಿತ್ತಂ ಚ ತವಾಕ್ಷಯ್ಯಂ ಭವಿಷ್ಯತಿ ॥ ೧೬೪
ಇತ್ಯುಕ್ತವತ್ಸು ದೇವೇಷು ಚಕ್ರಸ್ಯ ಶಿರಸಃ ಕ್ಷಣಾತ್ ।
ಆಯಸಂ ತಸ್ಯ ತಚ್ಚಕ್ರಂ ಜಗಾಮ ಕ್ವಾಪ್ಯದರ್ಶನಮ್ ॥ ೧೬೫

೧೬೬–೧೬೭. ಅದೇ ಸಮಯದಲ್ಲಿ ಅಂತರಿಕ್ಷದಿಂದ ಒಬ್ಬ ವಿದ್ಯಾಧರ ಕುಮಾರನು ಚಕ್ರನ ಬಳಿಗೆ ಬಂದು ಇಂದ್ರನು ಸಂತುಷ್ಟನಾಗಿ ಕಳುಹಿಸಿದ ಬಹಳ ಬೆಲೆ ಬಾಳುವ ರತ್ನರಾಶಿಯನ್ನು ಕೊಟ್ಟು ಅವನನ್ನು ಮಡಿಲಲ್ಲಿ ಇಟ್ಟುಕೊಂಡೇ ಧವಲ ಎಂಬ ಹೆಸರಿನ ಅವನ ಸ್ವಂತ ನಗರಕ್ಕೆ ತಲುಪಿಸಿ ನಂತರ ತಾನು ಬಂದಂತೆಯೇ ಹೊರಟು ಹೋದನು.

೧೬೮. ಅನಂತರ ಚಕ್ರನು ತಾಯಿತಂದೆಯರ ಬಳಿಗೆ ಹೋಗಿ ನಡೆದ ಘಟನೆಯನ್ನು ತಿಳಿಸಿ, ಬಂಧುಗಳನ್ನು ಸಂತೋಷಪಡಿಸಿ ಅಲ್ಲೇ ಧರ್ಮಮಾರ್ಗವನ್ನು ಬಿಡದೆ ಬಾಳಿದನು.

೧೬೯. ಚಂದ್ರಸ್ವಾಮಿಯು ಮಹೀಪಾಲನನ್ನು ಕುರಿತು ಹೀಗೆ ಹೇಳಿ ಪುನಃ ಹೇಳಿದನು: "ಪುತ್ರನೇ ! ತಾಯಿತಂದೆಯರನ್ನು ವಿರೋಧ ಮಾಡುವುದು ಇಂತಹ ಪಾಪದ ಫಲ ನೀಡುತ್ತದೆ.

೧೭೦. ಆದರೆ ಅವರಲ್ಲಿ ಭಕ್ತಿಯಿಡುವುದು ಕಾಮಧೇನುವಾಗುತ್ತದೆ. ಆ ವಿಷಯದಲ್ಲಿ ಈ ಕಥೆಯನ್ನು ಕೇಳು. ಹಿಂದೆ ಒಂದು ಕಾಡಿನಲ್ಲಿ ಮಹಾತಪಸ್ವಿಯಾದ ಒಬ್ಬ ಮುನಿಯಿದ್ದನು.

೧೭೧. ಒಮ್ಮೆ ಅವನು ಮರದ ನೆರಳಿನಲ್ಲಿ ಕುಳಿತಿದ್ದಾಗ ಅವನ ಮೇಲೆ ಒಂದು ಕೊಕ್ಕರೆ ಪಕ್ಷಿಯು ಮಲವನ್ನು ಹಾಕಿತು. ಆಗ ಅವನು ಕ್ರುದ್ಧನಾಗಿ ಆ ಕೊಕ್ಕರೆಯನ್ನು ನೋಡಿದನು.

---

ತಥೋಪೇತ್ಯಾಂಬರಾದೇಕೋ ವಿದ್ಯಾಧರಕುಮಾರಕಃ ।
ತುಷ್ಟೇಂದ್ರಪ್ರೇಷಿತಂ ದತ್ತ್ವಾ ಮಹಾರ್ಘಂ ರತ್ನಸಂಚಯಮ್ ॥ ೧೬೬
ಅಂಕೇ ಕೃತ್ವೈವ ತಂ ಚಕ್ರಂ ನಗರಂ ಧವಲಾಭಿಧಮ್ ।
ನಿಜಂ ತತ್ಪ್ರಾಪಯಾಮಾಸ ಜಗಾಮ ಚ ಯಥಾಗತಮ್ ॥ ೧೬೭
ಸೋಽಥ ಚಕ್ರೋಽಂತಿಕಂ ಪಿತ್ರೋಃ ಪ್ರಾಪ್ಯಾನಂದಿತಬಾಂಧವಃ ।
ತಸ್ಥಾವಾಖ್ಯಾತವೃತ್ತಾಂತಸ್ತತ್ರ ಧರ್ಮಾಪರಿಚ್ಯುತಃ ॥ ೧೬೮
ಇತ್ಯಾಖ್ಯಾಯ ಮಹೀಪಾಲಂ ಚಂದ್ರಸ್ವಾಮ್ಯವದತ್ಪುನಃ ।
ಈದೃಕ್‌ಪಾಪಫಲಂ ಪುತ್ರ ಮಾತಾಪಿತ್ರೋರ್ವಿರೋಧನಮ್ ॥ ೧೬೯
ಕಾಮಧೇನುಸ್ತು ತದ್ಭಕ್ತಿಸ್ತತ್ರಾಪ್ಯೇತಾಂ ಕಥಾಂ ಶೃಣು ।
ಆಸೀತ್‌ಕೋಽಪಿ ಮುನಿಃ ಪೂರ್ವಂ ವನಚಾರೀ ಮಹಾತಪಾಃ ॥ ೧೭೦
ತರುಚ್ಛಾಯೋಪವಿಷ್ಟಸ್ಯ ತಸ್ಯೋಪರಿ ಬಲಾಕಯಾ ।
ವಿಷ್ಠಾ ಕದಾಚಿನ್ಮುಕ್ತಾಭೂತ್ ಸೋಽಥ ಕ್ರುದ್ಧೋ ದದರ್ಶ ತಾಮ್ ॥ ೧೭೧

೧೭೨. ಅವನು ನೋಡಿದ ಮಾತ್ರಕ್ಕೇ ಆ ಕೊಕ್ಕರೆಯು ಬೂದಿಯಾಗಿ ಹೋಯಿತು. ಆಗ ಆ ಮುನಿಯು ಅದು ತನ್ನ ತಪಸ್ಸಿನ ಪ್ರಭಾವವೆಂದರಿತು ಅಹಂಕಾರಿಯಾದನು.

೧೭೩. ಒಂದು ಬಾರಿ ನಗರದಲ್ಲಿ ಒಂದುಕಡೆ ಆ ಮುನಿಯು ಒಬ್ಬ ಬ್ರಾಹ್ಮಣನ ಮನೆಯನ್ನು ಪ್ರವೇಶಿಸಿ ಅಲ್ಲಿದ್ದ ಗೃಹಿಣಿಯಿಂದ ಭಿಕ್ಷೆ ಬೇಡಿದನು.

೧೭೪. "ಸ್ವಲ್ಪ ಕಾದಿರು. ಪತಿಯ ಸೇವೆಯನ್ನು ಮುಗಿಸಿ ಬರುತ್ತೇನೆ" ಎಂದು ಪತಿವ್ರತೆಯಾದ ಆ ಗೃಹಿಣಿಯು ಮುನಿಗೆ ಹೇಳಿದಳು.

೧೭೫. ಅದರಿಂದ ಮುನಿಯು ಕೋಪಿಸಿಕೊಂಡು ಅವಳನ್ನು ನೋಡಿದಾಗ ಅವಳು ನಕ್ಕು "ಮುನಿಯೇ ! ನಾನು ಕೊಕ್ಕರೆಯಲ್ಲ. ಸಹಿಸಿಕೋ" ಎಂದು ಹೇಳಿದಳು.

೧೭೬. ಇದನ್ನು ಕೇಳಿ ಮುನಿಯು ಆಶ್ಚರ್ಯದಿಂದ ಅಲ್ಲೇ ಕುಳಿತುಕೊಂಡು "ಇವಳಿಗೆ ಇದು ಹೇಗೆ ತಿಳಿಯಿತು ?" ಎಂದು ಯೋಚಿಸುತ್ತಾ ಇದ್ದನು.

೧೭೭. ಅನಂತರ ಅಲ್ಲಿ ಪತಿಗೆ ಅಗ್ನಿಕಾರ್ಯ ಮುಂತಾದ ಸೇವೆಯನ್ನು ಮಾಡಿ ಸಾಧ್ವಿಯಾದ ಆ ಗೃಹಿಣಿಯು ಭಿಕ್ಷೆಯನ್ನು ತೆಗೆದುಕೊಂಡು ಮುನಿಯ ಬಳಿಗೆ ಬಂದಳು.

---

ದೃಷ್ಟಮಾತ್ರೈವ ಸಾ ತೇನ ಬಲಾಕಾ ಭಸ್ಮಸಾದಭೂತ್ ।
ತಪಃಪ್ರಭಾವಾಹಂಕಾರಂ ಸ ಚ ಭೇಜೇ ತತೋ ಮುನಿಃ ॥ ೧೭೨

ಏಕದಾ ನಗರೇ ಕ್ವಾಪಿ ಸ ಬ್ರಾಹ್ಮಣಗೃಹಂ ಮುನಿಃ ।
ಏಕಂ ಪ್ರವಿಶ್ಯ ಗೃಹಿಣೀಂ ತತ್ರ ಭಿಕ್ಷಾಮಯಾಚತ ॥ ೧೭೩

ಪ್ರತೀಕ್ಷಸ್ವ ಮನಾಗ್ಭರ್ತುಃ ಪರಿಚರ್ಯಾಂ ಸಮಾಪಯೇ ।
ಇತಿ ತಂ ಸಾ ಚ ಗೃಹಿಣೀ ನಿಜಗಾದ ಪತಿವ್ರತಾ ॥ ೧೭೪

ತತಸ್ತಂ ಕ್ರುದ್ಧಯಾ ದೃಷ್ಟ್ಯಾ ವೀಕ್ಷಮಾಣಂ ವಿಹಸ್ಯ ಸಾ ।
ಅಭಾಷತ ಮುನೇ ನಾಹಂ ಬಲಾಕಾ ಮೃಷ್ಯತಾಮಿತಿ ॥ ೧೭೫

ಶ್ರುತ್ವೈತತ್ಸಮುನಿಸ್ತತ್ರಾವುಪವಿಶ್ಯಾತ್ರ ಸಾದ್ಭುತಃ ।
ಏತತ್ಕಥಮಿವ ಜ್ಞಾತಮನಯೇತಿ ವಿಚಿಂತಯನ್ ॥ ೧೭೬

ತತಃ ಕೃತ್ವಾಗ್ನಿಕಾರ್ಯಾದೇಃ ಶುಶ್ರೂಷಾಂ ಭರ್ತುರತ್ರ ಸಾ ।
ಸಾಧ್ವೀ ಭಿಕ್ಷಾಂ ಸಮಾದಾಯ ತಸ್ಯಾಗಾದಂತಿಕಂ ಮುನೇಃ ॥ ೧೭೭

೧೭೮–೧೭೯. ಆಗ ಮುನಿಯು ಕೈಜೋಡಿಸಿ ಆ ಸಾಧ್ವಿಯನ್ನು ಕುರಿತು ಹೇಳಿದನು: "ಪರೋಕ್ಷದಲ್ಲಿ ನಡೆದ ನನ್ನ ಕೊಕ್ಕರೆಯ ವೃತ್ತಾಂತವು ನಿನಗೆ ಹೇಗೆ ಗೊತ್ತಾಯಿತು ಎಂಬುದನ್ನು ಮೊದಲು ಹೇಳು. ಆಮೇಲೆ ನಾನು ಭಿಕ್ಷೆಯನ್ನು ಸ್ವೀಕರಿಸುತ್ತೇನೆ" ಹೀಗೆ ಕೇಳಿದ ಆ ಋಷಿಯನ್ನು ಕುರಿತು ಪತಿಯೇ ದೇವತೆಯೆಂದು ಭಾವಿಸಿದ ಅವಳು ಹೇಳಿದಳು.

೧೮೦. "ನನಗೆ ಪತಿಭಕ್ತಿಗಿಂತಲೂ ಬೇರೆ ಯಾವ ಧರ್ಮವೂ ತಿಳಿಯದು. ಅದರಿಂದ ನನಗೆ ಪತಿಭಕ್ತಿಯ ಅನುಗ್ರಹದಿಂದ ಈ ರೀತಿಯಾದ ವಿಜ್ಞಾನ ಬಲವುಂಟಾಗಿದೆ.

೧೮೧. ಮತ್ತು ಇಲ್ಲಿ ಧರ್ಮವ್ಯಾಧನೆಂಬವನನ್ನು ಹೋಗಿ ನೋಡು. ಅವನು ಮಾಂಸದ ಮಾರಾಟದಿಂದ ಜೀವಿಸುವವನು. ಅವನಿಂದ ಅಹಂಕಾರವಿಲ್ಲದ ಶ್ರೇಯಸ್ಸನ್ನು ಪಡೆಯುವೆ."

೧೮೨. ಹೀಗೆ ಸರ್ವಜ್ಞಳಾದ ಆ ಪತಿವ್ರತೆಯು ಹೇಳಿದಾಗ ಮುನಿಯು ಅತಿಥಿಭಾಗವನ್ನು ತೆಗೆದುಕೊಂಡು ಅವಳಿಗೆ ನಮಸ್ಕಾರ ಮಾಡಿ ಅಲ್ಲಿಂದ ಹೊರಟನು.

೧೮೩. ಮಾರನೆಯ ದಿವಸ ಆ ಮುನಿಯು ಅಂಗಡಿಯಲ್ಲಿ ಮಾಂಸದ ಮಾರಾಟವನ್ನು ಮಾಡುತ್ತಿದ್ದ ಧರ್ಮವ್ಯಾಧನನ್ನು ಹುಡುಕಿ ಅವನ ಬಳಿಗೆ ಹೋದನು.

---

ಸೋಽಥ ಬದ್ಧಾಂಜಲಿರ್ಭೂತ್ವಾ ಮುನಿಸ್ತಾಮವದತ್ ಸತೀಮ್ ।
ಕಥಂ ಬಲಾಕಾವೃತ್ತಾಂತಃ ಪರೋಕ್ಷೋಽಪಿ ಮಮ ತ್ವಯಾ ॥ ೧೭೮
ಜ್ಞಾತ ಇತ್ಯಾದಿತೋ ಬ್ರೂಹಿ ಭಿಕ್ಷಾಂ ಗೃಹ್ಣಾಮ್ಯಹಂ ತತಃ ।
ಇತ್ಯುಕ್ತವಂತಂ ತಮೃಷಿಂ ಸಾವೋಚತ್ಪತಿದೇವತಾ ॥ ೧೭೯
ನ ಭರ್ತೃಭಕ್ತೇರಪರಂ ಧರ್ಮಂ ಕಂಚನ ವೇದ್ಮ್ಯಹಮ್ ।
ತೇನ ಮೇ ತತ್ಪ್ರಸಾದೇನ ವಿಜ್ಞಾನಬಲಮೀದೃಶಮ್ ॥ ೧೮೦
ಕಿಂ ಚೇಹ ಧರ್ಮವ್ಯಾಧಾಖ್ಯಂ ಮಾಂಸವಿಕ್ರಯಜೀವಿನಮ್ ।
ಗತ್ವಾ ಪಶ್ಯ ತತಃ ಶ್ರೇಯೋ ನಿರಹಂಕಾರಮಾಪ್ಸ್ಯಸಿ ॥ ೧೮೧
ಏವಂ ಸರ್ವವಿದಾ ಪ್ರೋಕ್ತ ಸ ಪತಿವ್ರತಯಾ ಮುನಿಃ ।
ಗೃಹೀತಾತಿಥಿಭಾಗಸ್ತಾಂ ಪ್ರಣಮ್ಯ ನಿರಗಾತ್ತತಃ ॥ ೧೮೨
ಅನ್ಯೇದ್ಯುಃ ಸಮುನಿರ್ಧರ್ಮವ್ಯಾಧಮನ್ವಿಷ್ಯ ತತ್ರ ತಮ್ ।
ವಿಪಣಿಸ್ಥಮುಪಾಗಚ್ಛತ್ ಕುರ್ವಾಣಂ ಮಾಂಸವಿಕ್ರಯಮ್ ॥ ೧೮೩

೧೮೪. ಆಗ ಧರ್ಮವ್ಯಾಧನು ಇವನನ್ನು ನೋಡಿದ ಕೂಡಲೇ ಹೇಳಿದನು: "ಬ್ರಾಹ್ಮಣನೇ ! ಆ ಪತಿವ್ರತೆಯು ನಿನ್ನನ್ನು ಇಲ್ಲಿಗೆ ಕಳುಹಿಸಿರುವಳೇನು ?"

೧೮೫. ಅದನ್ನು ಕೇಳಿ ಆಶ್ಚರ್ಯಗೊಂಡ ಆ ಋಷಿಯು ಧರ್ಮವ್ಯಾಧನನ್ನು ಕೇಳಿದನು: "ಮಾಂಸವನ್ನು ಮಾರುವವನಾದ ನಿನಗೆ ಈ ರೀತಿಯ ಜ್ಞಾನವು ಹೇಗೆ ಉಂಟಾಯಿತು ?"

೧೮೬. ಹೀಗೆ ಕೇಳಿದ ಋಷಿಯನ್ನು ಕುರಿತು ಧರ್ಮವ್ಯಾಧನು ಹೇಳಿದನು: "ನಾನು ಮಾತಾಪಿತೃಗಳ ಭಕ್ತನು. ಅವರೇ ನನಗೆ ಏಕೈಕ ಸದ್ಗತಿ.

೧೮೭. ಅವರನ್ನು ಸ್ನಾನಮಾಡಿಸಿದ ಮೇಲೆ ನಾನು ಸ್ನಾನ ಮಾಡುತ್ತೇನೆ. ಅವರಿಬ್ಬರಿಗೆ ಊಟಮಾಡಿಸಿದ ಮೇಲೆ ನಾನು ಊಟ ಮಾಡುತ್ತೇನೆ. ಅವರು ಮಲಗಿದ ಮೇಲೆ ನಾನು ಮಲಗುತ್ತೇನೆ. ಅದರಿಂದಾಗಿ ನನಗೆ ಈ ವಿಧವಾದ ಜ್ಞಾನವುಂಟಾಗಿದೆ.

೧೮೮. ಮತ್ತು ಬೇರೆಯವರು ಕೊಂದಿರುವ ಜಿಂಕೆ ಮುಂತಾದುದರ ಮಾಂಸವನ್ನು ನಾನು ಜೀವಿಕೆಗೋಸ್ಕರವಾಗಿ ಮಾತ್ರ ಮಾರುತ್ತೇನೆ; ಧನದಲೋಭದಿಂದಲ್ಲ.

೧೮೯. ಮುನಿಯೇ ! ಜ್ಞಾನಕ್ಕೆ ವಿಘ್ನವಾದ ಅಹಂಕಾರವು ನನಗೂ ಆ ಪತಿವ್ರತೆಗೂ ಇಲ್ಲವೇ ಇಲ್ಲ. ಅದರಿಂದಾಗಿ ನಮ್ಮಿಬ್ಬರಿಗೆ ನಿರ್ಬಾಧವಾದ ಜ್ಞಾನವು ಉಂಟಾಗಿದೆ.

---

ಧರ್ಮವ್ಯಾಧಶ್ಚ ದೃಷ್ಟ್ವೈವ ಸ ತಂ ಮುನಿಮಭಾಷತ ।
ಕಿಂ ಪತಿವ್ರತಯಾ ಬ್ರಹ್ಮನ್ನಿಹ ತ್ವಂ ಪ್ರೇಷಿತಸ್ತಯಾ ॥ ೧೮೪
ತಚ್ಛ್ರುತ್ವಾ ವಿಸ್ಮಿತೋऽವಾದೀದ್ಧರ್ಮವ್ಯಾಧಮೃಷಿಃ ಸ ತಮ್ ।
ಈದೃಶಂ ತೇ ಕಥಂ ಜ್ಞಾನಂ ಮಾಂಸವಿಕ್ರಯಿಣಃ ಸತಃ ॥ ೧೮೫
ಇತ್ಯುಕ್ತವಂತಂ ತಮೃಷಿಂ ಧರ್ಮವ್ಯಾಧೋ ಜಗಾದ ಸಃ ।
ಮಾತಾಪಿತ್ರೋರಹಂ ಭಕ್ತಸ್ತೌ ಮಮೈಕಂ ಪರಾಯಣಮ್ ॥ ೧೮೬
ತಯೋಃ ಸ್ನಪಿತಯೋಃ ಸ್ನಾಮಿ ಭುಂಜೇ ಭೋಜಿತಯೋಸ್ತಯೋಃ ।
ಶಯೇ ಶಯಿತಯೋಸ್ತೇನ ಜ್ಞಾನಮೀದೃಗ್ವಿಧಂ ಮಮ ॥ ೧೮೭
ಮಾಂಸಂ ಚಾನ್ಯ ಹತಸ್ಯಾಹಂ ಮೃಗಾದೇರ್ವೃತ್ತಯೇ ಪರಮ್ ।
ಸ್ವಧರ್ಮನಿರತೋ ಭೂತ್ವಾ ವಿಕ್ರೀಣೇ ನಾರ್ಥಗರ್ಧತಃ ॥ ೧೮೮
ಜ್ಞಾನವಿಘ್ನಮಹಂಕಾರಮಹಂ ಸಾ ಚ ಪತಿವ್ರತಾ ।
ನೈವಕುರ್ವೋ ಮುನೇ ತೇನ ನಿರ್ಬಾಧಜ್ಞಾನಮಾವಯೋಃ ॥ ೧೮೯

೧೯೦. ಆದುದರಿಂದ ನೀನು ಕೂಡ ಅಹಂಕಾರವನ್ನು ತೊರೆದು ಮುನಿವ್ರತವನ್ನು ಧರಿಸಿ ಪರಿಶುದ್ಧಿಗಾಗಿ ಸ್ವಧರ್ಮವನ್ನು ಆಚರಿಸು. ಅದರಿಂದ ಶೀಘ್ರವಾಗಿ ಪರಂಜ್ಯೋತಿಯನ್ನು ಹೊಂದುವೆ."

೧೯೧. ಹೀಗೆ ಆ ಧರ್ಮವ್ಯಾಧನ ಮನೆಗೆ ಹೋಗಿ ಅವನ ಚರ್ಯೆಯನ್ನು ನೋಡಿ ಅವನಿಂದ ಅನುಶಾಸಿತನಾದ ಮುನಿಯು ಸಂತುಷ್ಟನಾಗಿ ಅರಣ್ಯಕ್ಕೆ ಹೋದನು.

೧೯೨–೧೯೩. ಧರ್ಮವ್ಯಾಧನ ಉಪದೇಶದಿಂದ ಮುನಿಯು ಸಿದ್ಧಿಯನ್ನು ಪಡೆದನು. ಆ ಪತಿವ್ರತೆ ಮತ್ತು ಧರ್ಮವ್ಯಾಧರಿಬ್ಬರೂ ಸ್ವಧರ್ಮದ ಆಚರಣೆಯಿಂದ ಸಿದ್ಧಿಯನ್ನು ಪಡೆದರು. ಪತಿಯಲ್ಲೂ ತಂದೆಯಲ್ಲೂ ತಾಯಿಯಲ್ಲೂ ಭಕ್ತರಾಗಿರುವವರ ಪ್ರಭಾವವು ಇದು. ಆದುದರಿಂದ ಬಾ. (ನಿನ್ನನ್ನು) ನೋಡಲು ಉತ್ಸುಕಳಾಗಿರುವ ತಾಯಿಯನ್ನು ಗೌರವಿಸು."

೧೯೪. ಹೀಗೆ ತಂದೆಯಾದ ಚಂದ್ರಸ್ವಾಮಿಯು ಹೇಳಿದಾಗ ಮಹೀಪಾಲನು ತಾಯಿಯ ಅನುರೋಧದಿಂದ ಸ್ವದೇಶಕ್ಕೆ ಹೋಗಲು ಒಪ್ಪಿದನು.

೧೯೫ ಧರ್ಮದ ದೃಷ್ಟಿಯಿಂದ ತಂದೆಯಾದ ಅನಂತಸ್ವಾಮಿಗೆ ಅದೆಲ್ಲವನ್ನೂ ನಿವೇದಿಸಿ ಅವನು ರಾಜ್ಯಭಾರವನ್ನು ಸ್ವೀಕರಿಸುವಂತೆ ಮಾಡಿ ಮಹೀಪಾಲನು ತಂದೆಯೊಡನೆ ರಾತ್ರಿ ಅಲ್ಲಿಂದ ಹೊರಟನು.

---

ತಸ್ಮಾತ್ತ್ವಮಪ್ಯಹಂಕಾರಂ ಮುಕ್ತ್ವಾ ಶುದ್ಧ್ಯೈ ಮುನಿವ್ರತಃ ।
ಸ್ವಧರ್ಮಂ ಚರ ಯೇನಾಶು ಪರಂಜ್ಯೋತಿರವಾಪ್ಸ್ಯಸಿ ॥ ೧೯೦
ಇತಿ ತೇನಾನುಶಿಷ್ಟಃ ಧರ್ಮವ್ಯಾಧೇನ ತದ್ಗೃಹಾನ್ ।
ಗತ್ವಾ ದೃಷ್ಟ್ವಾ ಚ ತಚ್ಚರ್ಯಾಂ ಮುನಿಸ್ತುಷ್ಟೋ ವನಂ ಯಯೌ ॥ ೧೯೧
ಸಿದ್ಧಸ್ತದುಪದೇಶಾಚ್ಚ ಸೋಽಭೂತ್ತಾವಪಿ ಜಗ್ಮತುಃ ।
ಸಿದ್ಧಿಂ ಪತಿವ್ರತಾಧರ್ಮವ್ಯಾಧೌ ತದ್ಧರ್ಮಚರ್ಯಯಾ ॥ ೧೯೨
ಏಷ ಪ್ರಭಾವೋ ಭಕ್ತಾನಾಂ ಪತ್ಯೌ ಪಿತರಿ ಮಾತರಿ ।
ತದೇಹಿ ಸಂಭಾವಯತಾಂ ಮಾತರಂ ದರ್ಶನೋತ್ಸುಕಾಮ್ ॥ ೧೯೩
ಏವಂ ಪಿತ್ರಾ ಮಹೀಪಾಲಃ ಸ ಚಂದ್ರಸ್ವಾಮಿನೋದಿತಃ ।
ಪ್ರತಿಪೇದೇ ಸ್ವದೇಶಾಯ ಗಂತುಂ ಮಾತ್ರನುರೋಧತಃ ॥ ೧೯೪
ಅನಂತಸ್ವಾಮಿನೇ ಸರ್ವಂ ಧರ್ಮಪಿತ್ರೇ ನಿವೇದ್ಯ ತತ್ ।
ತೇನಾತ್ತಭಾರಃ ಸ ತತಃ ಪ್ರಾಯಾತ್‌ಪಿತೃಸಖೋ ನಿಶಿ ॥ ೧೯೫

೧೯೬. ಕ್ರಮೇಣ ತನ್ನ ದೇಶವನ್ನು ತಲುಪಿ ತಾಯಿಯಾದ ದೇವಮತಿಯನ್ನು ವಸಂತಮಾಸವು ಹೆಣ್ಣು ಕೋಗಿಲೆಯನ್ನು ಮುದಗೊಳಿಸುವಂತೆ ತನ್ನ ಆಗಮನದಿಂದ ಸಂತೋಷಪಡಿಸಿದನು.

೧೯೭. ಅಲ್ಲಿ ಅವನ ತಂದೆಯು ಎಲ್ಲ ವೃತ್ತಾಂತವನ್ನೂ ತಿಳಿಸಿದನು. ಮಹೀಪಾಲನು ಅಲ್ಲಿ ತಂದೆತಾಯಿಯಂದಿರೊಡನೆ ಬಂಧುಗಳಿಂದ ಸತ್ಕೃತನಾಗಿ ಕೆಲವು ಕಾಲದವರೆಗೆ ತಂಗಿದನು.

೧೯೮. ಅಷ್ಟರಲ್ಲಿ ತಾರಾಪುರದಲ್ಲಿ ಒಳಗೆ ಮಲಗಿದ್ದ ಮಹೀಪಾಲನ ಪತ್ನಿಯಾದ ರಾಜಪುತ್ರಿ ಬಂಧುಮತಿಯು ರಾತ್ರಿಯು ಕಳೆದ ಮೇಲೆ ಎಚ್ಚರಗೊಂಡಳು.

೧೯೯. ಪತಿಯು ಇಲ್ಲದುದನ್ನು ಕಂಡು ಅವನು ಎಲ್ಲಿಗೋ ಹೋಗಿದ್ದಾನೆ ಎಂದು ತಿಳಿದು ವಿರಹದಿಂದ ವ್ಯಾಕುಲಳಾದಳು. ಅವಳಿಗೆ ಪ್ರಾಸಾದ, ಉಪವನ ಮುಂತಾದವುಗಳಲ್ಲಿ ಎಲ್ಲಿಯೂ ಮನಶ್ಶಾಂತಿಯು ಲಭಿಸಲಿಲ್ಲ.

೨೦೦. ಒಂದೇ ಸಮನೆ ಅಳುತ್ತಿದ್ದ ಅವಳ ಕಣ್ಣೀರ ಹನಿಗಳು ಅವಳ ಕಂಠದಲ್ಲಿ ಎರಡನೆಯ ಮುತ್ತಿನಹಾರ ಹಾಕಿದಂತಾಯಿತು. ಸತತವಾಗಿ ಅಳುತ್ತಿದ್ದ ಅವಳು ಮರಣವೇ ಸುಖ ಎಂದು ಸಾವನ್ನು ಬಯಸಿದಳು.

---

ಕ್ರಮಾತ್ ಪ್ರಾಪ್ಯ ಸ್ವದೇಶಂ ಚ ಜನನೀಂ ದರ್ಶನೇನ ತಾಮ್ ।
ಅನಂದಯದ್ದೇವಮತಿಂ ಮಧುಃ ಪಿಕವಧೂಮಿವ ॥ ೧೯೬
ಕಂಚಿತ್ಕಾಲಂ ಮಹೀಪಾಲಸ್ತಸ್ಥೌ ಬಾಂಧವಸತ್ಕೃತಃ ।
ತತ್ರ ಮಾತೃಯುತಃ ಪಿತ್ರಾ ವೃತ್ತಾಂತಾಖ್ಯಾಯಿನಾ ಸಹ ॥ ೧೯೭
ತಾವತ್ತಾರಾಪುರೇ ತತ್ರ ತದ್ಭಾರ್ಯಾ ತು ನೃಪಾತ್ಮಜಾ ।
ನಿಶಾಕ್ಷಯೇ ಬಂಧುಮತೀ ಸಾಂತಃಸುಪ್ತಾ ವ್ಯಬುಧ್ಯತ ॥ ೧೯೮
ಬುದ್ಧ್ವಾ ಚ ತಂ ಪತಿಂ ಕ್ವಾಪಿ ಗತಂ ವಿರಹವಿಕ್ಲವಾ ।
ನ ಲೇಭೇ ಸಾ ರತಿಂ ಕ್ವಾಪಿ ಪ್ರಾಸಾದೋಪವನಾದಿಷು ॥ ೧೯೯
ದ್ವಿಗುಣೀಕೃತಹಾರೇಣ ಬಾಷ್ಪೇಣ ರುದತೀ ಪರಮ್ ।
ಆಸೀತ್ ಪ್ರಲಾಪೈಕಮಯೀ ವಾಂಛಂತೀ ಮೃತ್ಯುನಾ ಸುಖಮ್ ॥ ೨೦೦

೨೦೧–೨೦೨. ಆಗ ಮಂತ್ರಿಯಾದ ಅನಂತಸ್ವಾಮಿಯು ಬಂದು, "ಯಾವುದೋ ಕಾರ್ಯದ ನಿಮಿತ್ತ ಹೋಗುತ್ತಿದ್ದೇನೆ. ಶೀಘ್ರವಾಗಿ ಬಂದುಬಿಡುತ್ತೇನೆ ಎಂದು ನನಗೆ ರಹಸ್ಯವಾಗಿ ಹೇಳಿ ಹೋಗಿದ್ದಾನೆ. ನೀನು ದುಃಖ ಪಡಬೇಡ" ಎಂದು ಅವಳಿಗೆ ಆಶಾದಾಯಕವಾದ ಮಾತುಗಳನ್ನು ಹೇಳಿದನು. ಅದನ್ನು ಹೇಗೂ ಕಷ್ಟದಿಂದ ಒಪ್ಪಿಕೊಂಡು ಸಮಾಧಾನಪಟ್ಟುಕೊಂಡು ಅವಳು ಧೈರ್ಯವನ್ನು ತಾಳಿದಳು.

೨೦೩. ಪತಿಯ ವೃತ್ತಾಂತವನ್ನು ತಿಳಿಯುವುದಕ್ಕೋಸ್ಕರ ಅವಳು ದೇಶಾಂತರಗಳಿಂದ ಬಂದ ಬ್ರಾಹ್ಮಣಶ್ರೇಷ್ಠರನ್ನು ಯಾವಾಗಲೂ ದಾನಗಳಿಂದ ಪೂಜಿಸುತ್ತಾ ಇದ್ದಳು.

೨೦೪. ಆನಿಮಿತ್ತವಾಗಿ ದಾನಕ್ಕಾಗಿ ಬಂದ ದರಿದ್ರನಾದ ಸಂಗಮದತ್ತನೆಂಬ ಬ್ರಾಹ್ಮಣನನ್ನು ಕುರಿತು (ಪತಿಯ) ಗುರುತು ಮತ್ತು ಹೆಸರುಗಳನ್ನು ಹೇಳಿ ಅವಳು ಪತಿಯ ವೃತ್ತಾಂತವನ್ನು ಕೇಳಿದಳು.

೨೦೫. ಆಗ ಆ ಬ್ರಾಹ್ಮಣನು ಹೇಳಿದನು: "ಈ ರೀತಿಯಾದ ಯಾರನ್ನೂ ಕಾಣಲಿಲ್ಲ. ಆದರೂ ದೇವಿಯೇ ! ಈ ವಿಷಯದಲ್ಲಿ ನೀನು ಅಧೈರ್ಯವನ್ನು ತಾಳಲೇಬಾರದು.

೨೦೬. ಶುಭಕರ್ಮಗಳಿಂದ ಬಹಳಕಾಲದ ಮೇಲೆ ಇಷ್ಟ ಜನರ ಸಮಾಗಮವು ಪ್ರಾಪ್ತವಾಗುತ್ತದೆ. ಇದರ ಬಗ್ಗೆ ನಾನು ನೋಡಿದ ಒಂದು ಆಶ್ಚರ್ಯವನ್ನು ಹೇಳುತ್ತೇನೆ, ಕೇಳು.

---

ಯಾಮಿ ಕಾರ್ಯೇಣ ಕೇನಾಪಿ ಶೀಘ್ರಮೇಷ್ಯಾಮಿ ಚೇತಿ ಮೇ ।
ಸ್ವೈರಮುಕ್ತ್ವೈವ ಸ ಗತಸ್ತನ್ಮಾ ಪುತ್ರಿ ಶುಚಂ ಕೃಥಾಃ ॥ ೨೦೧
ಇತ್ಯಾಶಾದರ್ಶಿಭಿರ್ವಾಕ್ಯೈರನಂತಸ್ವಾಮಿನಾ ತತಃ ।
ಮಂತ್ರಿಣಾಶ್ವಾಸಿತಾಭ್ಯೇತ್ಯ ಕೃಚ್ಛ್ರಾತ್ ಸಾ ಧೃತಿಮಾದದೇ ॥ ೨೦೨
ತತಃ ಪ್ರವೃತ್ತಿಜ್ಞಾನಾರ್ಥಂ ಭರ್ತುರ್ದೇಶಾಂತರಾಗತಾನ್ ।
ಪೂಜಯಂತೀ ಸದೈವಾಸೀದ್ದಾನೈಃ ಸಾ ದ್ವಿಜಪುಂಗವಾನ್ ॥ ೨೦೩
ತೇನ ಸಂಗಮದತ್ತಾಖ್ಯಂ ದೀನಂ ದಾನಾಗತಂ ದ್ವಿಜಮ್ ।
ಭರ್ತುಃ ಪಪ್ರಚ್ಛ ಸಾ ವಾರ್ತಾಮುಕ್ತ್ವಾಭಿಜ್ಞಾನನಾಮನೀ ॥ ೨೦೪
ತತಸ್ತಾಂ ಸ ದ್ವಿಜೋಽವಾದೀದ್ದೃಷ್ಟೋ ನೈವಂವಿಧೋ ಮಯಾ ।
ಕಶ್ಚಿತ್ತಥಾಪಿ ದೇವ್ಯತ್ರ ಕಾರ್ಯಾ ನೈವಾಧೃತಿಸ್ತ್ವಯಾ ॥ ೨೦೫
ಚಿರಾದವಾಪ್ಯತೇಽಭೀಷ್ಟಸಂಯೋಗಃ ಶುಭಕರ್ಮಭಿಃ ।
ತಥಾ ಚ ಯನ್ಮಯಾದೃಷ್ಟಮಾಶ್ಚರ್ಯಂ ವಚ್ಮಿ ತಚ್ಛೃಣು ॥ ೨೦೬

೨೦೭ ತೀರ್ಥಗಳನ್ನು ಸಂಚರಿಸುತ್ತಾ ಒಮ್ಮೆ ನಾನು ಹಿಮವತ್ಪರ್ವತದಲ್ಲಿ ಮಾನಸ ಸರೋವರವನ್ನು ತಲುಪಿದೆ. ಅಲ್ಲಿ ಒಳಗೆ ಕನ್ನಡಿಯಂತಿದ್ದ ರತ್ನಮಯವಾದ ಒಂದು ಮನೆಯನ್ನು ನೋಡಿದೆ.

೨೦೮. ಆಗ ದಿವ್ಯಸ್ತ್ರೀಯರ ಸಮೂಹದಿಂದ ಕೂಡಿದ ಒಬ್ಬ ಖಡ್ಗಪಾಣಿಯಾದ ಪುರುಷ ಇದ್ದಕ್ಕಿದ್ದಂತೆ ಹೊರಬಂದು ಸರೋವರದ ದಡವನ್ನು ಹತ್ತಿದನು.

೨೦೯. ಅಲ್ಲಿ ಉದ್ಯಾನದಲ್ಲಿ ಅವನು ಸ್ತ್ರೀಯರ ಜೊತೆ ಪಾನ ಲೀಲೆಯಿಂದ ಕ್ರೀಡಿಸಿದನು. ದೂರದಿಂದ ನಾನು ಕುತೂಹಲದಿಂದ ಮರೆಯಾಗಿ ನಿಂತು ನೋಡುತ್ತಿದ್ದೆನು.

೨೧೦. ಅಷ್ಟರಲ್ಲಿ ಎಲ್ಲಿಂದಲೋ ಅಲ್ಲಿಗೆ ಸುಂದರನಾದ ಮತ್ತೊಬ್ಬ ಪುರುಷನು ಬಂದನು. ನನ್ನನ್ನು ಸಂಧಿಸಿದ ಅವನಿಗೆ ನಾನು ನೋಡಿದುದನ್ನು ಹಾಗೆಯೇ ಹೇಳಿದೆನು.

೨೧೧. ದೂರದಿಂದ ಕುತೂಹಲವಶಾತ್ ಅವನಿಗೆ ಸ್ತ್ರೀ ಸಮೇತನಾಗಿದ್ದ ಆ ಪುರುಷನನ್ನು ತೋರಿಸಿದೆ. ಅದನ್ನು ನೋಡಿ ಅವನು ತನ್ನ ವೃತ್ತಾಂತವನ್ನು ಹೀಗೆ ಹೇಳಿದನು.

೨೧೨. "ತ್ರಿಭುವನವೆಂಬ ಹೆಸರುಳ್ಳ ಪಟ್ಟಣದಲ್ಲಿರುವ ತ್ರಿಭುವನನೆಂಬ ಹೆಸರುಳ್ಳ ರಾಜನು ನಾನು. ಅಲ್ಲಿ ಒಬ್ಬ ಪಾಶುಪತನು ಬಹಳ ಕಾಲ ನನ್ನ ಸೇವೆಯನ್ನು ಮಾಡಿದನು.

---

ತೀರ್ಥಾನ್ಯಟನ್ನಹಂ ಪ್ರಾಪಂ ಹಿಮಾದ್ರೌ ಮಾನಸಃ ಸರಃ ।
ತತ್ರಾದರ್ಶಮಿವಾಪಶ್ಯಮಂತರ್ಮಣಿಮಯಂ ಗೃಹಮ್ ॥ ೨೦೭
ತತೋಽಕಸ್ಮಾಚ್ಚ ನಿರ್ಗತ್ಯ ಖಡ್ಗಪಾಣಿಃ ಪುಮಾನ್ ಗೃಹಾತ್ ।
ಅಧ್ಯಾರೋಹತ್ಸರಸ್ತೀರಂ ದಿವ್ಯನಾರೀಗಣಾನ್ವಿತಃ ॥ ೨೦೮
ತತ್ರೋದ್ಯಾನೇ ಸಹ ಸ್ತ್ರೀಭಿಃ ಸೋಽಕ್ರೀಡತ್ಪಾನಲೀಲಯಾ ।
ದೂರಾತ್ಸಕೌತುಕಶ್ಚಾಹಂ ಪಶ್ಯನ್ನಾಸಮಲಕ್ಷಿತಃ ॥ ೨೦೯
ತಾವತ್ಕುತೋಽಪಿ ತತ್ರಾಗಾತ್ಸುಭಗಃ ಪುರುಷೋಽಪರಃ ।
ಮಿಲಿತಾಯ ಚ ತತ್ತಸ್ಮೈ ಯಥಾದೃಷ್ಟಂ ಮಯೋದಿತಮ್ ॥ ೨೧೦
ದರ್ಶಿತಶ್ಚ ಸ ಸಸ್ತ್ರೀಕಃ ಪುಮಾನ್ ದೂರಾತ್ಕುತೂಹಲಾತ್ ।
ತದ್ದೃಷ್ಟ್ವೈವ ಸ್ವವೃತ್ತಾಂತಮೇವಮಾಖ್ಯಾತವಾನ್ಮಮ ॥ ೨೧೧
ಪುರೇತ್ರಿಭುವನಾಖ್ಯೇಽಹಂ ರಾಜಾ ತ್ರಿಭುವನಾಭಿಧಃ ।
ತತ್ರ ಮೇ ಸುಚಿರಂ ಸೇವಾಮೇಕಃ ಪಾಶುಪತೋ ವ್ಯಧಾತ್ ॥ ೨೧೨

೨೧೩. ...........................................[1]

೨೧೪. ಏಕಾಂತದಲ್ಲಿ ನಾನು ಅವನ (ಸೇವೆಯ) ಕಾರಣವನ್ನು ಕೇಳಿದೆನು: ಅವನು ಬಿಲದಲ್ಲಿರುವ ಖಡ್ಗದಸಿದ್ಧಿಗಾಗಿ ಸಹಾಯ ಮಾಡಲು ನನ್ನನ್ನು ಪ್ರಾರ್ಥಿಸಿದನು. ನಾನು ಅದಕ್ಕೆ ಒಪ್ಪಿಕೊಂಡೆ.

೨೧೫. ಅನಂತರ ನನ್ನ ಜೊತೆ ಕಾಡಿಗೆ ಹೋಗಿ ರಾತ್ರಿಯಲ್ಲಿ ಹೋಮ ಮುಂತಾದುದರಿಂದ ಬಿಲವನ್ನು ಕಾಣುವಂತೆ ಮಾಡಿ ಆ ಪಾಶುಪತನು ನನ್ನನ್ನು ಕುರಿತು ಹೇಳಿದನು.

೨೧೬. "ವೀರನೇ ! ಮೊದಲು ನೀನು ಒಳಗೆ ಪ್ರವೇಶಿಸು. ಅಲ್ಲಿ ಖಡ್ಗವನ್ನು ಪಡೆದು ಹೊರಗೆ ಬಂದು ನನ್ನನ್ನೂ ಒಳಗೆ ಬರುವಂತೆ ಮಾಡು. ಹಾಗೆಯೇ ಮಾಡುತ್ತೇನೆಂದು ನೀನು ಪ್ರತಿಜ್ಞೆಯನ್ನು ಮಾಡು."

೨೧೭. ಅವನು ಹೇಳಿದಂತೆಯೇ ನಾನು ಅವನಿಗೆ ಪ್ರತಿಜ್ಞೆಯನ್ನು ಮಾಡಿ ಶೀಘ್ರವಾಗಿ ಆ ಬಿಲವನ್ನು ಪ್ರವೇಶಿಸಿ ಒಂದು ರತ್ನಮಯವಾದ ಮನೆಯನ್ನು ಸೇರಿದೆನು.

೨೧೮. ಆಗ ಆ ಮನೆಯಿಂದ ಒಬ್ಬ ಪ್ರಧಾನರಾಕ್ಷಸಕನ್ಯೆಯು ಹೊರಗೆ ಬಂದು ನನ್ನನ್ನು ಪ್ರೀತಿಯಿಂದ ಒಳಗೆ ಕರೆದೊಯ್ದಳು. ಅಲ್ಲಿ ಅವಳು ಖಡ್ಗವನ್ನು ನನಗೆ ಕೊಟ್ಟಳು.

೨೧೯. "ಈ ಖಡ್ಗ ಎಲ್ಲ ಸಿದ್ಧಿಗಳನ್ನು ಕೊಡುವ ಖಡ್ಗ. ಆಕಾಶಗಮನದ ಶಕ್ತಿಯನ್ನು ಕೊಡುತ್ತದೆ. ಇದನ್ನು ರಕ್ಷಿಸಿಕೋ' ಎಂದು ಅವಳು ನನಗೆ ಹೇಳಿದಳು. ನಂತರ ನಾನು ಅಲ್ಲಿಯೇ ಅವಳ ಸಂಗಡ ತಂಗಿದೆ.

---

——————————————————————‖ ೨೧೩

ಸ ಪೃಷ್ಟಃ ಕಾರಣಂ ಸ್ವೈರಂ ಬಿಲಖಡ್ಗಪ್ರಸಾಧನೇ ।
ಸಹಾಯಂ ಪ್ರಾರ್ಥಯತ ಮಾಂ ಪ್ರತಿಪನ್ನಂ ಮಯಾ ಚ ತತ್ ‖ ೨೧೪
ತತೋ ಮಯಾ ಸಹಾರಣ್ಯಂ ಗತ್ವಾ ಹೋಮಾದಿನಾ ನಿಶಿ ।
ಪ್ರಕಟೀಕೃತ್ಯ ವಿವರಂ ಸ ಮಾಂ ಪಾಶುಪತೋಽಭ್ಯಧಾತ್ ‖ ೨೧೫
ವೀರ ಪ್ರವಿಶ ಪೂರ್ವಂ ತ್ವಂ ಖಡ್ಗಂ ಪ್ರಾಪ್ಯ ಚ ಮಾಮಪಿ ।
ಪ್ರವೇಶಯೇಸ್ತ್ವಂ ನಿರ್ಗತ್ಯ ಸಮಯಂ ಚಾತ್ರ ಮೇ ಕುರು ‖ ೨೧೬
ಇತ್ಯುಕ್ತಸ್ತೇನ ತಸ್ಯಾಹಂ ಕೃತ್ವಾ ಸಮಯಮಾಶು ತತ್ ।
ಪ್ರವಿಶ್ಯ ವಿವರಂ ಪ್ರಾಪಮೇಕಂ ರತ್ನಮಯಂ ಗೃಹಮ್ ‖ ೨೧೭
ತತೋ ನಿರ್ಗತ್ಯ ಮಾಂ ಚೈಕಾ ಪ್ರಧಾನಾಸುರಕನ್ಯಕಾ ।
ಅಂತಃಪ್ರಾವೇಶಯತ್ ಪ್ರೇಮ್ಣಾ ಪ್ರಾದಾತ್ ಖಡ್ಗಂ ಚ ಸಾತ್ರ ಮೇ ‖ ೨೧೮
ಸರ್ವಸಿದ್ಧಿಪ್ರದಮಿಮಂ ಖಡ್ಗಂ ಖಗತಿದಾಯಿನಮ್ ।
ರಕ್ಷೇರಿತ್ಯುಕ್ತವತ್ಯಾಹಂ ತಯಾ ತತ್ರಾವಸಂ ಸಹ ‖ ೨೧೯

---

೧. ೨೧೩ನೆಯ ಶ್ಲೋಕವು ಈ ಆವೃತ್ತಿಯಲ್ಲಿ ಖಿಲವಾಗಿದೆ.

೨೨೦. ಅನಂತರ ಜ್ಞಾಪಿಸಿಕೊಂಡು ನಾನು ಖಡ್ಗದೊಡನೆ ಹೊರಬಂದು ಆ ಪಾಶುಪತನನ್ನು ಬಿಲದ ಮೂಲಕ ರಾಕ್ಷಸಭವನದೊಳಕ್ಕೆ ಕರೆದೊಯ್ದೆ.

೨೨೧. ಅಲ್ಲಿ ನಾನು ನನ್ನನ್ನು ಮೊದಲು ಸಂಧಿಸಿದ ಆ ಕನ್ಯೆಯೊಡನೆ ತಂಗಿದೆ. ಪಾಶುಪತನು ಅಲ್ಲಿದ್ದ ಎರಡನೆಯ ಅಸುರಕನ್ಯೆಯೊಡನೆ ಇದ್ದನು.

೨೨೨. ಒಂದು ದಿವಸ ಆ ಪಾಶುಪತನು ಪಾನಮತ್ತನಾಗಿದ್ದ ನನ್ನ ಪಾರ್ಶ್ವದಲ್ಲಿದ್ದ ಖಡ್ಗವನ್ನು ಕಪಟದಿಂದ ಅಪಹರಿಸಿ ತನ್ನ ಕೈಸೇರುವಂತೆ ಮಾಡಿಕೊಂಡನು.

೨೨೩. ಆ ಖಡ್ಗವು ಕೈಯಲ್ಲಿದ್ದುದರಿಂದ ಮಹಾಸಿದ್ಧಿಯನ್ನು ಪಡೆದ ಆ ಪಾಶುಪತನು ನನ್ನನ್ನು ಹಿಡಿದುಕೊಂಡು ಬಿಲದಿಂದ ಹೊರಗೆ ಬಂದು (ನನ್ನನ್ನು) ಹೊರಗೆ ಎಸೆದನು.

೨೨೪. ಅನಂತರ ಹನ್ನೆರಡು ವರ್ಷಗಳ ಕಾಲ ಎಂದಾದರೂ ಅವನು ಹೊರಗೆ ಬಂದಾಗ ಅವನನ್ನು ಹಿಡಿದೇನು ಎಂದು ಬಿಲದ್ವಾರದಲ್ಲಿ ಅವನನ್ನು ನಾನು ನಿರೀಕ್ಷಿಸುತ್ತ ಅಲ್ಲೇ ಇದ್ದೆನು.

೨೨೫. ಆ ಮೂರ್ಖನು ಇಂದು ಇಲ್ಲಿ ನನ್ನವಳಾದ ಈ ಅಸುರಕನ್ಯೆಯೊಡನೆ ಕ್ರೀಡಿಸುತ್ತಾ ನನ್ನ ಕಣ್ಣಿಗೆ ಬಿದ್ದಿದ್ದಾನೆ.

೨೨೬. ಸ್ವಾಮಿನಿಯೇ ! ಹೀಗೆ ರಾಜನಾದ ತ್ರಿಭುವನನು ನನಗೆ ಹೇಳುತ್ತಿರುವಾಗ ಪಾಶುಪತನು ಅಲ್ಲೇ ಪಾನಮದದಿಂದ ನಿದ್ರೆ ಹೋದನು.

---

ಸ್ಮೃತ್ವಾಥ ಖಡ್ಗಹಸ್ತೋಽಹಂ ನಿರ್ಗತ್ಯ ವಿವರೇಣ ತಮ್ ।
ಪ್ರಾವೇಶಯಂ ಪಾಶುಪತಂ ತಸ್ಮಿನ್ನಸುರಮಂದಿರೇ ॥ ೨೨೦
ತತ್ರಾಹಮಾದ್ಯಯಾ ಸಾಕಂ ತಯಾ ಸಪರಿವಾರಯಾ ।
ಸೋಽಪಿ ದ್ವಿತೀಯಯಾ ಸಾಕಮಾಸೀದಸುರಕನ್ಯಯಾ ॥ ೨೨೧
ಏಕದಾ ಪಾನಮತ್ತಸ್ಯ ಸ ಮೇ ಪಾಶುಪತಶ್ಛಲಾತ್ ।
ಹೃತ್ವಾ ಪಾರ್ಶ್ವಸ್ಥಿತಂ ಖಡ್ಗಮಕರೋನ್ನಿಜಹಸ್ತಗಮ್ ॥ ೨೨೨
ತಸ್ಮಿನ್ ಹಸ್ತಸ್ಥಿತೇ ಲಬ್ಧಮಹಾಸಿದ್ಧಿಃ ಸ ಪಾಣಿನಾ ।
ಮಾಮಾದಾಯೈವ ನಿಷ್ಕಾಲ್ಯ ವಿವರಾತ್ಪ್ರಾಕ್ಷಿಪದ್ಬಹಿಃ ॥ ೨೨೩
ತತೋ ದ್ವಾದಶವರ್ಷಾಣಿ ಮಯಾ ಬಿಲಮುಖೇಷು ಸಃ ।
ಗವೇಷಿತಃ ಕದಾಚಿತ್ತು ನಿರ್ಗತಂ ಪ್ರಾಪ್ನುಯಾಮಿತಿ ॥ ೨೨೪
ಸೋಽಯಮದ್ಯೇಹ ಮೇ ದೃಷ್ಟಿಪಥೇ ನಿಪತಿತಃ ಶಠಃ ।
ಮದೀಯಯೈತಯಾ ಸಾಕಂ ಕ್ರೀಡನ್ನಸುರಕನ್ಯಯಾ ॥ ೨೨೫
ಇತಿ ಯಾವತ್ತ್ರಿಭುವನಃ ಸ ರಾಜಾ ದೇವಿ ವಕ್ತಿ ಮಾಮ್ ।
ತಾವತ್ಪಾನಮದಾನ್ನಿದ್ರಾಮಗಾತ್ಪಾಶುಪತೋಽತ್ರ ಸಃ ॥ ೨೨೬

೨೨೭. ಮಲಗಿದ್ದ ಆ ಪಾಶುಪತನ ಪಾರ್ಶ್ವದಿಂದ ರಾಜನು ಖಡ್ಗವನ್ನು ತೆಗೆದುಕೊಂಡನು. ಅದರಿಂದ ಪುನಃ ಅವನಿಗೆ ದಿವ್ಯವಾದ ಪ್ರಭಾವವು ಬಂದಿತು.

೨೨೮. ಅನಂತರ ಆ ಪಾಶುಪತನನ್ನು ಕಾಲಿನಿಂದ ಒದ್ದು ಎಬ್ಬಿಸಿ ವೀರನಾದ ಆ ರಾಜನು, ಸಂಕಟಕ್ಕೆ ಒಳಗಾದ ಅವನನ್ನು ನಿಂದಿಸಿದನು. ಆದರೆ ಕೊಲ್ಲಲಿಲ್ಲ.

೨೨೯. ಅನಂತರ ತ್ರಿಭುವನನು ಸಿದ್ಧಿಯಂತೆ ಸಿಕ್ಕಿದ ಆ ತನ್ನ ಪರಿವಾರಸಹಿತಳಾದ ಅಸುರ ಕನ್ಯೆಯೊಡನೆ ಅಸುರಪುರವನ್ನು ಪ್ರವೇಶಿಸಿದನು.

೨೩೦. ಪಾಶುಪತನು ಸಿದ್ಧಿಯಿಂದ ಚ್ಯುತನಾಗಿ ಅತ್ಯಂತ ಕಷ್ಟವನ್ನು ಅನುಭವಿಸಿದನು. ಬಹಳ ಕಾಲ ಇದ್ದ ಸಿದ್ಧಿಯನ್ನು ಅನುಭವಿಸಿದವರೂ ಕೃತಘ್ನರಾದರೆ ನಿಶ್ಚಯವಾಗಿ ನಾಶ ಹೊಂದುತ್ತಾರೆಯಷ್ಟೆ

೨೩೧. ಇದನ್ನು ಪ್ರತ್ಯಕ್ಷವಾಗಿ ನೋಡಿ ನಾನು ಸುತ್ತಾಡುತ್ತಾ ಇಲ್ಲಿಗೆ ಬಂದಿದ್ದೇನೆ. ಆದುದರಿಂದ ಸ್ವಾಮಿನಿಯೇ ! ನಿನಗೆ ಪ್ರಿಯಜನಸಮಾಗಮವು ದೀರ್ಘಕಾಲದ ಮೇಲೂ ಉಂಟಾಗುವುದು.

೨೩೨. ತ್ರಿಭುವನನಿಗೆ ಆದಂತೆ ಶುಭಕರ್ಮವನ್ನು ಮಾಡಿದವನು ನಾಶ ಹೊಂದುವುದಿಲ್ಲವಷ್ಟೆ" ಹೀಗೆ ಆ ಬ್ರಾಹ್ಮಣನಿಂದ ಕೇಳಿ ಬಂಧುಮತಿಯು ಸಂತೋಷವನ್ನು ಹೊಂದಿದಳು.

---

ಸುಪ್ತಸ್ಯ ತಸ್ಯ ಗತ್ವೈವ ಪಾರ್ಶ್ವಾತ್ ಖಡ್ಗಂ ತಮಗ್ರಹೀತ್ ।
ಸ ರಾಜಾ ತೇನ ಭೂಯಶ್ಚ ಪ್ರಭಾವಂ ದಿವ್ಯಮಾಪ್ತವಾನ್ ॥ ೨೨೭
ತತಃ ಪಾಶುಪತಂ ಪಾದಪ್ರಹಾರೇಣ ಪ್ರಬೋಧ್ಯ ತಮ್ ।
ನಿರಭರ್ತ್ಸಯದಾಪನ್ನಂ ಸ ವೀರೋ ನಾವಧೀತ್ ಪುನಃ ॥ ೨೨೮
ಪ್ರಾವಿಶಚ್ಚಾಸುರಪುರಂ ಸಪರಿಚ್ಛದಯಾ ತಯಾ ।
ಪ್ರಾಪ್ತಯಾ ಸ ಸ್ವಯಾ ಸಾಕಂ ಸಿದ್ಧ್ಯೇವಾಸುರಕನ್ಯಯಾ ॥ ೨೨೯
ಸ ಚ ಪಾಶುಪತಃ ಸಿದ್ಧಿಭ್ರಷ್ಟಃ ಕಷ್ಟಮಗಾತ್ ಪರಮ್ ।
ಕೃತಘ್ನಾಶ್ಚಿರಸಿದ್ಧಾರ್ಥಾ ಅಪಿ ಭ್ರಶ್ಯಂತಿ ಹಿ ಧ್ರುವಮ್ ॥ ೨೩೦
ಏತತ್ಸಾಕ್ಷಾದ್ವಿಲೋಕ್ಯಾಹಮಿಹ ಪ್ರಾಪ್ತಃ ಪರಿಭ್ರಮನ್ ।
ತದ್ದೇವಿ ಪ್ರಿಯಸಂಯೋಗಸ್ತವ ಭಾವೀ ಚಿರಾದಪಿ ॥ ೨೩೧
ಯಥಾ ತ್ರಿಭುವನಸ್ಯಾಭೂಚ್ಛುಭಕೃನ್ನಹಿ ಸೀದತಿ ।
ಇತಿ ತಸ್ಮಾದ್ದ್ವಿಜಾಚ್ಛ್ರುತ್ವಾ ತೋಷಂ ಬಂಧುಮತೀ ಯಯೌ ॥ ೨೩೨

೨೩೩ ಅವಳು ಆ ಬ್ರಾಹ್ಮಣನಿಗೆ ಯಥೇಚ್ಛವಾದ ಧನವನ್ನು ಕೊಟ್ಟು ಅವನನ್ನು ಕೃತಾರ್ಥನನ್ನಾಗಿ ಮಾಡಿದಳು. ಮಾರನೆಯ ದಿವಸ ದೂರದೇಶದಲ್ಲಿ ಹುಟ್ಟಿದ ಒಬ್ಬ ಅಪೂರ್ವ ಬ್ರಾಹ್ಮಣನು ಅಲ್ಲಿಗೆ ಬಂದನು.

೨೩೪. ಉತ್ಕಂಠಿತಳಾದ ಬಂಧುಮತಿಯು ಗುರುತು ಮತ್ತು ಹೆಸರುಗಳನ್ನು ಅವನಿಗೆ ಹೇಳಿ ತನ್ನ ಪತಿಯ ವೃತ್ತಾಂತವನ್ನು ಕೇಳಿದಳು. ಆಗ ಆ ಬ್ರಾಹ್ಮಣನು ಅವಳನ್ನು ಕುರಿತು ಹೇಳಿದನು.

೨೩೫ "ಸ್ವಾಮಿನಿಯೇ ! ಆ ನಿನ್ನ ಪತಿಯನ್ನು ನಾನು ಎಲ್ಲಿಯೂ ನೋಡಲಿಲ್ಲ. ಆದರೆ ಸುಮನ ಎಂಬ ಅನ್ವರ್ಥವಾದ ಹೆಸರಿನ ನಾನು ಇಂದು ನಿನ್ನ ಮನೆಗೆ ಬಂದಿದ್ದೇನೆ

೨೩೬ ಆದ್ದರಿಂದ ಸಂತೋಷ ! ನನ್ನ ಮನಸ್ಸು ನಿನಗೆ ಶೀಘ್ರವಾಗಿ ಸೌಮನಸ್ಯ ವುಂಟಾಗುವುದು ಎಂದು ಹೇಳುತ್ತಿದೆ. ಮತ್ತು ಚಿರಕಾಲ ವಿಯೋಗ ಹೊಂದಿದವರಿಗೂ ಕೂಡ ಸಮಾಗಮವು ಉಂಟಾಗಿಯೇ ಆಗುತ್ತದೆ.

೨೩೭ ದೇವಿ ! ಈ ವಿಷಯದಲ್ಲಿ ಈ ಕಥೆಯನ್ನು ಹೇಳುತ್ತೇನೆ. ಕೇಳು. ಹಿಂದೆ ನಿಷಧದೇಶದ ರಾಜನಾದ ನಳನೆಂಬುವನು ಇದ್ದನು.

೨೩೮ ಅವನ ರೂಪದಿಂದ ಪರಾಜಿತನಾದ ಮನ್ಮಥನು ಅವಮಾನದ ಕಾರಣದಿಂದ ತ್ರಿಪುರಾರಾತಿಯಾದ ಶಿವನಿಗೆ ಕೋಪವನ್ನು ಉಂಟು ಮಾಡಿ ಅವನ ನೇತ್ರಾಗ್ನಿಯಲ್ಲಿ (ತನ್ನ) ಶರೀರವನ್ನು ಹೋಮ ಮಾಡಿದನೆಂದು ನನ್ನ ಉತ್ಪ್ರೇಕ್ಷೆ

---

ಚಕಾರ ಚ ಕೃತಾರ್ಥಂ ತಂ ವಿಪ್ರಂ ದತ್ತ್ವಾ ಧನಂ ಬಹು ।
ಅನ್ಯೇದ್ಯುಶ್ಚ ದ್ವಿಜೋಽಪೂರ್ವಸ್ತತ್ರಾಗಾದ್ದೂರದೇಶಜಃ ॥ ೨೩೩
ತಂ ಚ ಬಂಧುಮತೀ ಸೋತ್ಕಾ ಪ್ರೋಕ್ತಾಭಿಜ್ಞಾನನಾಮಕಾ ।
ಭರ್ತುರ್ವಾರ್ತಾಮಪೃಚ್ಛತ್ಸಾ ಸೋಽಥ ತಾಂ ಬ್ರಾಹ್ಮಣೋಽಭ್ಯಧಾತ್ ॥ ೨೩೪
ನ ಸ ದೇವಿ ಮಯಾ ದೃಷ್ಟಸ್ತ್ವದ್ಭರ್ತಾ ಕ್ವಾಪಿ ಕಿಂ ತ್ವಹಮ್ ।
ಅನ್ವರ್ಥಃ ಸುಮನೋನಾಮಾ ತವಾದ್ಯ ಗೃಹಮಾಗತಃ ॥ ೨೩೫
ತದಾಶು ಸೌಮನಸ್ಯಂ ತೇ ಭಾವೀತ್ಯಾಖ್ಯಾತಿ ಮೇ ಮನಃ ।
ಭವತ್ಯೇವ ಚ ಸಂಯೋಗಶ್ಚಿರವಿಶ್ಲೇಷಿಣಾಮಪಿ ॥ ೨೩೬
ತಥಾ ಚ ಕಥಯಾಮ್ಯೇತಾಮತ್ರ ದೇವಿ ಕಥಾಂ ಶೃಣು ।
ನಿಷಧಾಧಿಪತೀ ರಾಜಾ ನಲೋ ನಾಮಾಭವತ್ಪುರಾ ॥ ೨೩೭
ಯಸ್ಯ ರೂಪೇಣ ವಿಜಿತಃ ಕಾಮೋ ಮನ್ಯೇಽವಮಾನತಃ ।
ಕೋಪಿತತ್ರಿಪುರಾರಾತಿನೇತ್ರಾಗ್ನಾವಜುಹೋತ್ತನುಮ್ ॥ ೨೩೮

೨೪೯. ಭಾರ್ಯಾರಹಿತನಾದ ಅವನು ಸದೃಶಳಾದ ಭಾರ್ಯೆಯನ್ನು ಹುಡುಕುತ್ತಾ ವಿದರ್ಭದೇಶದ ಅಧಿಪತಿಯಾದ ಭೀಮನಿಗೆ ದಮಯಂತೀ ಎಂಬ ಮಗಳು ಇರುವಳೆಂದು ಕೇಳಿದನು.

೨೫೦. ಭೀಮನು ಕೂಡ ಭೂಮಿಯನ್ನು ಹುಡುಕಿ ರಾಜರಲ್ಲಿ ತನ್ನ ಮಗಳಿಗೆ ಸದೃಶನಾದ ಪತಿಯು ನಳನಿಗಿಂತ ಬೇರೆಯಾದ ರಾಜನು ಇಲ್ಲವೆಂದು ಕಂಡುಕೊಂಡನು.

೨೫೧. ಈ ಮಧ್ಯೆ ಭೀಮನ ಪುತ್ರಿಯಾದ ದಮಯಂತಿಯು ತನ್ನ ಪಟ್ಟಣದಲ್ಲಿ ಜಲಕ್ರೀಡೆಗಾಗಿ ಸರೋವರಕ್ಕೆ ಇಳಿದಳು.

೨೫೨. ಅಲ್ಲಿ ಕಮಲದ ದಂಟನ್ನು ಕಡಿದು ತಿಂದ ಒಂದು ರಾಜಹಂಸವನ್ನು ನೋಡಿ ಬಾಲೆಯಾದ ಅವಳು ಆಟಕ್ಕಾಗಿ ಉಪಾಯದಿಂದ ಉತ್ತರೀಯವನ್ನು ಎಸೆದು (ಆ ರಾಜಹಂಸವನ್ನು) ಕಟ್ಟಿಹಾಕಿದಳು.

೨೫೩. ಬಂಧನಕ್ಕೊಳಗಾದ ಆ ದಿವ್ಯಹಂಸವು ಅವಳನ್ನು ಕುರಿತು ಸ್ಪಷ್ಟವಾದ ಮಾತಿನಲ್ಲಿ ಹೇಳಿತು: "ರಾಜಪುತ್ರಿಯೇ ! ನಿನಗೆ ಉಪಕಾರವನ್ನು ಮಾಡುವೆನು.

೨೫೪. ನಿಷಧ ದೇಶಕ್ಕೆ ಸೇರಿದ ನಳನೆಂಬ ರಾಜನು ಇದ್ದಾನೆ. ಸದ್ಗುಣಸಮನ್ವಿತನಾದ ಅವನನ್ನು ದಿವ್ಯಸ್ತ್ರೀಯರೂ ಉತ್ತಮನೂಲಿನಿಂದ ಕಟ್ಟಿರುವ ಮುಕ್ತಾಹಾರದಂತೆ ಹೃದಯದಲ್ಲಿ ಧರಿಸುತ್ತಾರೆ.

---

ತೇನಾಭಾರ್ಯೇಣ ಸದೃಶೀ ಭಾರ್ಯಾಶ್ರಾವಿ ವಿಚಿನ್ವತಾ ।
ದಮಯಂತೀತಿ ಭೀಮಸ್ಯ ವಿದರ್ಭಾಧಿಪತೇಃ ಸುತಾ ॥ ೨೪೯
ಭೀಮೇನಾಪಿ ವಿಚಿತ್ಯ ಕ್ಷ್ಮಾಂ ದದೃಶೇ ತೇನ ರಾಜಸು ।
ನ ನಲಾದಪರೋ ರಾಜಾ ತುಲ್ಯಃ ಸ್ವದುಹಿತುಃ ಪತಿಃ ॥ ೨೫೦
ಅತ್ರಾಂತರೇ ಸ್ವನಗರೇ ದಮಯಂತೀ ಸರೋವರಮ್ ।
ಭೀಮಾತ್ಮಜಾ ಜಲಕ್ರೀಡಾಹೇತೋರವತತಾರ ಸಾ ॥ ೨೫೧
ತತ್ರೈಕಂ ರಾಜಹಂಸಂ ಸಾ ದೃಷ್ಟ್ವಾ ದಷ್ಟೋತ್ಪಲಾಂಬುಜಮ್ ।
ಬಬಂಧ ಕ್ರೀಡಯಾ ಬಾಲಾ ಯುಕ್ತಿಕ್ಷಿಪ್ತೋತ್ತರೀಯಕಾ ॥ ೨೫೨
ಸ ಬದ್ಧೋ ದಿವ್ಯಹಂಸಸ್ತಾಮುವಾಚ ವ್ಯಕ್ತಯಾ ಗಿರಾ ।
ರಾಜಪುತ್ರ್ಯುಪಕಾರಂ ತೇ ಕರಿಷ್ಯಾಮಿ ವಿಮುಂಚ ಮಾಮ್ ॥ ೨೫೩
ನೈಷಧೋಽಸ್ತಿ ನಲೋ ನಾಮ ರಾಜಾ ಹೃದಿ ವಹಂತಿ ಯಮ್ ।
ಸದ್ಗುಣೈರ್ಗುಂಫಿತಂ ಹಾರಮಿವ ದಿವ್ಯಾಂಗನಾ ಅಪಿ ॥ ೨೫೪

೨೫೫. ಅವನಿಗೆ ನೀನು ಸದೃಶಳಾದ ಭಾರ್ಯೆಯು. ಅವನು ನಿನಗೆ ಸದೃಶನಾದ ಪತಿಯು. ಆದುದರಿಂದ ಈ ಸದೃಶಸಮಾಗಮದಲ್ಲಿ ನಾನು ನಿಮ್ಮಿಬ್ಬರಿಗೂ ಪ್ರಣಯದೂತನಾಗುತ್ತೇನೆ.

೨೫೬. ಅದನ್ನು ಕೇಳಿ ಆ ದಿವ್ಯಹಂಸವು ಸತ್ಯವನ್ನು ನುಡಿಯುತ್ತಿದೆಯೆಂದು ತಿಳಿದು ದಮಯಂತಿಯು ಹಾಗೆಯೇ ಆಗಲೆಂದು ಹೇಳುತ್ತಾ ಆ ಹಂಸವನ್ನು ಬಿಟ್ಟುಬಿಟ್ಟಳು.

೨೫೭. ಮತ್ತು "ನಾನು ನಳನನ್ನು ಬಿಟ್ಟು ಬೇರೆಯವನನ್ನು ವರಿಸುವುದಿಲ್ಲ, ಏಕೆಂದರೆ ಶ್ರವಣಮಾರ್ಗದಿಂದ ಪ್ರವೇಶಿಸಿರುವ ಅವನು ನನ್ನ ಮನಸ್ಸನ್ನು ಅಪಹರಿಸಿದ್ದಾನೆ" ಎಂದು ಹೇಳಿದಳು.

೨೫೮. ಆ ಹಂಸವು ಅಲ್ಲಿಂದ ಹೊರಟು ಶೀಘ್ರವಾಗಿ ನಿಷಧ ದೇಶದಲ್ಲಿ ಜಲಕ್ರೀಡೆಗಾಗಿ ನಳನು ಪ್ರವೇಶಿಸಿದ್ದ ಸರಸ್ಸಿನಲ್ಲಿ ಇಳಿಯಿತು.

೨೫೯. ರಾಜನಾದ ನಳನು ಸುಂದರವಾದ ಆ ರಾಜಹಂಸವನ್ನು ನೋಡಿ ಕುತೂಹಲದಿಂದ ಆಟಕ್ಕಾಗಿ ತನ್ನ ಉತ್ತರೀಯವನ್ನು ಎಸೆದು ಅದನ್ನು ಕಟ್ಟಿ ಹಾಕಿದನು.

೨೬೦. ಆಗ ಆ ಹಂಸವು ಹೇಳಿತು: "ರಾಜನೇ ! ನನ್ನನ್ನು ಬಿಟ್ಟುಬಿಡು. ನಾನು ಇಲ್ಲಿ ನಿನ್ನ ಉಪಕಾರಕ್ಕಾಗಿ ಬಂದಿದ್ದೇನೆ. ಕೇಳು, ನಿನಗೆ ಹೇಳುತ್ತೇನೆ.

---

ತಸ್ಯ ತ್ವಂ ಸದೃಶೀ ಭಾರ್ಯಾ ಭರ್ತಾ ಸ ಸದೃಶಸ್ತವ ।
ತದತ್ರ ತುಲ್ಯಸಂಯೋಗೇ ಕಾಮದೂತೋ ಭವಾಮಿ ವಾಮ್ ॥ ೨೫೫
ತಚ್ಛ್ರುತ್ವಾ ದಿವ್ಯಹಂಸಂ ಸಾ ಮತ್ವಾ ಸತ್ಯಾಭಿಭಾಷಿಣಮ್ ।
ಮುಮೋಚ ದಮಯಂತೀ ತಮೇವಮಸ್ತ್ವಿತಿವಾದಿನೀ ॥ ೨೫೬
ನ ಮಯಾ ವರಣೀಯೋಽನ್ಯೋ ನಲಾದಿತಿ ಜಗಾದ ಚ ।
ಶ್ರುತಿಮಾರ್ಗಪ್ರವಿಷ್ಟೇನ ತೇನಾಪಹೃತಮಾನಸಾ ॥ ೨೫೭
ಸ ಚ ಹಂಸಸ್ತತೋ ಗತ್ವಾ ನಿಷಧೇಷ್ವಾಶು ಶಿಶ್ರಿಯೇ ।
ಜಲಕ್ರೀಡಾಪ್ರವೃತ್ತೇನ ನಲೇನಾಧ್ಯಾಸಿತಂ ಸರಃ ॥ ೨೫೮
ನಲಃ ಸ ರಾಜಾ ದೃಷ್ಟ್ವಾ ತಂ ರಾಜಹಂಸಂ ಮನೋರಮಮ್ ।
ಬಬಂಧ ಸ್ವೋತ್ತರೀಯೇಣ ಲೀಲಾಕ್ಷಿಪ್ತೇನ ಕೌತುಕಾತ್ ॥ ೨೫೯
ಸೋಽಥ ಹಂಸೋಽಬ್ರವೀನ್ಮುಂಚ ನೃಪತೇ ಮಾಮಹಂ ಯತಃ ।
ಇಹ ತ್ವದುಪಕಾರಾರ್ಥಮಾಗತಃ ಶೃಣು ವಚ್ಮಿ ತೇ ॥ ೨೬೦

೨೫೧. ವಿದರ್ಭದೇಶದಲ್ಲಿ ಭೂತಲದಲ್ಲಿ ತಿಲೋತ್ತಮೆಯಂತಹವಳೂ ದೇವತೆಗಳೂ ಕೂಡ ಮೋಹಿಸುವಂತಹವಳೂ ಆದ ದಮಯಂತೀ ಎಂಬುವಳು ಇದ್ದಾಳೆ. ಅವಳು ರಾಜನಾದ ಭೀಮನ ಪುತ್ರಿ.

೨೫೨. ನಾನು ಅವಳಿಗೆ ನಿನ್ನ ಗುಣವನ್ನೆಲ್ಲ ವರ್ಣಿಸಿದ್ದೇನೆ. ಅದನ್ನು ಕೇಳಿ ನಿನ್ನಲ್ಲೇ ನೆಟ್ಟ ಪ್ರೀತಿಯುಳ್ಳವಳಾಗಿ ನಿನ್ನನ್ನು ಪತಿಯೆಂದು ವರಿಸಿದ್ದಾಳೆ. ಅದನ್ನು ನಿನಗೆ ಹೇಳಲೆಂದೇ ನಾನು ಬಂದಿದ್ದೇನೆ."

೨೫೩. ಉತ್ತಮ ಪರಿಣಾಮದ ಸೂಚನೆಯಿಂದ ಉಜ್ಜ್ವಲವಾಗಿದ್ದ ಆ ಶ್ರೇಷ್ಠಹಂಸದ ಮಾತುಗಳೂ ಹಾಗೂ ಮನ್ಮಥನ ಬಾಣಗಳೂ ಏಕಕಾಲದಲ್ಲಿ ನಳನಿಗೆ ಚುಚ್ಚಿದುವು.

೨೫೪. ಆಗ ನಳನು ಆ ಹಂಸವನ್ನು ಕುರಿತು ಹೇಳಿದನು. "ಪಕ್ಷಿಶ್ರೇಷ್ಠ! ನಾನು ಧನ್ಯನು. (ಏಕೆಂದರೆ) ಮೂರ್ತವಾದ ಮನೋರಥ ಸಂಪತ್ತಿಯಂತಿರುವ ಅವಳು ನನ್ನನ್ನು ವರಿಸಿದ್ದಾಳೆ."

೨೫೫. ಹೀಗೆ ಹೇಳಿ ಅವನ ಹಂಸವನ್ನು ಬಿಟ್ಟು ಬಿಟ್ಟನು. ಹಂಸವು ಅಲ್ಲಿಂದ ಹೊರಟು ಆ ಮಾತನ್ನು ಯಥಾರ್ಥವಾಗಿ ದಮಯಂತಿಗೆ ಹೇಳಿ ತನಗೆ ಇಷ್ಟಬಂದ ಕಡೆ ಹೊರಟುಹೋಯಿತು.

೨೫೬. ಉತ್ಕಂಠಾಸಹಿತಳಾದ ದಮಯಂತಿಯು ನಳನನ್ನು ಹೊಂದಲು ಉಪಾಯದಿಂದ ತಾಯಿಯ ಮೂಲಕ ತನ್ನ ತಂದೆಗೆ ಸ್ವಯಂವರವನ್ನು (ಏರ್ಪಡಿಸುವಂತೆ) ಪ್ರಾರ್ಥಿಸಿದಳು.

---

ವಿದರ್ಭೇಷ್ವಸ್ತಿ ಭೀಮಸ್ಯ ರಾಜ್ಞಃ ಕ್ಷಿತಿತಿಲೋತ್ತಮಾ ।
ದಮಯಂತೀತಿ ದುಹಿತಾ ಸ್ಪೃಹಣೀಯಾ ಸುರೈರಪಿ ॥ ೨೫೧
ತ್ವಮೇವ ಚ ಮದಾಖ್ಯಾತಗುಣೋ ಬದ್ಧಾನುರಾಗಯಾ ।
ತಯಾ ಭರ್ತಾ ವೃತಸ್ತಚ್ಚ ತವಾಹಂ ವಕ್ತುಮಾಗತಃ ॥ ೨೫೨
ಇತಿ ಹಂಸೋತ್ತಮಸ್ಯಾಸ್ಯ ವಚೋಭಿಃ ಸ್ಥಲೋಜ್ಜ್ವಲೈಃ ।
ವಿಶಿಖೈಶ್ಚ ಸ ಪುಷ್ಪೇಷೋರ್ನಲಃ ಸಮಮವಿಧ್ಯತ ॥ ೨೫೩
ಅಬ್ರವೀತ್ ಸ ಚ ಹಂಸಂ ತಂ ಧನ್ಯೋಽಹಂ ವಿಹಗೋತ್ತಮ ।
ಯೋ ಮನೋರಥಸಂಪತ್ತ್ಯಾ ಮೂರ್ತಯೇವ ವೃತಸ್ತಯಾ ॥ ೨೫೪
ಇತ್ಯುಕ್ತ್ವಾ ತೇನ ಮುಕ್ತಃ ಸ ಹಂಸೋ ಗತ್ವಾ ಶಶಂಸ ತತ್ ।
ದಮಯಂತ್ಯೈ ಯಥಾವಸ್ತು ಯಥಾಕಾಮಂ ಜಗಾಮ ಚ ॥ ೨೫೫
ದಮಯಂತೀ ಚ ಸೋತ್ಕಂಠಾ ಯುಕ್ತ್ಯಾ ಮಾತೃಮುಖೇನ ಸಾ ।
ಪಿತುಃ ಸ್ವಾತ್ಪ್ರಾರ್ಥಯಾಮಾಸ ನಲಪ್ರಾಪ್ತ್ಯೈ ಸ್ವಯಂವರಮ್ ॥ ೨೫೬

೨೫೭. ತಂದೆಯಾದ ಭೀಮನು ಅದಕ್ಕೆ ಒಪ್ಪಿಕೊಂಡು ದಮಯಂತಿಯ ಸ್ವಯಂವರಕ್ಕಾಗಿ ಪೃಥ್ವಿಯಲ್ಲಿನ ಸಮಸ್ತರಾಜರಿಗೂ ದೂತರನ್ನು ಕಳುಹಿಸಿದನು.

೨೫೮. ದೂತರು ಸಂಧಿಸಿದ ಸಮಸ್ತರಾಜರೂ ವಿದರ್ಭದೇಶಕ್ಕೆ ಹೊರಟರು. ಉತ್ಕಂಠಿತನಾದ ನಳನೂ ಕೂಡ ರಥವನ್ನು ಹತ್ತಿ ಹೊರಟನು.

೨೫೯. ದಮಯಂತಿಗೆ ನಳನ ಮೇಲಿರುವ ಪ್ರೀತಿ ಮತ್ತು ಸ್ವಯಂವರಗಳೆರಡರ ಬಗ್ಗೆಯೂ ಲೋಕಪಾಲಕರಾದ ಇಂದ್ರಾದಿಗಳು ನಾರದ ಮುನಿಯಿಂದ ತಿಳಿದರು.

೨೬೦. ಆ ಲೋಕಪಾಲಕರ ಪೈಕಿ ಇಂದ್ರ, ವಾಯು, ಯಮ, ಅಗ್ನಿ ಮತ್ತು ವರುಣರು ಪರಸ್ಪರ ಸಮಾಲೋಚನೆ ಮಾಡಿ ನಳನ ಬಳಿಗೇ ಹೋದರು.

೨೬೧. ವಿದರ್ಭ ದೇಶವನ್ನು ಕುರಿತು ಹೊರಟಿದ್ದ ವಿನೀತನಾದ ನಳನನ್ನು ದಾರಿಯಲ್ಲಿ ಸಂಧಿಸಿ ಅವರು ಹೇಳಿದರು: "ರಾಜನೇ ! ನಮ್ಮ ಮಾತಿನಂತೆ ದಮಯಂತಿಗೆ ಇದನ್ನು ಹೇಳು.

೨೬೨. ನಾವು ಐದು ಮಂದಿಯ ನಡುವೆ ಒಬ್ಬನನ್ನು ವರಿಸು. ಮರ್ತ್ಯನಾದ ನಳನಿಂದ ನಿನಗೆ ಏನು ಪ್ರಯೋಜನ ? ಮನುಷ್ಯರು ಮರಣಧರ್ಮವುಳ್ಳವರು. ಆದರೆ ದೇವತೆಗಳು ಅಮರರು ಎಂದು (ಹೇಳು).

---

ಅನುಮನ್ಯ ಸ ತಸ್ಯಾಶ್ಚ ಸ್ವಯಂವರಕೃತೇ ಪಿತಾ ।
ಭೀಮಃ ಪೃಥಿವ್ಯಾಂ ಸರ್ವೇಷಾಂ ರಾಜ್ಞಾಂ ದೂತಾನ್ ವಿಸೃಷ್ಟವಾನ್ ॥ ೨೫೭

ಪ್ರಾಪ್ತದೂತಾಶ್ಚ ನಿಖಿಲಾ ವಿದರ್ಭಾನ್ ಪ್ರತಿ ಭೂಮಿಪಾಃ ।
ವ್ರಜಂತಿ ಸ್ಮ ನಲೋಽಪ್ಯುತ್ಕೋ ರಥಾರೂಢಶ್ಚಚಾಲ ಸಃ ॥ ೨೫೮
ತತಶ್ಚ ದಮಯಂತ್ಯಾಸ್ತೌ ನಲಪ್ರೇಮಸ್ವಯಂವರೌ ।
ಇಂದ್ರಾದಯೋ ಲೋಕಪಾಲಾಃ ಶುಶ್ರುವುರ್ನಾರದಾನ್ಮುನೇಃ ॥ ೨೫೯
ತೇಷಾಂ ಚ ಬಲಭಿದ್ವಾಯುಯಮಾಗ್ನಿವರುಣಾಸ್ತತಃ ।
ಸಂಮಂತ್ರ್ಯ ದಮಯಂತ್ಯುತ್ಕಾ ನಲಸ್ಯೈವಾಂತಿಕಂ ಯಯುಃ ॥ ೨೬೦
ಊಚುಶ್ಚ ಪ್ರಾಪ್ಯ ತಂ ಪ್ರಹ್ವಂ ವಿದರ್ಭಾನ್ ಪ್ರಸ್ಥಿತಂ ಪಥಿ ।
ಗತ್ವಾಸ್ಮದ್ವಚನಾದ್ಬ್ರೂಹಿ ದಮಯಂತೀಮಿದಂ ನೃಪ ॥ ೨೬೧
ಪಂಚಾನಾಂ ವರಯೈಕಂ ನಃ ಕಿಂ ಮರ್ತ್ಯೇನ ನಲೇನ ತೇ ।
ಮರ್ತ್ಯಾ ಮರಣಧರ್ಮಾಣಸ್ತ್ರಿದಶಾಸ್ತ್ವಮರಾ ಇತಿ ॥ ೨೬೨

೨೬೩. ಮತ್ತು ನಮ್ಮ ವರದಿಂದ ನೀನು ಇತರರಿಗೆ ಕಾಣದಂತೆ ಅವಳ ಬಳಿಗೆ ಹೋಗಲು ಸಾಧ್ಯವಾಗುತ್ತದೆ. ” ನಳನು ಹಾಗೆಯೇ ಆಗಲೆಂದು ದೇವತೆಗಳ ಈ ಆಜ್ಞೆಯನ್ನು ಅಂಗೀಕರಿಸಿದನು.

೨೬೪. ಮತ್ತೆ ಅವನು ಹೊರಟು ಅದೃಶ್ಯನಾಗಿಯೇ ದಮಯಂತಿಯ ಅಂತಃಪುರವನ್ನು ಪ್ರವೇಶಿಸಿ ದೇವತೆಗಳ ಆದೇಶವನ್ನು ಅಂತೆಯೇ ದಮಯಂತಿಗೆ ಹೇಳಿದನು.

೨೬೫. ಆ ದೇವಾದೇಶವನ್ನು ಕೇಳಿ ಅವಳು ಹೇಳಿದಳು. “ಆ ದೇವತೆಗಳು ಎಂತಹವರೇ ಆಗಿರಲಿ. ಆದರೂ ನನಗೆ ನಳನು ಪತಿಯು. ದೇವತೆಗಳಿಂದ ನನಗೆ ಆಗಬೇಕಾದ ಕಾರ್ಯವೇನಿಲ್ಲ.”

೨೬೬. ಹೀಗೆ ಅವಳ ನಿಶ್ಚಿತವಾದ ಮಾತನ್ನು ಕೇಳಿ ತಾನು ನಳನೆಂಬುದನ್ನು ಅವಳಿಗೆ ಪ್ರಕಾಶಪಡಿಸಿ ನಳನು ಹೋಗಿ ಇಂದ್ರಾದಿಗಳಿಗೆ ನಡೆದುದನ್ನು ಹೇಳಿದನು.

೨೬೭. ಸಂತುಷ್ಟರಾದ ಅವರು “ಸತ್ಯವಾದಿಯೇ ! ನಾವು ಈಗ ನಿನಗೆ ವಶವಾಗಿದ್ದೇವೆ. ನೀನು ಸ್ಮರಿಸಿದಾಗಲೆಲ್ಲ ನಾವು ನಿನ್ನ ಬಳಿಗೆ ಬರುತ್ತೇವೆ.” ಎಂಬುದಾಗಿ ಅವನಿಗೆ ವರಗಳನ್ನು ಕೊಟ್ಟರು.

೨೬೮. ಹರ್ಷಗೊಂಡ ನಳನು ವಿದರ್ಭದೇಶಕ್ಕೆ ಹೋದನು. ಆದರೆ ದಮಯಂತಿಗೆ ಮೋಸ ಮಾಡುವ ಅಪೇಕ್ಷೆಯಿಂದ ಇಂದ್ರನೇ ಮೊದಲಾದವರು ನಳನ ರೂಪವನ್ನು ಧರಿಸಿದರು.

---

ಅಸ್ಮದ್ವರಾಚ್ಚ ತತ್ರಾರ್ಶ್ವಮದೃಷ್ಟೋಽನ್ಯೈಃ ಪ್ರವೇಕ್ಷ್ಯಸಿ ।
ತಥೇತ್ಯೇತಾಂ ಚ ದೇವಾಜ್ಞಾಂ ಪ್ರತಿಪೇದೇ ನಲೋಽಥ ಸಃ ॥ ೨೬೩

ಗತ್ವಾ ಚಾಂತಃಪುರಂ ತಸ್ಯಾಃ ಪ್ರವಿಶ್ಯಾದೃಷ್ಟ ಏವ ಚ ।
ದಮಯಂತ್ಯಾಃ ಶಶಂಸೈವ ದೇವಾದೇಶಂ ತಥೈವತಮ್ ॥ ೨೬೪

ಸಾ ತಂ ಶ್ರುತ್ವಾಬ್ರವೀತ್ ಸಾಧ್ವೀ ದೇವಾಸ್ತೇ ಸಂತು ತಾದೃಶಾಃ ।
ತಥಾಪಿ ಮೇ ನಲೋ ಭರ್ತಾ ನ ಕಾರ್ಯಂ ತ್ರಿದಶೈರ್ಮಮ ॥ ೨೬೫

ಇತಿ ಸಮ್ಯಗ್ವಚಸ್ತಸ್ಯಾಃ ಶ್ರುತ್ವಾತ್ಮಾನಂ ಪ್ರಕಾಶ್ಯ ಚ ।
ನಲೋ ಗತ್ವಾ ತಥೈವೈತದಿಂದ್ರಾದಿಭ್ಯಃ ಶಶಂಸ ಸಃ ॥ ೨೬೬

ವಶ್ಯಾ ವಯಮಿದಾನೀಂ ತೇ ಸ್ಮೃತಮಾತ್ರೋಪಗಾಮಿನಃ ।
ತಥ್ಯವಾದಿನ್ನಿತಿ ಚ ತೇ ತುಷ್ಟಾಸ್ತಸ್ಮೈ ದದುರ್ವರಾನ್ ॥ ೨೬೭

ತತೋ ಹೃಷ್ಟೇ ನಲೇ ಯಾತೇ ವಿದರ್ಭಾನ್ವಂಚನೇಪ್ಸುಭಿಃ ।
ದಮಯಂತ್ಯಾಃ ಸುರೇಶಾದ್ಯೈರ್ನಲರೂಪಮಕಾರಿ ತೈಃ ॥ ೨೬೮

೨೧೯. ಅವರು ಭೀಮನ ಸಭೆಗೆ ಹೋಗಿ ಮನುಷ್ಯರ ನಡವಳಿಕೆಗಳನ್ನು ತೋರಿಸುತ್ತಾ ಸ್ವಯಂವರವು ಆರಂಭವಾದಾಗ ನಳನ ಬಳಿಯಲ್ಲಿ ಕುಳಿತುಕೊಂಡರು.

೨೨೦. ಅನಂತರ ದಮಯಂತಿಯು ಬಂದಳು. ಅವಳ ಸೋದರನು ಒಬ್ಬೊಬ್ಬರನ್ನಾಗಿ ರಾಜರನ್ನು ಪರಿಚಯಿಸಿದನು. ಅವಳು ಅವರನ್ನು ಕ್ರಮವಾಗಿ ಬಿಟ್ಟು ನಳನ ಬಳಿಗೆ ಹೋದಳು.

೨೨೧. ನೆರಳು, ರೆಪ್ಪೆ ಬಡಿಯುವಿಕೆ ಮೊದಲಾದ ಗುಣಗಳಲ್ಲಿ ಸಮಾನರಾದ ಆರು ಮಂದಿ ನಳರನ್ನು ಅಲ್ಲಿ ನೋಡಿ ಸೋದರನು ಭ್ರಾಂತಿಗೊಂಡಿರಲು ದಮಯಂತಿಯು ವ್ಯಾಕುಲಳಾಗಿ ಚಿಂತಿಸಿದಳು.

೨೨೨. ನಿಜವಾಗಿಯೂ ಆ ಐದು ಮಂದಿ ಲೋಕಪಾಲರು ನನಗೆ ಈ ಮಾಯೆಯನ್ನು ಮಾಡಿದ್ದಾರೆ. ಇಲ್ಲಿ ಆರನೆಯವನನ್ನೇ ನಳನೆಂದು ಭಾವಿಸುತ್ತೇನೆ. ನನಗೆ ಬೇರೆ ಕಡೆ ಗತಿಯಿಲ್ಲ.

೨೨೩. ಹೀಗೆ ಆಲೋಚಿಸಿ ಸಾಧ್ವಿಯಾದ ಆ ದಮಯಂತಿಯು ನಳನಲ್ಲಿ ಮಾತ್ರ ಮನಸ್ಸಿಟ್ಟು ಆದಿತ್ಯನಿಗೆ ಅಭಿಮುಖಿಯಾಗಿ ಹೀಗೆ ಹೇಳಿದಳು.

೨೨೪. "ಎಲೈ ಲೋಕಪಾಲಕರೇ ! ಸ್ವಪ್ನದಲ್ಲಿಯೂ ಕೂಡ ನಳನನ್ನು ಬಿಟ್ಟು ಬೇರೆ ಕಡೆ ನನ್ನ ಮನಸ್ಸು ಉಂಟಾಗಿಲ್ಲದಿದ್ದಲ್ಲಿ ಆ ಸತ್ಯದಿಂದ ನಿಮ್ಮ ನಿಜವಾದ ರೂಪವನ್ನು ನನಗೆ ತೋರಿಸಿರಿ.

---

ಗತ್ವಾ ಚ ಭೀಮಸ್ಯ ಸಭಾಂ ಮರ್ತ್ಯಧರ್ಮಾನುಪಾಶ್ರಿತಾಃ ।
ಸ್ವಯಂವರೇ ಪ್ರಸ್ತುತೇ ತೇ ನಲಾಂತಿಕ ಉಪಾವಿಶನ್ ॥ ೨೧೯
ಅಥೈತ್ಯ ದಮಯಂತೀ ಸಾ ಭ್ರಾತ್ರಾ ಸ್ವೇನೈಕಶೋ ನೃಪಾನ್ ।
ಆವೇದ್ಯಮಾನಾನುಜ್ಝಂತೀ ಕ್ರಮಾತ್ಪ್ರಾಪ ನಲಾಂತಿಕಮ್ ॥ ೨೨೦
ದೃಷ್ಟ್ವಾ ಛಾಯಾನಿಮೇಷಾದಿಗುಣಾಂಸ್ತತ್ರ ಚ ಷಣ್ನಲಾನ್ ।
ಸಾ ಭ್ರಾತರಿ ಸಮುದ್ಭ್ರಾಂತೇ ವ್ಯಾಕುಲಾ ಸಮಚಿಂತಯತ್ ॥ ೨೨೧
ನೂನಂ ಮೇ ಲೋಕಪಾಲೈಸ್ತೈರ್ಮಾಯೇಯಂ ಪಂಚಭಿಃ ಕೃತಾ ।
ಷಷ್ಠಂ ಮನ್ಯೇ ನಲಂ ತ್ವತ್ರ ನ ಚಾನ್ಯತ್ರಾಸ್ತಿ ಮೇ ಗತಿಃ ॥ ೨೨೨
ಇತ್ಯಾಲೋಚ್ಯೈವ ಸಾಧ್ವೀ ಸಾ ನಲೈಕಾಸಕ್ತಮಾನಸಾ ।
ಆದಿತ್ಯಾಭಿಮುಖೀ ಭೂತ್ವಾ ದಮಯಂತ್ಯೇವಮಬ್ರವೀತ್ ॥ ೨೨೩
ಭೋ ಲೋಕಪಾಲಾಃ ಸ್ವಪ್ನೇಽಪಿ ನಲಾದನ್ಯತ್ರ ಚೇನ್ನ ಮೇ ।
ಮನಸ್ತತ್ತೇನ ಸತ್ಯೇನ ಸ್ವಂ ದರ್ಶಯತ ಮೇ ವಪುಃ ॥ ೨೨೪

೭೫. ಮೊದಲೇ ವರಿಸಿದ ವರನಿಗಿಂತ ಬೇರೆಯಾದವರು ಕನ್ಯೆಗೆ ಪರಪುರುಷರಾಗುತ್ತಾರೆ. ಮತ್ತು ಅವರಿಗೆ ಅವಳು ಪರಸ್ತ್ರೀ ಆಗುತ್ತಾಳೆ. ಆದುದರಿಂದ ನಿಮಗೆ ಈ ಮೋಹವು ಹೇಗೆ ಉಂಟಾಯಿತು."

೭೬. ಇದನ್ನು ಕೇಳಿ ಇಂದ್ರ ಮೊದಲಾದ ಆ ಐದುಮಂದಿಯೂ ತಮ್ಮ ನಿಜರೂಪದಿಂದ ಪ್ರತ್ಯಕ್ಷರಾದರು. ಆರನೆಯವನಾಗಿ ತನ್ನ ರೂಪದಲ್ಲಿ ಇದ್ದ ರಾಜನು ನಿಜವಾದ ನಳನಾದನು.

೭೭. ದಮಯಂತಿಯು ಹರ್ಷಗೊಂಡು ರಾಜನಾದ ಆ ನಳನಿಗೆ ವಿಕಸಿತವಾದ ಕಮಲದಂತೆ ಸುಂದರವಾದ ತನ್ನ ದೃಷ್ಟಿಯನ್ನೂ ವರಣಮಾಲೆಯನ್ನೂ ಸಮರ್ಪಿಸಿದಳು.

೭೮. ಆಗ ಆಕಾಶದ ಮಧ್ಯದಿಂದ ಪುಷ್ಪವೃಷ್ಟಿಯು ಬಿದ್ದಿತು. ನಂತರ ರಾಜನಾದ ಭೀಮನು ದಮಯಂತಿಗೂ ನಳನಿಗೂ ವಿವಾಹ ಮಂಗಲವನ್ನು ನೆರವೇರಿಸಿದನು.

೭೯. ವಿದರ್ಭ ದೇಶದ ರಾಜನು ಮಾಡಿದ ಯೋಗ್ಯವಾದ ಸತ್ಕಾರವನ್ನು ಸ್ವೀಕರಿಸಿ ಉಳಿದ ಎಲ್ಲ ರಾಜರೂ ಬಂದ ದಾರಿ ಹಿಡಿದು ಹೊರಟುಹೋದರು. ಇಂದ್ರ ಮೊದಲಾದ ದೇವತೆಗಳೂ ತಮ್ಮ ದಾರಿ ಹಿಡಿದು ಬಂದಂತೆಯೇ ಹಿಂದಿರುಗಿದರು.

೮೦. ಆದರೆ ಇಂದ್ರ ಮೊದಲಾದವರು ದಾರಿಯಲ್ಲಿ ಕಲಿ ಮತ್ತು ದ್ವಾಪರರಿಬ್ಬರನ್ನೂ ನೋಡಿದರು. ದಮಯಂತಿಯ ವಿಷಯ ತಿಳಿದು ಅವಳಿಗೋಸ್ಕರ ಬಂದ ಅವರಿಬ್ಬರನ್ನೂ ಕುರಿತು ಆ ದೇವತೆಗಳು ಹೇಳಿದರು.

---

ವರಾತ್ಪೂರ್ವವೃತಾಚ್ಚಾನ್ಯೇ ಕನ್ಯಾಯಾಃ ಪರಪೂರುಷಾಃ ।
ಪರದಾರಾಶ್ಚ ಸಾ ತೇಷಾಂ ತತ್ಕಥಂ ಮೋಹ ಏಷ ವಃ ॥ ೭೫
ಶ್ರುತ್ವೈತತ್ಪಂಚ ಶಕ್ರಾದ್ಯಾಃ ಸ್ವೇನ ರೂಪೇಣ ತೇಽಭವನ್ ।
ಷಷ್ಠಃ ಸತ್ಯನಲಶ್ಚಾಭೂತ್ ಸ್ವರೂಪಸ್ಥಃ ಸ ಭೂಪತಿಃ ॥ ೭೬
ತಸ್ಮಿನ್ ಸಾ ದಮಯಂತೀ ತಾಂ ಫುಲ್ಲೇಂದೀವರಸುಂದರೀಮ್ ।
ದೃಶಂ ವರಣಮಾಲಾಂ ಚ ಹೃಷ್ಟಾ ರಾಜ್ಞಿ ನಲೇ ನ್ಯಧಾತ್ ॥ ೭೭
ಪಪಾತ ಪುಷ್ಪವೃಷ್ಟಿಶ್ಚ ನಭೋಮಧ್ಯಾತ್ತತೋ ನೃಪಃ ।
ವಿವಾಹಮಂಗಲಂ ಭೀಮಶ್ಚಕ್ರೇ ತಸ್ಯಾ ನಲಸ್ಯ ಚ ॥ ೭೮
ವಿಹಿತೋಚಿತಪೂಜಾಶ್ಚ ತೇನ ವೈದರ್ಭಭೂಭೃತಾ ।
ನೃಪಾ ಯಥಾಗತಂ ಜಗ್ಮುರ್ದೇವಾಃ ಶಕ್ರಾದಯಶ್ಚ ತೇ ॥ ೭೯
ಶಕ್ರಾದಯಸ್ತು ದದೃಶುರ್ದ್ವೌ ಕಲಿದ್ವಾಪರೌ ಪಥಿ ।
ಬುದ್ಧ್ವಾ ಚ ದಮಯಂತ್ಯರ್ಥಮಾಗತೌ ತೌ ಚ ತೇಽಬ್ರುವನ್ ॥ ೮೦

೨೮೧. "ವಿದರ್ಭದೇಶಕ್ಕೆ ಹೋಗಬೇಡಿ. ಅಲ್ಲಿಂದಲೇ ನಾವು ಬಂದಿದ್ದೇವೆ. ಸ್ವಯಂವರವು ನೆರವೇರಿಯಾಯಿತು. ರಾಜನಾದ ನಳನನ್ನು ದಮಯಂತಿಯು ವರಿಸಿದಳು."

೨೮೨–೨೮೩. ಅದನ್ನು ಕೇಳಿದ ಮಾತ್ರಕ್ಕೇ ಪಾಪಿಗಳಾದ ಆ ಕಲಿದ್ವಾಪರರಿಬ್ಬರೂ ಕ್ರೋಧದಿಂದ ಹೇಳಿದರು. "ನಿಮ್ಮಂತಹ ದೇವತೆಗಳನ್ನು ತ್ಯಜಿಸಿ ಅವಳು ಆ ಮರ್ತ್ಯನನ್ನು ವರಿಸಿದಳಾದ್ದರಿಂದ ಅವರಿಬ್ಬರಿಗೂ ಅವಶ್ಯವಾಗಿ ವಿಯೋಗವನ್ನು ಉಂಟು ಮಾಡುವೆವು." ಈ ರೀತಿಯಾಗಿ ಪ್ರತಿಜ್ಞೆಮಾಡಿ ಅವರಿಬ್ಬರೂ ಅಲ್ಲಿಂದ ಹಿಂದಿರುಗಿ ಹೋದರು.

೨೮೪. ನಳನು ಮಾವನ ಮನೆಯಲ್ಲಿ ಏಳು ದಿವಸಗಳು ಇದ್ದು ಕೃತಾರ್ಥನಾಗಿ ವಧುವಾದ ದಮಯಂತಿಯೊಡನೆ ನಿಷಧದೇಶಕ್ಕೆ ಹೋದನು.

೨೮೫. ಅಲ್ಲಿ ಆ ದಂಪತಿಗಳ ಪ್ರೇಮವು ಗೌರೀಶಿವರಿಗಿರುವುದಕ್ಕಿಂತಲೂ ಅಧಿಕವಾಗಿತ್ತು. ಶಿವನಿಗೆ ಗೌರಿಯು ದೇಹದ ಅರ್ಧಭಾಗ. ಆದರೆ ಆ ದಮಯಂತಿಯು ನಳನಿಗೆ ಆತ್ಮವೇ ಆಗಿದ್ದಳು.

೨೮೬. ಕಾಲಕ್ರಮದಲ್ಲಿ ದಮಯಂತಿಗೆ ನಳನಿಂದ ಇಂದ್ರಸೇನನೆಂಬ ಪುತ್ರ ಹುಟ್ಟಿದನು. ಅದಾದನಂತರ ಇಂದ್ರಸೇನಾ ಎಂಬ ಕನ್ಯೆ ಹುಟ್ಟಿದಳು.

---

ನ ಗಂತವ್ಯಂ ವಿದರ್ಭೇಷು ತತ ಏವಾಗತಾ ವಯಮ್ ।
ವೃತ್ತಃ ಸ್ವಯಂವರೋ ರಾಜಾ ದಮಯಂತ್ಯಾ ನಲೋ ವೃತಃ ॥ ೨೮೧
ತಚ್ಛ್ರುತ್ವೈವ ಪ್ರೋಚತುಃ ಪಾಪೌ ತೌ ಕಲಿದ್ವಾಪರೌ ರುಷಾ ।
ದೇವಾನ್ ಭವಾದೃಶಾಂಸ್ತ್ಯಕ್ತ್ವಾ ಯತ್ಸ ಮರ್ತ್ಯೋ ವೃತಸ್ತಯಾ ॥ ೨೮೨
ತದವಶ್ಯಂ ಕರಿಷ್ಯಾವೋ ವಿಯೋಗಮುಭಯೋಸ್ತಯೋಃ ।
ಏವಂ ಕೃತಪ್ರತಿಜ್ಞೌ ತೌ ನಿವರ್ತ್ಯ ಯಯತುಸ್ತತಃ ॥ ೨೮೩
ನಲಶ್ಚ ಸಪ್ತದಿವಸಾನ್ ಸ್ಥಿತ್ವಾ ಶ್ವಶುರವೇಶ್ಮನಿ ।
ದಮಯಂತ್ಯಾ ಸಮಂ ವಧ್ವಾ ಕೃತಾರ್ಥೋ ನಿಷಧಾನಗಾತ್ ॥ ೨೮೪
ತತ್ರಾಸೀತ್ ಪ್ರೇಮ ದಂಪತ್ಯೋರ್ಗೌರೀಶರ್ವಾಧಿಕಂ ತಯೋಃ ।
ಶರ್ವಸ್ಯ ಗೌರೀದೇಹಾರ್ಧಂ ತಸ್ಯ ತ್ವಾತ್ಮೈವ ಸಾಭವತ್ ॥ ೨೮೫
ಕಾಲೇನ ಚೇಂದ್ರಸೇನಾಖ್ಯಂ ದಮಯಂತೀ ನಲಾತ್ಸುತಮ್ ।
ಪ್ರಸೂತೇ ಸ್ಮ ತದನ್ವೇಕಾಮಿಂದ್ರಸೇನಾಂ ಚ ಕನ್ಯಕಾಮ್ ॥ ೨೮೬

೨೭೭. ಕಲಿಯು ಮಾತ್ರ ತಾನು ಮಾಡಿದ ಪ್ರತಿಜ್ಞೆಯ ಬಗ್ಗೆ ದೃಢನಿಶ್ಚಯದಿಂದ ಇದ್ದು ಶಾಸ್ತ್ರವನ್ನು ಮೀರಿ ನಡೆಯದ ನಳ ಯಾವಾಗಲಾದರೂ ಏನಾದರೂ ತಪ್ಪು ಮಾಡಿಯಾನೆಂದು ಅದಕ್ಕಾಗಿ ಹುಡುಕುತ್ತಾ ಇದ್ದನು.

೨೭೮. ಒಂದು ದಿವಸ ನಳನು ಪಾನಮದದಿಂದ ಜ್ಞಾನವಿಲ್ಲದೆ ಕಾಲುಗಳನ್ನು ತೊಳೆಯದೆ ಹಾಗೂ ಸಂಧ್ಯೋಪಾಸನೆಯನ್ನು ಮಾಡದೆ ಮಲಗಿಕೊಂಡನು.

೨೭೯. ಹಗಲೂ ರಾತ್ರಿ ದೃಷ್ಟಿಯನ್ನಿಟ್ಟಿದ್ದ ಕಲಿಯು ಈ ಛಿದ್ರವನ್ನು ಕಂಡ ಕೂಡಲೇ ನಳನ ಶರೀರದೊಳಗೆ ಪ್ರವೇಶಿಸಿದನು.

೨೮೦. ಕಲಿಯು ತನ್ನ ದೇಹವನ್ನು ಪ್ರವೇಶಿಸಿದುದರಿಂದ ರಾಜನಾದ ನಳನು ಧರ್ಮಾನುಗುಣವಾದ ಆಚಾರವನ್ನು ತೊರೆದು ಇಷ್ಟಬಂದಂತೆ ಆಚರಿಸ ತೊಡಗಿದನು.

೨೮೧. ಅವನು ಜೂಜಾಟವನ್ನು ಆಡಿದನು. ದಾಸಿಯರ ಜೊತೆ ರಮಿಸಿದನು. ಅಸತ್ಯವನ್ನು ಹೇಳಿದನು. ಹಗಲಿನಲ್ಲಿ ನಿದ್ರೆಯನ್ನು ಮಾಡಿದನು. ರಾತ್ರಿಗಳಲ್ಲಿ ಎಚ್ಚತ್ತಿರುತ್ತಿದ್ದನು.

೨೮೨. ಕಾರಣವಿಲ್ಲದೆಯೇ ಕೋಪಗೊಳ್ಳುತ್ತಿದ್ದನು. ಅನ್ಯಾಯಮಾರ್ಗದಿಂದ ಧನವನ್ನು ಸ್ವೀಕರಿಸುತ್ತಿದ್ದನು. ಸಜ್ಜನರಿಗೆ ಅವಮಾನವನ್ನು ಮಾಡುತ್ತಿದ್ದನು. ಹಾಗೂ ದುರ್ಜನರಿಗೆ ಸಂಮಾನವನ್ನು ಮಾಡುತ್ತಿದ್ದನು.

೨೮೩. ಅದೇ ರೀತಿಯಾಗಿ ಪುಷ್ಕರನೆಂಬ ನಳನ ಸೋದರನ ಛಿದ್ರವನ್ನು ಕಂಡು ಅವನ ಶರೀರದೊಳಗೆ ದ್ವಾಪರನು ಪ್ರವೇಶಿಸಿ ಸನ್ಮಾರ್ಗವನ್ನು ಮೀರುವಂತೆ ಮಾಡಿದನು.

---

ತಾವಚ್ಚ ಸ ಕಲಿಶ್ಛಿದ್ರಂ ತಸ್ಯಾನುಚ್ಛಾಸ್ತ್ರವರ್ತಿನಃ ।
ನಲಸ್ಯಾಸೀಚ್ಚಿರಂ ಚಿನ್ವನ್ ಪ್ರತಿಜ್ಞಾತಾರ್ಥನಿಶ್ಚಿತಃ ॥ ೨೭೭
ಅಥೈಕದಾನುಪಾಸ್ಯೈವ ಸಂಧ್ಯಾಮಕ್ಷಾಲಿತಾಂಘ್ರಿಕಃ ।
ಸ ಸುಷ್ವಾಪ ನಲಃ ಪಾನಮದೇನ ಮುಷಿತಸ್ಮೃತಿಃ ॥ ೨೭೮
ಛಿದ್ರಮೇತದವಾಪ್ಯೈವ ದತ್ತದೃಷ್ಟಿರ್ದಿವಾನಿಶಮ್ ।
ಕಲಿಸ್ತಸ್ಯ ಶರೀರಾಂತರ್ನಲಸ್ಯ ಪ್ರವಿವೇಶ ಸಃ ॥ ೨೭೯
ತೇನ ದೇಹಪ್ರವಿಷ್ಟೇನ ಕಲಿನಾ ಸ ನಲೋ ನೃಪಃ ।
ವಿಹಾಯ ಧರ್ಮ್ಯಮಾಚಾರಮಾಚಚಾರ ಯಥಾರುಚಿ ॥ ೨೮೦
ಅಕ್ಷೈರದೀವ್ಯದ್ದಾಸೀಭಿರರಂಸ್ತಾಸತ್ಯಮಬ್ರವೀತ್ ।
ಅಸೇವತ ದಿವಾ ಸ್ವಪ್ನಂ ಸ ಜಜಾಗಾರ ರಾತ್ರಿಷು ॥ ೨೮೧
ಚಕಾರಾಕಾರಣಂ ಕೋಪಮನ್ಯಾಯೇನಾರ್ಥಮಾದದೇ ।
ಅವಮಾನಂ ಸತಾಂ ಚಕ್ರೇ ಸಂಮಾನಮಸತಾಂ ಚ ಸಃ ॥ ೨೮೨
ತದ್ಭ್ರಾತರಂ ಪುಷ್ಕರಾಖ್ಯಂ ತಥೈವೋತ್ಕ್ರಾಂತಸತ್ಪಥಮ್ ।
ಛಿದ್ರಂ ಪ್ರಾಪ್ಯ ಶರೀರಾಂತಃಪ್ರವಿಷ್ಟೋ ದ್ವಾಪರೋ ವ್ಯಧಾತ್ ॥ ೨೮೩

೨೯೪. ಒಮ್ಮೆ ಆ ಪುಷ್ಕರನ ಮನೆಯಲ್ಲಿ ನಳನು ದಾಂತವೆಂಬ ಹೆಸರಿನ ಒಂದು ಸುಂದರವಾದ ಬಿಳಿಯ ಎತ್ತನ್ನು ನೋಡಿದನು.

೨೯೫. ಆ ಎತ್ತನ್ನು ಕೊಡು ಎಂದು ನಳನು ಲೋಭದಿಂದ ಯಾಚಿಸಿದಾಗ ಹಿರಿಯನಾದ ನಳನಲ್ಲಿ ಭಕ್ತಿಯಿಟ್ಟುಕೊಂಡಿದ್ದರೂ ದ್ವಾಪರಗ್ರಸ್ತನಾಗಿದ್ದುದರಿಂದ ಪುಷ್ಕರನು ಎತ್ತನ್ನು ಅವನಿಗೆ ಕೊಡಲಿಲ್ಲ.

೨೯೬. ಅವನು ನಳನಿಗೆ ಈ ರೀತಿ ಹೇಳಿದನು: "ಒಂದು ವೇಳೆ ನಿನಗೆ ಈ ವೃಷಭದಲ್ಲಿ ಅಪೇಕ್ಷೆಯಿರುವುದಾದರೆ ಜೂಜಾಟದ ಮೂಲಕ ನನ್ನಿಂದ ಇದನ್ನು ಗೆದ್ದು ತೆಗೆದುಕೋ. ವಿಳಂಬ ಮಾಡಬೇಡ."

೨೯೭. ಅದನ್ನು ಕೇಳಿ ನಳನು ಮೋಹದಿಂದ ಹಾಗೆಯೇ ಆಗಲೆಂದು ಜೂಜಾಡುವುದಕ್ಕೆ ಒಪ್ಪಿಕೊಂಡನು. ಅನಂತರ ಆ ಇಬ್ಬರು ಸೋದರರಲ್ಲೂ ಪರಸ್ಪರ ದ್ಯೂತವು ಆರಂಭವಾಯಿತು.

೨೯೮. ಪುಷ್ಕರನು ಆ ಎತ್ತನ್ನೇ ಪಣವಾಗಿಟ್ಟನು. ನಳನ ಪಣವು ಆನೆ ಮೊದಲಾದವು ಆಗಿತ್ತು. ಜೂಜಾಟದಲ್ಲಿ ಪುಷ್ಕರನು ಗೆದ್ದನು. ನಳನು ಮತ್ತೆ ಮತ್ತೆ ಸೋತನು.

೨೯೯. ಎರಡು ಮೂರು ದಿನಗಳಲ್ಲಿ ದ್ಯೂತದಿಂದ ಸೈನ್ಯ ಮತ್ತು ಕೋಷಗಳನ್ನು ಸೋತ ನಳನನ್ನು ತಡೆದರೂ ಕಲಿಯಿಂದ ಗ್ರಸ್ತನಾದವನಾಗಿದ್ದುದರಿಂದ ಅವನು ವಿಚಲಿತನಾಗಲಿಲ್ಲ.

---

ಕದಾಚಿತ್ ಪುಷ್ಕರಾಖ್ಯಸ್ಯ ಗೃಹೇ ತಸ್ಯಾನುಜಸ್ಯ ಸಃ ।
ನಲೋ ದದರ್ಶ ದಾಂತಾಖ್ಯಂ ಸುಂದರಂ ಧವಲಂ ವೃಷಮ್ ॥ ೨೯೪
ಲೋಭಾನ್ಮೃಗಯಮಾನಾಯ ತಂ ತಸ್ಮೈ ಜ್ಯಾಯಸೇ ನ ಸಃ ।
ದ್ವಾಪರಗ್ರಸ್ತಧೀರ್ಭಕ್ತಃ ಪುಷ್ಕರಾಖ್ಯೋ ವೃಷಂ ದದೌ ॥ ೨೯೫
ಜಗಾದ ತಂ ಚ ಯದ್ಯಸ್ತಿ ವಾಂಛಾಸ್ಮಿನ್ವೃಷಭೇ ತವ ।
ತದ್ದ್ಯೂತೇನ ವಿಜಿತ್ಯೈನಂ ಮತ್ತಃ ಸ್ವೀಕುರು ಮಾ ಚಿರಮ್ ॥ ೨೯೬
ತಚ್ಛ್ರುತ್ವಾ ಸ ನಲೋ ಮೋಹಾತ್ ಪ್ರತಿಪೇದೇ ತಥೇತಿ ತತ್ ।
ತತಃ ಪ್ರವವೃತೇ ದ್ಯೂತಂ ತಯೋರ್ಭ್ರಾತ್ರೋಃ ಪರಸ್ಪರಮ್ ॥ ೨೯೭
ಪುಷ್ಕರಾಖ್ಯಸ್ಯ ಸ ವೃಷೋ ನಲಸ್ಯೇಭಾದಯಃ ಪಣಾಃ ।
ಜಿಗಾಯ ಪುಷ್ಕರಾಖ್ಯಶ್ಚ ನಲೋ ಮುಹುರಜೀಯತ ॥ ೨೯೮
ದಿನೈರ್ದ್ವಿತ್ರೈರ್ಬಲೇ ಕೋಷೇ ಹಾರಿತೇಽಪಿ ದುರೋದರಾತ್ ।
ನ ನಲೋ ವಾರ್ಯಮಾಣೋಽಪಿ ಚಚಾಲ ಕಲಿವಿಪ್ಲುತಃ ॥ ೨೯೯

೩೦೦. ಜೂಜಿನಿಂದ ರಾಜ್ಯವು ಹೋಯಿತೆಂದು ತಿಳಿದು ದಮಯಂತಿಯು ತನ್ನ ಇಬ್ಬರು ಮಕ್ಕಳನ್ನು ಒಂದು ಒಳ್ಳೆಯ ರಥದ ಮೇಲೆ ಹತ್ತಿಸಿ ತನ್ನ ತಂದೆಯ ಮನೆಗೆ ಕಳುಹಿಸಿದಳು.

೩೦೧. ಅಷ್ಟರಲ್ಲಿ ನಳನು ತನ್ನ ಸಮಸ್ತ ರಾಜ್ಯವನ್ನೂ ಕಳೆದುಕೊಂಡನು. ಆಗ ವಿಜಯದ ಅಹಂಕಾರದಿಂದ ಪುಷ್ಕರನು ನಳನಿಗೆ ಹೇಳಿದನು.

೩೦೨. 'ನನ್ನ ಎತ್ತಿನ ಪಣಕ್ಕಾಗಿ ನೀನು ಇತರ ಎಲ್ಲವನ್ನೂ ಕಳೆದುಕೊಂಡೆ. ಈಗ ನೀನು ದ್ಯೂತದಲ್ಲಿ ದಮಯಂತಿಯನ್ನು ಪಣವನ್ನಾಗಿ ಇಡು.'

೩೦೩. ಪುಷ್ಕರನ ಮಾತಿನ ಬಿರುಗಾಳಿಯಿಂದ ನಳನು ಬೆಂಕಿಯಂತೆ ಜ್ವಲಿಸಿದನಾದರೂ ಅಸಮಯವೆಂದು ಏನೂ ಹೇಳಲಿಲ್ಲ ಮತ್ತು ಪಣವನ್ನೂ ಇಡಲಿಲ್ಲ.

೩೦೪. ಅನಂತರ ಪುಷ್ಕರನು ನಳನನ್ನು ಕುರಿತು ಹೇಳಿದನು. "ನೀನು ಭಾರ್ಯೆಯನ್ನು ಪಣವಾಗಿ ಹೂಡದಿದ್ದರೆ ಅವಳೊಡನೆ ನೀನು ನನ್ನ ದೇಶದಿಂದ ಹೊರಟು ಹೋಗು."

೩೦೫. ಅದನ್ನು ಕೇಳಿದೊಡನೆಯೇ ನಳನು ದಮಯಂತಿಯೊಡನೆ ಆ ದೇಶವನ್ನು ಬಿಟ್ಟು ಹೊರಟು ಹೋದನು. ಸೀಮೆಯ ಕೊನೆಯವರೆಗೂ ರಾಜಪುರುಷರು ಅವನನ್ನು ಒಯ್ದು ಬಿಟ್ಟುಹೋದರು.

---

ತೇನ ಮತ್ವಾ ಗತಂ ರಾಜ್ಯಂ ದಮಯಂತೀ ನಿಜೌ ಶಿಶೂ ।
ರಥೋತ್ತಮಂ ಸಮಾರೋಪ್ಯ ಪ್ರಾಹಿಣೋತ್ ಸ್ವಪಿತುರ್ಗೃಹಮ್ ॥ ೩೦೦
ತಾವನ್ನಲೇನ ರಾಜ್ಯಂ ಸ್ವಂ ಸಮಗ್ರಮಪಿ ಹಾರಿತಮ್ ।
ತತಃ ಸ ಪುಷ್ಕರಾಖ್ಯೇನ ಜಗದೇ ಜಿತಕಾಶಿನಾ ॥ ೩೦೧
ತ್ವಯಾನ್ಯದ್ಧಾರಿತಂ ಸರ್ವಂ ತತ್ತಸ್ಯೋಕ್ಷ್ಣಃ ಪಣಸ್ಯ ಮೇ ।
ದಮಯಂತೀಮಿದಾನೀಂ ತ್ವಂ ದ್ಯೂತೇ ಪ್ರತಿಪಣಂ ಕುರು ॥ ೩೦೨
ಇತ್ಯುಕ್ತಿವಾತ್ಯಯಾ ತಸ್ಯ ನಲೋಽನಲ ಇವ ಜ್ವಲನ್ ।
ನ ಚಾಕಾಲೇಽಬ್ರವೀತ್ ಕಿಂಚಿನ್ನ ಚ ಚಕ್ರೇ ಪಣಕ್ರಿಯಾಮ್ ॥ ೩೦೩
ತತಃ ಸ ಪುಷ್ಕರಾಖ್ಯಸ್ತಮುವಾದೀನ್ನ ಕರೋಷಿ ಚೇತ್ ।
ಭಾರ್ಯಾಂ ಪಣಂ ತದಸ್ಮಾನ್ಮೇ ದೇಶಾನ್ನಿರ್ಯಾಹಿ ತತ್ಸಖಃ ॥ ೩೦೪
ತಚ್ಛ್ರುತ್ವೈವ ನಲೋ ದೇಶಾದ್ದಮಯಂತ್ಯಾ ಸಮಂತತಃ ।
ನಿರಗಾದ್ರಾಜಪುರುಷೈರಾ ಸೀಮಾಂತಂ ಪ್ರವಾಸಿತಃ ॥ ೩೦೫

೩೦೬ ಅಯ್ಯೋ ! ನಳನಿಗೂ ಕೂಡ ಕಲಿಯು ಇಂತಹ ಅವಸ್ಥೆಯನ್ನು ಉಂಟುಮಾಡಿರುವಾಗ ಕ್ರಿಮಿಗಳಂತಿರುವ ಇತರ ಮನುಷ್ಯರಿಗೆ ಇನ್ನೇನೆಂದು ಹೇಳಬೇಕು ?

೩೦೭ ಕಲಿಗೂ ದ್ವಾಪರಕ್ಕೂ ಜೀವಿತವಾಗಿರುವ ಈ ದ್ಯೂತವು ರಾಜರ್ಷಿಗಳನ್ನೂ ವಿಪತ್ತಿಗೆ ದೂಡುತ್ತದೆ. ಇದರಲ್ಲಿ ಸ್ನೇಹ, ಧರ್ಮ ಯಾವುದೂ ಇಲ್ಲ. ಈ ದ್ಯೂತಕ್ಕೆ ಧಿಕ್ಕಾರ, ಧಿಕ್ಕಾರ.

೩೦೮. ಸೋದರನಿಗೆ ಎಲ್ಲ ಐಶ್ವರ್ಯವನ್ನೂ ಸೋತು ನಳನು ದಮಯಂತಿಯೊಡನೆ ಪರದೇಶಕ್ಕೆ ಹೋಗುತ್ತಾ ಹಸಿವಿನಿಂದ ಬಳಲಿ ಒಂದು ಕಾಡಿನ ಮಧ್ಯಭಾಗವನ್ನು ಸೇರಿದನು.

೩೦೯. ಅಲ್ಲಿ ದಮಯಂತಿಯ ಮೃದುವಾದ ಪಾದಗಳು ದರ್ಭೆಗಳಿಂದ ಸೀಳಿದುವು. ಆದ್ದರಿಂದ ಅವಳೊನೆ ಒಂದು ಸರೋವರದ ತೀರದಲ್ಲಿ ವಿಶ್ರಾಂತಿ ಪಡೆಯಬೇಕೆಂದು ತಂಗಿದನು. ಆಗ ಹೊರಗೆ ಬಂದ ಎರಡು ರಾಜಹಂಸಗಳು ನಳನ ಕಣ್ಣಿಗೆ ಬಿದ್ದವು.

೩೧೦. ಆಹಾರಕ್ಕಾಗಿ ಅವನು ಅವುಗಳನ್ನು ಹಿಡಿಯಲು ಉತ್ತರೀಯವನ್ನು ಎಸೆದನು. ಆದರೆ ಅವನ ಉತ್ತರೀಯವನ್ನು ಅಪಹರಿಸಿಕೊಂಡು ಆ ಎರಡು ಹಂಸಗಳೂ ಹಾರಿ ಹೋದವು.

೩೧೧. ಆಗ "ಇವುಗಳು ಹಂಸರೂಪದಿಂದ ಬಳಿಗೆ ಬಂದ ಆ ಎರಡು ದಾಳಗಳು. ಅವು ನಿನ್ನ ವಸ್ತ್ರವನ್ನೂ ಅಪಹರಿಸಿಕೊಂಡು ಹೋದವು" ಎಂದು ಆಕಾಶದಿಂದ ವಾಣಿಯು ಕೇಳಿಸಿತು.

---

ಹಾ ನಲಸ್ಯಾಪಿ ಯತ್ರೇದೃಗವಸ್ಥಾ ಕಲಿನಾ ಕೃತಾ ।
ತತ್ರೋಚ್ಯತಾಂ ಕಿಮನ್ಯೇಷಾಂ ಕ್ರಿಮೀಣಾಮಿವ ದೇಹಿನಾಮ್ ॥ ೩೦೬
ಧಿಗ್ಧಿಙ್ನಿರ್ಧರ್ಮನಿಃಸ್ನೇಹಂ ರಾಜರ್ಷೀಣಾಮಪೀದೃಶಮ್ ।
ವಿಪದಾಮಾಸ್ಪದಂ ದ್ಯೂತಂ ಕಲಿದ್ವಾಪರಜೀವಿತಮ್ ॥ ೩೦೭
ಅಥ ಭ್ರಾತೃಹೃತೈಶ್ವರ್ಯೋ ವಿದೇಶಂ ಸ ನಲೋ ವ್ರಜನ್ ।
ದಮಯಂತ್ಯಾ ಸಹ ಪ್ರಾಪ ಕ್ಷುಧಾಕ್ಲಾಂತೋ ವನಾಂತರಮ್ ॥ ೩೦೮
ತತ್ರ ಸಾಕಂ ತಯಾ ದರ್ಭಭಿನ್ನಪೇಶಲಪಾದಯಾ ।
ಸ ವಿಶ್ರಾಂತಃ ಸರಸ್ತೀರೇ ಹಂಸೌ ದ್ವಾವೈಕ್ಷತಾಗತೌ ॥ ೩೦೯
ಆಹಾರಾರ್ಥಂ ಚ ಸ ತಯೋರ್ಗ್ರಹಣಾಯೋತ್ತರೀಯಕಮ್ ।
ಚಿಕ್ಷೇಪ ತಚ್ಚ ಹೃತ್ವೈವ ಹಂಸೌ ತೌ ತಸ್ಯ ಜಗ್ಮತುಃ ॥ ೩೧೦
ಹಂಸರೂಪೇಣ ತಾವೇತಾವಕ್ಷೌ ವಾಸೋಽಪ್ಯಪೇತ್ಯ ತೇ ।
ಹೃತ್ವಾ ಗತಾವಿತಿ ನಲಃ ಸ ವಾಚಂ ಚಾಶೃಣೋದ್ದಿವಃ ॥ ೩೧೧

೩೧೨. ಅನಂತರ ಒಂದೇ ವಸ್ತ್ರವನ್ನು ಉಟ್ಟು ರಾಜನು ದುಃಖಿತನಾಗಿ ಕುಳಿತುಕೊಂಡು ದಮಯಂತಿಗೆ ಅವಳ ತಂದೆಯ ಮನೆಗೆ ದಾರಿಯನ್ನು ತೋರಿಸಿದನು.

೩೧೩. "ಪ್ರಿಯೇ ! ವಿದರ್ಭದೇಶದಲ್ಲಿ ನಿನ್ನ ತಂದೆಯ ಮನೆಗೆ ಇದು ದಾರಿಯು ಮತ್ತು ಇದು ಅಂಗದೇಶದಲ್ಲಿನ ದಾರಿಯು ಮತ್ತು ಈ ಮತ್ತೊಂದು ಕೋಶಲದೇಶಕ್ಕೆ ದಾರಿಯು."

೩೧೪. ಅದನ್ನು ಕೇಳಿ ದಮಯಂತಿಯು ಈ ಆರ್ಯಪುತ್ರನು ತನ್ನನ್ನು ತ್ಯಾಗಮಾಡುವವನಂತೆ ನನಗೆ ದಾರಿಯನ್ನು ಹೇಳುತ್ತಿರುವನೇನು, ಎಂದು ಶಂಕಿಸಿದಳು.

೩೧೫. ಅನಂತರ ಆ ದಂಪತಿಗಳಿಬ್ಬರೂ ಹಣ್ಣುಗೆಡ್ಡೆಗಳನ್ನೇ ಆಹಾರವಾಗಿ ತಿಂದು ರಾತ್ರಿಯಾದಾಗ ಆ ಕಾಡಿನಲ್ಲಿ ಆಯಾಸದಿಂದ ದರ್ಭೆಯ ಹಾಸಿಗೆಯಲ್ಲಿ ಮಲಗಿದರು.

೩೧೬. ದಮಯಂತಿಯು ನಡೆದು ಬಳಲಿದ್ದುದರಿಂದ ಮೆಲ್ಲಗೆ ನಿದ್ರೆ ಹೋದಳು. ಕಲಿಯಿಂದ ಮೋಹಿತನಾದ ನಳನು ಮಾತ್ರ ನಿದ್ರಾರಹಿತನಾಗಿ ಹೊರಡುವ ಮನಸ್ಸಿನಲ್ಲೇ ಇದ್ದನು.

೩೧೭. ರಾತ್ರಿ ನಳನು ಮೇಲೆದ್ದು ಏಕವಸ್ತ್ರಳಾದ ದಮಯಂತಿಯನ್ನು ಬಿಟ್ಟು ಅವಳ ಉತ್ತರೀಯದ ಅರ್ಧಭಾಗವನ್ನು ಕತ್ತರಿಸಿ ಮೇಲೆ ಹೊದೆದುಕೊಂಡು ಅಲ್ಲಿಂದ ಹೊರಟನು.

---

ಉಪವಿಶ್ಯೈಕವಸ್ತ್ರೋಽಥ ಸ ಯುಕ್ತ್ಯಾ ವಿಮನಾ ನೃಪಃ ।
ಪಂಥಾನಂ ದರ್ಶಯಾಮಾಸ ದಮಯಂತ್ಯಾಃ ಪಿತುರ್ಗೃಹೇ ॥ ೩೧೨

ಅಯಂ ಮಾರ್ಗೋ ವಿದರ್ಭೇಷು ಪ್ರಿಯೇ ಪಿತೃಗೃಹೇ ತವ ।
ಅಯಮಂಗೇಷು ಮಾರ್ಗೋಽಯಮಪರಃ ಕೋಶಲೇಷು ಚ ॥ ೩೧೩

ತಚ್ಛ್ರುತ್ವಾ ದಮಯಂತೀ ಸಾ ಶಂಕಿತೇವಾಭವತ್ತದಾ ।
ತ್ಯಕ್ತುಕಾಮ ಇವಾರ್ಯಪುತ್ರೋ ಮೇ ಮಾರ್ಗಂ ಕಿಂ ವಕ್ತ್ಯಸಾವಿತಿ ॥ ೩೧೪

ತತಸ್ತೌ ಫಲಮೂಲಾನ್ನೌ ವನೇ ತತ್ರ ನಿಶಾಗಮೇ ।
ಶ್ರಾಂತೌ ಸಂವಿಶತಃ ಸ್ಮೋಭೌ ದಂಪತೀ ಕುಶಸಂಸ್ತರೇ ॥ ೩೧೫

ದಮಯಂತೀ ಶನೈರ್ನಿದ್ರಾಮಧ್ವಖಿನ್ನಾ ಜಗಾಮ ಸಾ ।
ನಲೋ ಗಂತುಮನಾಸ್ತ್ವಾಸೀದನಿದ್ರಃ ಕಲಿಮೋಹಿತಃ ॥ ೩೧೬

ಉತ್ಥಾಯ ಚೈಕವಸ್ತ್ರಾಂ ತಾಂ ದಮಯಂತೀಂ ವಿಮುಚ್ಯ ಸಃ ।
ಭಿನ್ನಂ ತದುತ್ತರೀಯಾರ್ಧಂ ಪ್ರಾವೃತ್ಯ ಚ ತತೋ ಯಯೌ ॥ ೩೧೭

೩೧೮. ರಾತ್ರಿಯ ಕೊನೆಯಲ್ಲಿ ಎಚ್ಚೆತ್ತ ದಮಯಂತಿಯು ಕಾಡಿನಲ್ಲಿ ತನ್ನ ಪತಿಯನ್ನು ಕಾಣದೆ ಅವನು ತನ್ನನ್ನು ಬಿಟ್ಟು ಹೋಗಿದ್ದಾನೆಂದು ಚಿಂತಿಸಿ ಗೋಳಾಡಿದಳು.

೩೧೯. "ಅಯ್ಯೋ ! ಆರ್ಯಪುತ್ರ ! ಮಹಾಸತ್ತ್ವನೇ ! ಶತ್ರುವಿನಲ್ಲೂ ದಯಾವಂತನೇ ! ಅಯ್ಯೋ ! ನನ್ನಲ್ಲಿ ಪ್ರೀತಿಯುಳ್ಳವನೇ ! ಯಾರು ನಿನ್ನನ್ನು ನನ್ನ ವಿಷಯದಲ್ಲಿ ನಿರ್ದಯನನ್ನಾಗಿ ಮಾಡಿದರು ?

೩೨೦. ನೀವು ಒಬ್ಬಂಟಿಗನಾಗಿ ಕಾಡುಗಳಲ್ಲಿ ಬರಿಗಾಲುಗಳಿಂದ ಹೇಗೆ ಪ್ರಯಾಣ ಮಾಡುವೆ ? ನಿನ್ನ ಶ್ರಮವನ್ನು ಹೋಗಲಾಡಿಸುವುದಕ್ಕಾಗಿ ಯಾರು ನಿನ್ನ ಸೇವೆಯನ್ನು ಮಾಡುವವರು ?

೩೨೧. ರಾಜರುಗಳ ಕಿರೀಟಗಳ ಸಾಲುಗಳ ಪರಾಗದಿಂದ ರಂಜಿತವಾಗಿದ್ದ ನಿನ್ನ ಪಾದಗಳನ್ನು ದಾರಿಯಲ್ಲಿನ ಧೂಳು ಹೇಗೆ ತಾನೆ ಕಲುಷಗೊಳಿಸಬಹುದು ?

೩೨೨. ಶ್ರೀಚಂದನದ ಚೂರ್ಣದಿಂದಾದ ಲೇಪವನ್ನು ಕೂಡ ಸಹಿಸದ ನಿನ್ನ ಶರೀರವು ಮಧ್ಯಾಹ್ನಕಾಲದ ಸೂರ್ಯನ ಬಿಸಿಲನ್ನು ಹೇಗೆ ತಾನೆ ಸಹಿಸುವುದು ?

೩೨೩. ಬಾಲಕನಾದ ನನ್ನ ಪುತ್ರನಿಗೆ ಏನು ಹೇಳಲಿ ? ಮಗಳಿಗೆ ಏನು ಹೇಳಲಿ ? ನಾನಿದ್ದು ತಾನೆ ಏನು ಪ್ರಯೋಜನ ? ನಾನು ಪತಿವ್ರತೆಯಾಗಿರುವುದಾದರೆ ಏಕಾಕಿಯಾದ ನಿನಗೆ ದೇವತೆಗಳು ಶುಭವನ್ನು ಮಾಡಲಿ."

---

ದಮಯಂತೀ ಚ ರಾತ್ರ್ಯಂತೇ ಪ್ರಬುದ್ಧಾ ತಂ ಪತಿಂ ವನೇ ।
ಅಪಶ್ಯಂತೀ ಗತಂ ತ್ಯಕ್ತ್ವಾ ವಿಲಲಾಪ ವಿಚಿಂತ್ಯ ಸಾ ॥ ೩೧೮
ಹಾರ್ಯಪುತ್ರಮಹಾಸತ್ತ್ವ ರಿಪಾವಪಿ ಕೃಪಾಪರ ।
ಹಾ ಮದ್ವತ್ಸಲ ಕೇನಾಸಿ ಮಯಿ ನಿಷ್ಕರುಣೀಕೃತಃ ॥ ೩೧೯
ಏಕಾಕೀ ಚ ಕಥಂ ಪದ್ಭ್ಯಾಮಟವೀಷು ಪ್ರಯಾಸ್ಯಸಿ ।
ಕಸ್ತೇ ಶ್ರಮಾಪನೋದಾಯ ಪರಿಚರ್ಯಾಂ ಕರಿಷ್ಯತಿ ॥ ೩೨೦
ಮೌಲಿಮಾಲಾಪರಾಗೇಣ ರಂಜಿತೌ ಯೌ ಮಹೀಭುಜಾಮ್ ।
ತೌ ತೇ ಪಥಿ ಕಥಂ ಪಾದೌ ಧೂಲಿಃ ಕಲುಷಯಿಷ್ಯತಿ ॥ ೩೨೧
ಹರಿಚಂದನಚೂರ್ಣೇನಾಪ್ಯಾಲಿಪ್ತಂ ಸಹತೇ ನ ಯತ್ ।
ಅಂಗಂ ಸಹಿಷ್ಯತೇ ತತ್ತೇ ಮಧ್ಯಾಹ್ನಾರ್ಕಾತಪಂ ಕಥಮ್ ॥ ೩೨೨
ಕಿಂ ಮೇ ಬಾಲೇನ ಪುತ್ರೇಣ ಕಿಂ ದುಹಿತ್ರಾ ಕಿಮಾತ್ಮನಾ ।
ತವೈಕಸ್ಯ ಶಿವಂ ದೇವಾಃ ಕುರ್ವತಾಂ ಯದ್ಯಹಂ ಸತೀ ॥ ೩೨೩

೩೨೪. ಹೀಗೆ ಒಬ್ಬಂಟಿಗಳಾಗಿ ನಳನನ್ನು ಕುರಿತು ಶೋಕಪಡುತ್ತಾ ದಮಯಂತಿಯು ಹಿಂದೆ ನಳನು ತೋರಿಸಿದ ದಾರಿಯಿಂದಲೇ ಅಲ್ಲಿಂದ ಹೊರಟಳು.

೩೨೫. ಹೇಗೋ ಅವಳು ನದಿ, ಪರ್ವತ ಮತ್ತು ಕಾಡುಗಳನ್ನು ದಾಟಿದಳು. ಆದರೆ ಅವಳು ಪತಿಯ ವಿಷಯದಲ್ಲಿನ ಭಕ್ತಿಯನ್ನು ಮಾತ್ರ ದಾಟಲಿಲ್ಲ.

೩೨೬. ಸಾಧ್ವಿಯ ತೇಜಸ್ಸು ದಾರಿಯಲ್ಲಿ ಅವಳನ್ನು ರಕ್ಷಿಸಿತು. ಸರ್ಪಗಳಿಂದ ಅವರಕ್ಷಿತಳಾದ ಅವಳಲ್ಲಿ ಮನಸ್ಸು ನೆಟ್ಟ ಕಿರಾತನನ್ನು ಅವಳ ತೇಜಸ್ಸು ಕ್ಷಣಮಾತ್ರದಲ್ಲಿ ಭಸ್ಮೀಭೂತವಾಗಿ ಮಾಡಿತು.

೩೨೭. ಅನಂತರ ದೈವವಶಾತ್ ಮಧ್ಯದಲ್ಲಿ ಸಿಕ್ಕಿದ ವರ್ತಕರ ಗುಂಪಿನೊಡನೆ ಹೊರಟು ಅವಳು ಸುಬಾಹು ಎಂಬ ರಾಜನ ಪಟ್ಟಣವನ್ನು ತಲುಪಿದಳು.

೩೨೮. ಅಲ್ಲಿ ಪ್ರಾಸಾದದಿಂದ ದೂರದಿಂದ ನೋಡಿದ ಮಾತ್ರಕ್ಕೇ ದಮಯಂತಿಯ ಸೌಂದರ್ಯದಿಂದ ಪ್ರೀತಳಾದ ರಾಜಪುತ್ರಿಯು ದಮಯಂತಿಯನ್ನು ಕರೆತರಿಸಿ ತನ್ನ ತಾಯಿಗೆ ಕಾಣಿಕೆಯನ್ನಾಗಿ ಅರ್ಪಿಸಿದಳು.

೩೨೯. ದಮಯಂತಿಯು ಆ ಮಹಾದೇವಿಯ ಬಳಿಯಲ್ಲಿ ಅವಳ ಆದರಕ್ಕೆ ಪಾತ್ರಳಾಗಿ ಇದ್ದಳು. ಮತ್ತು ಅವಳ ಬಗ್ಗೆ ರಾಣಿಯು ಕೇಳಲಾಗಿ ಅವಳು 'ನನ್ನನ್ನು ಬಿಟ್ಟು ಪತಿಯು ಹೊರಟುಹೋದನು' ಎಂದು ಇಷ್ಟು ಮಾತ್ರ ಹೇಳಿದಳು.

---

ಇತ್ಯೇಕಕಾನುಶೋಚಂತೀ ದಮಯಂತೀ ನಲಂ ತದಾ ।
ತತ್ಪೂರ್ವದರ್ಶಿತೇನೈವ ಪ್ರತಸ್ಥೇ ಸಾ ತತಃ ಪಥಾ ॥ ೩೨೪
ಕಥಂಚಿಚ್ಚಾತಿಚಕ್ರಾಮ ನದೀಶೈಲವನಾಟವೀಃ ।
ನಾತಿಚಕ್ರಾಮ ಭಕ್ತಿಂ ತು ಸಾ ಭರ್ತರಿ ಕಥಂಚನ ॥ ೩೨೫
ಸತೀತೇಜಶ್ಚ ಮಾರ್ಗೇ ತಾಮರಕ್ಷದ್ಯೇನ ಲುಬ್ಧಕಃ ।
ಭಸ್ಮೀಕೃತೋಽಹೇಸ್ತ್ರಾತಾಯಾಂ ತಸ್ಯಾಂ ಗತಮನಾಃ ಕ್ಷಣಾತ್ ॥ ೩೨೬
ತತೋ ದೈವಾದ್ವಣಿಕ್ಸಾರ್ಥೇನಾಂತರಾ ಮಿಲಿತೇನ ಸಾ ।
ಸಹ ಗತ್ವಾ ಪುರಂ ಪ್ರಾಪ ಸುಬಾಹ್ವಾಖ್ಯಸ್ಯ ಭೂಪತೇಃ ॥ ೩೨೭
ತತ್ರ ಸಾ ರಾಜಸುತಯಾ ದೂರಾದ್ದೃಷ್ಟ್ವೈವ ಹರ್ಮ್ಯತಃ ।
ಸೌಂದರ್ಯಪ್ರೀತಯಾನಾಯ್ಯ ಸ್ವಮಾತ್ರೇ ಪ್ರಾಭೃತೀಕೃತಾ ॥ ೩೨೮
ತಸ್ಯಾಃ ಪಾರ್ಶ್ವೇ ಮಹಾದೇವ್ಯಾ ಸಾ ತಸ್ಥೌ ಚ ತದಾದೃತಾ ।
ತ್ಯಕ್ತ್ವಾ ಗತೋ ಮಾಂ ಭರ್ತೇತಿ ಪೃಷ್ಟಾ ಚೈತಾವದಬ್ರವೀತ್ ॥ ೩೨೯

೩೩೦. ಅಷ್ಟರಲ್ಲಿ ಅವಳ ತಂದೆಯಾದ ಭೀಮನು ನಳನ ಸಮಾಚಾರವನ್ನು ತಿಳಿದು ನಳ–ದಮಯಂತಿಯರನ್ನು ಹುಡುಕುವುದಕ್ಕಾಗಿ ಆಪ್ತರಾದ ಮನುಷ್ಯರನ್ನು ಎಲ್ಲ ದಿಕ್ಕುಗಳಲ್ಲೂ ಕಳುಹಿಸಿದನು.

೩೩೧. ಹಾಗೆ ಹೊರಟವರಲ್ಲಿ ಸುಷೇಣನೆಂಬ ಅವನ ಸಚಿವನೊಬ್ಬನು ಬ್ರಾಹ್ಮಣನ ವೇಷವನ್ನು ಧರಿಸಿ ಸುತ್ತಾಡುತ್ತಾ ಸುಬಾಹುವಿನ ರಾಜಧಾನಿಯನ್ನು ತಲುಪಿದನು.

೩೩೨. ಅವನು ಅಲ್ಲಿ ಆಗಂತುಕರಾದವರನ್ನು ಸದಾ ಹುಡುಕುತ್ತಿದ್ದ ದಮಯಂತಿಯನ್ನು ನೋಡಿದನು. ದುಃಖಿತಳಾದ ದಮಯಂತಿಯೂ ತಂದೆಯ ಮಂತ್ರಿಯಾದ ಆ ಸುಷೇಣನನ್ನು ನೋಡಿದಳು.

೩೩೩. ಪರಸ್ಪರ ಗುರುತು ಹಿಡಿದು ಒಟ್ಟಿಗೆ ಕಲೆತು ಅವರಿಬ್ಬರೂ ಗೋಳಾಡುತ್ತಿದ್ದ ರೀತಿಯು ಅಲ್ಲಿ ಸುಬಾಹುವಿನ ರಾಣಿಗೆ ತಿಳಿಯಿತು.

೩೩೪. ಆ ದೇವಿಯು ಅವರಿಬ್ಬರನ್ನೂ ಕರೆತರಿಸಿ ಯಥಾರ್ಥವನ್ನು ಕೇಳಿದಾಗ ದಮಯಂತಿಯು ತನ್ನ ಸೋದರಿಯ ಮಗಳೆಂಬುದು ತಿಳಿಯಿತು.

೩೩೫. ಆಗ ಆ ದೇವಿಯು ಪತಿಗೆ ವಿಷಯ ತಿಳಿಸಿ ದಮಯಂತಿಯನ್ನು ಸತ್ಕರಿಸಿ ರಥದಲ್ಲಿ ಹತ್ತಿಸಿ ಸುಷೇಣನೊಡನೆ ಸೈನಿಕರ ಬೆಂಗಾವಲಿನಲ್ಲಿ ಅವಳ ತಂದೆಯ ಮನೆಗೆ ಕಳುಹಿಸಿದಳು.

---

ತಾವಚ್ಚ ತತ್ಪಿತಾ ಭೀಮೋ ನಲೋದಂತಮವೇತ್ಯ ತಮ್ ।
ತಯೋರನ್ವೇಷಣಾಯಾಪ್ತಾನ್ನರಾನ್‌ದಿಕ್ಷು ವಿಸೃಷ್ಟವಾನ್ ॥ ೩೩೦
ತನ್ಮಧ್ಯಾಚ್ಚ ಸುಷೇಣಾಖ್ಯ ಏಕಸ್ತತ್ಸಚಿವೋ ಭ್ರಮನ್ ।
ಸುಬಾಹೋ ರಾಜಧಾನೀಂ ತಾಂ ಪ್ರಾಪ ಬ್ರಾಹ್ಮಣರೂಪಭೃತ್ ॥ ೩೩೧
ಸ ತತ್ರ ದಮಯಂತೀಂ ತಾಮಾಗಂತೂಂಶ್ಚಿನ್ವತೀಂ ಸದಾ ।
ಅದ್ರಾಕ್ಷೀತ್ಸಾಪ್ಯಪಶ್ಯತ್ತಂ ದುಃಖಿತಾ ಪಿತೃಮಂತ್ರಿಣಮ್ ॥ ೩೩೨
ಅನ್ಯೋನ್ಯಂ ಪ್ರತ್ಯಭಿಜ್ಞಾಯ ಸಮೇತ್ಯ ರುದತಃ ಸ್ಮ ತೌ ।
ತಥಾ ಯಥಾತ್ರ ರಾಜ್ಞೀ ಸಾ ಸುಬಾಹೋಸ್ತದಬುಧ್ಯತ ॥ ೩೩೩
ಯಾವಚ್ಚಾನಾಯ್ಯ ಸಾ ದೇವೀ ತೌ ಯಥಾವಸ್ತು ಪೃಚ್ಛತಿ ।
ಬುಬುಧೇ ದಮಯಂತೀ ತಾಂ ತಾವತ್ಸ್ವಭಗಿನೀಸುತಾಮ್ ॥ ೩೩೪
ತತಃ ಸಾ ಭರ್ತುರಾವೇದ್ಯ ತಾಂ ಸಂಮಾನ್ಯ ಪಿತುರ್ಗೃಹಮ್ ।
ರಥೇಽಧಿರೋಪ್ಯ ವ್ಯಸೃಜತ್ಸುಷೇಣಾಂ ಸಸೈನಿಕಾಮ್ ॥ ೩೩೫

೩೩೬ ಅನಂತರ ತಂದೆಯ ಮನೆಯಲ್ಲಿ ತನ್ನ ಇಬ್ಬರು ಮಕ್ಕಳನ್ನೂ ಕೂಡಿಕೊಂಡು ದಮಯಂತಿಯು ತಂಗಿದಳು. ತಂದೆಯೂ ಅವಳನ್ನು ನೋಡಿಕೊಳ್ಳುತ್ತಿದ್ದನು. ಅವಳು ಪತಿಯ ಬಗೆಗಿನ ವಾರ್ತೆಯನ್ನು ಹುಡುಕುತ್ತಲೇ (ಅಲ್ಲಿ) ಇದ್ದಳು.

೩೩೭ ನಳನು ಪಾಕವಿದ್ಯೆ ಹಾಗೂ ರಥವಿದ್ಯೆಗಳಲ್ಲಿ ನಿಪುಣನು. ಅದರಿಂದ ಅವನನ್ನು ಗುರುತಿಸಬಹುದು ಎಂಬುದಾಗಿ ದಮಯಂತಿಯ ತಂದೆ ಭೀಮನು ನಳನನ್ನು ಹುಡುಕಲು ಗುಪ್ತಚರರಲ್ಲಿ ತಿಳಿಸಿದನು.

೩೩೮–೩೩೯. 'ನೀವು ನಳನು ಎಲ್ಲಿರುವನೆಂದು ಶಂಕಿಸುತ್ತೀರೋ ಅಲ್ಲಿ ಈ ರೀತಿ ಹೇಳಬೇಕು' ಎಂದು ರಾಜನಾದ ಭೀಮನು ಅವರಿಗೆ ಹೇಳಿದನು: ಓ ಕ್ರೂರ ಚಂದಿರನೆ ವನದಿ ಮಲಗಿದ ಬಾಲೆ ಕುಮುದಿನೀ ಕಾಂತೆಯನು ! ಎಳೆಬೆಳದಿಂಗಳ ತೊರೆದೆತ್ತ ಮರೆಯಾದೆಯಂಬರದ ಭಾಗವನು ಪಡೆದು ? (ಇದರ ಒಳ ಅರ್ಥ: ಓ ಕ್ರೂರನೇ, ಚಂದ್ರ ಸಮಾನನೇ ! ಕಾಡಿನಲ್ಲಿ ಮಲಗಿದ್ದ ಕುಮುದಿನಿಯಂತೆ ಪ್ರಿಯೆಯಾದ ಕಾಂತೆಯನ್ನು ಬಿಟ್ಟು ಒಂದು ವಸ್ತ್ರದ ಚೂರಿನೊಡನೆ ಎಲ್ಲಿಗೆ ಮಾಯವಾಗಿ ಹೋದೆ ? )

೩೪೦. ಈ ಮಧ್ಯದಲ್ಲಿ ರಾಜನಾದ ನಳನು ಅರ್ಧವಸ್ತ್ರವನ್ನು ಹೊದ್ದುಕೊಂಡು ರಾತ್ರಿಯಲ್ಲಿ ಆ ಕಾಡಿನಲ್ಲಿ ದೂರ ಹೋದಾಗ ಒಂದು ಕಾಡುಗಿಚ್ಚು ಕಾಣಿಸಿತು.

೩೪೧. "ಓ ಮಹಾಸತ್ತ್ವನೇ ! ಅಶಕ್ತನಾದ ನನ್ನನ್ನು ಈ ದಾವಾಗ್ನಿಯು ಸುಟ್ಟುಹಾಕುವುದರೊಳಗೆ ಈ ದಾವಾಗ್ನಿಯಿಂದ ಹೊರಗೆ ಹಾಕು."

---

ತತ್ರ ಸಾ ದಮಯಂತ್ಯಾಸೀತ್ ಪ್ರಾಪ್ತಾಪತ್ಯದ್ವಯಾ ತತಃ ।
ಪಿತ್ರಾಪಿ ದೃಶ್ಯಮಾನಾ ಸಾ ಭರ್ತುರ್ವಾರ್ತಾಂ ವಿಚಿನ್ವತೀ ॥ ೩೩೬
ತತ್ಪಿತಾ ವ್ಯಸೃಜಚ್ಚಾರಾನನ್ವೇಷ್ಟುಂ ತಂ ಚ ತತ್ಪತಿಮ್ ।
ಸೂದಸ್ಯಂದನವಿದ್ಯಾಭ್ಯಾಂ ದಿವ್ಯಾಭ್ಯಾಮುಪಲಕ್ಷಿತಮ್ ॥ ೩೩೭
ಬಾಲಾಂ ವನೇ ಪ್ರಸುಪ್ತಾಂ ನೃಶಂಸ ಸಂತ್ಯಜ್ಯ ಕುಮುದಿನೀಕಾಂತಾಮ್ ।
ಪ್ರಾಪ್ಯೈವಾಂಬರಖಂಡಂ ಚಂದ್ರಾದೃಶ್ಯಃ ಕ್ವ ಯಾತೋಽಸಿ ॥ ೩೩೮
ಏವಂ ಭವದ್ಭಿರ್ವಕ್ತವ್ಯಂ ಸ್ಥಿತಃ ಶಂಕ್ಯೇತ ಯತ್ರ ಸಃ ।
ಇತ್ಯಾದಿದೇಶ ಚಾರಾಂಸ್ತಾನ್ ಸ ಚ ಭೀಮೋ ಮಹೀಪತಿಃ ॥ ೩೩೯
ಅತ್ರಾಂತರೇ ಸ ರಾಜಾ ಚ ನಲಸ್ತಸ್ಮಿನ್ ವನೇ ನಿಶಿ ।
ಪ್ರಾವೃತಾರ್ಧಪಟೋ ದೂರಂ ಗತ್ವಾ ದಾವಾಗ್ನಿಮೈಕ್ಷತ ॥ ೩೪೦
ಭೋ ಮಹಾಸತ್ತ್ವ ಯಾವನ್ನ ದಹ್ಯೇಽಹಮಬಲೋಽಮುನಾ ।
ಅಪಸಾರಯ ಮಾಂ ತಾವದ್ದಾವಾಗ್ನೇರ್ನಿಕಟಾದಿತಃ ॥ ೩೪೧

೩೪೨. ಎಂಬ ಈ ಮಾತನ್ನು ಕೇಳಿ ಆ ಕಡೆಗೆ ದೃಷ್ಟಿಯನ್ನು ಹರಿಸಿದ ನಳನು ದಾವಾಗ್ನಿಯ ಬಳಿಯಲ್ಲಿ ಗುಂಡಾಗಿ ಸುತ್ತಿಕೊಂಡು ಮಲಗಿದ್ದ ಒಂದು ಸರ್ಪವನ್ನು ಕಂಡನು.

೩೪೩. ಹೆಡೆಯಲ್ಲಿದ್ದ ರತ್ನದ ಕಾಂತಿಸಮೂಹದಿಂದ ವ್ಯಾಪ್ತವಾಗಿದ್ದುದರಿಂದ ಆ ಕಾಡುಗಿಚ್ಚು ಮೇಲೆತ್ತಿ ಹಿಡಿದ ಭಯಂಕರವಾದ ಆಯುಧವೋ ಎಂಬಂತಿದ್ದ ಆ ಸರ್ಪವನ್ನು ನಳನು ನೋಡಿದನು.

೩೪೪. ಬಳಿಗೆ ಹೋಗಿ ದಯೆಯಿಂದ ಆ ಸರ್ಪವನ್ನು ಹೆಗಲಿನ ಮೇಲೆ ಇಟ್ಟುಕೊಂಡು ದೂರ ತೆಗೆದುಕೊಂಡು ಹೋಗಿ ಬಿಡಲು ನಳನು ಅಪೇಕ್ಷಿಸುತ್ತಿರುವಷ್ಟರಲ್ಲಿ ಆ ಸರ್ಪವು ಅವನನ್ನು ಕುರಿತು ಹೇಳಿತು.

೩೪೫. "ಹತ್ತು ಹೆಜ್ಜೆಗಳನ್ನು ಎಣಿಸಿ ನನ್ನನ್ನು ಇಲ್ಲಿಂದ ಒಯ್ಯಿ." ಆಗ ಆ ನಳನು ಅದೇ ರೀತಿ ಹತ್ತು ಹೆಜ್ಜೆಗಳನ್ನು ಎಣಿಸುತ್ತಾ ಹೋದನು.

೩೪೬–೩೪೭. ಒಂದು, ಎರಡು, ಮೂರು, ನಾಲ್ಕು, ಐದು, ಆರು, ಏಳು, ಸರ್ಪವೇ ! ಕೇಳು. ಎಂಟು, ಒಂಬತ್ತು, ದಶ* (ಹತ್ತು–ಕಚ್ಚು) ಎಂದು ಹೇಳಿದ ನಳನನ್ನು ಅವನ ಹೆಗಲಿನ ಮೇಲಿದ್ದ ಆ ಸರ್ಪವು ಮಾತಿನ ಕಪಟದಿಂದ ಹಣೆಯ ಬಳಿ ಕಚ್ಚಿತು. ಅದರಿಂದಾಗಿ ಆ ರಾಜನ ಬಣ್ಣ ಕಪ್ಪಾಯಿತು. ಅವನ ಬಾಹುಗಳು ಕುಗ್ಗಿದುವು. ಅವನು ಕುರೂಪಿಯಾದನು.

---

ಇತ್ಯತ್ರ ತದ್ವಚಃ ಶ್ರುತ್ವಾ ದತ್ತದೃಷ್ಟಿರ್ದದರ್ಶ ಸಃ ।
ಆಬದ್ಧಮಂಡಲಂ ನಾಗಂ ನಲೋ ದಾವಾನಲಾಂತಿಕೇ ॥ ೩೪೨
ಫಣಾರತ್ನಪ್ರಭಾಜಾಲಜಟಿಲಂ ವನವಹ್ನಿನಾ ।
ಗೃಹೀತಮಿವ ತೇನೋಗ್ರಹೇತಿಹಸ್ತೇನ ಮೂರ್ಧನಿ ॥ ೩೪೩
ಉಪೇತ್ಯ ಕೃಪಯಾಂಸೇ ತಂ ಕೃತ್ವಾ ನೀತ್ವಾ ಚ ದೂರತಃ ।
ತ್ಯಕ್ತುಮಿಚ್ಛತಿ ಯಾವತ್ಸ ತಾವನ್ನಾಗೋಽಬ್ರವೀತ್ಸ ತಮ್ ॥ ೩೪೪
ಗಣಯಿತ್ವಾ ದಶಾನ್ಯಾನಿ ಪದಾನಿ ನಯ ಮಾಮಿತಃ ।
ತತಃ ಸ ಪ್ರಯಯಾವೇವಂ ಪದಾನಿ ಗಣಯನ್ನಲಃ ॥ ೩೪೫
ಏಕಂ ದ್ವೇ ತ್ರೀಣಿ ಚತ್ವಾರಿ ಪಂಚ ಷಟ್ ಸಪ್ತ ಶೃಣ್ವಹೇ ।
ಅಷ್ಟೌ ನವ ದಶೇತ್ಯುಕ್ತವಂತಮುಕ್ತಿಚ್ಛಲೇನ ತಮ್ ॥ ೩೪೬
ನಲಂ ಸ್ಕಂಧಸ್ಥಿತೋ ನಾಗೋ ಲಲಾಟಾಂತೇ ದದಂಶ ಸಃ ।
ತೇನ ಹ್ರಸ್ವಭುಜಃ ಕೃಷ್ಣೋ ವಿರೂಪಃ ಸೋಽಭವನ್ನೃಪಃ ॥ ೩೪೭

---

* ಸಂಸ್ಕೃತ ಭಾಷೆಯಲ್ಲಿ "ದಶ" ಎಂದು ಸಂಖ್ಯಾವಾಚಕವಾದರೆ ಹತ್ತು ಎಂದು ಅರ್ಥ. ಮಧ್ಯಮ ಪುರುಷದ ಏಕವಚನ ರೂಪವಾಗಿ ಕ್ರಿಯಾಪದವಾದರೆ "ಕಚ್ಚು' ' ಎಂದು ಅರ್ಥವಾಗುತ್ತದೆ.

೩೪೮. ಆಗ ಸರ್ಪವನ್ನು ಕೆಳಗೆ ಇಳಿಸಿ ರಾಜನು ಕೇಳಿದನು: "ನೀನು ಯಾರು ? ಇದೆಂತಹ ಪ್ರತ್ಯುಪಕಾರ ನೀನು ನನಗೆ ಮಾಡಿರುವುದು ?

೩೪೯. ನಳನ ಮಾತನ್ನು ಕೇಳಿ ಆ ಸರ್ಪವು ಹೇಳಿತು: "ರಾಜನೇ ! ನಾನು ಕಾರ್ಕೋಟನೆಂಬ ಸರ್ಪರಾಜ.

೩೫೦. ನಾನು ಕಚ್ಚಿದುದು ನಿನಗೆ ಒಳ್ಳೆಯದಕ್ಕೇ ಆಗುತ್ತದೆ. ನಿನಗೆ ಗುಟ್ಟಾಗಿ ವಾಸ ಮಾಡುವಾಗ ಅದು ಗೊತ್ತಾಗುವುದು. ವಿರೂಪವು ಮಹಾಪುರುಷರ ಕಾರ್ಯಸಿದ್ಧಿಗಾಗಿ ಉಪಯುಕ್ತವಾಗುವುದು.

೩೫೧. ಅಗ್ನಿಶೌಚವೆಂಬ ಹೆಸರುಳ್ಳ ನನ್ನ ಈ ಎರಡು ವಸ್ತ್ರಗಳನ್ನು ತೆಗೆದುಕೊ. ಇವುಗಳನ್ನು (ಇದನ್ನು) ಹೊದ್ದುಕೊಂಡ ಕೂಡಲೇ ನೀನು ನಿಜರೂಪವನ್ನು ಪಡೆಯುವೆ."

೩೫೨. ಹೀಗೆ ಹೇಳಿ ಆ ಎರಡು ವಸ್ತ್ರಗಳನ್ನು ಕೊಟ್ಟು ಕಾರ್ಕೋಟಕವು ಹೊರಟು ಹೋಯಿತು. ನಳನು ಆ ಕಾಡಿನಿಂದ ಹೊರಟು ಕ್ರಮೇಣ ಕೋಶಲದೇಶವನ್ನು ಸೇರಿದನು.

೩೫೩. ಅಲ್ಲಿ ಕೋಶಲಾಧಿಪತಿಯಾದ ಋತುಪರ್ಣರಾಜನ ಮನೆಯಲ್ಲಿ ನಳನು ಹ್ರಸ್ವಬಾಹು ಎಂಬ ಹೆಸರಿನಿಂದ ಅಡಿಗೆ ಕೆಲಸಕ್ಕೆ ಸೇರಿದನು.

---

ತತೋಽವತಾರ್ಯ ಸ್ಕಂಧಾತ್ತಂ ಸ ರಾಜಾ ಪೃಷ್ಟವಾನಹಿಮ್ ।
ಕೋ ಭವಾನ್ ಕಾ ಕೃತಾ ಚೇಯಂ ತ್ವಯಾ ಮೇ ಪ್ರತ್ಯುಪಕ್ರಿಯಾ ॥ ೩೪೮
ಏತನ್ನಲವಚಃ ಶ್ರುತ್ವಾ ಸ ನಾಗಃ ಪ್ರತ್ಯುವಾಚ ತಮ್ ।
ರಾಜನ್ ಕಾರ್ಕೋಟನಾಮಾನಂ ನಾಗರಾಜಮವೇಹಿ ಮಾಮ್ ॥ ೩೪೯
ದಂಶೋ ಗುಣಾಯ ಚ ಮಯಾ ದತ್ತಸ್ತೇ ತಚ್ಚ ವೇತ್ಸ್ಯಸಿ ।
ಗೂಢವಾಸೇ ಚ ವೈರೂಪ್ಯಂ ಮಹತಾಂ ಕಾರ್ಯಸಿದ್ಧಯೇ ॥ ೩೫೦
ಗೃಹಾಣ ಚಾಗ್ನಿಶೌಚಾಖ್ಯಮಿದಂ ವಸ್ತ್ರಯುಗಂ ಮಮ ।
ಅನೇನ ಪ್ರಾವೃತೇನೈವ ಸ್ವಂ ರೂಪಂ ಪ್ರತಿಪತ್ಸ್ಯಸೇ ॥ ೩೫೧
ಇತ್ಯುಕ್ತ್ವಾ ದತ್ತತದ್ವಸ್ತ್ರಯುಗೇ ಕಾರ್ಕೋಟಕೇ ಗತೇ ।
ನಲಸ್ತಸ್ಮಾದ್ವನಾದ್ಗತ್ವಾ ಕ್ರಮೇಣ ಪ್ರಾಪ ಕೋಶಲಾನ್ ॥ ೩೫೨
ಕೋಶಲಾಧಿಪತೇಸ್ತತ್ರ ಋತುಪರ್ಣಸ್ಯ ಭೂಪತೇಃ ।
ಸ ಹ್ರಸ್ವಬಾಹುನಾಮಾ ಸನ್ ಸೂದತ್ವಂ ಶಿಶ್ರಿಯೇ ಗೃಹೇ ॥ ೩೫೩

೩೫೪. ಆ ರಾಜನಿಗೆ ದಿವ್ಯರಸವುಳ್ಳ ಭೋಜನಗಳನ್ನು ತಯಾರು ಮಾಡಿದ್ದರಿಂದ ನಳನು ಅಲ್ಲಿ ಪ್ರಸಿದ್ಧನಾದನು. ಅಂತೆಯೇ ತನ್ನ ರಥವಿಜ್ಞಾನದಿಂದಲೂ (ಪ್ರಸಿದ್ಧಿಯನ್ನು ಹೊಂದಿದನು).

೩೫೫. ಹ್ರಸ್ವಬಾಹುವೆಂಬ ಹೆಸರಿನಲ್ಲಿ ನಳನು ಅಲ್ಲಿ ಇರುವಾಗ ಒಂದು ಬಾರಿ ವಿದರ್ಭರಾಜನ ಗುಪ್ತಚರರಲ್ಲಿ ಒಬ್ಬನು ಅಲ್ಲಿಗೆ ಬಂದನು.

೩೫೬. ಪಾಕವಿದ್ಯೆ ಮತ್ತು ರಥವಿದ್ಯೆಗಳಲ್ಲಿ ನಳನಿಗೆ ಸಮಾನನಾದ ಹ್ರಸ್ವಬಾಹುವೆಂಬ ಹೊಸ ಪಾಚಕನು ಇಲ್ಲಿ ಇದ್ದಾನೆ ಎಂದು ಆ ಗುಪ್ತಚರನಿಗೆ ತಿಳಿಯಿತು.

೩೫೭. ಅವನನ್ನು ಬುದ್ಧಿವಂತಿಕೆಯಿಂದ ನಳನೆಂದು ಊಹೆ ಮಾಡಿ ರಾಜನ ಆಸ್ಥಾನದಲ್ಲಿದ್ದ ಅವನನ್ನು ಯುಕ್ತಿಯಿಂದ ಹೋಗಿ ನೋಡಿ ಆ ಗುಪ್ತಚರನು ಪ್ರಭುವು ಹೇಳಿದ್ದ ಈ ಆರ್ಯೆಯನ್ನು ಪಠಿಸಿದನು.

೩೫೮. ಓ, ಕ್ರೂರ ಚಂದಿರನೆ ! ವನದಿ ಮಲಗಿದ ಬಾಲೆ ಕುಮುದಿನೀ ಕಾಂತೆಯನು ! ಎಳೆಬೆಳದಿಂಗಳ ತೊರೆದೆತ್ತ ಮರೆಯಾದೆಯಂಬರದ ಭಾಗವನು ಪಡೆದು.

೩೫೯. ಹುಚ್ಚನ ಮಾತಿನಂತೆ ಇದ್ದ ಅದನ್ನು ಕೇಳಿ ಅಲ್ಲಿದ್ದವರು ತಿರಸ್ಕಾರ ಮಾಡಿದರು. ಆದರೆ ಅಡಿಗೆಯವನ ನೆಪದಿಂದ ಅಲ್ಲಿ ಇದ್ದ ನಳನು ಆ ಗುಪ್ತಚರನನ್ನು ಕುರಿತು ಹೇಳಿದನು.

---

ಭೋಜನಾನಿ ಚ ಯತ್ತಸ್ಯ ಚಕ್ರೇ ದಿವ್ಯರಸಾನಿ ಸಃ ।
ತೇನ ಪ್ರಸಿದ್ಧಿಂ ಪ್ರಾಪಾತ್ರ ರಥವಿಜ್ಞಾನತಸ್ತಥಾ ॥ ೩೫೪

ತತ್ರಸ್ಥೇ ಹ್ರಸ್ವಬಾಹ್ವಾಖ್ಯೇ ನಲೇ ತಸ್ಮಿನ್ ಕದಾಚನ ।
ವಿದರ್ಭರಾಜಚಾರೇಷು ತೇಷ್ವೇಕೋಽತ್ರ ಕಿಲಾಯಯೌ ॥ ೩೫೫

ಹ್ರಸ್ವಬಾಹುರಿತೀಹಾಸ್ತಿ ಸ್ವವಿದ್ಯಾರಥವಿದ್ಯಯೋಃ ।
ನಲತುಲ್ಯೋ ನವಃ ಸೂದ ಇತಿ ಚಾರೋಽತ್ರ ಸೋಽಶೃಣೋತ್ ॥ ೩೫೬

ನಲಂ ಸಂಭಾವ್ಯ ತಂ ಬುದ್ಧ್ಯಾ ಚಾಸ್ಥಾನೇ ನೃಪತೇಃ ಸ್ಥಿತಮ್ ।
ಯುಕ್ತ್ಯಾ ಸ ತತ್ರ ಗತ್ವೈತಾಂ ಪಪಾಠಾರ್ಯಾಂ ಪ್ರಭೂದಿತಾಮ್ ॥ ೩೫೭

ಬಾಲಾಂ ವನೇ ಪ್ರಸುಪ್ತಾಂ ನೃಶಂಸ ಸಂತ್ಯಜ್ಯ ಕುಮುದಿನೀಕಾಂತಾಮ್ ।
ಪ್ರಾಪ್ಯೈವಾಂಬರಖಂಡಂ ಚಂದ್ರಾದೃಶ್ಯಃ ಕ್ವ ಯಾತೋಽಸಿ ॥ ೩೫೮

ತಚ್ಛ್ರುತ್ವೋನ್ಮತ್ತವಾಕ್ಯಾಭಂ ತತ್ರಸ್ಥಾ ಅವಜಜ್ಞಿರೇ ।
ಸೂದಚ್ಛದ್ಮಸ್ಥಿತಸ್ತ್ವತ್ರ ಸ ನಲಃ ಪ್ರತ್ಯುವಾಚ ತಮ್ ॥ ೩೫೯

೩೬೦. ಕ್ಷಯಿಸಿದ ಚಂದಿರನಂಬರ ಭಾಗವ ಪಡೆದನ್ಯಮಂಡಳವ ಹೊಕ್ಕು, ಚಂದ್ರಿಕೆಗೆ ಕಾಣದಿದ್ದರೆ ಹೇಳಿದೇನವನ ಕ್ರೌರ್ಯವೆಂದೆನಿಸುವುದೇ ?
"ಕ್ಷಯ ಹೊಂದಿದ ಚಂದ್ರನು (ಚಂದ್ರಸಮಾನನಾದ ನಳನು) ಆಕಾಶದ (ವಸ್ತ್ರದ) ಒಂದು ಭಾಗವನ್ನು ಪಡೆದು ಸೂರ್ಯನೆಂಬ ಮತ್ತೊಬ್ಬನ ಮಂಡಲವನ್ನು (ದೇಶಾಂತರವನ್ನು ಕುರಿತು) ಪ್ರವೇಶಿಸುತ್ತಾ ಚಂದ್ರಿಕೆಗೆ (ಕುಮುದಿನೀ ರೂಪಳಾದ ದಮಯಂತಿಗೆ) ಅದೃಶ್ಯನಾಗಿ ಆದರೆ ಅದು ಅವನ ಕ್ರೂರತೆಯೇನು ?"

೩೬೧. ಈ ಉತ್ತರವನ್ನು ಕೇಳಿ ಅವನೇ ನಿಜವಾದ ನಳನೆಂದು ಊಹಿಸಿ ಅವನು ಯಾವುದೋ ವಿಪತ್ತಿನಿಂದ ಕುರೂಪಿಯಾಗಿರುವನೆಂದು ಭಾವಿಸಿ ಆ ಗುಪ್ತಚರನು ಅಲ್ಲಿಂದ ಹೊರಟು ಹೋದನು.

೩೬೨. ವಿದರ್ಭ ದೇಶವನ್ನು ಸೇರಿ ಆ ದೂತನು ಭಾರ್ಯಾಸಮೇತನಾದ ಭೀಮರಾಜನಿಗೂ ದಮಯಂತಿಗೂ ತಾನು ಕಂಡ ಮತ್ತು ಕೇಳಿದ ಎಲ್ಲ ವಿಷಯವನ್ನೂ ತಿಳಿಸಿದನು.

೩೬೩. ಆಗ ದಮಯಂತಿಯು ತಂದೆಗೆ ರಹಸ್ಯವಾಗಿ ಹೇಳಿದಳು. "ನಿಸ್ಸಂದೇಹವಾಗಿ ಅಡಿಗೆಯವನ ನೆಪದಲ್ಲಿ ಅಲ್ಲಿರುವ ಅವನೇ ಆರ್ಯಪುತ್ರನು.

೩೬೪. ಆದುದರಿಂದ ಅವನನ್ನು ಇಲ್ಲಿಗೆ ಕರೆತರಲು ನಾನು ಹೇಳುವ ಉಪಾಯವನ್ನು ಮಾಡಬೇಕು. ಋತುಪರ್ಣ ರಾಜನ ಬಳಿಗೆ ಒಬ್ಬ ದೂತನನ್ನು ಕಳುಹಿಸಬೇಕು.

---

ಕ್ಷೀಣೋಽಂಬರೈಕದೇಶಂ ಚಂದ್ರಃ ಪ್ರಾಪ್ಯಾನ್ಯಮಂಡಲಂ ಪ್ರವಿಶನ್ ।
ಕುಮುದಿನ್ಯಾ ಯದದೃಶ್ಯೋ ಜಾತಸ್ತತ್ಕಾ ನೃಶಂಸತಾ ತಸ್ಯ ॥ ೩೬೦
ಏತತ್ತದುತ್ತರಂ ಶ್ರುತ್ವಾ ಸತ್ಯಂ ಸಂಭಾವ್ಯ ತಂ ನಲಮ್ ।
ವಿಪದುದ್ಭೂತವೈರೂಪ್ಯಂ ಚಾರಃ ಸೋಽಥ ಯಯೌ ತತಃ ॥ ೩೬೧
ವಿದರ್ಭಾನ್ ಪ್ರಾಪ್ಯ ಭೀಮಾಯ ರಾಜ್ಞೇ ಭಾರ್ಯಾಯುತಾಯ ಸಃ ।
ದಮಯಂತ್ಯೈ ಚ ತತ್ಸರ್ವಂ ದೃಷ್ಟಶ್ರುತಮವರ್ಣಯತ್ ॥ ೩೬೨
ತತೋಽತ್ರ ದಮಯಂತೀ ಸಾ ಪಿತರಂ ಸ್ವೈರಮಬ್ರವೀತ್ ।
ನಿಃಸಂದೇಹಂ ಸ ಏವಾರ್ಯಪುತ್ರಃ ಸೂದಮಿಷಂ ಶ್ರಿತಃ ॥ ೩೬೩
ತತ್ತದಾನಯನೇ ಯುಕ್ತಿರ್ಮನ್ಮತಾ ಕ್ರಿಯತಾಮಿಹ ।
ಋತುಪರ್ಣಸ್ಯ ನೃಪತೇಸ್ತಸ್ಯ ದೂತೋ ವಿಸೃಜ್ಯತಾಮ್ ॥ ೩೬೪

೩೬೫–೩೬೬. ಆ ರಾಜನ ಬಳಿ ಹೋದ ಕೂಡಲೇ ದೂತನು ಅಲ್ಲಿ 'ರಾಜನಾದ ನಳನು ಎಲ್ಲಿಗೋ ಹೋದನು. ಅವನ ಸಮಾಚಾರವು ತಿಳಿದು ಬಂದಿಲ್ಲ. ಆದುದರಿಂದ ಪ್ರಾತಃ ಕಾಲದಲ್ಲಿ ದಮಯಂತಿಯು ಮತ್ತೆ ಸ್ವಯಂವರವನ್ನು ಮಾಡುತ್ತಾಳೆ. ಆದುದರಿಂದ ಇಂದೇ ಶೀಘ್ರವಾಗಿ ವಿದರ್ಭದೇಶಕ್ಕೆ ಬರಬೇಕು' ಎಂದು ಹೇಳಲಿ.

೩೬೭. ಅನಂತರ ಈ ಸುದ್ದಿಯನ್ನು ಕೇಳಿದ ರಥವಿಜ್ಞಾನವನ್ನು ತಿಳಿದ ಆರ್ಯಪುತ್ರನನ್ನು ಕರೆದುಕೊಂಡು ಆ ರಾಜನು ಒಂದೇ ದಿವಸದಲ್ಲಿ ನಿಶ್ಚಯವಾಗಿ ಇಲ್ಲಿಗೆ ಬರುವನು."

೩೬೮. ಹೀಗೆ ತಂದೆಯೊಡನೆ ದಮಯಂತಿಯು ಆಲೋಚಿಸಿ ಅಂತೆಯೇ ಸಂದೇಶವನ್ನು ಕೊಟ್ಟು ಯೋಗ್ಯನಾದ ದೂತನನ್ನು ಕೋಶಲದೇಶಕ್ಕೆ ಕಳುಹಿಸಿದಳು.

೩೬೯. ಆ ದೂತನು ಹೋಗಿ ಅದೇ ರೀತಿಯಾಗಿ ಋತುಪರ್ಣನಿಗೆ ಹೇಳಿದಾಗ ಅವನು ಕುತೂಹಲದಿಂದ ಬಳಿಯಲ್ಲೇ ಇದ್ದ ಪಾಚಕನಾದ ನಳನನ್ನು ಕುರಿತು ಪ್ರೀತಿಯಿಂದ ಹೇಳಿದನು.

೩೭೦. "ಹ್ರಸ್ವಬಾಹುವೇ ! ರಥವಿಜ್ಞಾನವು ನಿನಗೆ ಕರಗತವೆಂದು ನೀನು ಹೇಳಿದ್ದೆ. ಆದುದರಿಂದ ನಿನಗೆ ಸಾಮರ್ಥ್ಯವಿರುವುದಾದರೆ ಇಂದೇ ನನ್ನನ್ನು ವಿದರ್ಭದೇಶಕ್ಕೆ ತಲುಪಿಸು."

---

ಪ್ರಾಪ್ತಮಾತ್ರಶ್ಚ ತಂ ಭೂಪಮೇವಂ ತತ್ರ ಬ್ರವೀತು ಸಃ ।
ಗತಃ ಕ್ವಾಪಿ ನಲೋ ರಾಜಾ ಪ್ರವೃತ್ತಿರ್ನಾಸ್ಯ ಬುಧ್ಯತೇ ॥ ೩೬೫
ತತ್ಪ್ರಾತಃ ಕುರುತೇ ಭೂಯೋ ದಮಯಂತೀ ಸ್ವಯಂವರಮ್ ।
ಅತೋಽದ್ಯೈವ ವಿದರ್ಭೇಷು ಶೀಘ್ರಮಾಗಮ್ಯತಾಮಿತಿ ॥ ೩೬೬
ತತಃ ಶ್ರುತ್ವೈತದ್ವಾರ್ತೇನ ಸ ರಥಜ್ಞಾನಿನಾ ನೃಪಃ ।
ಏಕಾಹೇನಾರ್ಯಪುತ್ರೇಣ ಸಾಕಂ ಧ್ರುವಮಿಹೈಷ್ಯತಿ ॥ ೩೬೭
ಏವಂ ಸಪಿತೃಕಾಲೋಚ್ಯ ಸಂದಿಶ್ಯ ಚ ತಥೈವ ಸಾ ।
ಕೋಶಲಾನ್ ವ್ಯಸೃಜದ್ದೂತಂ ದಮಯಂತೀ ಯಥೋಚಿತಮ್ ॥ ೩೬೮
ತೇನರ್ತುಪರ್ಣೋ ಗತ್ವಾ ಸ ತಥೈವೋಕ್ತಃ ಸಮುತ್ಸುಕಃ ।
ಜಗಾದ ಸೂದರೂಪಂ ತಂ ಪ್ರಣಯಾತ್ ಪಾರ್ಶ್ವಗಂ ನಲಮ್ ॥ ೩೬೯
ಹ್ರಸ್ವಬಾಹೋ ರಥಜ್ಞಾನಂ ಮಮಾಸ್ತೀತ್ಯವದದ್ಭವಾನ್ ।
ತತ್ಪ್ರಾಪಯ ವಿದರ್ಭಾನ್ ಮಾಮದ್ಯೈವೋತ್ಸಹಸೇ ಯದಿ ॥ ೩೭೦

೩೭೧. ಅದನ್ನು ಕೇಳಿದ ಕೂಡಲೇ ನಳನು "ಖಂಡಿತವಾಗಿಯೂ ತಲುಪಿಸುತ್ತೇನೆ' ಎಂದು ಹೇಳಿ ಹೋಗಿ ಉತ್ತಮ ಕುದುರೆಗಳನ್ನು ಹೂಡಿ ಶ್ರೇಷ್ಠವಾದ ಒಂದು ರಥವನ್ನು ಸಜ್ಜು ಪಡಿಸಿದನು.

೩೭೨. “ಈ ಸ್ವಯಂವರದ ಸುದ್ದಿಯನ್ನು ಅವಳು ನನ್ನನ್ನು ಪಡೆಯುವುದಕ್ಕಾಗಿ ಕಲ್ಪಿಸಿದ್ದಾಳೆ ಎಂದು ನನಗೆ ತೋರುತ್ತದೆ. ಆದರೆ ದಮಯಂತಿಯು ಸ್ವಪ್ನದಲ್ಲಿಯೂ ಕೂಡ ಇಂತಹವಳಾಗುವುದಿಲ್ಲ. (ಪುನಃ ಸ್ವಯಂವರ ಮಾಡಿಕೊಳ್ಳುವವಳಲ್ಲ)

೩೭೩. ಆದುದರಿಂದ ಅಲ್ಲಿಗೆ ಹೋಗಿಯೇ ಹೋಗುತ್ತೇನೆ. ನೋಡುತ್ತೇನೆ.” ಎಂದು ಯೋಚಿಸಿ ನಳನು ಸಜ್ಜಾದ ರಥವನ್ನು ಋತುಪರ್ಣನ ಬಳಿಗೆ ತಂದನು.

೩೭೪. ರಾಜನು ರಥವನ್ನು ಹತ್ತಲು ನಳನು ಆ ರಥವನ್ನು ಗರುಡನಿಗಿಂತ ಹೆಚ್ಚು ವೇಗದಿಂದ ನಡೆಸಲು ತೊಡಗಿದನು.

೩೭೫ ರಥದ ವೇಗದಿಂದ ರಾಜನ ವಸ್ತ್ರವು ಕಳಚಿ ಬಿದ್ದಾಗ ಅದನ್ನು ತೆಗೆದುಕೊಳ್ಳಲು ರಥವನ್ನು ನಿಲ್ಲಿಸು ಎಂದು ರಾಜನು ಹೇಳಿದನು. ಆಗ ನಳನು ಹೇಳಿದನು:

೩೭೬ “ರಾಜನೇ ! ನಿನ್ನ ಆ ವಸ್ತ್ರವು ಎಲ್ಲಿದೆ ? ಏಕೆಂದರೆ ಈ ಒಂದು ಕ್ಷಣದಲ್ಲೇ ರಥವು ಬಹಳ ಯೋಜನಗಳನ್ನು ದಾಟಿ ಬಂದಿದೆ.”

---

ತಚ್ಛ್ರುತ್ವೈವ ನಲೋ ಬಾಢಂ ಪ್ರಾಪಯಾಮೀತ್ಯುದೀರ್ಯ ಸಃ ।
ಗತ್ವಾ ವರಾಶ್ವಾನ್ ಸಂಯೋಜ್ಯ ಸಜ್ಜಂ ಚಕ್ರೇ ರಥೋತ್ತಮಮ್ ॥ ೩೭೧
ಸ್ವಯಂವರಪ್ರವಾದೋಽಯಂ ಜಾನೇ ಮತ್ಪ್ರಾಪ್ತಯೇ ತಯಾ ।
ಕೃತೋ ನ ದಮಯಂತೀ ತು ಸಾ ಸ್ವಪ್ನೇಽಪೀದೃಶೀ ಭವೇತ್ ॥ ೩೭೨
ತತ್ತ್ರ ತಾವದ್ಗಚ್ಛಾಮಿ ಪಶ್ಯಾಮೀತಿ ವಿಚಿಂತ್ಯ ಸಃ ।
ರಾಜ್ಞಸ್ತ್ವೃತುಪರ್ಣಸ್ಯ ಸಜ್ಜಂ ರಥಮುಪಾನಯತ್ ॥ ೩೭೩
ಆರೂಢೇ ಚ ನೃಪೇ ತಸ್ಮಿಂಸ್ತಂ ಸಂವಾಹಯಿತುಂ ರಥಮ್ ।
ನಲಃ ಪ್ರವವೃತೇ ತಾರ್ಕ್ಷ್ಯಜವಜೈತ್ರೇಣ ರಂಹಸಾ ॥ ೩೭೪
ರಥವೇಗಚ್ಯುತಂ ವಸ್ತ್ರಂ ಪ್ರಾಪ್ತುಂ ರಥವಿಧಾರಣಮ್ ।
ಬ್ರುವಾಣಮಥ ಮಾರ್ಗೇ ತಮೃತುಪರ್ಣಂ ನಲೋಽಬ್ರವೀತ್ ॥ ೩೭೫
ರಾಜನ್ ಕ್ವ ತವ ತದ್ವಸ್ತ್ರಮನೇನೈವ ಕ್ಷಣೇನ ಹಿ ।
ಬಹೂನಿ ಯೋಜನಾನ್ಯೇಷ ವ್ಯತಿಕ್ರಾಂತೋ ರಥಸ್ತವ ॥ ೩೭೬

೩೭೭. ಇದನ್ನು ಕೇಳಿ ಋತುಪರ್ಣನು ನಳನಿಗೆ ಹೇಳಿದನು: "ಒಳ್ಳೆಯದು ! ಈ ರಥವಿಜ್ಞಾನವನ್ನು ನನಗೆ ತಿಳಿಸಿಕೊಡು. ನಿನಗೆ ದಾಳದ ವಿಜ್ಞಾನವನ್ನು ನಾನು ತಿಳಿಸಿಕೊಡುತ್ತೇನೆ.

೩೭೮. ಅದರಿಂದ ದಾಳಗಳು ವಶವಾಗುತ್ತವೆ. ಮತ್ತು ಸಂಖ್ಯಾಜ್ಞಾನವೂ ಉಂಟಾಗುತ್ತದೆ. ಈಗಲೇ ನೋಡು. ನಿನ್ನ ನಂಬಿಕೆಗಾಗಿ ನನ್ನ ಸಂಖ್ಯಾಜ್ಞಾನವನ್ನು ತಿಳಿಸುತ್ತೇನೆ.

೩೭೯. ಮುಂಭಾಗದಲ್ಲಿ ಕಾಣುತ್ತಿರುವ ಆ ಮರದಲ್ಲಿ ಎಷ್ಟು ಹಣ್ಣುಗಳೂ ಎಲೆಗಳೂ ಇವೆ ಎಂದು ನಾನು ಈಗ ಹೇಳುತ್ತೇನೆ. ಮತ್ತೆ ನೀನು ಎಣಿಸಿ ಆ ಸಂಖ್ಯೆಯನ್ನು ತಾಳೆ ನೋಡು."

೩೮೦. ಹೀಗೆ ಹೇಳಿ ಋತುಪರ್ಣನು ಹಣ್ಣು ಮತ್ತು ಎಲೆಗಳ ಸಂಖ್ಯೆಯನ್ನು ಹೇಳಿದಾಗ ಅಷ್ಟೇ ಹಣ್ಣು ಮತ್ತು ಎಲೆಗಳು ಆ ಮರದಲ್ಲಿ ಇದ್ದದ್ದು ನಳನು ಎಣಿಸಿದಾಗ ತಿಳಿಯಿತು.

೩೮೧. ಅನಂತರ ನಳನು ಋತುಪರ್ಣನಿಗೆ ರಥವಿಜ್ಞಾನವನ್ನು ತಿಳಿಸಿಕೊಟ್ಟನು. ಋತುಪರ್ಣನೂ ನಳನಿಗೆ ದಾಳಗಳ ವಿಜ್ಞಾನವನ್ನು ತಿಳಿಸಿ ಕೊಟ್ಟನು.

೩೮೨. ನಳನು ಹೋಗಿ ಮತ್ತೊಂದು ವೃಕ್ಷದಲ್ಲಿ ಆ ಸಂಖ್ಯಾವಿಜ್ಞಾನವನ್ನು ಪರೀಕ್ಷಿಸಿದನು. ಅದರಿಂದ ಎಲೆ ಮುಂತಾದವುಗಳ ಸಂಖ್ಯೆಯ ಬಗ್ಗೆ ನಳನು ಚೆನ್ನಾಗಿ ತಿಳಿದುಕೊಂಡನು.

---

ಶ್ರುತ್ವೈತದೃತುಪರ್ಣಸ್ತಮುವಾದೀದಂಗ ದೇಹಿ ಮೇ ।
ರಥಜ್ಞಾನಮಿದಂ ತುಭ್ಯಮಕ್ಷಜ್ಞಾನಂ ದದಾಮ್ಯಹಮ್ ॥ ೩೭೭
ಯೇನ ವಶ್ಯಾ ಭವಂತ್ಯಕ್ಷಾಃ ಸಂಖ್ಯಾಜ್ಞಾನಂ ಚ ಜಾಯತೇ ।
ಸಂಪ್ರತ್ಯೇವ ಚ ಪಶ್ಯಾತ್ರ ವದಾಮಿ ಪ್ರತ್ಯಯಂ ತವ ॥ ೩೭೮
ದೃಶ್ಯತೇಽಗ್ರೇ ತರುರ್ಯೋಽಯಂ ಸಂಖ್ಯಾಮೇತಸ್ಯ ತೇಽಧುನಾ ।
ವಚ್ಮ್ಯಹಂ ಫಲಪರ್ಣಾನಾಂ ಗಣಯಿತ್ವಾ ಚ ಪಶ್ಯ ತಾಮ್ ॥ ೩೭೯
ಇತ್ಯುಕ್ತ್ವಾ ಫಲಪರ್ಣಾನಿ ಯಾವಂತ್ಯೇವ ಜಗಾದ ಸಃ ।
ನಲೇನ ಗಣಿತಾನ್ಯಾಸಂಸ್ತಾವಂತ್ಯೇವಾತ್ರ ಶಾಖಿನಃ ॥ ೩೮೦
ತತೋ ನಲೋ ರಥಜ್ಞಾನಮೃತುಪರ್ಣಾಯ ತದ್ದದೌ ।
ಋತುಪರ್ಣೋಽಪ್ಯದಾದಕ್ಷಜ್ಞಾನಂ ತಸ್ಮೈ ನಲಾಯ ತತ್ ॥ ೩೮೧
ಪರೀಕ್ಷತೇ ಸ್ಮ ತಜ್ಜ್ಞಾನಂ ನಲೋ ಗತ್ವಾಪರೇ ತರೌ ।
ಸಮ್ಯಕ್ಚ ಬುಬುಧೇ ಸಂಖ್ಯಾಪತ್ರಾದಿಷ್ವತ್ರ ತೇನ ಸಾ ॥ ೩೮೨

೩೮೩. ನಳನು (ಇದರಿಂದ) ಸಂತೋಷ ಪಡುತ್ತಿರುವಷ್ಟರಲ್ಲಿ ಅವನ ಶರೀರದಿಂದ ಕಪ್ಪನೆಯ ಒಬ್ಬ ಪುರುಷನು ಹೊರಗೆ ಬಂದನು. ನಳನು "ನೀನು ಯಾರು ?" ಎಂದು ಆ ಪುರುಷನನ್ನು ಕೇಳಿದನು.

೩೮೪. "ನಾನು ಕಲಿಯು. ದಮಯಂತಿಯು ವರಿಸಿದ ನಿನ್ನ ಶರೀರದೊಳಗೆ ಈರ್ಷ್ಯೆಯಿಂದ ನಾನು ಪ್ರವೇಶಿಸಿದೆ. ಅದರಿಂದಾಗಿ ನಿನ್ನ ಸಂಪತ್ತುಗಳು ದ್ಯೂತದಿಂದ ನಷ್ಟವಾದವು.

೩೮೫. ಅನಂತರ ಕಾಡಿನಲ್ಲಿ ನಿನ್ನನ್ನು ಕಚ್ಚಿದ ಆ ಕಾರ್ಕೋಟಕನಿಂದಾಗಿ ನೀನು ದಗ್ಧನಾಗಲಿಲ್ಲ. ಆದರೆ ನಾನು ನಿನ್ನಲ್ಲಿ ಇದ್ದು ದಗ್ಧನಾದೆ. ನೋಡು.

೩೮೬. ಏಕೆಂದರೆ ಸುಳ್ಳು ಸುಳ್ಳಾಗಿ ಬೇರೆಯವರಿಗೆ ಮಾಡಿದ ಅಪಕಾರವು ಯಾವನಿಗೆ ಸುಖ ತಂದೀತು ? ವತ್ಸನೇ ! ಆದುದರಿಂದ ನಾನು ಹೋಗುತ್ತೇನೆ. ನನಗಂತೂ ಬೇರೆಯವರಲ್ಲಿ ಅವಕಾಶವು ಇದ್ದೇ ಇದೆ."

೩೮೭. ಹೀಗೆ ಹೇಳಿ ಕಲಿಯು ಅಂತರ್ಧಾನ ಹೊಂದಿದನು. ನಳನಿಗೂ ಆ ಕ್ಷಣದಲ್ಲಿ ಹಿಂದಿನಂತೆ ಧರ್ಮದಲ್ಲಿ ಬುದ್ಧಿಯುಂಟಾಯಿತು. ಮತ್ತು ಅವನಿಗೆ ಮೊದಲಿನ ತೇಜಸ್ಸು ಬಂದಿತು.

೩೮೮. ನಂತರ ಅವನು ರಥವನ್ನು ಹತ್ತಿ ಅದೇ ದಿವಸ ವೇಗದಿಂದ ಋತುಪರ್ಣ ರಾಜನನ್ನು ವಿದರ್ಭದೇಶಕ್ಕೆ ತಲುಪಿಸಿದನು.

---

ತತೋ ಹೃಷ್ಯತಿ ಯಾವತ್ಸ ತಾವತ್ತಸ್ಯ ಶರೀರತಃ ।
ನಿರಗಾತ್ ಪುರುಷಃ ಕೃಷ್ಣಸ್ತಂ ಸ ಕೋಽಸೀತಿ ಪೃಷ್ಟವಾನ್ ॥ ೩೮೩
ಅಹಂ ಕಲಿಃ ಶರೀರಾಂತರ್ದಮಯಂತೀವೃತಸ್ಯ ತೇ ।
ಈರ್ಷ್ಯಯಾ ಪ್ರಾವಿಶಂ ತೇನ ಭ್ರಷ್ಟಾ ದ್ಯೂತೇನ ತೇ ಶ್ರಿಯಃ ॥ ೩೮೪
ತತಸ್ತ್ವಾಂ ದಶತಾ ತೇನ ಕಾರ್ಕೋಟೇನ ತದಾ ವನೇ ।
ನ ದಗ್ಧಸ್ತ್ವಮಹಂ ತ್ವೇಷ ಪಶ್ಯ ದಗ್ಧಸ್ತ್ವಯಿ ಸ್ಥಿತಃ ॥ ೩೮೫
ಮಿಥ್ಯಾ ಪರಾಪಕಾರೋಹಿ ಕೃತಃ ಸ್ಯಾತ್ಕಸ್ಯ ಶರ್ಮಣೇ ।
ತದ್ಗಚ್ಛಾಮ್ಯವಕಾಶೋ ಹಿ ನಾಸ್ತ್ಯನ್ಯೇಷು ನ ವತ್ಸ ಮೇ ॥ ೩೮೬
ಇತ್ಯುಕ್ತ್ವಾ ಸ ಕಲಿಸ್ತಸ್ಯ ತಿರೋಽಭೂತ್ಸೋಽಪಿ ತತ್ ತ್ಕ್ಷಣಮ್ ।
ಜಾತಧರ್ಮಮತಿಃ ಪ್ರಾಪ್ತತೇಜಾಃ ಪ್ರಾಗ್ವದಭೂನ್ನಲಃ ॥ ೩೮೭
ಆಗತ್ಯ ಚಾರುಹ್ಯ ರಥಂ ತಸ್ಮಿನ್ನೇವಾಹ್ನಿ ತಂ ಜವಾತ್ ।
ವಿದರ್ಭಾನೃತುಪರ್ಣಂ ತಂ ಪ್ರಾಪಯಾಮಾಸ ಭೂಪತಿಮ್ ॥ ೩೮೮

೩೭೯. ಅವನು ಅಲ್ಲಿ ಬಂದ ಕಾರಣವನ್ನು ಕೇಳಿದ ಜನರು ಋತುಪರ್ಣ ರಾಜನನ್ನು ಉಪಹಾಸ ಮಾಡುತ್ತಿರಲು ಅವನು ರಾಜಗೃಹದ ಬಳಿ ಉಳಿದುಕೊಂಡನು.

೩೮೦. ಅದ್ಭುತವಾದ ಆ ರಥದ ಧ್ವನಿಯನ್ನು ಕೇಳಿದ ದಮಯಂತಿಯು ಅಲ್ಲಿ ರಾಜನು ಬಂದಿರುವುದನ್ನು ತಿಳಿದು ಅವನೊಡನೆ ನಳನು ಬಂದಿರುವನೆಂದು ಊಹಿಸಿ ಮನಸ್ಸಿನೊಳಗೆ ಹರ್ಷಗೊಂಡಳು.

೩೮೧. ಅನಂತರ ದಮಯಂತಿಯು ಸತ್ಯವನ್ನು ತಿಳಿಯಲು ತನ್ನ ಚೇಟಿಯನ್ನು ಕಳುಹಿಸಿದಳು. ವಿಚಾರಿಸಿ ಹಿಂದಿರುಗಿದ ಚೇಟಿಯು ಪ್ರಿಯನ ಬಗ್ಗೆ ಉತ್ಕಂಠಿತಳಾದ ದಮಯಂತಿಗೆ ಹೇಳಿದಳು.

೩೮೨. "ದೇವಿಯೇ ! ಹೋಗಿ ನಾನು ಹುಡುಕಿದೆನು. ಈ ಕೋಶಲೇಶ್ವರನು ನಿನ್ನ ಸುಳ್ಳಾದ ಸ್ವಯಂವರದ ಪ್ರವಾದವನ್ನು ಕೇಳಿ ಇಲ್ಲಿಗೆ ಬಂದಿದ್ದಾನೆಯಷ್ಟೆ

೩೮೩. ರಥವಿಜ್ಞಾನಶಾಲಿಯ ಪಾಚಕನೂ ಆದ ಹ್ರಸ್ವಬಾಹುವೆಂಬ ಸಾರಥಿಯು ಇಂದು ಒಂದೇ ದಿನದಲ್ಲಿ ಅವನನ್ನು ಇಲ್ಲಿಗೆ ಕರೆತಂದಿದ್ದಾನೆ.

೩೮೪. ನಾನು ಅವನ ಪಾಕಶಾಲೆಯಲ್ಲಿ ಹೋಗಿ ಆ ಪಾಚಕನನ್ನು ನೋಡಿದೆನು. ಅವನು ಕಪ್ಪಾಗಿದ್ದು ಕುರೂಪಿಯಾಗಿದ್ದಾನೆ. ಆದರೆ ಅವನ ಪ್ರಭಾವವು ಅನಿರ್ವಚನೀಯವಾದುದು.

---

ಸ ಚೋಪಹಸ್ಯಮಾನೋಽತ್ರ ಪೃಷ್ಟಾಗಮನಕಾರಣೈಃ ।
ಋತುಪರ್ಣೋ ಜನೈ ರಾಜಗೃಹಾಸನ್ನೇ ಸಮಾವಸತ್ ॥ ೩೭೯
ಪ್ರಾಪ್ತಂ ತಂ ತತ್ರ ಬುದ್ಧ್ವಾ ಸಾ ಶ್ರುತಾಶ್ಚರ್ಯರಥಸ್ವನಾ ।
ದಮಯಂತೀ ಜಹರ್ಷಾಂತಃ ಸಂಭಾವಿತನಲಾಗಮಾ ॥ ೩೮೦
ವಿಸಸರ್ಜಾಥ ಸಾ ತತ್ತ್ವಮನ್ವೇಷ್ಟುಂ ಚೇಟಿಕಾಂ ನಿಜಾಮ್ ।
ಸಾ ಚಾನ್ವಿಷ್ಯಾಗತಾ ಚೇಟೀ ತಾಮುವಾಚ ಪ್ರಿಯೋತ್ಸುಕಾಮ್ ॥ ೩೮೧
ದೇವಿ ಗತ್ವಾ ಮಯಾನ್ವಿಷ್ಟಮೇಷ ಯಃ ಕೋಶಲೇಶ್ವರಃ ।
ಸ್ವಯಂವರಪ್ರವಾದಂ ತೇ ಮಿಥ್ಯಾ ಶ್ರುತ್ವಾ ಕಿಲಾಗತಃ ॥ ೩೮೨
ಆನೀತೋ ರಥವಾಹೇನ ಸೂದೇನ ಹ್ರಸ್ವಬಾಹುನಾ ।
ಏಕೇನೈವ ದಿನೇನಾದ್ಯ ರಥವಿಜ್ಞಾನಶಾಲಿನಾ ॥ ೩೮೩
ಸ ಚ ತತ್ಸೂದಶಾಲಾಯಾಂ ಗತ್ವಾ ಸೂದೋ ಮಯೇಕ್ಷಿತಃ ।
ಕೃಷ್ಣವರ್ಣೋ ವಿರೂಪಶ್ಚ ಪ್ರಭಾವಃ ಕೋಽಪಿ ತಸ್ಯ ತು ॥ ೩೮೪

೩೯೫. ಅವನು ನೀರನ್ನು ಹಾಕದಿದ್ದರೂ ಅನ್ನಗಳಲ್ಲಿ ನೀರು ಉಕ್ಕಿ ಬರುತ್ತಿತ್ತು. ಮತ್ತು ಬೆಂಕಿಯನ್ನು ಸೋಕಿಸದಿದ್ದರೂ ಸೌದೆಗಳು ತಾವೇ ಪ್ರಜ್ವಲಿತವಾಗುತ್ತಿದ್ದವು.

೩೯೬. ಮತ್ತು ಕ್ಷಣಮಾತ್ರದಲ್ಲಿ ದಿವ್ಯವಾದ ರೀತಿಯಲ್ಲೇ ಆಯಾ ಭೋಜನ ವಸ್ತುಗಳು ತಯಾರಾಗುತ್ತಿದ್ದವು. ಈ ದೊಡ್ಡ ಆಶ್ಚರ್ಯವನ್ನು ನೋಡಿ ಅಲ್ಲಿಂದ ಇಲ್ಲಿಗೆ ನಾನು ಬಂದೆನು."

೩೯೭–೩೯೮. ಚೇಟಿಯ ಬಾಯಿಂದ ಇದನ್ನು ಕೇಳಿ ದಮಯಂತಿಯು ಆಲೋಚಿಸಿದಳು. "ಅಗ್ನಿ ಮತ್ತು ವರುಣರನ್ನು ವಶಮಾಡಿಕೊಂಡಿರುವವನೂ ರಥವಿದ್ಯೆಯ ರಹಸ್ಯವನ್ನು ತಿಳಿದಿರುವವನೂ ಆದ ಪಾಚಕನು ಆರ್ಯಪುತ್ರನೇ ಸರಿ. ಇವನು ನನ್ನ ವಿಯೋಗದಿಂದ ಪೀಡಿತನಾದ ಕಾರಣ ಅನ್ಯಥಾ ಕುರೂಪವನ್ನು ಹೊಂದಿದ್ದಾನೆಂದು ಭಾವಿಸುತ್ತೇನೆ. ಆದರೂ ಅವನ ಬಗ್ಗೆ ವಿಚಾರ ಮಾಡುತ್ತೇನೆ.'

೩೯೯. ಹೀಗೆ ಸಂಕಲ್ಪ ಮಾಡಿ ದಮಯಂತಿಯು ಅದೇ ಚೇಟಿಯೊಡನೆ ಯುಕ್ತಿಯಿಂದ ನಳನನ್ನು ತೋರಿಸು ಎಂದು ತನ್ನ ಇಬ್ಬರು ಮಕ್ಕಳನ್ನು ಆ ನಳನ ಬಳಿಗೆ ಕಳುಹಿಸಿದಳು.

೪೦೦. ನಳನು ತನ್ನ ಆ ಇಬ್ಬರು ಮಕ್ಕಳನ್ನು ನೋಡಿ ಮಡಿಲಲ್ಲಿ ಎತ್ತಿಕೊಂಡು ಧಾರಾಪ್ರವಾಹರೂಪವಾಗಿ ಕಣ್ಣೀರು ಸುರಿಸುತ್ತಾ ಬಹಳ ಕಾಲ ಸುಮ್ಮನೆ ಅಳುತ್ತಿದ್ದನು.

---

ಅಕ್ಷಿಪ್ತಮೇವ ಯತ್ತಸ್ಯ ಪಾನೀಯಂ ಚರುಷೂದ್ಗತಮ್ ।
ಕಾಷ್ಠಾನ್ಯನರ್ಪಿತಾಗ್ನೀನಿ ಸ್ವಯಂ ಪ್ರಜ್ವಲಿತಾನಿ ಚ ॥ ೩೯೫
ಕ್ಷಣಾಚ್ಚ ಭೋಜನೈಸ್ತೈಸ್ತೈರ್ನಿಷ್ಪನ್ನಂ ದಿವ್ಯಮೇವ ಚ ।
ಏತದ್ದೃಷ್ಟ್ವಾ ಮಹಾಶ್ಚರ್ಯಂ ತತಶ್ಚಾಹಮಿಹಾಗತಾ ॥ ೩೯೬
ಏತಚ್ಚೇಟೀಮುಖಾಚ್ಛ್ರುತ್ವಾ ದಮಯಂತೀ ವ್ಯಚಿಂತಯತ್ ।
ವಶ್ಯಾಗ್ನಿವರುಣಃ ಸೂದೋ ರಥವಿದ್ಯಾರಹಸ್ಯವಿತ್ ॥ ೩೯೭
ಆರ್ಯಪುತ್ರೋ ಭವತ್ಯೇಷ ಗತೋ ವೈರೂಪ್ಯಮನ್ಯಥಾ ।
ಜಾನೇ ಮದ್ವಿಪ್ರಯೋಗಾರ್ತಂ ಜಿಜ್ಞಾಸೇಽಹಂ ತದಪ್ಯಮುಮ್ ॥ ೩೯೮
ಇತಿ ಸಂಕಲ್ಪ್ಯ ಯುಕ್ತ್ಯಾ ಸ್ವೌ ಸಹ ಚೇಟ್ಯಾ ತಯೈವ ಸಾ ।
ತಸ್ಯಾಂತಿಕಂ ದರ್ಶಯಿತುಂ ಪ್ರಾಹಿಣೋದ್ದಾರಕಾವುಭೌ ॥ ೩೯೯
ಸ ತೌ ನಿಜಶಿಶೂ ದೃಷ್ಟ್ವಾ ಕೃತ್ವಾ ಚಾಂಕೇ ನಲಶ್ಚಿರಮ್ ।
ಬದ್ಧಧಾರಾಪ್ರವಾಹೇಣ ತೂಷ್ಣೀಮರುದದಶ್ರುಣಾ ॥ ೪೦೦

೪೦೧. ಮತ್ತು ಅವನು "ಹೀಗೆಯೇ ಇದ್ದ ನನ್ನ ಇಬ್ಬರು ಬಾಲಕರು ಮಾತಾಮಹನ ಮನೆಯಲ್ಲಿ ಇದ್ದರು. ಅವರ ಸ್ಮರಣೆ ಬಂದು ನನಗೆ ದುಃಖವುಂಟಾಯಿತು" ಎಂದು ಚೇಟಿಗೆ ಹೇಳಿದನು.

೪೦೨. ಚೇಟಿಯು ಮಕ್ಕಳೊಡನೆ ಬಂದು ಅದೆಲ್ಲವನ್ನೂ ದಮಯಂತಿಗೆ ಹೇಳಿದಳು. ದಮಯಂತಿಗೆ ಸಂಪೂರ್ಣವಾಗಿ ನಂಬಿಕೆ ಬಂದಿತು.

೪೦೩–೪೦೪. ಮಾರನೆಯ ದಿವಸ ಪ್ರಾತಃಕಾಲದಲ್ಲಿ ದಮಯಂತಿಯು ತನ್ನ ಚೇಟಿಯನ್ನು ಕುರಿತು, "ಹೋಗಿ ಋತುಪರ್ಣನ ಪಾಚಕನಿಗೆ ನಾನು ಹೇಳಿದೆನೆಂದು ಹೇಳು. ನಿನಗೆ ಸಮಾನನಾದ ಅಡಿಗೆಯವನು ಮತ್ತೊಬ್ಬನು ಇಲ್ಲವೆಂದು ನಾನು ಕೇಳಿದ್ದೇನೆ ಆದುದರಿಂದ ಇಂದು ನೀನು ಬಂದು ನನಗೆ ವ್ಯಂಜನವನ್ನು ಮಾಡಿಕೊಡು" ಎಂದು ಹೇಳಲು ಆದೇಶ ಮಾಡಿದಳು.

೪೦೫. ಚೇಟಿಯು ಅದೇ ರೀತಿ ನಳನನ್ನು ಪ್ರಾರ್ಥಿಸಿದಾಗ ನಳನು ಹಾಗೆಯೇ ಆಗಲೆಂದು ಋತುಪರ್ಣನ ಆದೇಶವನ್ನು ಪಡೆದು ದಮಯಂತಿಯ ಬಳಿಗೆ ಹೋದನು.

೪೦೬. ಆಗ ದಮಯಂತಿಯು "ನೀನು ಪಾಚಕನ ರೂಪವನ್ನು ಧರಿಸಿರುವ ರಾಜನಾದ ನಳನೇ ಆಗಿದ್ದಲ್ಲಿ ಸತ್ಯವನ್ನು ಹೇಳು. ಚಿಂತಾಸಾಗರದಲ್ಲಿ ಮುಳುಗಿರುವ ನನ್ನನ್ನು ಇಂದು ದಡಕ್ಕೆ ಮುಟ್ಟಿಸು" ಎಂದು ಹೇಳಿದಳು.

---

ಈದೃಶಾವೇವ ಮೇ ಬಾಲೌ ಮಾತಾಮಹಗೃಹೇ ಸ್ಥಿತೌ ।
ಜಾತಂ ಮೇ ತತ್ಸ್ಮೃತೇರ್ದುಃಖಮಿತ್ಯುವಾಚ ಚ ಚೇಟಿಕಾಮ್ ॥ ೪೦೧
ಸಾ ಶಿಶುಭ್ಯಾಂ ಸಹಾಗತ್ಯ ಚೇಟೀ ಸರ್ವಂ ಶಶಂಸ ತತ್ ।
ದಮಯಂತ್ಯೈ ತತಃ ಸಾಪಿ ಜಾತಾಸ್ಥಾ ಸುತರಾಮಭೂತ್ ॥ ೪೦೨
ಅಪರೇದ್ಯುಶ್ಚ ತಾಂ ಪ್ರಾತಃ ಸ್ವಚೇಟೀಮಾದಿದೇಶ ಸಾ ।
ಗತ್ವಾ ತಮೃತುಪರ್ಣಸ್ಯ ಸೂದಂ ವದ್ವಚನಾದ್ವದ ॥ ೪೦೩
ಶ್ರುತಂ ಮಯಾ ಯದ್ಭವತಾ ತುಲ್ಯೋ ನಾನ್ಯೋಽಸ್ತಿ ಸೂಪಕೃತ್ ।
ತನ್ಮಮಾದ್ಯ ತ್ವಯಾಗತ್ಯ ವ್ಯಂಜನಂ ಸಾಧ್ಯತಾಮಿತಿ ॥ ೪೦೪
ತಥೇತಿ ಸ ತದಾ ಗತ್ವಾ ನಲಶ್ಚೇಟ್ಯಾ ತಯಾರ್ಥಿತಃ ।
ಋತುಪರ್ಣಮನುಜ್ಞಾಪ್ಯ ದಮಯಂತೀಮುಪಾಯಯೌ ॥ ೪೦೫
ಸತ್ಯಂ ಬ್ರೂಹಿ ನಲೋ ರಾಜಾ ಯದಿ ತ್ವಂ ಸೂದರೂಪಭೃತ್ ।
ಚಿಂತಾಬ್ಧಿಮಗ್ನಾಂ ಪಾರಂ ಮಾಂ ಪ್ರಾಪಯಾದ್ಯೇತ್ಯುವಾಚ ಸಾ ॥ ೪೦೬

೪೦೭. ಅದನ್ನು ಕೇಳಿ ನಳನು ಪ್ರೀತಿ, ಸಂತೋಷ, ದುಃಖ, ಲಜ್ಜೆಗಳಿಂದ ವ್ಯಾಕುಲನಾಗಿ ಮುಖವನ್ನು ತಗ್ಗಿಸಿ ಕಣ್ಣೀರಿನಿಂದ ಗದ್ಗದವಾದ ಸ್ವರದಲ್ಲಿ ಕಾಲೋಚಿತವಾಗಿ ಅವಳಿಗೆ ಹೇಳಿದನು.

೪೦೮. "ಸತ್ಯವಾಗಿಯೂ ಅದೇ ನಳನು ನಾನು. ವಜ್ರದಂತೆ ಕರ್ಕಶನೂ ಪಾಪಿಯೂ ಆದ ನಾನು, ನಿನ್ನನ್ನು ಸಂತಾಪಪಡಿಸುತ್ತಾ ವ್ಯಾಮೋಹದಿಂದ ಅನಲದಂತೆ (ನಳನಲ್ಲದವನಂತೆ–ಬೆಂಕಿಯಂತೆ) ನಡೆದುಕೊಂಡೆ.

೪೦೯. ಹೀಗೆ ಹೇಳಿದ ನಳನನ್ನು ದಮಯಂತಿಯು "ಹಾಗಾದರೆ ನೀನು ಈ ಸ್ವರೂಪವನ್ನು ಹೇಗೆ ಪಡೆದೆ ?" ಎಂದು ಪ್ರಶ್ನಿಸಿದಳು.

೪೧೦. ಆಗ ನಳನು ದಮಯಂತಿಗೆ ಕಾರ್ಕೋಟನ ಸ್ನೇಹ ಮೊದಲುಗೊಂಡು ಕಲಿಯು ಹೋದ ಪರ್ಯಂತ ನಡೆದ ತನ್ನ ಸಂಪೂರ್ಣ ವೃತ್ತಾಂತವನ್ನು ಹೇಳಿದನು.

೪೧೧. ಮತ್ತೆ ನಳನು ಕಾರ್ಕೋಟಕನು ಕೊಟ್ಟಿದ್ದ ಅಗ್ನಿಶೌಚವೆಂಬ ಆ ಎರಡು ವಸ್ತ್ರಗಳನ್ನು ಆಗಲೇ ಹೊದ್ದುಕೊಂಡು ತನ್ನ ನಿಜವಾದ ರೂಪವನ್ನು ಹೊಂದಿದನು.

೪೧೨. ಮತ್ತೆ ತನ್ನ ಸುಂದರ ರೂಪವನ್ನು ಪಡೆದ ನಳನನ್ನು ನೋಡಿದ ದಮಯಂತಿಯ ಮುಖಕಮಲವು ಅರಳಿತು. ಅವಳ ಕಣ್ಣೀರಿನಿಂದ ಅವಳ ದುಃಖದ ಕಾಳ್ಗಿಚ್ಚು ಆರಿತೋ ಎಂಬಂತೆ ಅವಳು ಎಣೆಯಿಲ್ಲದ ಹಾಗೂ ಅನಿರ್ವಚನೀಯವಾದ ಸಂತೋಷವನ್ನು ಹೊಂದಿದಳು.

---

ತಚ್ಛ್ರುತ್ವಾ ಸ ನಲಃ ಸ್ನೇಹಹರ್ಷದುಃಖತ್ರಪಾಕುಲಃ ।
ಅವಾಙ್ಮುಖಃ ಪ್ರಾಪ್ತಕಾಲಂ ತಾಮುವಾಚಾಶ್ರುಗದ್ಗದಮ್ ॥ ೪೦೭

ಸ ಏವಾಸ್ಮಿ ನಲಃ ಸತ್ಯಂ ಪಾಪಃ ಕುಲಿಶಕರ್ಕಶಃ ।
ತ್ವಾಂ ಸಂತಾಪಯತಾ ಯೇನ ವ್ಯಾಮೋಹಾದನಲಾಯಿತಮ್ ॥ ೪೦೮

ಇತ್ಯುಕ್ತವಾನ್ ಸ ಪೃಷ್ಟೋಽಭೂದ್ದಮಯಂತ್ಯಾ ತಯಾ ನಲಃ ।
ಯದ್ಯೇವಂ ತರ್ಹ್ಯರೂಪತ್ವಂ ಕಥಂ ಪ್ರಾಪ್ತೋ ಭವಾನಿತಿ ॥ ೪೦೯

ತತಃ ಸ ತಸ್ಯೈ ಸ್ವೋದಂತಂ ನಲಃ ಕೃತ್ಸ್ನಮವರ್ಣಯತ್ ।
ಕಾರ್ಕೋಟಸಖ್ಯಾದಾರಭ್ಯ ಕಲಿನಿರ್ಗಮನಾವಧಿಮ್ ॥ ೪೧೦

ತದೈವ ಚಾಗ್ನಿಶೌಚಂ ತದ್ದತ್ತಂ ಕಾರ್ಕೋಟಕೇನ ಸಃ ।
ಪ್ರಾವೃತ್ಯ ವಸ್ತ್ರಯುಗಲಂ ರೂಪಂ ಸ್ವಂ ಪ್ರತ್ಯಪದ್ಯತ ॥ ೪೧೧

ದೃಷ್ಟ್ವಾ ನಲಂ ಪುನರವಾಪ್ತನಿಜಾಭಿರಾಮ
ರೂಪಂ ತಮಾಶು ವಿಕಸದ್ವದನಾರವಿಂದಾ ।
ನೇತ್ರಾಂಬುಭಿಃ ಶಮಿತದುಃಖದವಾನಲೇವ
ಹರ್ಷಂ ಕಮಪ್ಯನುಪಮಂ ದಮಯಂತ್ಯವಾಪ ॥ ೪೧೨

೪೧೩. ವಿದರ್ಭದೇಶದ ರಾಜನಾದ ಭೀಮನು ಸಂತೋಷದಿಂದ ನಲಿಯುತ್ತಿದ್ದ ಅವಳ ಪರಿಜನರಿಂದ ವಿಷಯ ತಿಳಿದು ಶೀಘ್ರವಾಗಿ ಅಲ್ಲಿಗೆ ಬಂದು ನಳನನ್ನು ಅಭಿನಂದಿಸಿ ಅವನಿಗೆ ಅನುರೂಪವಾದ ಸತ್ಕಾರವನ್ನು ಮಾಡಿ ತನ್ನ ಪಟ್ಟಣದಲ್ಲಿ ಎಲ್ಲ ಕಡೆ ಉತ್ಸವವು ನಡೆಯುವಂತೆ ಮಾಡಿದನು.

೪೧೪. ಮನಸ್ಸಿನಲ್ಲೇ ನಗುತ್ತಿದ್ದ ಭೀಮರಾಜನಿಂದ ಗುಪ್ತವಾಗಿ ಉಪಚಾರ, ಸತ್ಕಾರಗಳನ್ನು ಪಡೆದ ಋತುಪರ್ಣರಾಜನೂ ನಳನನ್ನು ಸತ್ಕರಿಸಿ ನಂತರ ಕೋಶಲದೇಶಕ್ಕೆ ಹೋದನು.

೪೧೫. ಅನಂತರ ನಿಷಧದೇಶದ ರಾಜನಾದ ನಳನು ಕಲಿಯ ದೌರ್ಜನ್ಯದಿಂದ ತನಗಾದ ಸಂಭವಗಳನ್ನು ಮಾವನಿಗೆ ತಿಳಿಸುತ್ತಾ ಪ್ರಾಣಸಮಳಾದ ದಮಯಂತಿಯೊಡನೆ ಸುಖವಾಗಿ ವಾಸಿಸುತ್ತಿದ್ದನು.

೪೧೬. ಕೆಲವು ದಿವಸಗಳಾದ ಮೇಲೆ ನಳನು ಮಾವನಿಗೆ ಸೇರಿದ ಸೈನ್ಯಗಳೊಡನೆ ನಿಷಧ ದೇಶಕ್ಕೆ ಹೋದನು. ಅಲ್ಲಿ ಮತ್ತೆ ತನ್ನ ತಮ್ಮನಾದ ಪುಷ್ಕರನನ್ನು ಪಗಡೆಯ ವಿಜ್ಞಾನದಿಂದ ಗೆದ್ದು ಅಡಗಿಸಿದನು. ಆದರೆ ಧರ್ಮಾತ್ಮನಾದ ನಳನು ತಮ್ಮನಿಗೆ ತನ್ನ ರಾಜ್ಯವನ್ನು ಸಮಪಾಲು ಮಾಡಿಕೊಟ್ಟನು. ಪುಷ್ಕರನ ದೇಹದಿಂದ ದ್ವಾಪರನು ಹೊರಟು ಹೋದನು. ದಮಯಂತಿಯನ್ನು ಪಡೆದುದರಿಂದ ಸುಖಿಯಾದ ನಳನು ಎಂದಿನಂತೆ ತನ್ನ ರಾಜ್ಯವನ್ನು ಅನುಭವಿಸಿದನು."

---

ಬುದ್ಧ್ವಾ ಚ ತತ್ಪುಜನಾತ್ಪ್ರಮುದಪ್ರವೃತ್ತಾ
ದಾಗತ್ಯ ತತ್ರ ಸಹಸಾ ಸ ವಿದರ್ಭರಾಜಃ ।
ಭೀಮೋ ನಲಂ ಸಮಭಿನಂದ್ಯ ಕೃತಾನುರೂಪ
ಪೂಜಂ ಮಹೋತ್ಸವಮಯಂ ಸ್ವಪುರಂ ಚಕಾರ ॥ ೪೧೩

ಹಸತಾ ಹೃದಿ ಭೀಮಭೂಭುಜಾ ಕೃತಸಂವೃತ್ಯುಪಚಾರಸತ್ಕ್ರಿಯಃ ।
ಋತುಪರ್ಣನೃಪೋಽಪಿ ತಂ ನಲಂ ಪ್ರತಿಪೂಜ್ಯಾಥ ಜಗಾಮ ಕೋಶಲಾನ್ ॥
೪೧೪

ಅಥ ನಿಷಧನರೇಶ್ವರೋ ನಿಜಂ ಕಲಿದೌರಾತ್ಮ್ಯವಿಜೃಂಭಿತಂ ನಲಃ ।
ಶ್ವಶುರಾಯ ಸ ತತ್ರ ವರ್ಣಯನ್ನವಸತ್ಪ್ರಾಣಸಮಾಸಖಃ ಸುಖಮ್ ॥
೪೧೫

ಗತ್ವಾಲ್ಪೈಶ್ಚ ದಿನೈಸ್ತತಃ ಸ ನಿಷಧಾನ್ ಸೈನ್ಯೈಃ ಸಹ ಶ್ವಾಶುರೈ
ರಕ್ಷಜ್ಞಾನಜಿತಂ ವಿಧಾಯ ವಿನತಂ ತಂ ಪುಷ್ಕರಾಖ್ಯಂ ಪುನಃ ।
ಧರ್ಮಾತ್ಮಾ ಕೃತಸಂವಿಭಾಗಮನುಜಂ ದೇಹಾದ್ಗತದ್ವಾಪರಂ
ರಾಜ್ಯಂ ಸ್ವಂ ದಮಯಂತ್ಯವಾಪ್ತಿಸುಖಿತೋ ಭೇಜೇ ಯಥಾವನ್ನಲಃ ॥ ೪೧೬

೪೧೭ ತಾರಾಪುರದಲ್ಲಿ ಬ್ರಾಹ್ಮಣ ಸುಮನನು ಹೀಗೆ ಕಥೆಯನ್ನು ಹೇಳಿ, ಪತಿಯು ಪರಸ್ಥಳಕ್ಕೆ ಪ್ರವಾಸ ಮಾಡಿದುದರಿಂದ ನೊಂದಿದ್ದ ರಾಜಪುತ್ರಿಯಾದ ಬಂಧುಮತಿಯನ್ನು ಕುರಿತು ಮತ್ತೆ ಹೇಳಿದನು.

೪೧೮. "ದೇವಿಯೇ ! ಹೀಗೆ ಮಹಾಪುರುಷರು ದುಃಖವನ್ನು ಸಹಿಸಿ ಕೊನೆಗೆ ಶುಭವನ್ನು ಹೊಂದುತ್ತಾರೆ. ಅಸ್ತಮನವನ್ನು ಅನುಭವಿಸಿ ಸೂರ್ಯ ಮೊದಲಾದವರು ಮತ್ತೆ ಉದಯವನ್ನು ಹೊಂದುತ್ತಾರೆಯಷ್ಟೆ

೪೧೯. ಆದುದರಿಂದ ಪಾಪರಹಿತಳೇ ! ನಿನ್ನ ಪತಿಯು ಶೀಘ್ರವಾಗಿ ಪ್ರವಾಸದಿಂದ ಹಿಂದಿರುಗಿ ಬರುತ್ತಾನೆ. ಅವನನ್ನು ನೀನು ಸೇರುವೆ. ಧೈರ್ಯವನ್ನು ಅವಲಂಬಿಸು. ನಿರುತ್ಸಾಹವನ್ನು ದೂರವಿಡು. ಮತ್ತು ಪತಿಯನ್ನು ಸೇರುವುದರಿಂದ ಉಂಟಾಗುವ ಇಷ್ಟಾರ್ಥದ ಲಾಭಗಳಿಂದ ವಿಹರಿಸು."

೪೨೦. ಹೀಗೆ ಯುಕ್ತವಾದ ಮಾತನ್ನು ಹೇಳಿದ ಸದ್ಗುಣವಂತನಾದ ಆ ಬ್ರಾಹ್ಮಣನನ್ನು ಯಥೇಷ್ಟವಾದ ಧನದಿಂದ ಸತ್ಕರಿಸಿ ಬಂಧುಮತಿಯು ಧೈರ್ಯವನ್ನು ಅವಲಂಬಿಸಿ ತನ್ನ ಪ್ರಿಯನನ್ನು ಪ್ರತೀಕ್ಷೆ ಮಾಡುತ್ತಾ ಅಲ್ಲಿಯೇ ಇದ್ದಳು.

೪೨೧. ಕೆಲವೇ ದಿವಸಗಳಲ್ಲಿ ಅವಳ ಪತಿಯಾದ ಮಹೀಪಾಲನು ದೇಶಾಂತರದಲ್ಲಿದ್ದ ತಾಯಿಯನ್ನು ಕರೆದುಕೊಂಡು ತಂದೆಯೊಡನೆ ಬಂದನು.

---

ಇತಿ ಸ ವ್ಯಾಖ್ಯಾಯ ಕಥಾಂ ನಗರೇ ತಾರಾಪುರೇ ದ್ವಿಜಃ ಸುಮನಾಃ ।
ರಾಜಸುತಾಂ ಬಂಧುಮತೀಂ ಪ್ರೋಷಿತಪತಿಕಾಮುವಾಚ ತಾಂ ಭೂಯಃ ॥
೪೧೭

ಏವಂ ದೇವಿ ಮಹಾಂತೋ ವಿಷಹ್ಯ ದುಃಖಂ ಭಜಂತಿ ಕಲ್ಯಾಣಮ್ ।
ಅನುಭೂಯಾಸ್ತಮನಂ ಕಿಲ ದಿನಕೃತ್ಪ್ರಮುಖಾ ವ್ರಜಂತ್ಯುದಯಮ್ ॥
೪೧೮

ತಸ್ಮಾತ್ ತ್ವಮಪಿ ತಮಾಪ್ಸ್ಯಸಿ ಪತಿಮನಘೇ ಪ್ರೋಷಿತಾಗತಂ ನ ಚಿರಾತ್ ।
ಕುರುಧೃತಿಮರತಿಂ ಪರಿಹರ ವಿಹರ ಚ ಪತಿಕಾಮನಾಲಾಭೈಃ ॥ ೪೧೯
ಇತಿ ತಂ ದ್ವಿಜಮುಕ್ತಯುಕ್ತವಾಕ್ಯಂ ಬಹುನಾಭ್ಯರ್ಚ್ಯ ಧನೇನ ಸದ್ಗುಣಂ ಸಾ ।
ಅವಲಂಬ್ಯ ಧೃತಿಂ ಪ್ರತೀಕ್ಷಮಾಣಾ ದಯಿತಂ ಬಂಧುಮತೀ ಸ್ವಮತ್ರ ತಸ್ಥೌ ॥
೪೨೦

ಅಲ್ಪೈರೇವ ಚ ತಸ್ಯಾ ದಿನೈಃ ಸ ಪತಿರಾಯಯೌ ಮಹೀಪಾಲಃ ।
ದೇಶಾಂತರೇ ಸ್ಥಿತಾಂ ತಾಂ ಜನನೀಮಾದಾಯ ಪಿತೃಸಹಿತಃ ॥ ೪೨೧

೪೨೨. ಅವನು ಬಂದು ಪೂರ್ಣಿಮೆಯ ಚಂದ್ರನು ಸಮುದ್ರದ ಜಲಲಕ್ಷ್ಮಿಯನ್ನು ಮುದಗೊಳಿಸುವಂತೆ ಜನರ ಕಣ್ಣುಗಳಿಗೆ ಹಬ್ಬವನ್ನು ಉಂಟುಮಾಡುತ್ತಾ ಬಂಧುಮತಿಯನ್ನು ಸಂತೋಷಪಡಿಸಿದನು.

೪೨೩. ಅನಂತರ ಆ ತಾರಾಪುರದಲ್ಲಿ ಬಂಧುಮತಿಯೊಡನೆ ಮಹೀಪಾಲನು ರಾಜನಾಗಿ ಅವಳ ತಂದೆಯು ಹಿಂದೆ ಕೊಟ್ಟ ರಾಜ್ಯವನ್ನು ನಿರ್ವಹಿಸುತ್ತಾ ಇಷ್ಟವಾದ ಭೋಗಗಳನ್ನು ಅನುಭವಿಸಿದನು.

೪೨೪. ಹೀಗೆ ತನ್ನ ಮಂತ್ರಿಯಾದ ಮರುಭೂತಿಯ ಮುಖದಿಂದ ಆಶ್ಚರ್ಯಕರವೂ ಅಸದೃಶವೂ ಅನುರಾಗದಿಂದ ರಮಣೀಯವೂ ಆದ ಕಥೆಯನ್ನು ಕೇಳಿ ವತ್ಸರಾಜನ ಪುತ್ರನಾದ ನರವಾಹನದತ್ತ ದೇವನು ರಾಣಿಯಾದ ಅಲಂಕಾರವತಿಯೊಡಗೂಡಿ ಅತ್ಯಂತ ಸಂತೋಷವನ್ನು ಅನುಭವಿಸಿದನು.

ಇಲ್ಲಿಗೆ ಮಹಾಕವಿ ಶ್ರೀ ಸೋಮದೇವಭಟ್ಟನು ವಿರಚಿಸಿದ

ಕಥಾಸರಿತ್ಸಾಗರದ

ಅಲಂಕಾರವತೀಲಂಬಕದಲ್ಲಿ ಆರನೆಯ ತರಂಗವು ಮುಗಿಯಿತು.

ಒಂಬತ್ತನೆಯದಾದ ಈ ಅಲಂಕಾರವತೀಲಂಬಕವು ಮುಗಿಯಿತು.

---

ಆಗತ್ಯ ಚಾಮೃತಾಂಶುಃ ಪಾರ್ವಣ ಇವ ವಾರಿರಾಶಿಜಲಲಕ್ಷ್ಮೀಮ್ ।
ಜನನಯನೋತ್ಸವದಾಯೀ ಬಂಧುಮತೀಂ ನಂದಯಾಮಾಸ ॥ ೪೨೨
ಅಥ ತತ್ರ ತಯಾ ಸಹಿತಸ್ತತ್ಪಿತ್ರಾ ಪೂರ್ವದತ್ತರಾಜ್ಯಧುರಃ ।
ಸ ಮಹೀಪಾಲೋ ಬುಭುಜೇ ರಾಜಾ ಸನ್ನೀಪ್ಸಿತಾನ್ ಭೋಗಾನ್ ॥ ೪೨೩
ಇತ್ಯಾತ್ಮಮಂತ್ರಿಮರುಭೂತಿಮುಖಾನ್ನಿಶಮ್ಯ
ಚಿತ್ರಾಂ ಕಥಾಮನುಪಮಾಮನುರಾಗರಮ್ಯಾಮ್ ।
ರಾಮಾಸಖಃ ಸ ನರವಾಹನದತ್ತದೇವೋ
ವತ್ಸೇಶ್ವರಸ್ಯತನಯೋ ಭೃಶಮಭ್ಯತುಷ್ಯತ್ ॥ ೪೨೪

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ

ಕಥಾಸರಿತ್ಸಾಗರೇ

ಅಲಂಕಾರವತೀಲಂಬಕೇ ಷಷ್ಠಸ್ತರಂಗಃ

ಸಮಾಪ್ತಶ್ಚಾಯಮಲಂಕಾರವತೀಲಂಬಕೋ ನವಮಃ ।